M.

ಸ್ಥಾನಿಕ ಸ್ವರಾಜ್ಯ ಹಾಗೂ ಸಹಕಾರ ಮಂತ್ರಿಗಳು ಮುಂಬಯಿ ಸರಕಾರ

## ಮಾನ್ಯ ಶ್ರೀ. ಮಲ್ಲನಗೌಡರ

### ಅಭಿಪ್ರಾಯ.

ಶ್ರೀ. ಬಿ. ಎ. ಪಾಟೀಲರ " ಜಾಗತಿಕ ಸಹಕಾರ " ಈ ಗ್ರಂಥವು ಸಹಕಾರಿ ತತ್ವ ಹಾಗು ಆಂದೋಲನೆಯ ಬಗ್ಗೆ ಸವಿಸ್ತರ ಮಾಹಿತಿ ಹಾಗು ವಿಪುಲ ಅಂಕಿ-ಸಂಖ್ಯೆಗಳಿಂದೊಡಗೂಡಿದ್ದು ಜನತೆಗೆ ಅದರಲ್ಲೂ ವಿಶೇಷವಾಗಿ ಸಹಕಾರಿಗಳಿಗೆ ಅತ್ಯುಪಯುಕ್ತ ಹೊತ್ತಿಗೆಯಾಗಿದೆ. ಸಹಕಾರ ತತ್ವ ಹಾಗು ರೀತಿ-ನೀತಿಗಳು ಎಲ್ಲ ಕ್ಷೇತ್ರಗಳಲ್ಲಿ ಬಳಕೆಯಲ್ಲಿ ಬರುತ್ತಿರುವ ಈ ಸಮಯದಲ್ಲಿ ಪ್ರಕಟವಾಗಿರುವ ಈ ಗ್ರಂಥವು ಅತ್ಯಂತ ಸಕಾಲಿಕವಾಗಿದೆ. ಸಹಕಾರಿ ಆಂದೋಲನೆಯಲ್ಲಿ ಕಾರ್ಯಮಾಡುತ್ತಿರುವವರು ಇದರಿಂದ ಸಾಕಷ್ಟು ಲಾಭ ಪಡೆಯುವದರಲ್ಲಿ ಸಂದೇಹವಿಲ್ಲ. ಶ್ರೀ. ಪಾಟೀಲರು ತಮ್ಮ ಕಾರ್ಯಕ್ಷೇತ್ರದಲ್ಲಿ ದೊರಕಿಸಿದ ಅನುಭವ ಹಾಗು ವಿದೇಶಗಳಲ್ಲಿ ಕೈಕೊಂಡ ಅಭ್ಯಾಸ ಇವುಗಳ ಲಾಭವನ್ನು ಎಲ್ಲರೂ ಪಡೆಯುವಂತೆ ಈ ಪುಸ್ತಕವನ್ನು ಪ್ರಕಟಿಸಿದುದು ಸ್ತುತ್ಯವಾಗಿದೆ. ಶ್ರೀ. ಪಾಟೀಲರ ಈ ಗ್ರಂಥವು ಸಹಕಾರಿ ಸಾಹಿತ್ಯಕ್ಕೂ ಕನ್ನಡ ಸಾಹಿತ್ಯಕ್ಕೂ ಒಂದು ಹಿರಿಯ ಕಾಣಿಕೆಯಾಗಿದೆ.

ಪುಣೆ,
೧೭—೯—೧೯೫೩.

M. P. Patil.
( ಎಂ. ಪಿ. ಪಾಟೀಲ. )

M.

ಪುಸ್ತಕ ದೊರೆಯುವ ಸ್ಥಳ.

ದಿ ಅಜಿತ ಎಜನ್ಸಿ.

ಟಿಳಕಚೌಕ-ಬೆಳಗಾಂವ.

ಮುದ್ರಕರು:— ವಿಶ್ವಭಾರತ ಪ್ರಿಂಟಿಂಗ ಮತ್ತು ಪಬ್ಲಿಶಿಂಗ ಕಂ. ಲಿ., ಬೆಳಗಾಂವ.

ಮ್ಯಾನೇಜರ :—ಎಮ್. ಬಿ. ವೆಂಟಮುತ್ತಿ.

ಪ್ರಕಾಶಕರು :—ಎ. ಪಿ. ಚೌಗುಲೆ. ಅಜಿತ ಎಜನ್ಸಿ,

ಟಿಳಕಚೌಕ, ಬೆಳಗಾಂವ.

ಸಹಕಾರರಕ್ಕಾಗಿ ಸೇವೆ ಸಲ್ಲಿಸಿದ

ಸಹಕಾರಿಗಳಿಗೆ

ಮುಡಿಪು.

# ಮುನ್ನುಡಿ.

ಹಿಂದುಸ್ತಾನದ “ ಸಹಕಾರಿ ಆಂದೋಲನವು ” ತನ್ನ ಐವತ್ತನೆಯ ವರ್ಷವನ್ನು ಪೂರ್ತಿಗೊಳಿಸುತ್ತದೆ ಮತ್ತು ಕೆಲವೇ ತಿಂಗಳಲ್ಲಿ ಅದರ ಸುವರ್ಣ ಮಹೋತ್ಸವವು ನೆರವೇರಲಿದೆ ಭಾರತದ ರಾಜ್ಯಘಟನೆ ಮತ್ತು ಪಂಚವಾರ್ಷಿಕ ಯೋಜನೆ ಇವೆರಡರ ಆಶ್ರಯದಲ್ಲಿ ಈ ಆಂದೋಲನವು ಮಹತ್ವದ ಸ್ಥಾನವನ್ನು ಪಡೆದಿದೆ ಸಹಕಾರಿ ಆಂದೋಲನವು, ಸಹಕಾರಿಗಳು ಆಂದೋಲನವು ಸಾಧಿಸಿದ ಸಂಪಾದನೆಗಳನ್ನು ಪರಿಶೀಲಿಸುವದರಲ್ಲಿಯೂ ಮುಂದಿನ ಯೋಜನೆಯನ್ನು ರೂಪುಗೊಳಿಸುವದರಲ್ಲಿಯೂ ನಿರತರಾಗಿದ್ದಾರೆ

ಶ್ರೀ ಪಾಟೀಲರು ಬರೆದ ‘ ಜಾಗತಿಕ ಸಹಕಾರ ’ ಎಂಬ ಕನ್ನಡ ಗ್ರಂಥವು ಈಗ ಒಳ್ಳೆಯ ಸಮಯೋಚಿತವಾಗಿದೆ ಸಹಕಾರಿ ಆಂದೋಲನವು ಎಂದಿನಿಂದ ಹುಟ್ಟಿತು, ಹೇಗೆ ಬೆಳೆಯುತ್ತ ಇಂದಿನ ಜಗತ್ತಿನ ನಾನಾ ಭಾಗಗಳಲ್ಲಿ ಅಸ್ತಿತ್ವದಲ್ಲಿ ಬಂದಿತು ಎಂಬ ವರ್ಣನೆಗಾಗಿ ಮೊದಲಿನ ೫೦ ಪುಟಗಳು ಮೀಸಲಾಗಿವೆ ಮೂರನೆಯ ಅಧ್ಯಾಯದಲ್ಲಿ ಈ ನಾಡಿನ ಸಹಕಾರಿ ಆಂದೋಲನದ ಉಗಮ ಮತ್ತು ಅಭಿವೃದ್ಧಿಗಳನ್ನು ಚರ್ಚಿಸಿದ್ದಾರೆ ಮುಂದಿನ ಅಧ್ಯಾಯಗಳು ಮುಂಬಯಿ ರಾಜ್ಯದಲ್ಲಿಯ ಅದರ ಬೆಳವಣಿಗೆಯ ಸಮಗ್ರ ಸ್ವರೂಪವನ್ನು ಒಳಗೊಂಡಿವೆ

ಶ್ರೀ ಪಾಟೀಲರು ಸಹಕಾರಿ ಚಳವಳಿಯಲ್ಲಿಯ ವಿವಿಧ ಕ್ಷೇತ್ರಗಳಲ್ಲಿ ಪಡೆದ ಅನುಭವವನ್ನೂ ಹೊರನಾಡಿನ ಚಳವಳಿಯ ಅವರ ಅಭ್ಯಾಸವನ್ನೂ ಈ ಗ್ರಂಥವು ವ್ಯಕ್ತಗೊಳಿಸುತ್ತದೆ ಈ ಗ್ರಂಥದಲ್ಲಿಯ ಅಂಕ ಸಂಖ್ಯೆ ಮತ್ತು ಕೋಷ್ಟಕಗಳು ಸಹಕಾರಿ ಆಂದೋಲನದ ಅಭ್ಯಾಸಿಗಳಾದ ಕನ್ನಡ ವಿದ್ಯಾರ್ಥಿಗಳಿಗೆ ಒಳ್ಳೆಯ ಆಸಕ್ತಿಯನ್ನು ಹುಟ್ಟಿಸುತ್ತವೆ ಎಂಬುದು ನನಗೆ ಖಾತ್ರಿ ಇದೆ ಕನ್ನಡದಲ್ಲಿ ಈ ಬಗೆಯ ಗ್ರಂಥಗಳಲ್ಲಿ ಇದು ಮೊದಲನೆಯದಿದ್ದು 'ಸಹಕಾರಿಗಳಿಗೂ ಪ್ರಾದೇಶಿಕ ಸಹಕಾರಿ ಶಾಲೆಯ ವಿದ್ಯಾರ್ಥಿಗಳಿಗೂ ಮತ್ತು ಗ್ರಾಮಸೇವಕರಿಗೂ ಇದು ಬಹಳೇ ಉಪಯುಕ್ತವಾಗುವದೆಂದು ನಾನು ನಿರ್ಧಾರವಾಗಿ ಹೇಳಬಲ್ಲೆ ಅನುಭವಿಕ ಸಹಕಾರಿ ಕಾರ್ಯಕರ್ತರಿಂದಲೂ ಮತ್ತು ಅಧಿಕಾರಿಗಳಿಂದಲೂ ಇಂಥ ಪುಸ್ತಕಗಳ ಪ್ರಕಟನೆಯು ನಿಜವಾಗಿ ಅತ್ಯವಶ್ಯವಾಗಿದೆ, ಯಾಕಂದರೆ ಆಂಗ್ಲ ಭಾಷೆ ತಿಳಿಯದ ಆಂದೋಲನದ ಕೆಲಸಗಾರರಿಗೆ ಸಹಕಾರಿ ತತ್ವ ಮತ್ತು ಬಳಕೆಗಳ ಅಭ್ಯಾಸಕ್ಕೆ ಇಂಥ ಗ್ರಂಥಗಳ ಪ್ರಕಟನೆಯು ಅನುಕೂಲ ಮಾಡಿಕೊಡುತ್ತದೆ ಕರ್ನಾಟಕ ಸಹಕಾರಿ ಆಂದೋಲನದ ಉದ್ದೇಶ ಸಾಧನೆಗೆ ಶ್ರೀ ಪಾಟೀಲರು ಅತ್ಯಂತ ಮಹತ್ವದ ಸೇವೆಯನ್ನು ಸಲ್ಲಿಸಿದ್ದಾರೆ

**ಪುಣೆ,**

**ದಿನಾಂಕ ೧೦-೯-೧೯೫೩**

**ಪಿ. ಜೆ. ಚಿನ್‌ಮುಲಗುಂದ**
ರಜಿಸ್ಟ್ರಾರ ಸಹಕಾರಿ ಸಂಘಗಳು,
**ಪುಣೆ.**

# FOREWORD.

The Indian Co-operative Movement will be completing its fiftieth year and celebrating its golden jubilee within a few months The movement has assumed added significance both under the Indian Constitution and the Five Year Plan The Co-operative Movement and the Co-operators are now busy taking stock of the achievements of the Co-operative Movement and planning for future

Shri Patil s book on " World Co-operation " in Kannada, is very opportune at this moment The first 54 pages of the book are devoted to the description of the Co-operative Movement as it originated developed and exists to-day in different parts of the World In the third chapter, he has discussed the origin and growth of the Co-operative Movement in this country The subsequent chapters give a comprehensive picture of the development of the Movement in Bombay

The book illustrates the experience of Shri Patil in his various official capacities in the Co-operative Movement and also his studies of the movement abroad The tables and figures in the body of the book will, I am sure, be of interest to Kannada student of Co-operation The book is first of its kind in Kannada and I hope it will be very useful for Co-operators, students in the Regional Co-operative School and also village level workers In fact the publication of such books by experienced Co-operators and Officials is very necessary if the workers in the Movement, who do not know English, are to be afforded facilities for study of Co-operative Theory and Practice Shri Patil has made an important contribution to the cause of Co operation in Karnatak

**Poona,**
10th September 1953

**P J Chinmulgund,**
Registrar Co-operative Societies &
Director of Agricultural Marketing &
Rural Finance B S Poona

# ಪ್ರಸ್ತಾವನೆ.

ಸಹಕಾರಿ ತತ್ವಕ್ಕೆ ಇಂದು ಎಲ್ಲೆಡೆಯಲ್ಲಿ ದೊರೆತ ಹಿರಿಯ ಮನ್ನಣೆ, ಜನತೆಯ ಆರ್ಥಿಕ ಜೀವನದಲ್ಲಿ ಆಮೂಲಾಗ್ರ ಮಾರ್ಪಾಡು ಮಾಡಿ ಅವರ ಜೀವನ ಮಟ್ಟವನ್ನು ಎತ್ತರಿಸುವಲ್ಲಿ 'ಸಹಕಾರ' ವಹಿಸಿರುವ ಮಹತ್ವದ ಪಾತ್ರ ಇವು ನನ್ನ ಈ ಗ್ರಂಥರಚನೆಗೆ ಪ್ರೇರಕಗಳಾಗಿವೆ ಕರ್ನಾಟಕ ಹಾಗು ಮುಂಬಯಿ ರಾಜ್ಯದಲ್ಲಿ ಸಹಕಾರಿ ಆಂದೋಲನೆಯ ಪ್ರಗತಿಯನ್ನು ಕುರಿತು ವಿಶೇಷ ವಿವೇಚನೆಯನ್ನೊಳಗೊಂಡು ಜಾಗತಿಕ ಸಹಕಾರದ ವಿವಿಧ ಮುಖಗಳ ಸಮಗ್ರ ಸಮೀಕ್ಷಣೆಯನ್ನು ಒದಗಿಸುವ ಈ ಗ್ರಂಥವನ್ನು ಒದುಗರೆದುರು ಇಡುವ ಮೊದಲು, ಈ ನನ್ನ ಪ್ರಯತ್ನಕ್ಕೆ ಅನುಕೂಲತೆಯನ್ನು ಒದಗಿಸಿಕೊಟ್ಟ ಪರಿಸ್ಥಿತಿಯನ್ನು ವಿವರಿಸಿದರೆ ಅಪ್ರಸ್ತುತವೆನಿಸಲಾರದು

ಕಳೆದ ೧೮ ವರುಷಗಳಿಂದ ನಾನು ಸಹಕಾರಿ ಆಂದೋಲನೆಯಲ್ಲಿ ಬೇರೆ ಬೇರೆ ಹುದ್ದೆಗಳಲ್ಲಿ ಕೆಲಸ ಮಾಡುತ್ತಿದ್ದೇನೆ ವಿಶೇಷ ಹುದ್ದೆಯೊಂದನ್ನೂ ವಹಿಸಿದೆನು. ಮುಂಬಯಿ ರಾಜ್ಯದ ಎಲ್ಲೆದೆಯಲ್ಲಿ ವಿಸ್ತೃತ ಸಂಚಾರ ಕೈಕೊಂಡೆನು ಅನೇಕ ಸಹಕಾರಿ ಸಂಘಗಳನ್ನು ಸ್ಥಾಪಿಸುವ ಹಾಗು ಕುಸಿಬಿದ್ದ ಸಂಘಗಳನ್ನು ಪುನರುಜ್ಜೀವನಗೊಳಿಸುವ ಸುಯೋಗವೂ ನನಗೆ ದೊರೆತಿತು ಲೆಕ್ಕ ತಪಾಸಿಗನ ಹುದ್ದೆಯಲ್ಲಿ ಸಹಕಾರಿ ಆಂದೋಲನೆಯನ್ನು ಸೂಕ್ಷ್ಮ ರೀತಿಯಲ್ಲಿ ಅಭ್ಯಸಿಸುವ ಅನುಕೂಲತೆ ದೊರೆಯಿತು ಅಹಮ್ಮದನಗರ ಜಿಲ್ಲೆಯಲ್ಲಿಯ ಲೋಣಿ ಸಹಕಾರಿ ಸಕ್ಕರೆಯ ಕಾರಖಾನೆ ಹಾಗು ಬೆಳಗಾಂವ ಜಿಲ್ಲೆಯಲ್ಲಿಯ ಘಟಪ್ರಭಾ ಸಹಕಾರಿ ಆಸ್ಪತ್ರೆ ಇವುಗಳ ಸಂಘಟನೆಯಲ್ಲಿ ನನ್ನ ಸೇವೆ ಸಂದಿದೆ ಇಂಥ ಸಂಸ್ಥೆಗಳು ಭಾರತದಲ್ಲಿ ಬೇರೆ ಎಲ್ಲಿಯೂ ಇಲ್ಲ

೧೯೫೧ ರಲ್ಲಿ ಸಂಯುಕ್ತ ರಾಷ್ಟ್ರ ಸಂಘವು [ UNO ] ನನಗೆ ಫೆಲೊಶಿಪ್ ಕೊಟ್ಟು ಇಂಗ್ಲಂಡ, ಐಯರ್ಲಂಡ, ನೆದರ್ಲಂಡ್ಸ, ಸ್ವಿತ್ಸರ್ಲಂಡಗಳಲ್ಲಿಯ ಸಹಕಾರಿ ಆಂದೋಲನೆಯನ್ನು ಅಭ್ಯಸಿಸಲು ಒಳ್ಳೆಯ ಅನುಕೂಲತೆಯನ್ನು ಒದಗಿಸಿಕೊಟ್ಟಿತು ಈ ನನ್ನ ಅಭ್ಯಾಸ ಸಂಚಾರದಲ್ಲಿ ಸುಮಾರು ೨೦೦ ಮಹತ್ವದ ಸಹಕಾರಿ ಸಂಸ್ಥೆಗಳನ್ನು ಸಂದರ್ಶಿಸಿದೆನಲ್ಲದೆ ಆಯಾ ದೇಶಗಳ ಪ್ರತಿಭಾವಂತ ಅರ್ಥಶಾಸ್ತ್ರಜ್ಞರೊಡನೆ ಹಾಗು ಸಹಕಾರಿಗಳೊಡನೆ ಉಪಯುಕ್ತ ಚರ್ಚೆಯನ್ನು ಕೈಕೊಂಡೆ

ಸರಕಾರಿ ಬೇರೆ,ಬೇರೆ ಹುದ್ದೆಗಳಲ್ಲಿ ದೊರೆತ ಅನುಭವ, ವಿದೇಶಗಳಲ್ಲಿಯ ಅಭ್ಯಾಸ ಅಲ್ಲದೆ, ಸಹಕಾರಿ ತತ್ವ ಹಾಗು ಆಂದೋಲನೆಯ ಬಗ್ಗೆ ಕೈಕೊಂಡ

ನನ್ನ ಈ ಗ್ರಂಥಕ್ಕೆ ಸೂಕ್ತ ಮುನ್ನುಡಿಯನ್ನು ಬರೆದುಕೊಟ್ಟ ಮುಂಬಯಿ ರಾಜ್ಯದ ಸಹಕಾರಿ ಸಂಘಗಳ ರಜಿಸ್ಟ್ರಾರ ಶ್ರೀ ಪಿ.ಜ ಚಿನ್ನಮುಲಗುಂದ,ಐ.ಸಿ ಎಸ್. ಅವರಿಗೂ, ಈ ಗ್ರಂಥದ ಬಗ್ಗೆ ತಮ್ಮ ಅನುಮೋಲ್ಯವಾದ ಅಭಿಪ್ರಾಯವನ್ನು ದಯಪಾಲಿಸಿದ ಸಹಕಾರ ಮಂತ್ರಿ ಮಾನ್ಯ ಶ್ರೀ ಪಾಟೀಲ ಮಲ್ಲನಗೌಡರಿಗೂ ನಾನು ಬಹಳೇ ಋಣಿಯಾಗಿದ್ದೇನೆ.

ಬೆಳಗಾಂವ.
ದಿ. ೩೦-೯-೧೯೫೩.

ಬಿ. ಎ. ಪಾಟೀಲ.

# ಅನುಕ್ರಮಣಿಕೆ.

## ೧ ನೆಯ ಅಧ್ಯಾಯ

# ಸಹಕಾರ ಅಂದರೇನು ?

ಸಾಮಾನ್ಯವಾಗಿ ಒಬ್ಬರಿಗೊಬ್ಬರು ಕೂಡಿಕೊಂಡು ಕಾರ್ಯಮಾಡುವದೇ ಸಹಕಾರ ಅಂದರೆ ಸಾಮೂಹಿಕವಾಗಿ ಕಾರ್ಯಮಾಡುವದು ಮತ್ತು ಸ್ವಯಂ ಸಂಘಟನೆ ಸರ್ವಸಾಮಾನ್ಯವಾದ ಉದ್ದೇಶ ಸಾಧನೆಗಾಗಿ ಜನರು ಒಂದುಗೂಡಿ ಕಾರ್ಯ ಪ್ರವೃತ್ತರಾದರೆ ಅದುವೇ ಸಹಕಾರ "ಒಬ್ಬರಿಗೊಬ್ಬರು ಕೂಡಿಕೊಂಡು ಕೆಲಸಮಾಡುವದು ನಿತ್ಯದ ಜೀವನದ ನಿಯಮವಾಗಿದೆ" ಅದನ್ನೇ ಕವಿ ಶೆಲೆ ಅವರು ಹೀಗೆ ವರ್ಣಿಸಿದ್ದಾರೆ "ಈ ಪ್ರಪಂಚದಲ್ಲಿ ಯಾವದೂ ಪ್ರತ್ಯೇಕ ಅಥವಾ ಒಂಟಿಯಾಗಿಲ್ಲ ನಿಸರ್ಗದತ್ತ ನಿಯಮಗಳಿಗನುಗುಣವಾಗಿ ಎಲ್ಲ ವಸ್ತುಗಳು ಒಬ್ಬರೊಬ್ಬರ ಜೀವನದಲ್ಲಿ ಹೊಂದಿಕೊಂಡಿವೆ" ಇದನ್ನೇ ಗೀತೆಯಲ್ಲಿ "परस्पर भावयन्त श्रेय परम वाप्स्यथ ಎಂದು ಹೇಳಲಾಗಿದೆ ಅಂದರೆ, ಪರಸ್ಪರ ಸಹಾಯದಿಂದ ನೀವು ನಿಮ್ಮ ಕಲ್ಯಾಣವನ್ನು ಸಾಧಿಸಿಕೊಳ್ಳಬಲ್ಲಿರಿ ಪ್ರಾಣಿ ಪಕ್ಷಿಗಳಲ್ಲಿ ಸಹ ಸಹಕಾರವು ಕಂಡು ಬರುತ್ತದೆ ಸರ್ವಸಾಮಾನ್ಯ ಇಚ್ಛೆಯ ಪೂರ್ತಿಗಾಗಿ ಪ್ರಾಣಿಪಕ್ಷಿಗಳು ಸಹ ಒಂದಕ್ಕೊಂದು ಕೂಡಿಕೊಂಡು ಕಾರ್ಯ ಮಾಡುತ್ತವೆ "ನಿತ್ಯ ಜೀವನವೂ ಸಹ ಸಹಕಾರ ಭಾವನೆಯಿಂದಲೇ ಸಾಗುತ್ತದೆ" ಎಂದು ಡಾ ಜಾನ್‌ಸನ್ ಹೇಳಿದ್ದಾರೆ ಸಹಕಾರ ಭಾವನೆಯು ಇರದೇ ಹೋಗಿದ್ದರೆ ಮಾನವ ಕೋಟಿಯು ಅನಾಗರಿಕ ಅಥವಾ ಕಾಡು ಸ್ಥಿತಿಯಲ್ಲಿರುತ್ತಿತ್ತು ಅಥವಾ ಸಹಕಾರವಿರದೇ ಹೋಗಿದ್ದರೆ ಮಾನವ ಸಂಸ್ಕೃತಿಯೂ ಸಾಧ್ಯವಿರಲಿಲ್ಲ ಮಾನವ ಸಮಾಜದ ಅಸ್ತಿತ್ವದ ಮೂಲಾಧಾರವೇ ಸಹಕಾರವು ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ರೀತಿಗಳಲ್ಲಿ ವ್ಯಕ್ತಿಗಳ ನಡುವೆ ಸಹಕಾರವು ಇಲ್ಲದೆ ಹೋದರೆ ಪ್ರಪಂಚವು ಹೇಗೆ ಸಾಗಬಹುದೆಂಬುದು ಕಲ್ಪನಾತೀತವಾಗಿದೆ "ಮಾನವ ಸಂಸ್ಕೃತಿಯ ಪ್ರಗತಿಯಾಗಬೇಕಾದರೆ ವ್ಯಕ್ತಿ ಮತ್ತು ಸರಕಾರಗಳ ಚಟುವಟಿಕೆಗಳು ಸಹಕಾರ ತತ್ವಗಳ ಮೇಲೆ ನಡೆಯಬೇಕು ಎಂಬ ಮಾತಿನ ಸತ್ಯತೆಯನ್ನು ಪ್ರಪಂಚವು ಹಿಂದೆಂದೂ ಅರಿಯದ ರೀತಿಯಲ್ಲಿ ಈಗ ಅರಿತುಕೊಂಡಿದೆ" ಎಂದು ದಿವಾನ ಬಹಾದ್ದೂರ ಎಚ್ ಎಲ್. ಕಾಜಿ ಅವರು ಹೇಳಿದ್ದಾರೆ ಸಹಕಾರದಿಂದ ಒಕ್ಕಟ್ಟು ಸುಲಭ ಸಾಧ್ಯವಾಗುತ್ತದೆ ಶಕ್ತಿಯ ಮೂಲಾಧಾರವೂ ಸಹಕಾರವಾಗಿದ ಸಹಕಾರದಲ್ಲಿ ಸದ್ಗುಣಗಳಡಗಿವೆ, ಅನ್ಯೋನ್ಯ ಭಾವನೆಗಳು ಬೆಳೆಯುತ್ತವೆ ಅದು ವ್ಯಕ್ತಿಗಳಿಗೆ, ಸಮಾಜಕ್ಕೆ, ನಾಡಿಗೆ ಮತ್ತು ಇಡೀ ವಿಶ್ವಕ್ಕೆ ಶಾಂತಿ ಸಮೃದ್ಧಿಗಳನ್ನು ಒದಗಿಸಿಕೊಡುತ್ತದೆ ದಿವಾನ ಬಹಾದ್ದೂರ್ ಕಾಜಿ ಅವರು ಮತ್ತೆ ಹೇಳಿರುವದೇನಂದರೆ "ವೈಯಕ್ತಿಕ ಆಕ್ರಮಣವಾಗಲಿ ನಾಡಿನ ಆಕ್ರಮಣವಾಗಲಿ ಕಲಹ ಯುದ್ಧಗಳಿಗೆ ಎಡೆಗೊಡುತ್ತಿವೆ" ವಿವಿಧ ರಾಷ್ಟ್ರಗಳು ತಮ್ಮ ಸಮಸ್ಯೆಗಳ ನಿವಾರಣೆಗಾಗಿ ಸಹಕಾರ ತತ್ವಗಳನ್ನು ಅನುಸರಿಸಿದರೆ ಯುದ್ಧವು ಎಂದಿಗೂ ಸಂಭವಿಸಲಾರದು, ಪ್ರಪಂಚದಲ್ಲೆಲ್ಲ ಶಾಂತಿ ಸಮೃದ್ಧಿಗಳು ನೆಲೆಗೊಳ್ಳುವವು

## ಸಹಕಾರದ ಪ್ರಾಚೀನತೆ.

ಸಹಕಾರವು ವ್ಯಾಪಕದೃಷ್ಟಿಯಲ್ಲಿ ಮಾನವ ಸಂಸ್ಕೃತಿಯಷ್ಟೇ ಹಳೆಯದಾಗಿದೆ "ಮಾನವ ಸಮಾಜವು ಅಸ್ತಿತ್ವದಲ್ಲಿ ಬಂದಂದಿನಿಂದಲೂ ಸಹಕಾರವು ಪ್ರಚಲಿತವಾಗಿದೆ, ಅಂದರೆ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳು ಒಂದುಗೂಡಿ ವೈಯಕ್ತಿಕವಾಗಿ ಸಾಧಿಸಲಸಾಧ್ಯವಾದ ಗುರಿಗಳನ್ನು ಸುಲಭ–ಸಾಧ್ಯ ಮಾಡಿಕೊಂಡಿದ್ದಾರೆ" ಎಂದು ಜಾರ್ಜ ಜಾಕೊಬ್ ಹೋಲಿಯೋಕ ಅವರು ಹೇಳಿದ್ದಾರೆ ಪುರಾತನ ಕಾಲದಲ್ಲಿಯೂ ಗಂಡಸು ಬೇಟೆಯಾಡುತ್ತಿದ್ದರೆ ಹೆಂಗಸು ಅವನಿಗೆ ಅಡಿಗೆಮಾಡುತ್ತಿದ್ದಳು ಹೀಗಾಗಿ ಆಗಿನ ಕಾಲದಲ್ಲಿಯೂ ಪ್ರಾಥಮಿಕ ಸಹಕಾರವು ಇದ್ದೇ ಇದ್ದಿತು ರೈತರಂತೂ ಪ್ರಾರಂಭದಿಂದಲೂ ಬಿತ್ತುವದು, ಸುಗ್ಗಿ ಮಾಡುವದು, ದನ ಕಾಯುವದು ಮೊದಲಾದ ಕಾರ್ಯಗಳನ್ನು ಒಂದುಗೂಡಿಯೇ ಮಾಡುತ್ತ ಬಂದಿದ್ದಾರೆ

ಭಾರತದಲ್ಲಿ ಪುರಾತನ ಕಾಲದಲ್ಲಿಯೂ ಜನರು ಸಹಕಾರ ಜೀವನವನ್ನು ನಾಗಿಸುತ್ತ ಬಂದಿದ್ದಾರೆ ರಸ್ತೆಗಳನ್ನು ರಚಿಸುವದು, ಕಾಲುವೆಗಳನ್ನು ಅಗಿಯುವದು, ಗುಡಿಗಳನ್ನು ಕಟ್ಟುವದು ಮೊದಲಾದ ಕಾರ್ಯಗಳನ್ನು ಸ್ವಯಂಸ್ಫೂರ್ತಿಯಿಂದ ಒಂದುಗೂಡಿಯೇ ಮಾಡುತ್ತ ಬಂದಿದ್ದಾರೆ ಭಾರತದಲ್ಲಿ ಬ್ರಿಟಿಶರ ಆಗಮನಕ್ಕಿಂತ ಪೂರ್ವದಲ್ಲಿ ಪ್ರಚಲಿತವಾಗಿದ್ದ ಪಂಚಾಯತಿ ಪದ್ಧತಿಯು ಸಹಕಾರಿ ತತ್ವದ ಮೇಲೆ ನಿಂತಿದೆ ಚೀನ ದೇಶದಲ್ಲಿ ಪುರಾತನ ಕಾಲದಲ್ಲಿಯೂ ಸಹಕಾರ ತತ್ವವು ಆಚರಣೆಯಲ್ಲಿದ್ದಿತು ಅಲ್ಲಿ 'ಯೂ ಹುಯಿ' ಎಂಬ ಪ್ರಾಥಮಿಕ ಪತ್ತಿನ ಸಂಘವು ಎಷ್ಟೋ ಶತಮಾನಗಳ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದಿತು ಶೋಷಣೆಯಿಂದ ಕಾಪಾಡಿಕೊಳ್ಳಲು ಈ ಕ್ರಮವನ್ನು ಅನುಸರಿಸಲಾಗಿತ್ತು ಅದೇ ಮೇರೆಗೆ ಜಪಾನದಲ್ಲಿಯೂ ಸಹಕಾರಿ ತತ್ವಗಳು ಆಚರಣೆಯಲ್ಲಿದ್ದವು "ತಾನೊ ಮುಶಿ" ಎಂಬ ಸಂಘವು ಪುರಾತನ ಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದಿತು ಈ ಸಂಸ್ಥೆಯು ಚೀನಾ ದೇಶದ 'ಯೂ ಹುಯಿ' ಮಾದರಿಯದಾಗಿದ್ದಿತು ಈ ರೀತಿಯಲ್ಲಿ ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ರಾಷ್ಟ್ರಗಳಲ್ಲಿ ಜನತೆಯು ತಿಳಿದೋ ತಿಳಿಯದೆಯೋ, ತಮ್ಮ ವ್ಯವಹಾರ ಮತ್ತಿತರ ಸಾಮೂಹಿಕ ಗುರಿಗಳ ಸಾಧನೆಗಾಗಿ ಸಹಕಾರ ತತ್ವಗಳನ್ನು ಅನುಸರಿಸುತ್ತಲಿದ್ದಿತು

## ಆಧುನಿಕ ಸಹಕಾರದ ಉಗಮ.

ಆಧುನಿಕ ಸಹಕಾರವು ಸಾಮಾನ್ಯವಾಗಿ ಕಳೆದ ಶತಮಾನದ ಮಧ್ಯದಿಂದ ಪ್ರಾರಂಭವಾಯಿತೆಂದು ಹೇಳಬಹುದು ೧೯ ನೆಯ ಶತಮಾನದ ಆದಿಯಲ್ಲಿ ಉಗಮವಾದ ಔದ್ಯೋಗಿಕ ಕ್ರಾಂತಿಯಲ್ಲಿ ಆಧುನಿಕ ಸಹಕಾರದ ಬೀಜವು ನೆಡಲ್ಪಟ್ಟಿತೆಂದು ಭಾವಿಸಬಹುದು ೧೮ ನೆಯ ಶತಮಾನದಲ್ಲಿ ಶೋಧಿಸಲಾದ ಉಗಿಯಂತ್ರ ಮತ್ತಿತರ ಹೊಸ ಹೊಸ ಯಂತ್ರಗಳ ಶೋಧನೆಯಿಂದ 'ಫ್ಯಾಕ್ಟರಿ' ಪದ್ಧತಿಯು ಅಸ್ತಿತ್ವದಲ್ಲಿ ಬಂದಿತು ಅದರಂತೆ ಈ ಪದ್ಧತಿಯು ಮುಂದೆ ದೊಡ್ಡ ನಗರಗಳಲ್ಲಿ ಬಂದು ಉದ್ದಿಮೆಗಳೆಲ್ಲ ಕೆಲವು ಜನರ ಕೈಯಲ್ಲಿ ಉಳಿದುಕೊಂಡವು ಹೀಗಾಗಿ

ಪುರಾತನ ಆರ್ಥಿಕ ರಚನೆಯು ಕುಸಿದು ಬಿದ್ದಿತು ಇದರಿಂದ ಹಳ್ಳಿಗಾಡುಗಳಿಂದ ಜನರು ನಗರಗಳತ್ತ ಧಾವಿಸತೊಡಗಿದರು, ಸಾಹುಕಾರರು ತಮ್ಮ ನಿಯಮ ನಿರ್ಬಂಧನೆಗಳನ್ವಯ ಅವರನ್ನು ನೌಕರಿಯಲ್ಲಿ ಸೇರಿಸಿಕೊಂಡರು ಇದರ ಪರಿಣಾಮವಾಗಿ ಸಾಹುಕಾರನು ದಿನೇ ದಿನೇ ಸಾಹುಕಾರನಾಗುತ್ತ ನಡೆದು ಬಡವನು ಬಡವನಾಗುತ್ತಲೇ ಉಳಿದನು ತೀರ ಬಡವನಾಗಿದ್ದವನ ಪರಿಸ್ಥಿತಿಯು ಚಿಂತಾಜನಕವಾಯಿತು ಎಡ್ಯಾಮ್ ಸ್ಮಿಥ್ ಮೊದಲಾದ ಅರ್ಥಶಾಸ್ತ್ರಜ್ಞರು, ರಾಜಕಾರಣಿಗಳು ವೈಯಕ್ತಿಕ ಅಥವಾ ಸ್ವತಂತ್ರ ವ್ಯವಹಾರ, ( Laissez Faire ) ಪದ್ಧತಿಗೆ ಬೆಂಬಲ ಕೊಡತೊಡಗಿದರು ಸ್ಪರ್ಧೆ, ಲಾಭಬಡಕತನ, ಸ್ವಾರ್ಥ ಇವೇ ಮೊದಲಾದವುಗಳು ಆರ್ಥಿಕ ಪದ್ಧತಿಯ ಮೂಲ ಉದ್ದೇಶಗಳಾದವು ಸಮರ್ಥನಾದವನೇ ಜೀವಿಸಬೇಕು ಎಂಬುದು ನಿತ್ಯದ ಕೂಗಾಯಿತು ವ್ಯಕ್ತಿಯಿಂದ ಮತ್ತೊಬ್ಬ ವ್ಯಕ್ತಿಯ ಶೋಷಣೆಯು ಹೆಚ್ಚಾಗತೊಡಗಿತು ಹೆಚ್ಚು ಹೆಚ್ಚು ಸಂಪತ್ತು ಮತ್ತು ಉಪಭೋಗದ ವಸ್ತುಗಳನ್ನು ತಂದ ಔದ್ಯೋಗಿಕ ಕ್ರಾಂತಿಯು ತನ್ನ ಜೊತೆಗೆ ಎಷ್ಟೋ ಜನರಿಗೆ ಬಡತನ ಮತ್ತು ಕಷ್ಟಗಳನ್ನೂ ತಂದಿತು ಇಂಥ ಬಡತನ ಮತ್ತು ಕಷ್ಟಗಳನ್ನು ನಿವಾರಿಸುವದಕ್ಕಾಗಿ ಸಾಮಾನ್ಯಜನರ ಆರ್ಥಿಕ ಸಾಮಾಜಿಕ ಮಟ್ಟವನ್ನು ಸುಧಾರಿಸುವದಕ್ಕಾಗಿ ಬಾಂಡವಲಶಾಹಿ ಪದ್ಧತಿಗೆ ವ್ಯತಿರಿಕ್ತವಾಗಿ ಎಷ್ಟೋ ಸಾಧನಗಳನ್ನು ಕಂಡುಹಿಡಿಯಲಾಯಿತು ಬಡತನದ ನಿವಾರಣೆಯೇ ಎಷ್ಟೋ ಸಾಮಾಜಿಕ ಕಾರ್ಯಕರ್ತರ ಧ್ಯೇಯವಾಯಿತು ಜಗತ್ತಿನಲ್ಲಿಯ ಈ ಎಲ್ಲ ಅನಿಷ್ಟಕ್ಕೂ ಸ್ಪರ್ಧೆ ಮತ್ತು ವೈಯಕ್ತಿಕ ಆಸ್ತಿ ಇವುಗಳೇ ಮೂಲಕಾರಣಗಳೆಂದು ಅವರು ನಂಬಿದರು ಕೆಲವರು ಕಮ್ಯುನಿಜಂ ಉತ್ತಮವೆಂದು ಹೇಳಿದರು, ಮತ್ತೆ ಕಲವರು ಸಮಾಜವಾದವು ಉತ್ತಮವೆಂದು ಹೇಳಿದರು ಮತ್ತೆ ಕೆಲವರು ಕೂಲಿಕಾರ ಸಂಘಗಳನ್ನು ರಚಿಸಿಕೊಳ್ಳಬೇಕೆಂದರು ಬ್ರಿಟನ್ನಿನ ಕೂಲಿಕಾರ ವರ್ಗದ ಮುಂದಾಳು ರಾಬರ್ಟ ಓವೆನ್ ಅವರು ಸಹಕಾರ ತತ್ವಗಳನ್ನು ಅನುಸರಿಸಿ ಕೂಲಿಕಾರರ ಆರ್ಥಿಕ ಸ್ಥಿತಿಯ ಸುಧಾರಣೆಗಾಗಿ ಹೆಣಗಾಡತೊಡಗಿದರು "ಸಹಕಾರ" ಎಂಬ ಶಬ್ದವನ್ನು ಮೊದಲು ಬಾರಿಗೆ ಉಪಯೋಗಿಸಿದವರು ರಾಬರ್ಟ ಓವೆನ್‌ರೇ ಎಂದು ಹೇಳಬಹುದು ಸ್ಪರ್ಧೆಯ ನಿವಾರಣೆಯಾಗಿ, ಕೂಲಿಕಾರ ವರ್ಗಕ್ಕೆ ಮುಕ್ತಿ ದೊರೆಯಬೇಕಾದರೆ ಸಹಕಾರವೇ ರಾಮಬಾಣವೆಂದು ಅವರ ದೃಢಸಂಕಲ್ಪವಾಗಿದ್ದಿತು ಹೀಗೆ ಇಂಗ್ಲಂಡಿನಲ್ಲಿ ಕೂಲಿಕಾರ ವರ್ಗದ ಆರ್ಥಿಕ ಮುಗ್ಗಟ್ಟಿನ ನಿವಾರಣೋಪಾಯವೆಂದು ಸಹಕಾರವು ಉದಯವಾಯಿತು ಇಂಗ್ಲಂಡಿನಲ್ಲಿ ಉದ್ಭೂತವಾದ ಔದ್ಯೋಗಿಕ ಕ್ರಾಂತಿಯು ಕ್ರಮೇಣವಾಗಿ ಇತರ ಯುರೋಪ ರಾಷ್ಟ್ರಗಳಲ್ಲಿಯೂ ಪಸರಿಸತೊಡಗಿತು ಔದ್ಯೋಗಿಕ ಕ್ರಾಂತಿಯ ಜೊತೆಗೆ ಒಕ್ಕಲುತನದ ಕ್ರಾಂತಿಯೂ ಉದ್ಭೂತವಾಗಿ ಡೆನ್ಮಾರ್ಕ, ಹಾಲಂಡ, ಸ್ವೀಡನ್‌ಗಳಲ್ಲಿ ಒಕ್ಕಲುತನ ಮಾರಾಟ ಪದ್ಧತಿಯಲ್ಲಿ ಎಷ್ಟೋ ಸ್ಥಿತ್ಯಂತರಗಳು ಕಂಡುಬಂದವು ಹೀಗಾಗಿ ಡೇರಿ ಮಾರ್ಕೆಟಿಂಗ, ಪತ್ತು, ವಿಮಾ, ಮೊದಲಾದ ರೂಪಗಳಲ್ಲಿ ಒಕ್ಕಲುತನ ಸಹಕಾರವು ಉದಯವಾಯಿತು ಭಾಂಡವಳಶಾಹಿ, ಸಾಹುಕಾರ, ವ್ಯಾಪಾರಿ ಮೊದಲಾದ ಮಧ್ಯಮ ಜನರ ಶೋಷಣೆಯಿಂದ ಪಾರಾಗಬೇಕೆಂದೂ ಆತ್ಮಸಹಾಯ ಮತ್ತು ಪರಸ್ಪರ ಸಹಾಯಗಳಿಂದ ಶ್ರೀಮಂತರ

ಒತ್ತಾಯಕ್ಕೆ ಬಲಿಬೀಳದೇ ತಮ್ಮ ಆರ್ಥಿಕ ಪ್ರಗತಿ ಸಾಧಿಸಬೇಕೆಂಬುದೂ ಪ್ರಾರಂಭಿಸಲ್ಪಟ್ಟ ಆಧುನಿಕ ಸಹಕಾರದ ಮೂಲ ಉದ್ದೇಶಗಳಾಗಿವೆ ಹೀಗೆ ಇಂಗ್ಲಂಡಿನಲ್ಲಿ ಪ್ರಾರಂಭವಾದ ಸಹಕಾರ ಅಂದೋಲನವು, ಲಾಭ–ಬಡಕತನ, ಸ್ಪರ್ಧೆ ಮತ್ತು ಮಾನವ ಶೋಷಣೆಗಳನ್ನು ನಿವಾರಣೆಮಾಡಿ ಜನತೆಯ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಸುಧಾರಣೆಗಳ ಸಲುವಾಗಿ, ಕ್ರಮೇಣವಾಗಿ ಇತರ ದೇಶಗಳಲ್ಲಿ ಬೆಳೆಯತೊಡಗಿತು ಈ ಅಂದೋಲನವು ಸಾಮೂಹಿಕವಾಗಿ ದೊಡ್ಡ ಪ್ರಮಾಣದಲ್ಲಿ ಪ್ರಾರಂಭವಾಯಿತು ಆಧುನಿಕ ಸಹಕಾರದ ಸಂಸ್ಥಾಪಕರು ರಾಬರ್ಟ ಓವೆನ್‌ರೆಂದೇ ಪರಿಗಣಿಸಲಾಗಿದ್ದರೂ, ಪುರಾತನ ಕಾಲದಲ್ಲಿ ಜನತೆಯು ಸಹಕಾರ ತತ್ವಗಳನ್ನು ಅನುಸರಿಸುತ್ತಲಿದ್ದಿತು ಸಹಕಾರವು ಆರ್ಥಿಕ ವ್ಯವಹಾರದ ಉತ್ತಮ ಪದ್ಧತಿಯಾಗಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಅವ್ಯಾಹತವಾಗಿ ಬೆಳಯ ತೊಡಗಿತು ಇಂದಿಗೆ ಸಹಕಾರವು ಜಾಗತಿಕ ಅಂದೋಲನವಾಗಿದ್ದು ಎಷ್ಟೋ ರಾಷ್ಟ್ರಗಳ ಆರ್ಥಿಕ ಪುನರ್ರಚನಾ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಲಿದ ಎಷ್ಟೋ ರಾಷ್ಟ್ರಗಳ ರಾಜ್ಯ ಘಟನೆಗಳು ಸಾಮಾಜಿಕ–ಆರ್ಥಿಕ ಸಮಸ್ಯೆಗಳ ನಿವಾರಣೆಗೆ ಸಹಕಾರವು ಉತ್ತಮ ಉಪಾಯವೆಂದು ಪರಿಗಣಿಸಿವೆ ಬೆಳವಣಿಗೆ ಹೊಂದದೆ ಇದ್ದ ರಾಷ್ಟ್ರಗಳಲ್ಲಿ ಪುನರುದ್ಧಾರಕ್ಕಾಗಿ ಸಹಕಾರವೇ ಉತ್ತಮವೆಂದು ಯೂನೊ, ಆಯ್ ಎಲ್ ಓ, ಎಫ್ ಎ ಓ ಮೊದಲಾದ ಅಂತರ್ ರಾಷ್ಟ್ರೀಯ ಸಂಸ್ಥೆಗಳು ಮುಕ್ತಕಂಠದಿಂದ ಶಿಫಾರಸು ಮಾಡಿವೆ. ಆರ್ಥಿಕ ರಚನೆಯಲ್ಲಿ ಇಲ್ಲಿಯವರೆಗೆ ಸಾರ್ವಜನಿಕ ಮತ್ತು ವೈಯಕ್ತಿಕ ವಿಭಾಗಗಳಿದ್ದು ಈಗ ಸಹಕಾರವು ಮೂರನೆಯ ವಿಭಾಗವೆಂದು ಪರಿಗಣಿಸಲಾಗಿದೆ 'ಸಹಕಾರಿ ಪ್ರಜಾಪ್ರಭುತ್ವ' (Co-operative Common Wealth) ಸಂಸ್ಥಾಪನೆಯೇ ಗುರಿ ಎಂದು ಭಾರತದ ಘಟನೆಯಲ್ಲಿ ಸಾರಲಾಗಿದೆ

## ಸಹಕಾರದ ವ್ಯಾಖ್ಯೆ

ಸಹಕಾರದ ವ್ಯಾಖ್ಯೆಯನ್ನು ಕೊಡುವ ಮೊದಲು ಈ ಹಿಂದಿನ ಅರ್ಥಶಾಸ್ತ್ರಜ್ಞರು ಮತ್ತು ಸಹಕಾರಿಗಳು ಅರಿತುಕೊಂಡದ್ದನ್ನು ಮತ್ತು ಸಹಕಾರ ಅಂದೋಲನದ ಮಹತ್ವ, ಗೊತ್ತುಗುರಿ, ಕಾರ್ಯಕ್ಷೇತ್ರ ಮೊದಲಾದವುಗಳ ಬಗ್ಗೆ ಅವರ ಕಲ್ಪನೆಗಳನ್ನು ಇಲ್ಲಿ ವಿವೇಚಿಸುವಾ

ಡಾ ಸಿ ಆರ್ ಫೇ ಅವರು ಸಹಕಾರಿ ಸಂಘದ ವ್ಯಾಖ್ಯೆಯನ್ನು ಹೀಗೆ ಕೊಟ್ಟಿದ್ದಾರೆ "ನಿರ್ಗತಿಕರು ಒಂದುಗೂಡಿ ಸಾಮೂಹಿಕ ವ್ಯವಹಾರಕ್ಕಾಗಿ ಕಟ್ಟಿಕೊಂಡ ಸಂಸ್ಥೆಯೇ ಸಹಕಾರಿ ಸಂಘ ನಿಸ್ವಾರ್ಥ ಭಾವನೆಯಿಂದ ಸಂಘವು ಸಾಗಬೇಕಲ್ಲದೆ ಅದರ ಲಾಭವನ್ನು ತಮ್ಮ ತಮ್ಮ ಕಾರ್ಯಶಕ್ತಿಗನುಗುಣವಾಗಿ ಹಂಚಿಕೊಳ್ಳಬೇಕು"

ಪ್ರೊ ಸೆಲಿಗ್‌ಮನ್ ಅವರು ಸಹಕಾರದ ವ್ಯಾಖ್ಯೆಯನ್ನು ಹೀಗೆ ಹೇಳಿದ್ದಾರೆ "ಉತ್ಪಾದನೆ ಮತ್ತು ವಿತರಣೆಯಲ್ಲಿ (ಹಂಚುವಿಕೆ) ಸ್ಪರ್ಧೆಯು ಇಲ್ಲದಂತೆ ಮತ್ತು ಯಾವುದೇ ಸ್ವರೂಪದ ಮಧ್ಯಸ್ಥರು ಇಲ್ಲದಂತೆ ಮಾಡುವದೇ ಸಹಕಾರ"

ಗಾರ್ಡನ್ ಓಬ್ರಿಯನ್ ಅವರು ತಮ್ಮ "ಡೆನ್ಮಾರ್ಕದಲ್ಲಿ ಸಹಕಾರ" ಎಂಬ ಪುಸ್ತಕದಲ್ಲಿ ಹೇಳಿರುವದೇನಂದರೆ "ಕೆಲವೊಂದು ನಿರ್ದಿಷ್ಟ ವ್ಯವಹಾರಿಕ ನಿಯಮಗಳ ಮೇರೆಗೆ ನಿರ್ದಿಷ್ಟ ವ್ಯವಹಾರಿಕ ಉದ್ದೇಶಗಳಿಗಾಗಿ ಜನತೆಯು ಒಂದುಗೂಡುವದೇ ಸಹಕಾರದ ಆರ್ಥಿಕ ರಚನೆಯ ವಿಶೇಷ ರೂಪವು"

ಮದ್ರಾಸದ ಕೊ–ಆಪರೇಟಿವ್ ಮ್ಯಾನ್ಯುಅಲ್‌ದಲ್ಲಿ ಸಹಕಾರವನ್ನು ಹೀಗೆ ವಿವೇಚಿಸಲಾಗಿದೆ "ಸಮಾನ ಹಕ್ಕು ಬಾಧ್ಯತೆಗಳುಳ್ಳ ಜನರು ಸ್ವಯಂ ಇಚ್ಛೆಯಿಂದ ತಮ್ಮ ಆರ್ಥಿಕ ಜೀವನಕ್ಕೆ ನಿಕಟವಾಗಿ ಸಂಬಂಧಿಸಿದ ಉದ್ದೇಶಗಳ ಸಾಫಲ್ಯಕ್ಕಾಗಿ ಮತ್ತು ಹಾಗೆ ಉಂಟಾದ ಲಾಭವನ್ನು ಎಲ್ಲರಲ್ಲಿಯೂ ಸಮಾನವಾಗಿ ಹಂಚಿಕೊಳ್ಳಲಿಕ್ಕೆ ಸಂಘಟಿತರಾಗುವದೇ ಸಹಕಾರವು"

ಮ್ಯಾಕ್ಲಗಾನ್ ಕಮೀಟಿಯ ವ್ಯಾಖ್ಯೆ ಹೀಗಿದೆ "ನಿರ್ಗತಿಕ ಮತ್ತು ನಿಸ್ಸಹಾಯಕ ವ್ಯಕ್ತಿಯು ಇತರರೊಡನೆ ಬೆರೆತು ಪರಸ್ಪರ ಸಹಾಯದಿಂದ ಶ್ರೀಮಂತ ಮತ್ತು ಪ್ರಬಲ ವ್ಯಕ್ತಿಗಳು ಪಡೆಯಬಹುದಾದುದನ್ನು ಪಡೆದುಕೊಳ್ಳಲು ಸಮರ್ಥನಾಗಿ ತನ್ನ ನೈಸರ್ಗಿಕ ಬೆಳವಣಿಗೆಯನ್ನು ಮಾಡಿಕೊಳ್ಳುವದೇ ಸಹಕಾರವು." ದಿವಾನ ಬಹಾದ್ದೂರ್ ಎಚ್. ಎಲ್ ಕಾಜಿ ಅವರು ಹೇಳಿರುವದೇನಂದರೆ, "ಆರ್ಥಿಕ ಮುಗ್ಗಟ್ಟನ್ನು ಎದುರಿಸಿದ ಕೆಲವು ಜನರು ತಮ್ಮ ಸ್ಥಾನಮಾನಗಳನ್ನು ಭದ್ರಪಡಿಸಿಕೊಳ್ಳಬೇಕೆಂದೂ ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳಬೇಕೆಂದೂ ಇಚ್ಛಿಪಟ್ಟು ಆ ಉದ್ದೇಶ ಸಾಫಲ್ಯಕ್ಕಾಗಿ ಉತ್ಪಾದನೆ, ವಿತರಣೆ ವಿನಿಮಯ ಮತ್ತು ಉಪಯೋಗ ಮೊದಲಾದ ಆರ್ಥಿಕ ಕ್ರಮಗಳನ್ನು ಅನುಸರಿಸುತ್ತಾರೆ ಈ ರೀತಿ ಉಂಟಾದ ಲಾಭವನ್ನು ಸಮವಾಗಿ ಹಂಚಿಕೊಳ್ಳುವರು. ಹೀಗೆ ರಚಿಸಿಕೊಂಡ ಸಂಸ್ಥೆಗೆ ಸಹಕಾರಿ ಸಂಘವೆಂದು ಕರೆಯುವರು" ಡಾ ವ್ಲಾಡೆನೆಜ್ ಅವರು ಹೇಳಿರುವದೇನಂದರೆ, "ಸಣ್ಣ ಸಣ್ಣ ಉತ್ಪಾದಕರು ಅಥವಾ ಗ್ರಾಹಕರು ಒಂದುಗೂಡಿ ಕಟ್ಟಿಕೊಂಡ ಸಂಘಟನಗಳೇ ಸಹಕಾರಿ ಸಂಘಗಳು.ಈ ಪದ್ಧತಿಯಿಂದ ಪರಸ್ಪರ ಕಾರ್ಯಗಳ ಮುಖಾಂತರ ಸಾಮೂಹಿಕ ಹಾಗೂ ಸಾಮಾನ್ಯ ಉದ್ದೇಶ ಸಾಧನೆಗಾಗಿ ತಮ್ಮ ತಮ್ಮ ಶಕ್ತಿಗನುಸಾರವಾಗಿ ಹಣ ಪೂರೈಸಿಕೊಂಡು ಕಾರ್ಯ ಮಾಡುವರು" ಜೇಮ್ಸ್ ಪಿಟರ್ ವಾರ್‌ಬೇಸ್ ಅವರು ಸಹಕಾರಿ ಸಂಘದ ಬಗ್ಗೆ ಹೀಗೆ ಹೇಳಿರುವರು "ಪ್ರಜಾಪ್ರಭುತ್ವ ತಳಹದಿಯ ಮೇಲೆ, ಸ್ವಯಂಸಂಘಟಿತ ಜನತೆಯು ಸಂಘವೇ ಸಹಕಾರಿ ಸಂಘವು ಮತ್ತು ಇದರ ಸದಸ್ಯರು ಪರಸ್ಪರ ಸಹಾಯಗಳಿಂದ ತಮ್ಮ ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತಾರೆ ಈ ಸಂಘಗಳ ಉತ್ಪಾದನೆ ಹಾಗೂ ವಿತರಣೆ ಕಾರ್ಯಗಳು ಲಾಭದ ದೃಷ್ಟಿಯಿಂದ ಇರದೆ ಸೇವೆಯ ದೃಷ್ಟಿಯಿಂದಿರುತ್ತವೆ ಲಾಭದ ಉದ್ದಿಮೆ ಮತ್ತು 'ಸಕ್ತಿ' ಸರಕಾರ ಇವುಗಳನ್ನು ತಳ್ಳಲು ಸಮರ್ಥವಾದ ಹೊಸ ಸಮಾಜವನ್ನು ರಚಿಸುವದೇ ಸಹಕಾರ ಆಂದೋಲನದ ಗುರಿಯಾಗಿದೆ

ಇನ್ನು ಜಾರ್ಜ ಜಾಕೊಬ್ ಹೊಲಿಯೊಕ್ ಅವರು ಸಹಕಾರವನ್ನು ಹೀಗೆ ವರ್ಣಿಸಿದ್ದಾರೆ

" ಸಹಕಾರವು ಮಾನವನ ದೈನಸಂಪತ್ತಿಗೆ ದಕ್ಕೆ ತರದು, ಸುಲಿಗೆ ಮಾಡದು, ಸಮಾಜಕ್ಕೆ ತೋಂದರೆ ಕೊಡದು, ರಾಜಕಾರಣಿಗಳಿಗೆ ಅಡ್ಡಬರದು, ಗುಪ್ತ ಸಂಘಟನೆಯಲ್ಲಿ ಕೈಹಾಕವ, ತನ್ನ ಹಿತರಕ್ಷಣೆಗಾಗಿ ವ್ಯವಹಾರ ಸಂಸ್ಥೆಯನ್ನು ಕಟ್ಟಿಕೊಳ್ಳದು, ಹಿಂಸೆಯನ್ನು ಆಚರಿಸದು, ನಿಯಮವನ್ನು ಅತಿಕ್ರಮಿಸದು, ಉತ್ಕರ್ಷ, ಪ್ರತಿಷ್ಠೆಗಳಿಗೆ ಅಸೂಯೆ ಪಡದು, ದಾನಕ್ಕಾಗಿ ಕೈ ಒಡ್ಡದು, ಉಪಕಾರಕ್ಕಾಗಿ ಬಾಯಿ ಬಿಡದು, ಆಲಸಿಗಳ ಸಂಬಂಧವನ್ನಿಟ್ಟುಕೊಳ್ಳದು, ಬುದ್ಧಿವಂತರ ವಿಶ್ವಾಸಕ್ಕೆ ಭಂಗ ತರದು ಅಪ ಮಾಟಗಾರಿಕೆಯಲ್ಲ, ದಾಸ್ಯವಲ್ಲ, ಅಕ್ರಮ ಕೂಟವೂ ಅಲ್ಲ ಅದು ಇನ್ನೊಬ್ಬರ ವ್ಯವಹಾರದಲ್ಲಿ ಕೈಹಾಕದು. ತನ್ನ ವ್ಯವಹಾರದಲ್ಲಿ ಇತರರಿಗೆ ದೀರ್ಘಾವಧಿಯವರೆಗೆ ಕೈಹಾಕಗೊಡದು, ಪರಿಶ್ರಮದ ಸಂಪಾದನೆಯಂತೆ ಅಥವಾ ವಿಚಾರದ ವಿಜಯದಂತೆ ಅದು ಸ್ವಾವಲಂಬಿಯಾಗಿದೆ, ಸ್ವಸಹಾಯ ಪೂರ್ಣವಾಗಿದೆ "

ಹೀಗೆ ಸಹಕಾರ ಆಂದೋಲನವನ್ನು ಅನೇಕ ಜನರು ಅನೇಕ ಕಾಲಗಳಲ್ಲಿ ಆಯಾಕಾಲದ ಆರ್ಥಿಕ ರಚನೆಗಳಿಗನುಗುಣವಾಗಿ ವಿವಿಧ ರೂಪಗಳಲ್ಲಿ ವರ್ಣಿಸಿದ್ದಾರೆ ಈ ಎಲ್ಲ ವ್ಯಾಖ್ಯೆಗಳಿಂದ ಕಂಡುಬರುವದೇನಂದರೆ ಸಹಕಾರ ಆಂದೋಲನವು ಭೌತಿಕ ತಳಹದಿಗಿಂತ ಹೆಚ್ಚಾಗಿ ನೈತಿಕ ತಳಹದಿಯ ಮೇಲೆ ನಿಂತಿದ ವಾರ್‌ಬೇಸ್ ಅವರು ಅಭಿಪ್ರಾಯ ಪಟ್ಟಿರುವಂತೆ ಸಹಕಾರದಿಂದ ಎಲ್ಲ ಆರ್ಥಿಕ ಸಮಸ್ಯೆಗಳು ದೂರಾಗಬಲ್ಲವು ಆದರೆ ನನ್ನ ದೃಷ್ಟಿಯಲ್ಲಿ ಸಹಕಾರವು ನಿತ್ಯದ ವ್ಯವಹಾರದ ಒಂದು ಕ್ರಮವಾಗಿದ್ದು ಪ್ರತ್ಯಕ್ಷವಾಗಿ ಅದು ಆರ್ಥಿಕ ಸುಧಾರಣೆಗಾಗಿಯೂ ಅಪ್ರತ್ಯಕ್ಷವಾಗಿ ಸದಸ್ಯರ ನೈತಿಕ ಸುಧಾರಣೆಗಾಗಿಯೂ ಯತ್ನಿಸುತ್ತದೆ. ವಾಡಿಕೆಯಾಗಿ ಆರ್ಥಿಕ ದೃಷ್ಟಿಯಿಂದ ದುರ್ಬಲರಾಗಿರುವ ವ್ಯಕ್ತಿಗಳು ಅಥವಾ ವ್ಯಕ್ತಿಗಳ ಗುಂಪುಗಳು ಸಾಮೂಹಿಕ ಪ್ರಯತ್ನಗಳ ಮತ್ತು ಸಂಯುಕ್ತ ಕೃತಿಗಳ ಮುಖಾಂತರ, ಸಮತೆಯ ತಳಹದಿಯ ಮೇಲೆ, ಸರ್ವಸಾಮಾನ್ಯವಾದ ಆರ್ಥಿಕ ಆವಶ್ಯಕತೆಗಳನ್ನು ಪೂರೈಸಿಕೊಳ್ಳುವ ದೃಷ್ಟಿಯಿಂದ ಮಾನವ ಪ್ರಾಣಿಯಂತೆ ಸಂಘಟಿತರಾಗುವ ರೀತಿಗೆ ಸಹಕಾರವೆಂದು ಹೇಳಬಹುದು ವ್ಯಕ್ತಿ ವ್ಯಕ್ತಿಗಳ ಒಡಕೇ ದೌರ್ಬಲ್ಯ! ಸಂಘಟನೆಯೇ ಪ್ರಾಬಲ್ಯ! ಇದುವೇ ಸಹಕಾರ ಸಾಫಲ್ಯ! ಸಹಕಾರಿ ಸಂಘಗಳ ಶಕ್ತಿಯು ತನ್ನಲ್ಲಿದ್ದ ಸಂಪತ್ತಿನ ಮೇಲೆ ಅವಲಂಬಿಸಿರದೆ ಸದಸ್ಯರ ನೈತಿಕ ಮಟ್ಟವನ್ನು ಅವಲಂಬಿಸಿದೆ ಅಂದರೆ ಸಂಘಟನೆಗಳ ಬಗ್ಗೆ ವಿಧೇಯತೆ ಮತ್ತು ಉದ್ದೇಶ ಸಾಫಲ್ಯದ ಮನೋದಾರ್ಢ್ಯಗಳು ಸದಸ್ಯರಲ್ಲಿ ಹೆಚ್ಚಾಗಿದ್ದಂತೆ ಸಂಘಗಳ ಪ್ರಾಬಲ್ಯವು ಹೆಚ್ಚಾಗಬಲ್ಲದು. ಅದೇ ಮೇರೆಗೆ ಸ್ವಸಹಾಯ ಮತ್ತು ಪರಸ್ಪರ ಸಹಾಯಗಳು ಸಹಕಾರಿ ಸಂಘಗಳ ಶಕ್ತಿಯ ಆಧಾರಸ್ತಂಭಗಳಾಗಿವೆ ಹೀಗೆ ಸಹಕಾರವೆಂದರೆ ವ್ಯವಹಾರ ಮಾಡಲು ಕಟ್ಟಿಕೊಂಡ ಸ್ವಯಂ ಸಂಘಟನೆಯಾಗಿದೆ ಸಮಾನತೆಯೇ ಇದರ ತಳಹದಿ ಸಾಮಾನ್ಯ ಬೇಡಿಕೆಯ ಪೂರೈಕೆಯೇ ಇದರ ಉದ್ದೇಶ.

## ಸಹಕಾರವು ನೈತಿಕ ಆಂದೋಲನವು.

ಸಹಕಾರಿ ಸಮಾಜರಚನೆಯ ಉದ್ದೇಶವು ಆರ್ಥಿಕ ಸಮಸ್ಯೆಗಳ ನಿವಾರಣೆಗಾಗಿ ಅಷ್ಟೇ ಇರದೆ ಉಚ್ಚ ಸಾಮಾಜಿಕ ಆದರ್ಶಗಳ ಬೆಳವಣಿಗೆಗಾಗಿಯೂ, ಉತ್ತಮ ನಾಗರಿಕತೆಯ ವಿಕಾಸಕ್ಕಾಗಿಯೂ ಇದೆ "ಇದೊಂದು ಆರ್ಥಿಕ ಆಂದೋಲನವಾಗಿದ್ದರೂ ಇದಕ್ಕೆ ನೈತಿಕ ಹಿನ್ನೆಲೆ ಇವೆ" ಇದು ಸಂಘಟನಾ ಶಕ್ತಿಯನ್ನು ಸ್ವಾವಲಂಬನೆ, ಮತ್ತು ಪರಸ್ಪರ ಸಹಾಯ, ಸಾಮೂಹಿಕ ಕಾರ್ಯ, ಒಕ್ಕಟ್ಟು ಮೊದಲಾದ ತತ್ವಗಳನ್ನು ಆರ್ಥಿಕ ಸುಧಾರಣೆ, ಉತ್ತಮ ಜೀವನಗಳಿಗಾಗಿ ಬೋಧಿಸುತ್ತದೆ. ಸಮಾಜದಲ್ಲಿ ವಿಶ್ವ ಬಂಧುತ್ವವನ್ನು, ಜನತಾ ಸೇವೆಯನ್ನು, ಬೋಧಿಸುವ ಉದಾತ್ತ ತತ್ವವೇ ಸಹಕಾರ ಸಹಕಾರಿ ಸಂಘಗಳ ಸಂಚಾಲಕರು ಕಾರ್ಯತತ್ಪರರಾಗಿರುವಂತೆ ಪ್ರಾಮಾಣಿಕರಾಗಿದ್ದುಕೊಂಡು ಜನತಾ–ಸೇವಾ–ಬುದ್ಧಿಯುವರಾಗಿರಬೇಕು ಸಹಕಾರಿ ಸಂಘದಲ್ಲಿಯ ಸದಸ್ಯನು ಸಾಮೂಹಿಕ ಹಿತದೃಷ್ಟಿಯಲ್ಲಿ ತನ್ನ ಹಿತವನ್ನು ತ್ಯಾಗಮಾಡಲು ಸಿದ್ಧನಾಗಬೇಕು ಸಂಘಟನೆಯಿಂದ ಸಮಾಜದಲ್ಲಿಯ ನಿರ್ಗತಿಕರ ಸುಧಾರಣೆಯಾಗುತ್ತದೆ ಹೀಗೆ ಸಮಾಜದಲ್ಲಿಯ ಆರ್ಥಿಕ ವಿಷಮತೆಯನ್ನು ಸಹಕಾರವು ಹೋಗಲಾಡಿಸುತ್ತದೆ

## ಸಹಕಾರ ಮತ್ತು ಬಾಂಡವಳಗಾರಿಕೆ !

ಬಾಂಡವಳಶಾಹಿಯು ಒಂದು ಆರ್ಥಿಕ ಪದ್ಧತಿಯಾಗಿದೆ. ಇದರಲ್ಲಿ ಜನರು ವೈಯಕ್ತಿಕವಾಗಿ ತಮ್ಮ ತಮ್ಮ ಹಣಕಾಸಿನಿಂದಲೇ ವ್ಯವಹಾರ ಸಾಗಿಸುತ್ತಾರ ಕೂಲಿಕಾರನು ಉತ್ಪಾದನೆಯ ಅಂಗವಾಗಿದ್ದರೂ ಬಾಂಡವಳ ಪದ್ಧತಿಯಲ್ಲಿ ಈ ಜನರೇ ಬರಬಹುದಾದ ಲಾಭವೆಲ್ಲವನ್ನು ನುಂಗುತ್ತಾರ ಹೀಗೆ ಎಲ್ಲ ಉದ್ದಿಮೆಗಳು ವೈಯಕ್ತಿಕ ಹಣಕಾಸಿನಿಂದಲೇ ಸಾಗುತ್ತಿದ್ದು ಆಗುವ ಎಲ್ಲ ಲಾಭ ಹಾನಿಗಳಿಗೆ ಬಾಂಡವಳದಾರರೇ ಪಾತ್ರರು! ಬಾಂಡವಳ ಪದ್ಧತಿಯ ಮೂಲ ಸ್ವರೂಪವೆಂದರೆ ವೈಯಕ್ತಿಕ ಒಡೆತನ, ಉತ್ಪಾದನೆಯ ವಿತರಣೆಯ ನಿಯಂತ್ರಣ, ವೈಯಕ್ತಿಕ ವ್ಯವಹಾರ ಮತ್ತು ವೈಯಕ್ತಿಕ ಲಾಭ. ಸಲಕರಣೆ ಯಂತ್ರಸಾಮುಗ್ರಿ ಉತ್ಪಾದನೆ ಮತ್ತು ವಿತರಣಾಸಾಮುಗ್ರಿ, ಹಣಪೂರೈಕೆಯ ಸಾಧನಗಳು, ಅಂದರೆ ಫ್ಯಾಕ್ಟರಿ, ಭೂಮಿ ಖನಿಜ, ಹಡಗ, ರೇಲ್ವೆ ಮತ್ತಿತರ ಸಾಗಾಟ ಸಾಧನಗಳು ಎಲ್ಲವನ್ನು ವೈಯಕ್ತಿಕ ಖಾಸಗಿ ಜನರೇ ನಿಯಂತ್ರಿಸುತ್ತಿದ್ದು, ಅದರಿಂದ ಬಂದ ಲಾಭವೆಲ್ಲವೂ ಅವರ ಪಾಲಿಗೆ ಸಲ್ಲುತ್ತದೆ ಈ ಪದ್ಧತಿಯಲ್ಲಿ ಆರ್ಥಿಕ ಚಟುವಟಿಕೆಗಳು ಮುಖ್ಯವಾಗಿ ಲಾಭ ಮತ್ತು ಸ್ಪರ್ಧೆಗಳ ಮೇಲೆ ಅವಲಂಬಿಸಿವೆ ಮಾನವನಿಗೆ ಸ್ವಾರ್ಥವೇ ಪ್ರಾಧಾನ್ಯವಾಗುತ್ತದೆ ಹೀಗಾಗಿ ಪ್ರಬಲನಾದವನೇ ಜೀವಿಸಬೇಕು ಎಂಬುದು ಬಾಂಡವಳಗಾರಿಕೆಯ ತತ್ವವು ಈ ಪದ್ಧತಿಯಲ್ಲಿ ಯಾವನು ಹೆಚ್ಚು ಹಣ ಸಂಪಾದಿಸುವನೋ ಅವನೇ ಧೂರ್ತ ಮತ್ತು ಯಶಸ್ವೀ ವ್ಯಾಪಾರಿ ಎಂದು ಪರಿಗಣಿಸಲ್ಪಡುವನು ಹೆಚ್ಚು ಹೆಚ್ಚು ಶ್ರಮವಹಿಸಿ ದುಡಿಯಲು ಈ ಪದ್ಧತಿಯಲ್ಲಿ ಯೋಗ್ಯ ಪ್ರಚೋದನೆಗಳಿವೆ, ಆತ್ಮವಿಕಾಸಕ್ಕಾಗಿ ಎಲ್ಲ ಅವಕಾಶವು ಇದರಲ್ಲಿದೆ. ಆದರೂ ಕಳೆದ

ಕಲ್ಯಾಣವನ್ನು ಬಹು ಪರಿಯಿಂದ ಸಾಧಿಸುವದೇ ಸಮಾಜವಾದದ ಮೂಲ ಉದ್ದೇಶ ವಾಗಿದೆ ಎಲ್ಲ ಆರ್ಥಿಕ ಚಟುವಟಿಕೆ ಮತ್ತು ಉದ್ದಿಮೆಗಳನ್ನು ಸರಕಾರ ಇಲ್ಲವೆ ಸ್ಥಾನಿಕ ಸಂಸ್ಥೆಗಳು ಸಾಗಿಸುತ್ತವೆ ಆದರೂ ಈ ಪದ್ಧತಿಯಲ್ಲಿಯೂ ಎಷ್ಟೋ ದೋಷಗಳು ಅಡಕವಾಗಿವೆ ವ್ಯಕ್ತಿ ಸ್ವಾತಂತ್ರ್ಯ ಮತ್ತು ವೈಯಕ್ತಿಕ ಚಟುವಟಿಕೆ ಗಳಿಗೆ ಸಮಾಜವಾದದಲ್ಲಿ ಸ್ಥಾನವಿಲ್ಲ ಸಮಾಜವಾದವು ವೈಯಕ್ತಿಕ ಒಡೆತನ ವನ್ನು ನಾಶಮಾಡಿ ಹೊಸ ಸಮಾಜ ರಚನೆಗಾಗಿ ಹೆಣಗಾಡುತ್ತದೆ ಆದರೆ ಸಹಕಾರವು ಸಾಮೂಹಿಕ ಹೊಣೆ ಮತ್ತು ಪರಸ್ಪರ ಸಹಾಯ ಇವುಗಳ ಆಧಾರದ ಮೇಲೆ ಜನತೆಯ ಸ್ವಯಂ ಸಂಘಟನೆಗಾಗಿ ಇದೆ ಸಹಕಾರದಲ್ಲಿ ಆರ್ಥಿಕ ಚಟು ವಟಿಕೆಗಳ ನಿಯಂತ್ರಣವು ಸದಸ್ಯರಿಗ ಸೇರಿರುತ್ತದೆ ಆದರೆ ಸಮಾಜವಾದದಲ್ಲಿ ಸರಕಾರಕ್ಕ ಸೇರಿರುತ್ತದೆ ಬಾಂಡವಲ ಪದ್ಧತಿಯ ದೋಷಗಳನ್ನು ನಿವಾರಿಸಿ ಕೊಂಡು ಸಮಾಜ ರಚನೆಯ ಶ್ರೇಷ್ಠ ತತ್ವವಾಗಿ ಸಹಕಾರವು ಉಳಿದುಕೊಳ್ಳುತ್ತದೆ ಸಹಕಾರವು ಸರ್ವಸಾಮಾನ್ಯ ವಿಷಮತೆಯ ಗೋಜಿಗೆ ಹೋಗುವದಿಲ್ಲ ವೈಯ ಕ್ತಿಕ ಒಡೆತನ ಮತ್ತು ವೈಯಕ್ತಿಕ ಸಂಪತ್ತುಗಳನ್ನು ನಾಶಮಾಡಬೇಕೆಂಬುದು ಸಹಕಾರದ ಉದ್ದೇಶವಿಲ್ಲ ಆದರೆ ವೈಯಕ್ತಿಕ ಒಡೆತನಕ್ಕೆ ಸಹಕಾರವು ಹೊಸ ಸ್ವರೂಪವನ್ನು ತಂದು ಕೊಡುತ್ತದೆ ಅಸ್ತಿತ್ವದಲ್ಲಿದ್ದ ಪರಿಸ್ಥಿತಿಯನ್ನು ತಳಹದಿಯ ನ್ನಾಗಿಟ್ಟುಕೊಂಡು ಮುಂದೆ ಬರಬಹುದಾದ ಅಸಮಾನತೆಗಳನ್ನು ಸಹಕಾರವು ತಡೆಗಟ್ಟುತ್ತದೆ

ಹೀಗಾಗಿ ಸಹಕಾರದಲ್ಲಿ ಸಮಾಜವಾದ ಮತ್ತು ಬಾಂಡವಳ ಪದ್ಧತಿಯ ದೋಷಗಳ ನಿವಾರಣೆಯಾಗಿರುತ್ತದ ಇದರಲ್ಲಿ ಸ್ಪರ್ಧೆ ಮತ್ತು ಲಾಭಬಡಕ ತನಕ್ಕೆ ಅವಕಾಶವಿಲ್ಲ ಸೇವೆಯೇ ಇದರ ಮೂಲ ಉದ್ದೇಶವಾಗಿದೆ ವೈಯಕ್ತಿಕ ಒಡೆತನವನ್ನು ನಾಶಮಾಡಬೇಕೆಂಬುದು ಸಹಕಾರದ ಉದ್ದೇಶವಾಗಿಲ್ಲವಾದುದ ರಿಂದ ಸಹಕಾರ ಪದ್ಧತಿಯಲ್ಲಿ ವೈಯಕ್ತಿಕ ಶ್ರಮಕ್ಕೆ ಯೋಗ್ಯ ಪ್ರೋತ್ಸಾಹ ಮತ್ತು ಪ್ರಚೋದನೆಗಳಿವೆ ಆದರೆ ಇದರಲ್ಲಿ ಒಬ್ಬ ವ್ಯಕ್ತಿಯು ಮತ್ತೊಬ್ಬ ವ್ಯಕ್ತಿಯ ಶೋಷಣೆಯಿಂದ ಶ್ರೀಮಂತನಾಗಲಾರನು ಪ್ರತಿಒಬ್ಬನು ತನ್ನ ಸುಧಾರಣೆ ಮಾಡಿ ಕೊಳ್ಳುತ್ತಿರುವಂತೆ ಇತರರ ಸುಧಾರಣೆಗೂ ನೆರವು ನೀಡಲು ಅವಕಾಶವಿದೆ ಹೀಗಾಗಿ ಸಹಕಾರವು ಸಮಾಜವಾದ ಮತ್ತು ಬಾಂಡವಳ ಪದ್ಧತಿಗಳ ಉತ್ತಮ ತತ್ವಗಳನ್ನು ಒಳಗೊಂಡಿದೆ ಅಂದರೆ ಬಾಂಡವಳ ಪದ್ಧತಿಯ ವ್ಯಕ್ತಿ ಸ್ವಾತಂತ್ರ್ಯ ಮತ್ತು ಸಮಾಜವಾದದ ಸಾಮೂಹಿಕ ಕಾರ್ಯ ಸಹಕಾರವು ಪ್ರೇಮ, ಸಹೃದಯತ, ಪ್ರಾಮಾಣಿಕತೆ, ಪರಸ್ಪರ ಸಹಾಯ, ಪರಸ್ಪರ ನಂಬುಗೆ ಮತ್ತು ಮೈತ್ರಿ ಮೊದಲಾದ ಮಾನವೀಯ ನೈಸರ್ಗಿಕ ತಳಹದಿಯ ಮೇಲೆ ನೆಲಸಿರುವದ ರಿಂದ ಇದು ಸಮಾಜವಾದ ಮತ್ತು ಕಮ್ಯುನಿಜಂಗಳಿಗಿಂತ ಎಷ್ಟೋ ಪಾಲು ಶ್ರೇಷ್ಠ ವಾದುದು "ಸಹಕಾರವು ಸ್ವಾರ್ಥವನ್ನು ತನ್ನ ತಳಹದಿಯನ್ನಾಗಿ ಇಟ್ಟು ಕೊಂಡಿರದೆ ಸಾಮೂಹಿಕ ಕಾರ್ಯದ ಮೇಲೆ ನಿಂತಿದೆ, ಶೋಷಣೆಯ ಮೇಲೆ ನಿಂತಿರದೆ ಸಮಾನತೆಯ ಮೇಲೆ ನಿಂತುಕೊಂಡಿದೆ, ಅದೇ ಮೇರೆಗೆ ವರ್ಗ ದ್ವೇಷವು ಇದರಲ್ಲಿರದೆ ಪ್ರಜಾಪ್ರಭುತ್ವವು ಕಂಡುಬರುತ್ತದೆ" ಹೀಗಾಗಿ ಸಹಕಾರವು

ಸಮಾಜವಾದ ಮತ್ತು ಬಾಂಡವಲವಾದಗಳ ನಡುವಿನ ಉತ್ತಮ ಮಾರ್ಗವಾಗಿದೆ. ನಿಜಕ್ಕೂ ಪ್ರತ್ಯಕ್ಷ ರೀತಿಯಲ್ಲಿ ಮಧ್ಯಮ ಮಾರ್ಗವೇ ಉತ್ತಮವಾದುದು ಸಹಕಾರವು ಈ ಎರಡೂ ತತ್ವಗಳ ಮಧ್ಯಮ ಮಾರ್ಗವಾಗಿ ನಿಂತುಕೊಂಡಿದೆ "ಸಾಮೂಹಿಕ ಆರ್ಥಿಕ ಬೇಡಿಕೆಗಳ ಪೂರೈಕೆಗಾಗಿ ಸಂಘಟಿತ ಕಾರ್ಯಮಾಡುವದೇ ಸಹಕಾರ 'ತನಗಾಗಿ ತಾನು' ಎಂಬ ವೈಯಕ್ತಿಕ ಧ್ಯೇಯದ ಬದಲು 'ತಾನು ಎಲ್ಲರಿಗಾಗಿ, ಎಲ್ಲರೂ ತನಗಾಗಿ' ಎಂಬುದೇ ಸಹಕಾರದ ಧ್ಯೇಯವಾಗಿದೆ. ಕಮ್ಯುನಿಸ್ಟ ತತ್ವವಾದ 'ತಾನು ಎಲ್ಲರಿಗಾಗಿ, ಎಲ್ಲರೂ ಎಲ್ಲರಿಗಾಗಿ' ಎಂಬ ತತ್ವಕ್ಕಿಂತಲೂ ಸಹಕಾರದ ತತ್ವವು ಶ್ರೇಷ್ಠವಾಗಿದೆ" ಎಂದು ಮದ್ರಾಸ ಮ್ಯಾನ್ಯುಅಲ್‌ದಲ್ಲಿ ಹೇಳಲಾಗಿದೆ

## ಸಹಕಾರದ ಮೂಲಭೂತ ತತ್ವಗಳು.

(೧) **ಸ್ವಯಂ ಸಂಘಟನೆ**:— ಸ್ವಯಂ ಸಂಘಟನೆಯ ತತ್ವವು ಅತಿ ಮುಖ್ಯವಾಗಿದ್ದು, ಇನ್ನಿತರ ಸಂಘ ಸಂಸ್ಥೆಗಳಿಗಿಂತ ಇದು ಭಿನ್ನವಾಗಿದೆಯೆಂದು ತೋರಿಸುತ್ತದೆ ಇದು ವ್ಯಕ್ತಿ ಸ್ವಾತಂತ್ರ್ಯದ ವಿಕಾಸಕ್ಕೆ ಪೋಷಕವಾಗಿರುತ್ತದ. ಜಾನ್ ಸ್ಟುಅರ್ಟ ಮಿಲ್ ಅವರು ತಮ್ಮ ಅರ್ಥಶಾಸ್ತ್ರ ಪುಸ್ತಕದಲ್ಲಿ ಸಹಕಾರಿ ಸಂಘಗಳ ವಿಭಾಗದಲ್ಲಿ ಹೀಗೆ ಬರೆದಿದ್ದಾರೆ "ಸಹಕಾರಿ ತತ್ವಗಳಿಂದ ನಾವು ಸಮಾಜ ಬದಲಾವಣೆ ಮಾರ್ಗವನ್ನು ಕಾಣಬಹುದು ಮತ್ತು ವ್ಯಕ್ತಿ ಸ್ವಾತಂತ್ರ್ಯ ಹಾಗೂ ವಿಕಾಸಗಳನ್ನು ಮತ್ತು ಉತ್ಪಾದನೆಯ, ನೈತಿಕ, ಶೈಕ್ಷಣಿಕ ಮತ್ತು ಆರ್ಥಿಕ ಸುಧಾರಣೆಗಳನ್ನು ಸಹಕಾರವು ಸಮೀಕರಿಸುತ್ತದೆ "ಸಹಕಾರವು ತತ್ವತಃ ಸ್ವಯಂ ಸಂಘಟನೆಯಾಗಿದೆ ಅದರಲ್ಲಿ ಮನ ಒಲಿಸುವಿಕೆ ಮತ್ತು ವಿನಂತಿಗಳಿದ್ದರೂ ಒತ್ತಾಯವು ಮಾತ್ರ ಇಲ್ಲ ಆದುದರಿಂದ ಕಡ್ಡಾಯವು ಸಹಕಾರಕ್ಕೆ ವಿರೋಧವಾದುದು

ಆದರೆ ಇತ್ತಿತ್ತಲಾಗಿ ಬದಲಾದ ವಾತಾವರಣದಲ್ಲಿ ಸ್ವಯಂಸಂಘಟನೆಯ ತತ್ವವು ತನ್ನ ಮಹತ್ವವನ್ನು ಕಳೆದುಕೊಳ್ಳತೊಡಗಿದ ಮತ್ತು ಅನೇಕ ದೇಶಗಳಲ್ಲಿ ಇದು ಮೂಲಭೂತ ತತ್ವವೆಂದು ಸ್ವೀಕೃತವಾಗಿಲ್ಲ ಸಹಕಾರವು ರಾಷ್ಟ್ರದ ಆರ್ಥಿಕ ಸಮಸ್ಯೆಗಳ ನಿವಾರಣೆಗಾಗಿ ಇರುವುದರಿಂದ ಪ್ರತಿಕೂಲ ಶಕ್ತಿಗಳನ್ನು ಸಹಕಾರದ ಕ್ಷೇತ್ರದಲ್ಲಿ ತರುವದಕ್ಕಾಗಿ ಒತ್ತಾಯವು ಬೇಕೇಬೇಕು ಸಾಗುವಳಿ, ಬೆಳೆರಕ್ಷಣೆ ಮತ್ತು ನೀರಾವರಿ ಮೊದಲಾದ ಸಂಘಗಳ ಸಂಘಟನೆಯಲ್ಲಿ ಒತ್ತಾಯವು ಸ್ವಲ್ಪಮಟ್ಟಿಗಾದರೂ ಬೇಕಾಗುತ್ತದೆ ಬೆಳವಣಿಗೆ ಹೊಂದದೆ ಇದ್ದ ಮತು ಸರಕಾರದ ಸಹಾಯವು ಅವಶ್ಯವೆಂದು ಕಂಡು ಬರುವ ನಾಡುಗಳಲ್ಲಿ ಒತ್ತಾಯವನ್ನು ಉಪಯೋಗಿಸುವದು ಹಾನಿಯಾಗಲಾರದು ರಸಿಯಾದಲ್ಲಿ ಎಷ್ಟೋ ಗ್ರಾಹಕರ ಸಂಘಗಳನ್ನು ರಚಿಸಲಾಗಿದೆ ಆದರೆ ಅವು ಸ್ವಯಂ ಸಂಘಟನೆಯ ತತ್ವದನ್ವಯ ರಚಿಸಲ್ಪಟ್ಟಿಲ್ಲ.

(೨) **ಪ್ರಜಾಪ್ರಭುತ್ವ ವ್ಯವಸ್ಥೆ**:— ಸಂಘಗಳ ಸದಸ್ಯರು ಅವುಗಳ ನಿಯಂತ್ರಣ ಕಾರ್ಯವನ್ನು ವಹಿಸುತ್ತಾರೆ ಸಾಮಾನ್ಯ ಸದಸ್ಯರ ಸಭೆಗೇನೇ ಅಂತಿಮ ಅಧಿಕಾರವಿದೆ ಸಾಮಾನ್ಯ ಸದಸ್ಯರ ಸಭೆಯೇ ತಾತ್ವಿಕವಾಗಿ

ಅಂತಿಮ ಅಧಿಕಾರಿಯಾದರೂ, ಲಂಡನ್‌ದ ಗ್ರಾಹಕರ ಸಂಘ, ಇಂಗ್ಲಂಡ ಮತ್ತು ಸ್ಕಾಟಲಂಡ ರೋಕಸಂಘ, ಡೆನ್ಮಾರ್ಕ ಮತ್ತು ಹಾಲಂಡಗಳ ಮಾರ್ಕೆಟ್ ಸಂಘ ಮೊದಲಾದ ದೊಡ್ಡ ದೊಡ್ಡ ಸಂಘಗಳಲ್ಲಿ ಅಂತಿಮ ಅಧಿಕಾರಿಯೆಂದರೆ ಕಾರ್ಯಕಾರಿ ಮಂಡಲ ಮತ್ತು ಮ್ಯಾನೇಜರರು ಹೀಗಾಗಿ ಸಹಕಾರಿ ಆಂದೋಲನವು ಮ್ಯಾನೇಜರ ಪದ್ಧತಿಯ ಅಂದೋಲನವಾಗಿದೆ ಎಂದು ಯುರೋಪು ರಾಷ್ಟ್ರಗಳಲ್ಲಿ ಕೆಲವು ವರ್ಗಗಳು ಅಭಿಪ್ರಾಯ ಪಡುತ್ತವೆ ಲಂಡನ್ ಗ್ರಾಹಕರ ಸಂಘದ ಸದಸ್ಯರ ಸಂಖ್ಯೆಯು ೧೦ ಲಕ್ಷದಷ್ಟಿದೆ ಆದರೂ ಸಾಮಾನ್ಯ ಸದಸ್ಯರ ಸಭೆಗೆ ಉಪಸ್ಥಿತರಿರುವವರ ಸಂಖ್ಯಯು ನೂರಕ್ಕೆ ೨ ರಷ್ಟೂ ಇರುವದಿಲ್ಲ ಅದೇ ಮೇರೆಗೆ ಅಪೆಕ್ಸ ಸಂಸ್ಥೆಗಳ ಸದಸ್ಯರು ನಾಡಿನಲ್ಲೆಲ್ಲ ಹರಿದು ಹಂಚಿ ಹೋಗಿರುವದರಿಂದ ಸಾಮಾನ್ಯ ಸದಸ್ಯರ ಸಭೆಯು ಅಂತಿಮ ಅಧಿಕಾರಿಯಾಗಲಾರದು

(೩) **ಒಬ್ಬನಿಗೆ ಒಂದು ಮತ —** ಸಹಕಾರಿ ಸಂಘಗಳ ಪ್ರತಿಯೊಬ್ಬ ಸದಸ್ಯನಿಗೆ, ಅವನು ಎಷ್ಟೋ ಶೇರುಗಳನ್ನು ಧಾರಣ ಮಾಡಿಕೊಂಡಿದ್ದರೂ, ಒಂದೇ ಮತವಿರುತ್ತದೆ

(೪) **ಸಮಾನತೆ :—** ಸಮಾನತೆಯು ಸಹಕಾರಿ ಸಂಘಗಳ ಅತಿ ಮಹತ್ವದ ತತ್ವವಾಗಿದ

(೫) **ಪರಿಮಿತ ಬಡ್ಡಿ .—** ಸಹಕಾರಿ ಸಂಘಗಳಲ್ಲಿ ಲಾಭ ಬಡಕತನಕ್ಕೆ ಅರ್ಧ ಚಂದ್ರವಿದ ಬಂಡವಲಕ್ಕೆ ಕೂಡಲಾಗುವ ಬಡ್ಡೀದರದ ಪ್ರಮಾಣವೂ ಪರಿಮಿತಗೊಳಿಸಲ್ಪಟ್ಟಿರುತ್ತದೆ ಸಹಕಾರಿ ಸಂಘಗಳು "ಡಿವ್ಹಿಡೆಂಡ ದೊರಕಿಸುವ ಸಂಸ್ಥೆಗಳಲ್ಲ," ಆದರ ' ಸಾಮಾಜಿಕ ಸೇವೆಮಾಡುವ ಸಂಸ್ಥೆಗಳಾಗಿವೆ " ಸಹಕಾರಿ ಸಂಘಗಳು ಲಾಭಬಡಕತನವನ್ನು ದೂರಮಾಡುವವಲ್ಲದೆ ಮಾನವನಿಂದ ಮಾನವನಿಗಾಗುವ ಶೋಷಣೆಯನ್ನು ನಿಲ್ಲಿಸುತ್ತವೆ

(೬) **ಶೇರುಗಳ ನಿರ್ಬಂಧ —**ಸಹಕಾರಿ ಸಂಘಗಳಲ್ಲಿ ಪ್ರತಿಒಬ್ಬ ವ್ಯಕ್ತಿಯು ಧಾರಣಮಾಡಬಹುದಾದ ಶೇರುಗಳ ಸಂಖ್ಯೆಯು ಪರಿಮಿತಗೊಳಿಸಲ್ಪಟ್ಟಿರುತ್ತದೆ

(೭) **ಲಾಭ ವಿತರಣ :—** ಸಹಕಾರಿ ಸಂಘಗಳಿಂದ ಬರಬಹುದಾದ ಲಾಭವನ್ನು ವ್ಯವಹಾರಕ್ಕೆ ಅನುಗುಣವಾಗಿ ಹಂಚಲಾಗುವದು

(೮) **ಮುಕ್ತ ಸದಸ್ಯತ್ವ :—**ಸಹಕಾರಿ ಸಂಘಗಳ ಸದಸ್ಯತ್ವವು ಪ್ರತಿಒಬ್ಬನಿಗೂ ಮುಕ್ತವಿದ್ದು ಜಾತಿ, ಪಂಥ, ರಾಜಕಾರಣಗಳ ತಳಹದಿಯ ಮೇಲೆ ಸದಸ್ಯತ್ವವನ್ನು ಯಾರಿಗೂ ನಿರಾಕರಿಸಲು ಬರುವಂತಿಲ್ಲ

ಮೇಲೆ ನಮೂದಿಸಲಾಗಿರುವ ಮೂಲಭೂತ ತತ್ವಗಳು ಭಾರತಕ್ಕೆ ಎಷ್ಟರ ಮಟ್ಟಿಗೆ ಅನ್ವಯಿಸುತ್ತವೆ ಎಂಬುದನ್ನು ನಾವೀಗ ವಿವೇಚಿಸುವಾ. ಭಾರತದಲ್ಲಿಯ ಸಹಕಾರಿ ಸಂಘಗಳ ೧) ಸಂಚಾಲನೆ ೨) ಮತದಾನ ೩) ಹಣಕ್ಕೆ ಕೊಡ

ಲಾಗುವ ಬಡ್ಡಿ ಪ್ರಮಾಣದ ನಿರ್ಬಂಧ ಮೊದಲಾದ ಕ್ರಮಗಳಲ್ಲಿ **ರಾಚ್‌ಡೇಲ** ತತ್ವಗಳನ್ನು ಅನುಸರಿಸಲಾಗಿದೆ ಆದರೆ ರಾಚ್‌ಡೇಲ ಮಾದರಿಯ ಇನ್ನಿತರ ತತ್ವಗಳಾದ ೧) ಸ್ವಯಂ ಸಂಘಟನೆ ೨) ವ್ಯವಹಾರಕ್ಕನುಗುಣವಾಗಿ ಲಾಭ ಹಂಚುವದು ಮತ್ತು ೩) ಮುಕ್ತ ಸದಸ್ಯತ್ವ ಇವುಗಳನ್ನು ಭಾರತದ ಪರಿಸ್ಥಿತಿಗಳಿಗನುಗುಣವಾಗಿ ಬದಲಾಯಿಸಿಕೊಳ್ಳಲಾಗಿದೆ ಭಾರತದಲ್ಲಿ ಕೆಲವೊಂದು ಸಂಘಗಳಲ್ಲಿ ಸದಸ್ಯತ್ವಕ್ಕೆ ಸ್ಥಳಿಕ ಆಸ್ತಿ, ಉದ್ಯೋಗ ಮೊದಲಾದ ನಿರ್ಬಂಧಗಳನ್ನು ಹೇರಲಾಗಿದೆ ಉದಾಹರಣಾರ್ಥವಾಗಿ, ಒಬ್ಬ ವ್ಯಕ್ತಿಯು ಪತ್ತಿನ ಸಂಘದ ಸದಸ್ಯನಾಗಬೇಕಾದರೆ ಅವನು ಆ ಸಂಘದ ಕಾರ್ಯಕ್ಷೇತ್ರದ ಪ್ರದೇಶದಲ್ಲಿ ವಾಸವಾಗಿರಬೇಕು ಮತ್ತು ಹಿಂದುಳಿದ ವರ್ಗಗಳ ಹಾಗೂ ಔದ್ಯೋಗಿಕ ಸಂಘಗಳ ಸದಸ್ಯತ್ವವು ನಿರ್ಬಂಧಿತವಾಗಿರುತ್ತದೆ ಜಾತಿಯ ತಳಹದಿಯ ಮೇಲೆ ರಚಿತವಾದ ಸಂಸ್ಥೆಗಳಲ್ಲಿ ಅನ್ಯಜಾತಿಯ ಜನರಿಗೆ ಸದಸ್ಯರಾಗಲು ಬರುವಂತಿಲ್ಲ ಹೀಗಾಗಿ ಬ್ರಿಟನ್ ಮೊದಲಾದ ಕಡೆಗಳಲ್ಲಿ ಅನುಸರಿಸಲಾಗುತ್ತಿರುವ ಮುಕ್ತ ಸದಸ್ಯತ್ವದ ತತ್ವವನ್ನು ಭಾರತದಲ್ಲಿ ಕೆಲವೊಂದು ಪ್ರಸಂಗಗಳಲ್ಲಿ ಅನುಸರಿಸಲು ಬರುವಂತಿಲ್ಲ ಅದೇ ಮೇರೆಗೆ ಲಾಭ ಹಂಚುವ ತತ್ವವನ್ನೂ ಭಾರತದಲ್ಲಿಯ ಪರಿಸ್ಥಿತಿಗಳಿಗನುಗುಣವಾಗಿ ಪರಿವರ್ತಿಸಿಕೊಳ್ಳಲಾಗಿದೆ ಸಾಗುವಳಿ ಮತ್ತು ಕೂಲಿಕಾರ ಸಂಘಗಳಲ್ಲಿ ಲಾಭದ ಬಹುಭಾಗವು ಕೂಲಿಕಾರರಿಗೆ ಸಲ್ಲುತ್ತಿದೆ ಆದರೆ ಪತ್ತಿನ ಸಂಘಗಳಲ್ಲಿ ಈ ಪದ್ಧತಿಯು ಕಂಡು ಬರಲಾರದು ಸ್ವಯಂ ಸಂಘಟನೆಯ ತತ್ವವನ್ನು ಭಾರತದಲ್ಲಿ ಸಾಗುವಳಿ, ನೀರಾವರಿ, ಬೆಳೆ ಸಂರಕ್ಷಣೆ, ಭೂ ಸುಧಾರಣೆ ಸಂಘಗಳಿಗೆ ಅನ್ವಯಿಸಲು ಬರುವಂತಿಲ್ಲ. ಸಾರ್ವಜನಿಕ ಹಿತಕ್ಕಾಗಿ ಪ್ರತಿಗಾಮಿ ಶಕ್ತಿಗಳನ್ನು ಕಾರ್ಯಕ್ಷೇತ್ರದಲ್ಲಿ ತರಲು ಒತ್ತಾಯವು ಬೇಕೇಬೇಕಾಗುವದು ಅಲ್ಲದೆ ಒಕ್ಕಲುತನದ ಪತ್ತಿನ ಆಂದೋಲನವು ರೈಫೀಜನ್ ತತ್ವಗಳ ಮೇರೆಗೆ ರಚಿಸಲ್ಪಟ್ಟಿದೆ. ಆ ತತ್ವಗಳೆಂದರೆ –

೧) ಅನಿಯಮಿತ ಹೊಣೆಗಾರಿಕೆ!

೨) ಚಿರಪರಿಚಿತ ಜನರ ಸದಸ್ಯತ್ವ!

೩) ಸಂಘದ ಕಾರ್ಯಕ್ಷೇತ್ರದ ನಿರ್ಬಂಧ

೪) ಸ್ವತಂತ್ರ ರೀತಿಯಲ್ಲಿ ಆಡಳಿತೆಯ ಕಾರ್ಯನಿರ್ವಹಣೆ!

೫) ಸದಸ್ಯರಿಗೇನೇ ಸಾಲಪೂರೈಕೆ!

೬) ಸಣ್ಣ ಸಣ್ಣ ಪ್ರಮಾಣದ ಶೇರುಗಳು!

೭) ಸಂಘದ ಅವಿಭಾಜ್ಯ ಬಂಡವಾಳದೇರ್ಪಾಡು

೮) ಕಾದಿಟ್ಟ ನಿಧಿಗೆ ಎಲ್ಲ ಲಾಭದ ಸೇರ್ಪಡೆ

ಭಾರತದಲ್ಲಿ ಈ ಹಿಂದಿನ ೪೦–೫೦ ವರ್ಷಗಳ ಅನುಭವದ ಮೇರೆಗೆ ೧ ಅನಿಯಮಿತ ಹೊಣೆಗಾರಿಕೆ ೨ ಎಲ್ಲ ಲಾಭವನ್ನು ಕಾಯ್ದಿಟ್ಟ ನಿಧಿಗೆ ಒಯ್ಯುವದು ೩ ಪರಿಮಿತ ಕಾರ್ಯಕ್ಷೇತ್ರ ಈ ತತ್ವಗಳನ್ನು ಸ್ಥಾನಿಕ

ಪರಿಸ್ಥಿತಿಗಳಿಗನುಗುಣವಾಗಿ ಪರಿವರ್ತಿಸಿಕೊಳ್ಳಲಾಗಿದೆ ಶೂಲ್ ಡಿಲಿಝು ಮತ್ತು ಲುಝೇಟಿ ಬ್ಯಾಂಕುಗಳ ಮಾದರಿಯ ಮೇಲೆ ಸ್ಥಾಪಿತವಾದ ನಗರ ಪತ್ತಿನ ಚಳವಳಿಯು ತನ್ನ ಆದರ್ಶತೆಯ ತತ್ವಗಳಲ್ಲಿ ಎದ್ದು ಕಾಣುವಂತಹ ಮಾರ್ಪಾಡನ್ನು ಹೊಂದಿಲ್ಲ

ಇನ್ನುಳಿದ ತತ್ವಗಳ ಬಗ್ಗೆ ಹೇಳುವದಾದರೆ, ಕಮುನಿಸ್ಟ ರಾಷ್ಟ್ರಗಳನ್ನು ಬಿಟ್ಟು ಇನ್ನುಳಿದ ರಾಷ್ಟ್ರಗಳಲ್ಲಿಯಂತೆಯೇ ಭಾರತದಲ್ಲಿಯೂ ಆ ಎಲ್ಲ ತತ್ವಗಳನ್ನು ನಿಜವಾದ ರೀತಿಯಲ್ಲಿ ಆಚರಣೆಯಲ್ಲಿ ತರಲಾಗಿದೆ ಪ್ರತಿ ಒಬ್ಬ ಸದಸ್ಯನಿಗೆ ಒಂದೇ ಮತವಿದೆ, ತೊಡಗಿಸಲಾದ ಹಣಕ್ಕೆ ನಿಯಮಿತ ಬಡ್ಡೀ ಕೊಡಲಾಗುತ್ತದೆ, ಸದಸ್ಯತ್ವದಲ್ಲಿ ಸಮಾನತ ಇದೆ, ಮೇಲಿಂದ ಮೇಲೆ ಸಭೆಗಳಾಗುತ್ತಿದ್ದು ಸದಸ್ಯರು ಅಂತಿಮ ನಿರ್ಣಯಗಳಲ್ಲಿ ಭಾಗವಹಿಸುತ್ತಾರೆ ಆಂತರಿಕ ಸ್ವಾಯತ್ತತೆ ಇದ್ದು ಸಾಮಾನ್ಯ ಸದಸ್ಯರ ಸಭೆಯು ಅಂತಿಮ ಅಧಿಕಾರಿಯಾಗಿದೆ ಕಾಯದೆಗಳಿಗನುಗುಣವಾಗಿ ಸದಸ್ಯರನ್ನು ಮಾಡಿಕೊಳ್ಳುವ, ಶಿಕ್ಷೆಮಾಡುವ, ಹೊರಗೆ ಹಾಕುವ ಅಧಿಕಾರವು ಸಾಮಾನ್ಯ ಸಭೆಗೆ ಇರುತ್ತದೆ ನಿತ್ಯದ ವ್ಯವಹಾರವನ್ನು ಸಾಮಾನ್ಯ ಸಭೆಯಿಂದ ಆರಿಸಲ್ಪಟ್ಟ ಕಾರ್ಯಕಾರಿ ಮಂಡಲವು ಸಾಮಾನ್ಯ ಸಭೆಯ ನಿಯಂತ್ರಣ, ಮೇಲ್ವಿಚಾರಣೆಗೊಳಪಟ್ಟು ನಿರ್ವಹಿಸುತ್ತದೆ ಕಾರ್ಯಕಾರಿ ಮಂಡಲದ ಸದಸ್ಯರು ತಮ್ಮ ಕಾರ್ಯ ಅಥವಾ ಸೇವೆಯನ್ನು ಉಚಿತ ಸಲ್ಲಿಸುವರು

## ಸಹಕಾರದ ಮುಖ್ಯ ವೈಶಿಷ್ಟ್ಯಗಳು.

ಜಾಗತಿಕ ಸಹಕಾರದ ಪ್ರಧಾನ ವೈಶಿಷ್ಟ್ಯಗಳನ್ನು ಇಲ್ಲಿ ನಿರೂಪಿಸುವೆ

(೧) **ಬಂಧುತ್ವ:—** ಸ್ವಯಂ ಪ್ರೇರಿತ ಸಂಸ್ಥೆಗಳಲ್ಲಿ ಶ್ರೇಷ್ಠವಾದ ಮತ್ತು ಬಲಿಷ್ಠವಾದ ಬಂಧನವೆಂದರೆ ಬಾಂಧವ್ಯವು ಅದಿಲ್ಲದ ಸಂಸ್ಥೆಯು ಬಾಳದು

(೨) **ತಾನು ಎಲ್ಲರಿಗಾಗಿ ಎಲ್ಲರೂ ತನಗಾಗಿ** — ಸಹಕಾರಿ ಸಂಘಗಳಲ್ಲಿ ಆರ್ಥಿಕ ಅವಶ್ಯಕತೆಯ ಪೂರೈಕಗಾಗಿ ಒಬ್ಬನು ಎಲ್ಲರಗಾಗಿ ಎಲ್ಲರೂ ಒಬ್ಬನಿಗಾಗಿ ದುಡಿಯಬೇಕಾಗುವದು ಮಧ್ಯಸ್ಥರಿಂದಾಗುವ ಶೋಷಣೆಯನ್ನು, ಬಾಂಡವಳಶಾಹಿಗಳ ಲಾಭ ಬಡಕತನವನ್ನು, ನಾಶಮಾಡಬೇಕೆಂಬುದೇ ಸಹಕಾರದ ಉದ್ದೇಶವಾಗಿದೆ 'ತಾನು ಎಲ್ಲರಿಗಾಗಿ, ಎಲ್ಲರೂ ತನಗಾಗಿ' ಎಂಬ ತತ್ವವನ್ನು ಅನುಸರಿಸುವದರಿಂದ, ಸಮಾಜದಲ್ಲಿ ಶ್ರೀಮಂತರಿಗೆ ಸಿಗುವ ಎಲ್ಲ ಸೌಕರ್ಯ ಮತ್ತು ಸೌಲಭ್ಯಗಳು ಬಡ ಹಾಗು ನಿರ್ಗತಿಕ ಜನರಿಗೆ ದೊರೆಯುತ್ತವೆ ಹೀಗೆ ಸಹಕಾರವು ಬಡ ಜನರ ಸಂರಕ್ಷಣೆ ಮಾಡಿ ಅವರನ್ನು ಸಮಾಜದಲ್ಲಿ ಪ್ರಭಾವಶಾಲಿಗಳನ್ನಾಗಿ ಮಾಡಬಲ್ಲದು

(೩) **ಉಳಿತಾಯಕ್ಕೆ ಪ್ರೋತ್ಸಾಹ:—** ಜನತೆಯಲ್ಲಿ ಉಳಿತಾಯದ ಚಟವನ್ನು ಬೆಳಯಿಸುವದೇ ಸಹಕಾರದ ಗುರಿಯಾಗಿದೆ ಗಳಿಕೆ ಇಲ್ಲದಿದ್ದರೆ ಉಳಿಕೆ ಇಲ್ಲ ಎಂಬುವೇ ಸಹಕಾರದ ಬೀಜ ಮಾತಾಗಿದೆ ಉಳಿತಾಯದಿಂದಲೇ ಬಂಡವಲದ

ಉತ್ಪತ್ತಿ. ಆದುದರಿಂದ ಸಹಕಾರವು ಸದಸ್ಯರನ್ನು ಉಳಿತಾಯದ ಚಟಕ್ಕೆ ಚಾಲನೆಯನ್ನಿತ್ತು ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುತ್ತವೆ

(೪) **ಸ್ವಸಹಾಯ** —ಸ್ವಸಹಾಯವು ಸಹಕಾರದ ತಿರುಳು ಎಂದು ಹೇಳಬಹುದು ಮನುಷ್ಯನು ತನ್ನ ಕಾಲಮೇಲೆ ನಿಲ್ಲಲು ಸಮರ್ಥನಿದ್ದಾಗ ಅವನಿಗೆ ಊರುಗೋಲಿನ ಅವಶ್ಯಕತೆ ಇಲ್ಲ ಪ್ರತಿ ಒಂದು ಕಾರ್ಯಕಲಾಪಗಳಲ್ಲಿ, ಚಟುವಟಿಕಗಳಲ್ಲಿ ತನ್ನ ಭಾಗವು ಮುಖ್ಯವಾಗಿದೆ ಎಂದು ಪ್ರತಿ ಸದಸ್ಯನೂ ಅರಿತುಕೊಳ್ಳಬೇಕು ತನ್ನ ಆರ್ಥಿಕ ಸುಧಾರಣೆಯಾಗಲೀ ವ್ಯಕ್ತಿ ವಿಕಾಸವಾಗಲಿ ಸ್ವಪ್ರಯತ್ನದಿಂದಲೇ ಒಳಿತೇ ಹೊರತು ಹೊರಗಿನ ಸಹಾಯವು ಎಷ್ಟೋ ಸುಲಭಸಾಧ್ಯವಿದ್ದರೂ ಪರಿಣಾಮಕಾರಿಯಾಗಲಾರದು ಅನ್ಯರಿಂದ ಪಡೆದುಕೊಂಡ ಸಹಾಯವು ಸ್ವಂತ ಜವಾಬ್ದಾರಿಯನ್ನು ದುರ್ಬಲಗೊಳಿಸುತ್ತದೆ ಸ್ವಸಾಮರ್ಥ್ಯವನ್ನು ಕಡಿಮೆ ಮಾಡುತ್ತದೆ ಮತ್ತು ಆತ್ಮಪ್ರತಿಷ್ಠೆಗೆ ಕುಂದು ತರುತ್ತದೆ

(೫) **ಪರಸ್ಪರ ಸಹಾಯ** ·— ಸ್ವ ಮತ್ತು ಪರಸ್ಪರ ಸಹಾಯಗಳಿಂದ ನಿರ್ಗತಿಕರ ಆರ್ಥಿಕ ಸುಧಾರಣೆಗೆಂದೇ ಸಹಕಾರಿ ಆಂದೋಲನವನ್ನು ಮಾಡಲು ಪ್ರಾರಂಭಿಸಲಾಯಿತು ಸಮಾಜದಲ್ಲಿ ವ್ಯಕ್ತಿಗೆ ವೈಯಕ್ತಿಕವಾಗಿ ಪ್ರಬಲರ ವಿರೋಧವನ್ನು ಎದುರಿಸುವದಾಗಲೀ ಆರ್ಥಿಕ ಕಾರ್ಯಕ್ರಮಗಳನ್ನು ಕೈಕೊಳ್ಳುವದಾಗಲೀ ಸಾಧ್ಯವಾಗಲಾರದು ಆದರ ಅದೇ ಪರಸ್ಪರ ಸಹಾಯ ಮತ್ತು ಸಹಕಾರದಿಂದ ಅವನ ಪತ್ತು ಬೆಳೆಯುವದಲ್ಲದೇ ಅವನ ಶಕ್ತಿಯು ವೃದ್ಧಿಯಾಗಿ ವೈಯಕ್ತಿಕವಾಗಿ ಮಾಡಲು ದುಸ್ಸಾಧ್ಯವಾದ ಎಲ್ಲ ಕಾರ್ಯಗಳನ್ನೂ ಅವನು ಮಾಡಲು ಸಮರ್ಥನಾಗುತ್ತಾನೆ

(೬) **ವಿತರಣ ನ್ಯಾಯ**' — ಬಾಂಡವಳ ಶಾಹಿ ಪದ್ಧತಿಯಲ್ಲಿ ಲಾಭದ ಬಹುಭಾಗವು ಸಾಹುಕಾರನಿಗೆ ಸಲ್ಲಿ ಅತ್ಯಲ್ಪ ಭಾಗವು ಕೂಲಿಕಾರನ ಪಾಲಿಗೆ ಬರುತ್ತದೆ ಉತ್ಪಾದನೆಯಲ್ಲಿ ಕೂಲಿಕಾರನು ಸಾಹುಕಾರನಷ್ಟೇ ಮುಖ್ಯನಾಗಿದ್ದರೂ ಶೋಷಣೆ ಮಾತ್ರ ತಪ್ಪಿಲ್ಲ ಆದರೆ ಸಮಾಜವಾದದಲ್ಲಿ ಕೂಲಿಕಾರನಿಗೆ ಪ್ರಮುಖತೆ ಕೊಡಲಾಗಿದೆ ಆದರೂ ಸಹಕಾರೀ ಸಂಘಟನೆಯಲ್ಲಿ ಲಾಭವನ್ನು ಸಾಹು-ಕಾರ ಮತ್ತು ಕೂಲಿಕಾರರೀರ್ವರೂ ಹಂಚಿಕೊಳ್ಳುವರು ಸಹಕಾರ ಆಂದೋಲನವು ಸಮಾಜವಾದ ಮತ್ತು ಬಾಂಡವಳವಾದಗಳ ಉತ್ತಮವಾದ ಮಧ್ಯ ಮಾರ್ಗವೆಂದು ಪರಿಗಣಿಸಲಾಗಿದೆ. ಕೂಲಿಕಾರರು ಮತ್ತು ಸಾಹುಕಾರರು ಬಂದ ಲಾಭವಲ್ಲಿ ಸರಿಯಾಗಿ ಹಂಚಿಕೊಳ್ಳುವರೇ ಹೊರತು ಲಾಭದ ಬಹುಭಾಗವನ್ನು ಯಾರಾದರೂ ಒಬ್ಬರೇ ನುಂಗುವದಿಲ್ಲ ಉತ್ಪಾದನೆಯು ಕೂಲಿ ಮತ್ತು ಭಂಡವಲಗಳ ಸಂಘಟನೆಯ ಫಲವೆಂದೇ ಅದು ಗಣಿಸುತ್ತದೆ ಉತ್ಪಾದನೆಯ ಬೆಲೆಯು ಅಂಗವೆಂದರೆ ಬರಿ ಭಂಡವಲ ಒಂದೇ ಅಲ್ಲ, ಬರಿ ಕೂಲಿಯೂ ಅಲ್ಲ ಎಂದು ಸಹಕಾರವ ಮತ ಸಹಕಾರದಲ್ಲಿ ಇವೆರಡಕ್ಕೂ ಸಮಾನ ಮಹತ್ವವಿದೆ ಸ್ಪರ್ಧೆಯ ಸ್ಥಳವಲ್ಲಿ ಸಹಕಾರವು ಒಂದು ಉತ್ತಮ ಸಾಧನೆ ಸಹಕಾರವು ಲಾಭಬಡಕತನವನ್ನೂ

ಶ್ರೀಮಂತರಿಂದಾಗುವ ಬಡವರ ಶೋಷಣೆಯನ್ನೂ ದೂರಮಾಡುತ್ತದೆ ಅದ ರಿಂದಾಗಿ ಎಲ್ಲರೂ ಎಲ್ಲ ಆರ್ಥಿಕ ಚಟುವಟಿಕೆಗಳಲ್ಲಿ ಸಮಾನಸ್ಕಂಧರಂತೆ ಕಾರ್ಯ ಮಾಡಬಲ್ಲರು ಸಂಪತ್ತನ್ನು ಕೂಲಿಕಾರ ಮತ್ತು ಸಾಹುಕಾರರಲ್ಲಿ ಸರಿಯಾಗಿ ಹಂಚಬೇಕು ಎಂದು ಸಹಕಾರವು ಒತ್ತಿ ಹೇಳುತ್ತದೆ ಉತ್ಪಾದನೆಯಲ್ಲಿ ಸಹ ಭಾಗಿಗಳಾದವರೆಲ್ಲರಿಗೂ ಸಹಕಾರವು ನ್ಯಾಯದ ಭರವಸೆಯಾಗಿದೆ

(೭) **ಪ್ರಜಾಪ್ರಭುತ್ವ ಒಡೆತನ** —ಪ್ರಜಾಪ್ರಭುತ್ವದ ಒಡೆತನ ಮತ್ತು ನಿಯಂತ್ರಣದ ತತ್ವಗಳಮೇಲೆ ಸಹಕಾರಿ ಸಂಸ್ಥೆಗಳು ತಮ್ಮ ಆಡಳಿತೆಯನ್ನು ನಡೆಸುತ್ತವೆ ಸಮಾನತೆಯೇ ಸಹಕಾರಿ ಸಂಘಗಳ ಸದಸ್ಯರಲ್ಲಿರುವ ಸಂಬಂಧ ವಾಗಿದೆ

(೮) **ಶಿಕ್ಷಣ** —ಸಹಕಾರಿ ಸಂಘಗಳು ಯಶಸ್ವಿಯಾಗಬೇಕಾದರೆ ಸದಸ್ಯ ರೆಲ್ಲರೂ ಸಹಕಾರಿ ತತ್ವಗಳನ್ನು, ಸಂಘ ಚಾಲನೆಯನ್ನೂ ಅರಿತವರಾಗಿರಬೇಕು

(೯) **ರಾಜಕೀಯ ತಾಟಸ್ಥ್ಯ** — ಇಂಗ್ಲಡಿನಲ್ಲಿಯ ಔದ್ಯೋಗಿಕ ಸಹಕಾರಿ ಸಂಘಗಳನ್ನು ಬಿಟ್ಟು ಸಾಮಾನ್ಯವಾಗಿ ಇನ್ನುಳಿದ ಸಹಕಾರಿ ಸಂಘಗಳು ರಾಜಕೀಯ ದೃಷ್ಟಿಯಿಂದ ತಟಸ್ಥಧೋರಣೆಯನ್ನು ಅನುಸರಿಸುತ್ತವೆ.

(೧೦) **ಸಭಾಸದರರೊಡನೆ ವ್ಯವಹಾರ.**—ಸಹಕಾರಿ ಸಂಘಗಳೆಲ್ಲವೂ ಸಾಮಾನ್ಯವಾಗಿ ತಮ್ಮ ತಮ್ಮ ಸದಸ್ಯರೊಡನೆಯೇ ವ್ಯವಹರಿಸುತ್ತವೆ ಸಂಘಗಳ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸಬೇಕೆಂಬ ಉದ್ದೇಶದಿಂದ ಮತ್ತು ಸದಸ್ಯರಲ್ಲ ದವರಿಗೂ ಹಿತವನ್ನುಂಟು ಮಾಡುವ ಉದ್ದೇಶದಿಂದ ಕೆಲವು ಸಂಘಗಳು ವಿಶೇಷ ವಾಗಿ ಗ್ರಾಹಕರ ಸಂಘಗಳು, ಮಾರಾಟ ಸಂಘಗಳು ಮತ್ತು ಆರೋಗ್ಯ ಸಂಸ್ಥೆಗಳು ಸದಸ್ಯೇತರರೊಡನೆಯೂ ವ್ಯವಹರಿಸುತ್ತವೆ

(೧೧) ಸಹಕಾರಿ ಸಂಘಗಳೆಲ್ಲವು ಸಂಪೂರ್ಣವಾಗಿ ವ್ಯವಹಾರಿಕ ಸಂಸ್ಥೆ ಗಳು ಆದುದರಿಂದ ಅವು ವ್ಯವಹಾರಿಕ ತತ್ವಗಳ ಮೇಲೆಯೇ ಸಾಗುತ್ತವೆ ಆದರೆ ಧರ್ಮಾರ್ಥ ಸಂಸ್ಥೆಗಳಲ್ಲ

(೧೨) ಪ್ರಾಮಾಣಿಕತೆ, ಮಿತವ್ಯಯ ಮತ್ತು ಕಾರ್ಯಕ್ಷಮತೆ ಇವುಗಳು ಸಹಕಾರಿ ಸಂಸ್ಥೆಗಳ ಮಾರ್ಗದರ್ಶಕ ತತ್ವಗಳಾಗಿವೆ. ಯೋಗ್ಯರೀತಿಯಲ್ಲಿ ಮತ್ತು ಮಿತವ್ಯಯ ದೃಷ್ಟಿಯಿಂದ ಸಹಕಾರಿ ಸಂಘಗಳನ್ನು ಸಾಗಿಸಿಕೊಂಡು ಹೋಗ ದಿದ್ದರೆ ಕೇವಲ ತತ್ವಕ್ಕಾಗಿ ಸಭಾಸದರಾಗುವವರು ಅತಿ ವಿರಳ ಸಹಕಾರಿ ಸಂಘಗಳ ಅಸ್ತಿತ್ವದಿಂದ ತಮಗೆ ಲಾಭವದೆ ಎಂದು ಮನವರಿಕೆಯಾದಾಗ ಮಾತ್ರ ಜನ ಸಾಮಾನ್ಯರು ಸಹಕಾರಿ ಸಂಘಗಳತ್ತ ಆಕರ್ಷಿತರಾಗುತ್ತಾರೆ

(೧೩) ಸಹಕಾರಿ ಸಂಘಗಳ ಕಾರ್ಯರೂಪಗಳನ್ನು ಸಾಮಾನ್ಯವಾಗಿ ಕಾರ್ಯಕಾರಿಮಂಡಲವು ಸಾಗಿಸಿಕೊಂಡು ಹೋಗುತ್ತದೆ ಆದರೆ ಇದರ ಸದಸ್ಯರು ಯಾವುದೇ ವೇತನವನ್ನು ಸ್ವೀಕರಿಸುವದಿಲ್ಲ.

(೧೪) ಪ್ರತಿ ಒಬ್ಬ ಸಭಾಸದನ ವ್ಯವಹಾರದ ಪ್ರಮಾಣದಲ್ಲಿ ಅವನಿಗೆ ಲಾಭವು ದೊರೆಯುವದು

(೧೫) ಸಹಕಾರಿ ಸಂಘಗಳಲ್ಲಿ ಲಾಭದ ಕೆಲವು ಭಾಗವನ್ನು ಕಾದಿಟ್ಟ ನಿಧಿಗೆ ಸೇರಿಸಲಾಗುವದು ಕಾದಿಟ್ಟ ನಿಧಿಯು 'ಎಲ್ಲರೂ ತನಗಾಗಿ', ಹೀಗಲ್ಲದೆ ಬಂಡವಲು 'ತಾನು ಎಲ್ಲರಿಗಾಗಿ' ಎಂಬ ತತ್ವದ ದ್ಯೋತಕಗಳಾಗಿವೆ

## ಸಹಕಾರಕ್ಕೆ ಅವಕಾಶ.

ತಾತ್ವಿಕವಾಗಿ, ಸಹಕಾರಿ ಆಂದೋಲನದ ಕಾರ್ಯಕ್ಷೇತ್ರವು ಆರ್ಥಿಕ ಜೀವನದಷ್ಟೇ ವಿಶಾಲವಾಗಿದೆ ಮಾನವನ ಎಲ್ಲ ಆರ್ಥಿಕ ಚಟುವಟಿಕೆಗಳಲ್ಲಿ ಸಹಕಾರವು ಸಾಧ್ಯವದೆ ಅಂದರೆ ಸಹಕಾರಿ ಆಂದೋಲನದ ಕಾರ್ಯಕ್ಷೇತ್ರವು ವಿಶಾಲವಾಗಿದ್ದು ವೈವಿಧ್ಯ ಪೂರ್ಣವಾಗಿದೆ ಮಾನವ ಜೀವನದ ಕೆಲವೇ ಕಡೆ-ಗಳಲ್ಲಿ ಮಾತ್ರ ಸಹಕಾರ ಆಂದೋಲನವು ಉಪಯೋಗ ಬೀಳಲಾರದು ಪ್ರಪಂಚದ ಎಷ್ಟೋ ಕಡೆಗಳಲ್ಲಿ ಸಹಕಾರ ಆಂದೋಲನವು ಪಸರಿಸಿರುವದೇ ಅದರ ವಿಶಾಲ ಕಾರ್ಯಕ್ಷೇತ್ರಕ್ಕೆ ನಿದರ್ಶನವಾಗಿದೆ ಎಂದು ಹೇಳಬಹುದು ಉದಾಹರಣಾರ್ಥವಾಗಿ — ಪತ್ತು, ಮನೆತನ ಮತ್ತು ಒಕ್ಕಲುತನದ ಸಾಮಾನುಗಳ ಅವಶ್ಯಕತೆ, ಒಕ್ಕಲುತನದ ಮತ್ತು ಔದ್ಯೋಗಿಕ ವಸ್ತುಗಳ ಮಾರಾಟ, ಕಚ್ಚಾ ಸರಕುಗಳನ್ನು ರೂಪಾಂತರಿಸುವ ವಿಧಾನ, ವಸ್ತುಗಳ ಉತ್ಪಾದನೆ, ಸಾಗುವಳಿ, ಭೂಸುಧಾರಣೆ, ಗೃಹೋದ್ಯೋಗ ಉಪೋದ್ಯೋಗಗಳ ಬೆಳವಣಿಗೆ, ವಿಮಾ, ವೈದ್ಯಕೀಯ ಸಹಾಯ ಮತ್ತು ಪರಿಹಾರ, ಶಿಕ್ಷಣದ ಸೌಕರ್ಯ, ವಸತಿ ಸೌಕರ್ಯ, ಗುತ್ತಿಗೆಯ ವ್ಯವಹಾರ ಮತ್ತಿತರ ಎಷ್ಟೋ ಸಾಮಾಜಿಕ ಉಪಯುಕ್ತತೆಯ ಕಾರ್ಯಗಳು ಸಹಕಾರ ಅಂದೋಲನದ ಕ್ಷೇತ್ರದಲ್ಲಿ ಬರುತ್ತವೆ ಆದರೆ ಆಚರಣೆಯಲ್ಲಿ ಈ ಕ್ಷೇತ್ರಕ್ಕೆ ಪರಿಮಿತಿಗಳಿವೆ "ಸಹಕಾರ ಚಳವಳಿಯ ಬೆಳವಣಿಗೆಯ ಸಾಧ್ಯತೆಗಳೇನೇ ಇರಬಹುದು ವಾಸ್ತವ ದೃಷ್ಟಿಯಿಂದ ನೋಡಿದರೆ ಸಹಕಾರ ಸಂಸ್ಥೆಗಳು ಇಡೀ ಅರ್ಥ ಪ್ರಪಂಚವನ್ನೆಲ್ಲ ವ್ಯಾಪಿಸಲಾರವು ಏಕೆಂದರೆ ಸರ್ವ ಆರ್ಥಿಕ ಸ್ಥಿತಿಗತಿಗಳಲ್ಲೆಲ್ಲ ಇವು ಎಲ್ಲರೀತಿಯಿಂದಲೂ ಹಾಸುಹೊಕ್ಕಾಗಿ ಪವಣಿಸಲಾರವೆಂದು ನಮ್ಮ ಅಭಿಪ್ರಾಯ ಪ್ರತಿಯೊಂದು ಆರ್ಥಿಕ ವ್ಯವಹಾರವು ಯಾವಾಗಲೂ ನಾವು ತಿಳಿದುಕೊಂಡಷ್ಟು ಸರಳವೂ, ಸ್ವತಂತ್ರವೂ ಮತ್ತು ಪ್ರತ್ಯೇಕವೂ ಆಗಿಲ್ಲ ಎಷ್ಟೋ ವ್ಯವಹಾರಗಳು ಒಂದರೊಡನೆ ಒಂದು ಹೆಣೆದುಕೊಂಡು ಅಥವಾ ಕೂಡಿಕೊಂಡು ಒಮ್ಮೊಮ್ಮೆ ತೊಡಕಿನ ಸಮಸ್ಯೆಯಂತೆ ಕಾಣುತ್ತವೆ ಸಹಕಾರೀ ಸಂಸ್ಥೆಗಳು ಕೆಲವೊಂದು ಅವಸ್ಥೆಗಳಲ್ಲಿ ಅಥವಾ ಕೆಲವೊಂದು ವ್ಯವಹಾರದ ಕ್ರಮಗಳಲ್ಲಿ ಒಂದು ಅನುಕೂಲ ಸ್ಥಳವನ್ನು ಆಕ್ರಮಿಸಬಹುದು ಸಂಘಟನೆಯ ಒಂದೇ ಒಂದು ರೀತಿಗೆ ಅಥವಾ ಪ್ರಕಾರಕ್ಕೆ ಹೊಂದಿಕೊಳ್ಳಲಾರದಷ್ಟು ಅಧುನಿಕ ಆರ್ಥಿಕ ಜೀವನವು ಒಡೆಯಲಾರದ ಒಗಟಿನಂತೆ ತೀರ ತೊಡಕಿನದಾಗಿದೆ" ಎಂದು ಡಾ ಜಿ ಫಕೆಟರವರ ಮತ ಸರಯ್ಯಾ ಸಮಿತಿಯು ಕೆಳಗಿನಂತೆ ಅಭಿಪ್ರಾಯ ಪಡುತ್ತದೆ

" ಸಹಕಾರ ಆಂದೋಲನದ ಪರಿಮಿತಿಗಳನ್ನು ಈಗ ವಿವೇಚಿಸಬಹುದು ವೈಯಕ್ತಿಕ ಕಾರ್ಯಕ್ಕಿಂತ ಎಲ್ಲಿ ಸಾಮೂಹಿಕ ಕಾರ್ಯವು ಹೆಚ್ಚು ಲಾಭ ದಾಯಕವಾಗಬಲ್ಲದೋ ಅಲ್ಲಿ ಮಾತ್ರ ಸಹಕಾರ ಆಂದೋಲನವು ಯಶಸ್ವಿಯಾಗ ಬಲ್ಲದು ಆರೋಗ್ಯ, ಶಿಕ್ಷಣ ಮೊದಲಾದ ಕಾರ್ಯಗಳಲ್ಲಿ ಸಹಕಾರವು ಉತ್ತಮ ಸಾಧನವಾಗಲಾರದು ಅಂದರೆ ಸಹಕಾರವು ಕೇವಲ ಒಂದು ಕ್ರಮ ಸಹಕಾರ ವನ್ನು ಉಪಯೋಗಿಸಲಾಗುವ ಯೋಜನೆಯು ಉತ್ತಮವಾಗಿರದಿದ್ದರೆ, ಅಥವಾ ಅದು ತನ್ನಲ್ಲಿರುವ ದೋಷಗಳಿಂದಲೇ ಅಯಶಸ್ವಿಯಾದರೆ ಅದನ್ನು ಕಾರ್ಯಗತ ಗೊಳಿಸಲು ಉಪಯೋಗಿಸಲಾದ ಸಹಕಾರದ ತಪ್ಪಲ್ಲ "

ಪ್ರಪಂಚದಲ್ಲಿಯ ಸಹಕಾರ ಆಂದೋಲನದ ಕಾರ್ಯಾಚರಣೆಯ ಅನು ಭವದ ಮೇರೆಗೆ ಹೇಳುವದಾದರೆ, ಸಮಾಜದ ಹಿತದೃಷ್ಟಿಯಿಂದ ಕೆಲವೊಂದು ಆರ್ಥಿಕ ಕ್ರಮಗಳನ್ನು ರಾಷ್ಟ್ರೀಕರಿಸುವದು ವಿಹಿತವಾಗಬಹುದು ಮತ್ತೆ ಕೆಲವು ಕ್ರಮಗಳನ್ನು, ಹೆಚ್ಚು ಭಾಂಡವಲು ಬೇಕಾಗುವದೆಂದಾಗಲೀ, ಹೆಚ್ಚು ಜನ ಸಮೂ ದಾಯ ಅವಶ್ಯವೆಂದಾಗಲೀ, ತಜ್ಞ ಸಲಹೆ ಅನಿವಾರ್ಯವೆಂದಾಗಲೀ ಸಹಕಾರಿ ತತ್ವಗಳನ್ವಯ ಕೈಕೊಳ್ಳಲು ಬರುವಂತಿಲ್ಲ ಇಂಗ್ಲಂಡ, ಹಾಲಂಡ, ಡೆನ್ಮಾರ್ಕ ಗಳಲ್ಲಿ ಎಷ್ಟೋ ದೊಡ್ಡ ದೊಡ್ಡ ಉದ್ದಿಮೆಗಳನ್ನು ಸಹಕಾರಿ ತತ್ವಗಳ ನ್ವಯ ಕೈಕೊಳ್ಳಲಾಗುತ್ತದೆ ಇತ್ತಿತ್ತಲಾಗಿ ಮುಂಬಯಿ ರಾಜ್ಯದ ನಗರ ಜಿಲ್ಹೆ ಯಲ್ಲಿ ಸಕ್ಕರೆ ಕಾರಖಾನೆಯನ್ನು, ಮದ್ರಾಸ ರಾಜ್ಯದಲ್ಲಿ ಜವಳಿ ಕಾರಖಾನೆಯನ್ನು ಸಹಕಾರಿ ತತ್ವದ ಮೇಲೆ ಪ್ರಾರಂಭಿಸಲಾಗಿದೆ ಆದಾಗ್ಯೂ ಇವುಗಳ ಯಶಸ್ಸಿನ ಬಗ್ಗೆ ಈಗಲೇ ಹೇಳಲು ಬರುವಂತಿಲ್ಲ ಇಂಥ ದೊಡ್ಡ ಉದ್ದಿಮೆಗಳನ್ನು ಸಹಕಾರಿ ತತ್ವದ ಮೇಲೆಯೇ ಮಾಡುವದು ಕಷ್ಟಕರ ಮತ್ತು ಅನಿಶ್ಚಿತವಾದುದೆಂದು ವೈಯಕ್ತಿಕ ವಾಗಿ ಹೇಳಬಹುದು ಕೆಲವೊಂದು ಕ್ರಮಗಳು ಯಶಸ್ವಿಯಾಗಬೇಕಾದರೆ ಸ್ವಹಿತ ಮತ್ತು ಪರಸ್ಪರ ಪರಿಚಯಗಳು ಅತ್ಯವಶ್ಯವಾಗುವವು ವೈಯಕ್ತಿಕ ಜನರೇ ಇಂಥ ಉದ್ದಿಮೆಗಳ ಒಡೆಯರಾಗಬೇಕಾಗುವದು ಈ ಅಂಶಗಳು ಕಂಡು ಬಾರದಿದ್ದರೆ ಸಹಕಾರವು ಅಯಶಸ್ವಿಯಾಗುವದೆಂದು ಹೇಳಬಹುದು ಸಹಕಾರ ದಲ್ಲಿ ಸ್ವಾರ್ಥಕ್ಕೆ ಎಡೆ ಇಲ್ಲದಿರುವದರಿಂದ, ಸದಸ್ಯನು ಸಾಮಾಜಿಕ ಹಿತಕ್ಕಾಗಿ ಸ್ವಹಿತವನ್ನು ತ್ಯಾಗಮಾಡಬೇಕಾಗುವದರಿಂದ, ಸಹಕಾರಿ ಸಂಘಗಳಲ್ಲಿ ಸದಸ್ಯರು ಇತರರ ಹಿತವನ್ನು ಬದಿಗೊತ್ತಿ ತಮ್ಮ ಹಿತವನ್ನೇ ನೋಡತೊಡಗಿದರೆ ಅದು ಯಶಸ್ವಿಯಾಗಲಾರದು ಹೀಗಾಗಿ ಸಹಕಾರಿ ಸಂಘದ ಯಶಸ್ಸು ಸದಸ್ಯರ ವರ್ತನೆಯ ಮೇಲೆ ಅವಲಂಬಿಸಿದೆ. ಸಹಕಾರಿ ಸಂಘವು ಜನತೆಯು ಕಟ್ಟಿಕೊಂಡ ಸಾಮೂಹಿಕ ಸಂಸ್ಥೆಯಾಗಿದೆ. ಆದರೆ ಸದಸ್ಯರು ಸಹಕಾರಿ ತತ್ವವನ್ನು ಅರಿಯ ದವರಾಗಿದ್ದರೆ, ಅಯೋಗ್ಯರಾಗಿದ್ದರೆ, ಸಂಸ್ಥೆಯು ಬಾಳಲಾರದು ವಿಶೇಷವಾಗಿ ಸ ಕಾರಕ್ಕೆ ಎರಡು ಮುಖಗಳಿವೆ ಒಂದು ವ್ಯವಹಾರಿಕ ಆಡಳಿತೆಯ ಮುಖ, ಇನ್ನೊಂದು ಜನತೆಯ ಆದರ್ಶ ಪುನರ್ಘಟನೆಯ ಮುಖ ಆದುದರಿಂದ, ವ್ಯವಹಾರವು ಯಶಸ್ವಿ ಯಾಗುವಂತೆ ಮಾಡಬಲ್ಲ ಮತ್ತು ಸಹಕಾರಿ ಆದರ್ಶಗಳಿಂದ ಚೇತನಗೊಂಡ ಸದಸ್ಯರು ಇರದೇ ಹೋದರೆ ಸಹಕಾರಿ ಸಂಘಗಳು ಬಾಳಿ ಬದುಕಲಾರವು.

ಸಹಕಾರವು ಎಷ್ಟೋ ಸಮಸ್ಯೆಗಳನ್ನು ದೂರಮಾಡಬಹುದಾದರೂ ಎಲ್ಲ ಆರ್ಥಿಕ ಸಮಸ್ಯೆಗಳಿಗೆ ರಾಮಬಾಣವಾಗಲಾರದು ಅದಕ್ಕೆ ಕೆಳಗಿನ ಕಾರಣಗಳನ್ನು ಎತ್ತಿ ತೋರಿಸಬಹುದು

ಮೊದಲನೆಯದಾಗಿ, ಸಹಕಾರವು ಆಯಾ ಕಾಲ ಮತ್ತು ಸ್ಥಾನಗಳಿಗೆ ಹೊಂದಿಕೊಂಡಿರತ್ತದೆ ಒಂದು ಬೆಳೆಗೆ ಅನುಕೂಲವಾದ ಭೂಮಿ ಎಲ್ಲ ಬೆಳೆಗಳಿಗೂ ಅನುಕೂಲವಾಗಲಾರದು ಅದೇ ಮೇರೆಗೆ ಒಂದೇ ದೇಶದಲ್ಲಿ ಸಹಕಾರದ ವಿವಿಧ ಅಂಗಗಳು ಬೆಳೆಯಲಾರವು. ಉದಾಹರಣಾರ್ಥವಾಗಿ, ಇಂಗ್ಲಂಡಿನಲ್ಲಿ ಗ್ರಾಹಕರ ಆಂದೋಲನವು ಅಭೂತಪೂರ್ವ ಯಶಸ್ಸು ಪಡೆದಿದೆ ಆದರೆ ಅದೇ ದೇಶದಲ್ಲಿ ಸಹಕಾರಿ ಮಾರಾಟ ಸಂಘಗಳು ಅಯಶಸ್ವಿಯಾಗಿ, ಒಕ್ಕಲುತನದ ಸರಕುಗಳ ಮಾರಾಟಕ್ಕಾಗಿ ಸರಕಾರವು ಮಾರ್ಕೆಟ್ ಬೋರ್ಡುಗಳನ್ನು ಸ್ಥಾಪಿಸಬೇಕಾಯಿತು. ಹಾಲಂಡ, ಡೆನ್ಮಾರ್ಕಗಳಲ್ಲಿ ಹೈನದ ಮತ್ತು ಮಾರಾಟದ, ವಸ್ತು ರೂಪಾಂತರಿಸುವ ಸಂಘಗಳು ಬೆಳೆದವು ಆದರೆ ಸಮೀಪದ ಜರ್ಮನಿಯಲ್ಲಿ ಒಕ್ಕಲುತನದ ಪತ್ತಿನ ಆಂದೋಲನವು ಪ್ರಗತಿಹೊಂದಿತು ಆಯರ್ಲಂಡದಲ್ಲಿ ಸರ್ ಹೊರೇಸ್ ಪ್ಲಂಕಟ್ ಅವರು ಪತ್ತಿನ ಸಂಘಗಳನ್ನು ಪ್ರಾರಂಭಿಸಿದರು ಆದರೆ ಅವುಗಳೆಲ್ಲವೂ ಈಗ ನಾಶವಾಗಿ ಹೋಗಿವೆ ಅಲ್ಲದೆ ಅದೇ ದೇಶದಲ್ಲಿ ಸಹಕಾರಿ ಆಂದೋಲನದ ಬೆಳವಣಿಗೆಯು ಏಕರೂಪವಾಗಿಲ್ಲ ಭಾರತದಲ್ಲಿಯ ಮದ್ರಾಸ ರಾಜ್ಯದಲ್ಲಿ ಗ್ರಾಹಕರ ಆಂದೋಲನವು ಯಶಸ್ವಿಯಾಗಿದೆ ಆದರೆ ಇತರ ಭಾಗಗಳಲ್ಲಿ ಅದರ ಹೆಸರು ಕೇಳಬರುವಂತಿಲ್ಲ ಅಲ್ಲದೇ ಒಂದೇ ರಾಜ್ಯದಲ್ಲಿಯಾಗಲಿ, ಭಾಗದಲ್ಲಿಯಾಗಲೀ, ಜಿಲ್ಲೆಯಲ್ಲಾಗಲೀ ಆಂದೋಲನವು ಏಕರೂಪವಾಗಿ ಬೆಳೆದುಕೊಂಡಿಲ್ಲ ಸಹಕಾರಿ ಚಳವಳಿಯು ಸಾಕಷ್ಟು ಪ್ರಗತಿ ಹೊಂದಿದೆಯೆಂದು ಭಾವಿಸಲ್ಪಟ್ಟ ಈ ಮುಂಬಯಿ ರಾಜ್ಯದಲ್ಲಿಯೂ ಕೂಡ ಹಿಂದುಳಿದ ಮತ್ತು ಬರಗಾಲ ಪ್ರದೇಶಗಳಲ್ಲಿ ಎಷ್ಟೋ ಸಹಕಾರಿ ಮರುಭೂಮಿಗಳಿವೆ ಆದುದರಿಂದ, ಸಿ ಆರ್ ಫೇ ಅವರು ಹೇಳಿರುವದೇನಂದರೆ, “ಇಂಗ್ಲಂಡಿನ ಒಕ್ಕಲುತನವನ್ನು ರಸಿಯದ ಮಾದರಿಯಂತೆ ಮಾಡುವದು ಎಷ್ಟು ಕಷ್ಟ ಸಾಧ್ಯವೋ, ಅದನ್ನು ಸ್ಕ್ಯಾಂಡಿನೇವ್ಹಿಯನ್ ಮಾದರಿಯಂತೆ ಮಾರ್ಪಡಿಸುವದು ಅಷ್ಟೇ ಕಷ್ಟಕರವಾಗಿದೆ ಎರಡರಲ್ಲಿ ಯಾವ ಕ್ರಮವನ್ನು ಅನುಸರಿಸಿದರೂ ಕ್ರಾಂತಿಯು ಅನಿವಾರ್ಯವಾಗುವದು ”ಸಹಕಾರೀ ಚಳವಳಿಯು ಆಂತರಿಕ ಪ್ರೇರಣೆಯಿಂದ ಹೊರಹೊಮ್ಮುವ ಚಳವಳಿಯು ಅಂದರೇನೇ ಮಾತ್ರ ಅದರ ಹಿತಗಳು ಶಾಶ್ವತವಾಗಿ ಉಳಿಯಬಲ್ಲವು ಸಹಕಾರಿ ಆಂದೋಲನವು ಬೆಳವಣಿಗೆ ಹೊಂದಿ ಯಶಸ್ವಿಯಾಗಬೇಕಾದರೆ ನಾವು ಹಲವಾರು ಸಂಗತಿಗಳನ್ನು ಗಮನಿಸಬೇಕಾಗುವದು ಶಿಕ್ಷಣ ಪ್ರಸಾರ, ವ್ಯವಹಾರ ಮಾಡುವ ಸಾಮರ್ಥ್ಯ, ಆರ್ಥಿಕ ಪರಿಸ್ಥಿತಿ, ಸ್ಥಾನಿಕ ಬೇಡಿಕೆಗಳು ಅವುಗಳಲ್ಲಿ ಮುಖ್ಯವಾದವುಗಳು

ಇನ್ನು ಎರಡನೆಯದಾಗಿ, ಇಂಗ್ಲಂಡಿನಲ್ಲಿ ಗ್ರಾಹಕರ ಆಂದೋಲನವು ಅತ್ಯಂತ ಯಶಸ್ವಿಯಾಗಿದೆ ಎಂದು ಹೇಳಬಹುದಾದರೂ, ಅದು ಅದರ ಎಲ್ಲ ರಂಗಗಳಲ್ಲಿ ಒಂದೇ ಮಟ್ಟಕ್ಕೆ ಮುಟ್ಟಿಲ್ಲ ಎಂದು ಅನುಭವದಿಂದ ಕಂಡುಬಂದ ಮಾತಾ

ಗಿದೆ. ಅದು ಹಾಲು, ಬೆಣ್ಣೆ, ಗಿಣ್ಣ ಮತ್ತು ಸಕ್ಕರೆ ಈ ವ್ಯವಹಾರಗಳಲ್ಲಿ ಮಾತ್ರ ಯಶಸ್ವಿಯಾಗಿದೆ ಆದರೂ ಯಶಸ್ಸು ಪೂರ್ತಿಯಾಗಿಲ್ಲ ಎಲ್ಲ ಸಹಕಾರಿ ಸಂಘಗಳು ಒಟ್ಟು ಕಿರಕುಳ ವ್ಯವಹಾರದಲ್ಲಿ ನೂರಕ್ಕೆ ೨೫ ರಿಂದ ೩೦ ರಷ್ಟು ವ್ಯವಹಾರವನ್ನು ಮಾಡುತ್ತವೆ. ಸ್ವೀಡನ್‌ದಲ್ಲಿ ಸಹ ಸಹಕಾರಿ ಸಂಘಗಳು ವಸ್ತುಗಳ ಬೆಲೆಗಳನ್ನು ನಿಯಂತ್ರಿಸುವವಾದರೂ ಅವುಗಳ ಒಟ್ಟು ವ್ಯವಹಾರವು ನೂರಕ್ಕೆ ೧೫ ಕ್ಕಿಂತ ಹೆಚ್ಚಿಗೆ ಇಲ್ಲ! ಡೆನ್ಮಾರ್ಕ, ಹಾಲಂಡುಗಳಲ್ಲಿಯೂ ಕೂಡ ಹೈನ, ಹಣ್ಣು ಹಂಪಲ, ಕಾಯಿಪಲ್ಲೆಗಳನ್ನು ಮಾರುವ ಉದ್ದೇಶದಿಂದ ಖಾಸಗಿ ಸಂಸ್ಥೆಗಳು ಸ್ಥಾಪಿಸಲ್ಪಟ್ಟಿವೆ ಹೀಗಾಗಿ ಪರಿಮಿತ ಕ್ಷೇತ್ರದಲ್ಲಿಯೂ ಸಹಕಾರಿ ಅಂದೋಲನವು ಎಲ್ಲ ಆರ್ಥಿಕ ಚಟುವಟಿಕೆಗಳನ್ನು ಕೈಕೊಳ್ಳಲು ಸಮರ್ಥವಾಗಿಲ್ಲ.

ಮೂರನೆಯದಾಗಿ, ವೈಯಕ್ತಿಕ ಪದ್ಧತಿಯನ್ನು ಸಂಪೂರ್ಣವಾಗಿ ನಾಶ ಮಾಡುವದು ಹಿತಕಾರಿಯಾಗಲಾರದು ವಿಶೇಷತಃ ಒಕ್ಕಲುತನದ ಸರಕುಗಳ ಕಿರಕುಳ ಮತ್ತು ಠೋಕ ವ್ಯವಹಾರವನ್ನೆಲ್ಲ ಸಹಕಾರಿ ಸಂಘಗಳೇ ಕೈಕೊಂಡರೆ ಆ ಕ್ರಮವು ಸಾಂಘಿಕವಾಗಬಹುದು. ಕೆಲವೊಂದು ಆರ್ಥಿಕ ಚಟುವಟಿಕೆಗಳಲ್ಲಿ ಕೆಲಮಟ್ಟಿಗೆ ಸ್ಪರ್ಧೆಯ ಅವಶ್ಯಕತೆ ಅದೆ ನಾನು ಉಚ್ಚ ಶಿಕ್ಷಣಕ್ಕೆಂದು ಹೋದಾಗ ಇಂಗ್ಲಂಡ ಮತ್ತು ಹಾಲಂಡುಗಳಲ್ಲಿಯ ಸಹಕಾರಿಗಳೊಡನೆ ಮತ್ತು ಅರ್ಥಶಾಸ್ತ್ರಜ್ಞರೊಡನೆ ಈ ಬಗ್ಗೆ ಚರ್ಚಿಸಿದೆ ಸ್ವಲ್ಪಮಟ್ಟಿಗಾದರೂ ವೈಯಕ್ತಿಕ ಪದ್ಧತಿಯು ಅತ್ಯವಶ್ಯವೆಂದು ಅವರು ಅಭಿಪ್ರಾಯ ಪಟ್ಟರು ಇಲ್ಲವಾದರೆ ಜನರು ಆರ್ಥಿಕ ಚಟುವಟಿಕೆಗಳಲ್ಲಿ ಆಸಕ್ತಿಯನ್ನೂ ಭಾಗವನ್ನೂ ವಹಿಸಲಾರರು.

ಹೀಗೆ ಸಹಕಾರವು ಎಲ್ಲ ಆರ್ಥಿಕ ರಂಗವನ್ನು ಪ್ರವೇಶಿಸಲು ಸಾಧ್ಯವಿಲ್ಲವಾದರೂ ಎಷ್ಟೋ ಆರ್ಥಿಕ ಸಮಸ್ಯೆಗಳನ್ನು ಅದು ಎದುರಿಸಬಲ್ಲದೆಂದು ತೋರಿಸಿ ಕೊಟ್ಟಿದೆ ಬಾಂಡವಳಶಾಹಿ ಮತ್ತು ಕಮ್ಯುನಿಸ್ಟ ದೇಶಗಳಲ್ಲಿಯ ಎಷ್ಟೋ ಸೂಕ್ಷ್ಮ ಸ್ವರೂಪದ ಆರ್ಥಿಕ ಸಮಸ್ಯೆಗಳನ್ನು ಪರಿಹರಿಸಿದೆ. ಆರ್ಥಿಕ ಪ್ರಜಾಪ್ರಭುತ್ವವನ್ನು ಸಂಸ್ಥಾಪಿಸಲು ಸಹಕಾರವು ಉತ್ತಮ ಮಾರ್ಗವೆಂದು ಈಗ ಪರಿಗಣಿಸಲಾಗಿದೆ. ಯಾವದೇ ದೇಶದಲ್ಲಿ ಸಮ್ಮಿಶ್ರ, ಸ್ವತಂತ್ರ, ಅಥವಾ ನಿಯಂತ್ರಿತ ಆರ್ಥಿಕ ನೆಲೆಯಿದ್ದರೂ ಸಹಕಾರವು ಉತ್ತಮ ಸಾಧನವೆಂದು ಈಗ ಪ್ರಪಂಚವು ಒಪ್ಪಿಕೊಂಡಿದೆ ದೊಡ್ಡ ದೊಡ್ಡ ಉದ್ದಿಮಗಳನ್ನು ಹೊರತುಪಡಿಸಿ, ಇನ್ನುಳಿದ ಎಲ್ಲ ಆರ್ಥಿಕ ರಂಗಗಳಲ್ಲಿ ಸಹಕಾರವು ಯಶಸ್ವಿ ರೀತಿಯಿಂದ ಸಾಗಿದೆ

## ರಾಷ್ಟ್ರೀಯ ಆರ್ಥಿಕ ಯೋಜನೆಗಳಲ್ಲಿ ಸಹಕಾರದ ಪಾತ್ರ

ನಮ್ಮದು ಸಮ್ಮಿಶ್ರ ಆರ್ಥಿಕ ಪದ್ಧತಿಯು. ಸಾಮೂಹಿಕ ಮತ್ತು ವೈಯಕ್ತಿಕ ಪದ್ಧತಿಗಳೆರಡೂ ಏಕಕಾಲಕ್ಕೆ ಅಸ್ತಿತ್ವದಲ್ಲಿರುತ್ತವೆ. ಈ ದೇಶದ ಆರ್ಥಿಕ ರಚನೆಯಲ್ಲಿ ಸಹಕಾರಕ್ಕೆ ನಿರ್ದಿಷ್ಟ ಸ್ಥಾನವನ್ನು ಕೊಡಲಾಗಿದೆ ಆರ್ಥಿಕ ರಚನೆಯ ಒಂದು ಅಂಗವೆಂದೂ ಸಹಕಾರಕ್ಕೆ ಮನ್ನಣೆ ಕೊಡಲಾಗಿದೆ. ವಿಶೇಷತ ಸ್ವಾತಂತ್ರ್ಯೋದಯದ ತರುವಾಯ ಭಾರತದ ಆರ್ಥಿಕ ಕ್ರಮಗಳಲ್ಲಿ ಸಹಕಾರಕ್ಕೆ

ಪ್ರಮುಖ ಸ್ಥಾನವು ದೊರೆತಿದ್ದು ಸದ್ಯದ ಆರ್ಥಿಕ ಸಮಸ್ಯೆಗಳ ನಿವಾರಣೋಪಾಯ ವೆಂದು ಉಪಯೋಗಿಸಲಾಗುತ್ತಿದೆ ಭಾರತದ ಗ್ರಾಮಾಂತರಗಳ ಪುನರುದ್ಧಾರದ ಕಾರ್ಯವನ್ನು ಸಹಕಾರವು ಸಹಜವಾಗಿ ಮಾಡಬಲ್ಲದು ಭಾರತದ ಒಕ್ಕಲು ತನದ ಬಗ್ಗೆ ವರದಿ ಮಾಡಲು ನಿಯಮಿಸಲಾಗಿದ್ದ ರಾಯಲ್ ಕಮೀಶನ್ ಹೀಗೆ ಅಭಿಪ್ರಾಯಪಟ್ಟಿದೆ. "ಉತ್ತಮ ಸಹಕಾರಿ "ಆಂದೋಲನದ ಮುಖಾಂತರ ಲಕ್ಷಾನುಲಕ್ಷ ಸಣ್ಣ ಸಣ್ಣ ರೈತರ ಉದ್ಧಾರವು ಸುಲಭ ಸಾಧ್ಯವೆಂದು ನಮ್ಮ ಮತವಿದೆ ಇದೊಂದು ಸಾಧ್ಯವಾದರೆ ಆ ತರುವಾಯ ಕ್ರಮೇಣವಾಗಿ ಇತರ ಸೌಲಭ್ಯ ಸೌಕರ್ಯಗಳನ್ನೂ ಸಾಧಿಸಲು ಅನುಕೂಲವಾಗುವದು ಸಹಕಾರ ಆಂದೋಲನವು ಅಯಶಸ್ವಿಯಾದರೆ ಗ್ರಾಮಾಂತರ ಭಾರತದ ಸುಧಾರಣೆಯ ಆಶಾಂಕುರವೇ ಕುಸಿದುಬಿದ್ದಂತೆ " ಅದೇ ಮೇರೆಗೆ ಮೆಕ್ಲಗಾನ್ ಕಮೀಟಿಯು ಹೇಳಿರುವದೇನಂದರೆ, "ಒಕ್ಕಲುತನದ ಸುಧಾರಣೆಗಾಗಿ ಸಹಕಾರಕ್ಕಿಂತ ಬೇರೊಂದು ಉತ್ತಮ ಮಾರ್ಗವಿಲ್ಲ " ಮೇಲಿನ ಅಭಿಪ್ರಾಯಗಳು ಬರಲಿರುವ ಎಷ್ಟೋ ವರ್ಷಗಳಿಗೂ ಅನ್ವಯಿಸುತ್ತವೆ ಭಾರತವು ಬುನಾದಿಕಾಲದಿಂದಲೂ ಒಕ್ಕಲುತನದ ದೇಶವಾಗಿದ್ದು ಇನ್ನು ಮುಂದಾದರೂ ಪ್ರಾಮುಖ್ಯವಾಗಿ ಒಕ್ಕಲುತನದ ದೇಶ ವಾಗಿಯೇ ಉಳಿದುಕೊಳ್ಳುವದು ಸುಮಾರು ನೂರಕ್ಕೆ ೭೫ ಕ್ಕಿಂತ ಹೆಚ್ಚು ಜನರು ಒಕ್ಕಲುತನದಿಂದಲೇ ಉಪಜೀವನ ಸಾಗಿಸುತ್ತಾರೆ ನಾಡಿನ ಸಂಪತ್ತಿನ ಬಹುಭಾಗವು ಒಕ್ಕಲುತನದಿಂದಲೇ ಬರುತ್ತದೆ. ಇಲ್ಲಿ ಪಾಶ್ಚಿಮಾತ್ಯ ದೇಶಗಳಿಗೆ ವ್ಯತಿರಿಕ್ತವಾಗಿ ೫ ಲಕ್ಷ ಹಳ್ಳಿಗಳಿವೆ ಪ್ರತಿ ರೈತನ ಪಾಲಿಗೆ ಅತ್ಯಲ್ಪ ಪ್ರಮಾಣದ ಭೂಮಿ ಇದೆ. ಬಡತನ ಮತ್ತು ಆರ್ಥಿಕ ಮುಗ್ಗಟ್ಟು ಇವುಗಳು ಸರ್ವಸಾಮಾನ್ಯ ವಾಗಿವೆ ತುಂಡು ಹೊಲಗಳ ಸಂಯೋಜನೆಯ ಕಾರ್ಯವೂ ನಡೆದಿದೆ ಸಾಗುವಳಿಯ ಪದ್ಧತಿಯೂ ಅತಿ ಪುರಾತನದ್ದು, ಶಿಕ್ಷಣವಂತೂ ವಿಶೇಷತ ಹಳ್ಳಿ ಗಾಡುಗಳಲ್ಲಿ ಬಹಳ ಕಡಿಮೆ ಇದೆ ರೈತರಿಗೆ ಸಾಧನ-ಸಂಪತ್ತುಗಳು ಕಡಿಮೆ ಇವ ಪ್ರತಿ ಎಕರೆಗೆ ಬರುವ ಬೆಳೆಯ ಪ್ರಮಾಣವು ಕಡಿಮೆ ಇದೆ. ಇಡೀ ವರ್ಷವೂ ರೈತನಿಗೆ ಉದ್ಯೋಗವು ದೊರಕುವಂತಿಲ್ಲ ಒಕ್ಕಲಿಗನು ತನ್ನ ಆವಶ್ಯಕ ಸರಕುಗಳನ್ನು ಸ್ವಾರ್ಥಸಾಧಕರ ಮುಖಾಂತರ ಹೆಚ್ಚು ಬೆಲೆ ಕೊಟ್ಟು ಕೊಳ್ಳುತ್ತಾನೆ ಮತ್ತು ತನ್ನ ಹುಟ್ಟುವಳಿಯನ್ನು ಕಡಿಮೆ ಬೆಲೆಗೆ ಮಾರುತ್ತಾನೆ ರೈತರಲ್ಲಿ ಯಾವದೇ ತರಹದ ಸಂಘಟನೆ ಇಲ್ಲದಾಗಿದೆ. ಹೀಗಾಗಿ ಎಲ್ಲ ರೀತಿಯಿಂದಲೂ ಎಲ್ಲ ಕಾಲದಲ್ಲಿಯೂ ಶೋಷಣೆಯು ನಡೆದೇ ಇದೆ ಅಲ್ಲದೆ ಭಾರತದಲ್ಲಿ ಒಕ್ಕಲುತನವು ಮಳೆಯೊಡನೆ ಆಡುವ ಜೂಜಾಟವಾಗಿದೆ ಇವೆಲ್ಲಕ್ಕೂ ಕಳಸ ವಿಟ್ಟಂತೆ ಜನಸಂಖ್ಯೆಯು ಹೆಚ್ಚಿ, ಭೂಭಾರವಾಗತೊಡಗಿದೆ ಗೃಹೋದ್ಯೋಗ, ಗ್ರಾಮೋದ್ಯೋಗಗಳನ್ನು ಬೆಳೆಯಿಸದ ಹೊರತು ದಿನದಿನಕ್ಕೆ ಪ್ರಚಂಡವಾಗಿ ಬೆಳೆಯುತ್ತಿರುವ ನಮ್ಮ ಜನತೆಗೆ ಉದ್ಯೋಗವನ್ನು ಕಲ್ಪಿಸಿಕೊಡುವದೇ ಪರಮ ದುಸ್ತರವಾಗಿದೆ ಔದ್ಯೋಗೀಕರಣದತ್ತ ನಾವು ಭರದಿಂದ ಸಾಗಿರುವೆವಾದರೂ, ಪಾಶ್ಚಿ ಮಾತ್ಯ ರಾಷ್ಟ್ರಗಳಲ್ಲಿ ಇಂಥ ಧೋರಣೆಯಿಂದ ಉದ್ಭೂತವಾದ ಸಮಸ್ಯೆಗಳ ಬಗ್ಗೆ ನಾವು ಹೆಚ್ಚು ಜಾಗರೂಕರಾಗಿರಬೇಕು ಆದುದರಿಂದ ಭಾರತದ ಔದ್ಯೋಗಿಕ ನೀತಿ ಯಲ್ಲಿ ವಿಕೇಂದ್ರೀಕರಣ ಮತ್ತು ಗೃಹಉದ್ದಿಮೆಗಳ ಬೆಳವಣಿಗೆಯತ್ತ ಹೆಚ್ಚು ಲಕ್ಷ್ಯ

ಕೊಡಲಾಗಿದೆ ಮುಂಬಯಿ, ಅಹಮ್ಮದಾಬಾದ ಮತ್ತು ಜಮಶೇದಪೂರ ಮೊದಲಾದ ಔದ್ಯೋಗಿಕ ಕೇಂದ್ರಗಳಲ್ಲಿಯ ಕೂಲಿಕಾರ ಜನರ ಹಿತರಕ್ಷಣಾ ಕಾರ್ಯವನ್ನು ಸಹಕಾರವು ಯಶಸ್ವಿ ರೀತಿಯಲ್ಲಿ ಮಾಡಬಹುದು ನಿರಾಶ್ರಿತ ಜನರ ಯೋಗಕ್ಷೇಮ ಕಾರ್ಯವನ್ನೂ ಸಹಕಾರಿ ಆಂದೋಲನವು ಮಾಡುತ್ತಲಿದೆ ರೈತರು ಒಂದುಗೂಡಿ ಕಾರ್ಯ ಮಾಡದವಿನಾ ಅವರ ಕಲ್ಯಾಣವಾಗಲಿ, ಆರ್ಥಿಕ ಸುಧಾರಣೆಯಾಗಲಿ ಸಾಧ್ಯವಿಲ್ಲ ಈ ದಿಶೆಯಲ್ಲಿ ಪಾಶ್ಚಿಮಾತ್ಯ ಒಕ್ಕಲುತನದ ರಾಷ್ಟ್ರಗಳಾದ ಅಮೇರಿಕಾ, ಕಾನಡಾ ದೇಶಗಳು ನಮಗೆ ಯೋಗ್ಯ ನಿದರ್ಶನ ಗಳಾಗಿವೆ ಈ ಪ್ರಸಂಗದಲ್ಲಿ ಸುಖವಾಗಿ ಜೀವನ ಸಾಗಿಸಬೇಕಾದರೆ ರೈತನು ಏಕ ಕಾಲಕ್ಕೆ ಉತ್ಪಾದಕನು, ಸಾಲಗಾರನು, ಸಾಹುಕಾರನು, ವ್ಯಾಪಾರಿಯು, ತನ್ನ ಸರಕುಗಳನ್ನು ಮಾರುವವ ಮತ್ತು ತನ್ನ ಆವಶ್ಯಕತೆಗಳನ್ನು ತಾನೇ ಕೊಳ್ಳುವ ಗಿರಾ ಕಿಯೂ ಆಗಬೇಕು ಸಹಕಾರಿ ತತ್ವಾಚರಣೆಯಿಂದಲೇ ಇದು ಸಾಧ್ಯ ಸಹಕಾರವು ರೈತನಿಗೆ ಶಕ್ತಿ ಕೊಡುತ್ತದೆ, ಸ್ವಾವಲಂಬಿಯನ್ನಾಗಿ ಮಾಡುತ್ತದೆ, ಉಳಿತಾಯ ಹಾಗೂ ವ್ಯವಹಾರ ಕ್ರಮಗಳನ್ನು ಬೋಧಿಸುತ್ತದೆ ಮತ್ತು ತನನ್ನು ತಾನು ಆಳಿ ಕೊಳ್ಳುವ ಕಲೆಯನ್ನು ತಿಳಿಯಪಡಿಸುತ್ತದೆ ಸಹಕಾರಿ ಮತ್ತು ಸಾಮೂಹಿಕ ಬೇಸಾಯ ಪದ್ಧತಿಗಳಿಂದ ನಾವು ಉತ್ಪಾದನೆಯನ್ನು ಹೆಚ್ಚಿಸಬಹುದು ಎಂದು ರಶಿಯ ಮತ್ತು ಪ್ಯಾಲೆಸ್ಟಾಯಿನ್ ದೇಶಗಳು ತೋರಿಸಿಕೊಟ್ಟಿವೆ ಮತ್ತು ಉದ್ಯೋಗವನ್ನು ಸಹಕಾರಿ ತತ್ವಗಳಿಂದ ತಮ್ಮ ತಮ್ಮ ಮನೆಗಳಲ್ಲಿಯೇ ಬೆಳೆಯಿಸಿ ಕೊಳ್ಳಬಹುದೆಂದು ಚೀನಾ ಮತ್ತು ಜಪಾನ ದೇಶಗಳು ಉದಾಹರಣೆಯನ್ನು ಹಾಕಿ ಕೊಟ್ಟಿವೆ ಸಹಕಾರಿ ಪದ್ಧತಿಗಳ ಮೇರೆಗೆ ಒಕ್ಕಲುತನದ ಉತ್ಪಾದನೆಗಳ ಮಾರಾಟ ವನ್ನು ಲಾಭದಾಯಕ ರೀತಿಯಲ್ಲಿ ಮಾಡಬಹುದು ಎಂದು ಅಮೇರಿಕಾ ಮತ್ತು ಕಾನಡಾ ದೇಶಗಳು ತೋರಿಸಿಕೊಟ್ಟಿವೆ ಹೀಗೆ ಸಹಕಾರವು ಒಕ್ಕಲುತನದ ಮತ್ತು ಗೃಹಉದ್ದಿಮೆಗಳ ಬೆಳವಣಿಗೆಗೆ ಕೂಡಿಯೇ ಉಪಯೋಗವಾಗುತ್ತದೆ ಬಡ ಹಾಗೂ ನಿರ್ಗತಿಕ ದುಡಿಮೆಗಾರರು ತಮ್ಮ ಕಚ್ಚಾಮಾಲನ್ನು ಕೊಳ್ಳುವದಕ್ಕೆ, ಮಾರಾಟ ಮಾಡುವದಕ್ಕೆ ಮತ್ತು ಹಣದ ಸೌಕರ್ಯ ಪಡೆಯುವದಕ್ಕೆ ಒಂದುಗೂಡತೊಡಗು ವರು ಭಾರತವು ಬಡದೇಶವಾಗಿದ್ದರೂ ಇಲ್ಲಿ ನೈಸರ್ಗಿಕ ಸಂಪತ್ತು, ಮಾನವ ಶಕ್ತಿಗಳು ವಿಪುಲವಾಗಿವೆ ಉಪಯೋಗವಾಗದೆ ಇದ್ದ ಸಂಪತ್ತು ಮತ್ತು ಶಕ್ತಿ ಗಳನ್ನು ಉತ್ಪಾದನೆಗಾಗಿ ಸದುಪಯೋಗ ಮಾಡಿಕೊಳ್ಳಲು ಸಹಕಾರ ಪದ್ಧತಿಯು ಉತ್ತಮವಾದುದು ಆದುದರಿಂದ ಡಾ ರಾಜೇಂದ್ರ ಪ್ರಸಾದರವರು ಹೇಳಿರುವ ದೇನಂದರೆ "ಸಹಕಾರಿ ಆಂದೋಲನದಲ್ಲಿ ಪ್ರಜಾಪ್ರಭುತ್ವ ತತ್ವವು ಅಡಕ ವಾಗಿದೆ ಅದಕ್ಕಿಂತಲೇ ಸಹಕಾರಕ್ಕೆ ನಾವು ಹೆಚ್ಚು ಮಹತ್ವ ಕೊಡಬೇಕಾಗಿದೆ ಶಿಸ್ತು ಮತ್ತು ಸ್ವಾತಂತ್ರ್ಯ ಇವುಗಳ ಯೋಗ್ಯ ಸಮೀಕರಣವು, ತಾನು ಎಲ್ಲರಿಗಾಗಿ, ಎಲ್ಲರೂ ತನಗಾಗಿ,' ಎಂಬ ಸಹಕಾರ ಪದ್ಧತಿಯಲ್ಲಿ ಸಾಧ್ಯವಿದೆ ಆದುದರಿಂದ ನಮ್ಮ ದೇಶಕ್ಕೆ ಇದಕ್ಕಿಂತಲೂ ಹಿತಕರವಾದ ತತ್ವವು ಬೇರೊಂದಿಲ್ಲ" ಸ್ವಾತಂತ್ರ್ಯೋ ದಯದ ತರುವಾಯ ಭಾರತದಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸಲು ಸಹಕಾರಕ್ಕೆ ಯೋಗ್ಯ ಸ್ಥಾನವನ್ನು ದೊರಕಿಸಿಕೊಟ್ಟಿವೆ ಮತ್ತು ಸಹಕಾರಿ ಪ್ರಜಾಪ್ರಭುತ್ವದ ಪ್ರಗತಿಪರ ಸಿದ್ಧಿಗಾಗಿ

ಪ್ರಜಾಪ್ರಭುತ್ವದ ತತ್ವಗಳನ್ನು ಸಹಕಾರಿ ಪದ್ಧತಿಯು ಮೇಲೆ ಸಾಕಷ್ಟು ಬಳಕೆಯಲ್ಲಿ ತಂದಿವೆ, ತರುತ್ತಲಿವೆ. ಒಕ್ಕಲುತನದ ಉತ್ಪಾದನ ಮತ್ತು ಮಾರಾಟ, ಗೃಹ ಉದ್ದಿಮೆಗಳ ಬೆಳವಣಿಗೆ, ಅವಕ್ಕೆ ಸಂಬಂಧಿಸಿದ ಮತ್ತಿತರ ಸಮಸ್ಯೆಗಳನ್ನು ಸಹಕಾರ ತತ್ವಗಳಿಂದ ಸುಲಭವಾಗಿ ನಿವಾರಿಸಬಹುದೆಂದು ಭಾರತದ ಯೋಜನಾ ಸಮಿತಿಯು ಶಿಫಾರಸು ಮಾಡಿದೆ. ಹೀಗಾಗಿ ನಮ್ಮ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ವಿಶೇಷತ ಗ್ರಾಮಸುಧಾರಣಾ ಕ್ರಮಗಳಲ್ಲಿ ಸಹಕಾರವು ಮಹತ್ವದ ಪಾತ್ರವನ್ನು ಎಸಗಲಿದೆ.

---

## ೨ನೆಯ ಅಧ್ಯಾಯ

# ಆಧುನಿಕ ಸಹಕಾರದ ಉಗಮ ಮತ್ತು ಪ್ರಸಾರ

**ಔದ್ಯೋಗಿಕ ಕ್ರಾಂತಿ**—ಕಳೆದ ಎಷ್ಟೋ ಶತಮಾನಗಳಿಂದ ಸುಧಾರಿಸಿದ
ಎಲ್ಲ ರಾಷ್ಟ್ರಗಳಲ್ಲಿ ಒಕ್ಕಲುತನದ ಮತ್ತು ಸಣ್ಣ ಸಣ್ಣ ಗೃಹ ಉದ್ದಿಮೆಗಳು ಉಪ
ಜೀವನದ ಮೂಲ ಸಾಧನಗಳಾಗಿದ್ದವು ಆದರೆ ೧೮ನೆಯ ಶತಮಾನದಲ್ಲಿ ಉಗಿ
ಯಂತ್ರ ಮತ್ತು ಇತರ ಯಂತ್ರ ಸಾಮಗ್ರಿಗಳ ಶೋಧದಿಂದಾಗಿ ಫ್ಯಾಕ್ಟರಿ
ಪದ್ಧತಿಯು ಮೊದಲು ಇಂಗ್ಲಂಡಿನಲ್ಲಿ, ಕ್ರಮೇಣವಾಗಿ ಇತರ ರಾಷ್ಟ್ರಗಳಲ್ಲಿ ಅಸ್ತಿತ್ವ
ದಲ್ಲಿ ಬಂದಿತು ಹೀಗಾಗಿ ಉದ್ದಿಮೆಗಳೆಲ್ಲ ಕಲವೇ ಜನರ ಕೈಯಲ್ಲಿ ಸೇರಿಕೊಂಡು
ಅನುಕೂಲವಾದ ನಗರಗಳಲ್ಲಿ ಬೆಳೆದವು ಆದರೆ ಈ ಔದ್ಯೋಗಿಕ ಕೇಂದ್ರಗಳಿಗೆ
ಹಳ್ಳಿಗರು ತಮ್ಮ ಒಕ್ಕಲುತನವನ್ನು ಬಿಟ್ಟು ಬರತೊಡಗಿದರು ಈ ಬಗೆಯ
ಸ್ಥಿತ್ಯಂತರಕ್ಕೆ 'ಔದ್ಯೋಗಿಕ ಕ್ರಾಂತಿ' ಎಂದು ಕರೆಯಬಹುದು ಹಸ್ತ
ಸಹಾಯದಿಂದ ವಸ್ತು ನಿರ್ಮಾಣ ಮಾಡದೇ ಯಂತ್ರ ಸಹಾಯದಿಂದ ಮಾಡುವ
ದೆಂದು ಬರಿ ಇದರ ಅರ್ಥವಾಗದೆ ಆರ್ಥಿಕ ರಚನೆಯ ಪರಿವರ್ತನೆಯೆಂದೂ ಇದರ
ಅರ್ಥವಾಗುವದು ಧನಿಕ ಮತ್ತು ಕೂಲಿಕಾರ, ಕೊಳ್ಳುವವ ಮತ್ತು ಮಾರುವವ
ಇವರ ಸಂಬಂಧಗಳಲ್ಲಿ ಮತ್ತು ಸಾಮಾಜಿಕ ಹಾಗೂ ನೈತಿಕ ತತ್ವಗಳಲ್ಲಿ
ಬದಲಾವಣೆಗಳು ಕಂಡು ಬಂದವು ಕೌಟುಂಬಿಕ ವ್ಯವಹಾರ ಪದ್ಧತಿಯು ನಾಶವಾಗಿ
ಫ್ಯಾಕ್ಟರಿ ಪದ್ಧತಿಯು ಅಸ್ತಿತ್ವದಲ್ಲಿ ಬಂದಿತು ಔದ್ಯೋಗಿಕ ಕ್ರಾಂತಿಯು ಉತ್ಪಾ
ದನೆಯನ್ನು ಬಹಳವಾಗಿ ಹೆಚ್ಚಿಸಿ ಜನತೆಯ ಸಂಪತ್ತು ಮತ್ತು ಸುಖಗಳನ್ನು ವೃದ್ಧಿ
ಗೊಳಿಸಿತೆಂದು ಹೇಳಬಹುದು. ಈ ಬದಲಾವಣೆಯಿಂದ, 'ಮುಕ್ತ ವ್ಯಾಪಾರ'
ಪದ್ಧತಿಯ ಮೇರೆಗೆ ಇರುವ ಬಾಂಡವಲ ಪದ್ಧತಿಯು ಅಸ್ತಿತ್ವದಲ್ಲಿ ಬಂದಿತು
ಪ್ರಾರಂಭಕ್ಕೆ ಈ ಪದ್ಧತಿಯು ಅವ್ಯವಸ್ಥಿತವಾಗಿಯೂ ಹೆಚ್ಚಾಗಿ ವೈಯಕ್ತಿಕ
ವಾಗಿಯೂ ಇದ್ದಿತು ಎಲ್ಲ ಆರ್ಥಿಕ ಚಟುವಟಿಕೆಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯ
ವಿದ್ದಿತು ಬಾಂಡವಲಶಾಹಿಗಳ ಲಾಭಬಡುಕತನ ಮತ್ತು ಮಧ್ಯಸ್ಥರಿಂದಾಗುವ
ಶೋಷಣೆಗಳು ಹೆಚ್ಚಾಗತೊಡಗಿದವು ಸುದೈವಿಗಳಾದ ಕೆಲವು ಜನರು ಅಪಾರ ಹಣ
ವನ್ನು ಸಂಗ್ರಹಿಸಿಕೊಂಡು ಉತ್ಪಾದನೆಯ ಹೊಸ ಹೊಸ ಸಾಧನಗಳ ಒಡೆಯ
ರಾಗಿ ಉಳಿದುಕೊಂಡರು ಔದ್ಯೋಗಿಕ ಕ್ರಾಂತಿಯು ಸಂಪತ್ತು ಮತ್ತು ಸೌಕರ್ಯ
ಗಳನ್ನು ವೃದ್ಧಿಗೊಳಿಸಿತಾದರೂ, ಕೂಲಿಕಾರ ವರ್ಗಕ್ಕೆ ಅದರಿಂದ ಹೆಚ್ಚಿನ ತೊಂದರೆ
ಹಾಗೂ ಸಂಕಟಗಳು ಉದ್ಭೂತವಾದವು ಗ್ರಾಮಾಂತರಗಳಿಂದ ಹೆಚ್ಚು ಹೆಚ್ಚು
ಜನರು ನಗರಗಳಿಗೆ ಬರತೊಡಗಿ ಗೃಹ ಉದ್ದಿಮೆ ಬಿಟ್ಟು ನಿರುದ್ಯೋಗಿಗಳಾದುದ
ರಿಂದ ಸಾಹುಕಾರರು ಅವರ ಮೇಲೆ ತಮ್ಮ ನಿರ್ಬಂಧನೆಗಳನ್ನು ಹೇರಲು
ಸುಲಭ ಸಾಧ್ಯವಾಯಿತು ಈ ಜನರ ಕೂಲಿಯನ್ನು ಕೆಳಮಟ್ಟದಲ್ಲಿ ನಿರ್ಧರಿಸ
ಲಾಯಿತು ಆದರೂ ಅದನ್ನೇ ಅವರು ಅನಿವಾರ್ಯವೆಂದು ಸ್ವೀಕರಿಸತೊಡಗಿದರು
ತಮ್ಮ ಶ್ರಮದ ಉಪಯೋಗದಲ್ಲಾಗಲೀ ಉದ್ದಿಮೆಯಿಂದ ಬಂದ ಲಾಭದಲ್ಲಾಗಲೀ
ಅವರಿಗೆ ಹೆಚ್ಚಿನ ಅಧಿಕಾರವೇ ಇರಲಿಲ್ಲ. ವೃದ್ಧಿಯಾದ ಸಂಪತ್ತು ಅಯೋಗ್ಯ

ರೀತಿಯಲ್ಲಿ ಹಂಚಲಾಗುತ್ತಿತ್ತು ಹೀಗೆ ಲಾಭಬಡಕತನ ಸ್ಪರ್ಧೆ ಮತ್ತು ಸಮರ್ಥ ನಾದವನೇ ಬಾಳಬೇಕು ಎಂಬ ತತ್ವಗಳ ಮೇಲೆ ನಿಂತುಕೊಂಡ ಬಾಂಡವಳ ಶಾಹಿ ಪದ್ಧತಿಯಿಂದ ಸಂಪತ್ತಿನ ವಿತರಣೆ ಮತ್ತು ಅವಕಾಶಗಳಲ್ಲಿ ಹೆಚ್ಚಿನ ವಿಷಮತೆಗಳು ಕಂಡುಬರತೊಡಗಿದವು ಶ್ರೀಮಂತನು ಶ್ರೀಮಂತನಾಗುತ್ತಲೇ ನಡೆದನು ಆದರೆ ಬಡವನು ಬಡವನಾಗುತ್ತಲೇ ಉಳಿದನು ಕೂಲಿಕಾರರು ಆರ್ಥಿಕ ಮುಗ್ಗಟ್ಟನ್ನೇ ಎದುರಿಸಬೇಕಾಯಿತು ಹೆಚ್ಚು ಕಡಿಮೆ ಅವರು ನಿರ್ಗತಿಕರೇ ಆಗಿ ಉಳಿಯ ಬೇಕಾಯಿತು ಹೀಗಾಗಿ ಕೂಲಿಕಾರ ಮತ್ತು ಮಧ್ಯಮ ವರ್ಗಗಳ ಆರ್ಥಿಕ ಸುಧಾರಣೆಗಳಿಗಾಗಿ ಬೇರೆ ಬೇರೆ ಪದ್ಧತಿಗಳನ್ನು ತಜ್ಞರು ಕಂಡು ಹಿಡಿಯ ತೊಡಗಿದರು ಬಾಂಡವಳ ಪದ್ಧತಿಯಿಂದ ನಿರ್ಮಾಣ್ಯರಾದ ಬಡ ಜನರು ಈ ಸಂಕಷ್ಟ ಗಳಿಂದ ಪಾರಾಗಬೇಕೆಂಬ ಉದ್ದೇಶದಿಂದ ಸಂಪು, ರಾಜಕೀಯ ಚಟುವಟಿಕೆ, ಸಹಕಾರಿ ಸಂಘ ಸಂಸ್ಥಾಪನೆ ಮೊದಲಾದ ಕ್ರಮಗಳಿಗೆ ಮೊರೆ ಹೋಗ ಬೇಕಾಯಿತು

**ಸಹಕಾರದ ಉಗಮ :—** ಹೀಗೆ ಜನತೆಯ ಆರ್ಥಿಕ ಸುಧಾರಣೆಯ ಕ್ರಮವೆಂದು ಪ್ರಾರಂಭಕ್ಕೆ ಸಹಕಾರಿ ಆಂದೋಲನವನ್ನು ಅನುಸರಿಸಲಾಯಿತು ದಾರಿದ್ರ್ಯ ಮತ್ತು ಆರ್ಥಿಕ ಸಂಕಟಗಳಲ್ಲಿಯೇ ಸಹಕಾರದ ಉಗಮವಾಯಿತು. ಆರ್ಥಿಕ ದೃಷ್ಟಿಯಲ್ಲಿ ದುರ್ಬಲರಾದ ಮತ್ತು ಸರ್ವ ಸಾಮಾನ್ಯ ಬೇಡಿಕೆಗಳುಳ್ಳ ಜನರು ಒಂದುಗೂಡಿ ಸ್ವ ಮತ್ತು ಪರಸ್ಪರ ಸಹಾಯಗಳ ಮೇಲೆ ಸಂಘಗಳನ್ನು ಕಟ್ಟಿಕೊಳ್ಳತೊಡಗಿದರು ಏಕಂದರೆ ಔದ್ಯೋಗಿಕ ಕ್ರಾಂತಿಯಿಂದ ಉದ್ಭೂತವಾದ ಸಂಕಟಗಳನ್ನು ವೈಯಕ್ತಿಕವಾಗಿ ಎದುರಿಸುವದಾಗಲೀ ಮತ್ತು ಸೌಕರ್ಯಗಳ ಸದುಪಯೋಗ ಮಾಡಿಕೊಳ್ಳುವದಾಗಲೀ ಅವರಿಗೆ ಸಾಧ್ಯವಾಗದೇ ಹೋಯಿತು ಇಂಗ್ಲಂಡಿನಲ್ಲಿ ೧೯ ನೆಯ ಶತಮಾನದ ಅವಿಯಲ್ಲಿ ಸಹಕಾರ ಆಂದೋಲನದ ಉದಯವಾಯಿತು ಕೂಲಿಕಾರ ವರ್ಗದ ಕಲ್ಯಾಣ ಮತ್ತು ಆರ್ಥಿಕ ಸುಧಾರಣೆ ಗೆಂದೇ ಸಹಕಾರಿ ಆಂದೋಲನವು ಪ್ರಾರಂಭವಾಯಿತು **ರಾಬರ್ಟ ಓವೆನ್** ಎಂಬವರೇ ಸಹಕಾರಿ ಆಂದೋಲನದ ಸಂಸ್ಥಾಪಕರೆಂದು ಪರಿಗಣಿಸಲಾಗಿದೆ 'ಸಹಕಾರ' ಎಂಬ ಶಬ್ದವನ್ನು ರಾಬರ್ಟ ಓವೆನ್ ಅವರೇ ಮೊದಲು ಉಪ ಯೋಗಿಸಿದರು ಇವರು ಸ್ವತ ದೊಡ್ಡ ಉದ್ದಿಮೆದಾರರಿದ್ದರೂ ಕೂಲಿಕಾರ ವರ್ಗದ ಮುಂದಾಳುಗಳಾದರು ಅವರ ಅನುಯಾಯಿಗಳಿಗೆ 'ಸಹಕಾರಿಗಳು' ಅಥವಾ 'ಸಮಾಜವಾದಿಗಳು' ಎಂದು ಕರೆಯಲಾಯಿತು ಸಹಕಾರಿ ಸಮಾಜ ಅಥವಾ ಗ್ರಾಮವನ್ನು ರಚಿಸುವದೇ ಅವರ ಉದ್ದೇಶವಾಗಿದ್ದಿತು ಅಂದರೆ ತಮ್ಮ ಭೂಮಿ, ಫ್ಯಾಕ್ಟರಿಗಳಲ್ಲಿ ತಾವೇ ದುಡಿದು ಔದ್ಯೋಗಿಕ ಸಮಾಜದ ಸ್ಪರ್ಧೆಯನ್ನು ತಡೆಗಟ್ಟಿ, ಪರಸ್ಪರ ಸಹಾಯ, ಸಾಮಾಜಿಕ ಸಮಾನತೆ ಮತ್ತು ಬಂಧುತ್ವ ಮೊದಲಾದ ಉದಾತ್ತ ತತ್ವಗಳನ್ವಯ ಜೀವಿಸಬೇಕೆಂಬುದೇ ಓವೆನ್ ಅವರ ಉದ್ದೇಶ ವಾಗಿದ್ದಿತು ರಾಬರ್ಟ ಓವೆನ್ ಅವರು ತಮ್ಮ ಹೊಸ ವಿಚಾರವನ್ನು ಹೆಚ್ಚು ಪ್ರಚಾರಗೊಳಿಸತೊಡಗಿದರು ಸಮಾಜದಲ್ಲಿಯ ಸಂಕಟಗಳು ಸ್ಪರ್ಧೆ ಮತ್ತು ಮನುಷ್ಯ ನಿರ್ಮಿತಗಳೆಂದು ಪ್ರತಿಪಾದಿಸತೊಡಗಿದರು ಸಹಕಾರವು ಸ್ಪರ್ಧೆಯನ್ನು ಹೋಗಲಾಡಿಸಿ ಜನತೆಗೆ ಸುಖ ತಂದು ಕೊಡುವದೆಂದು ಸಾರತೊಡಗಿದರು

ಹೀಗೆ ಅವರು ಸಹಕಾರಿ ತತ್ವಗಳನ್ನಯು ಎಷ್ಟೋ ಹೊಸ ಹೊಸ ಸಂಘಟನಗಳನ್ನು ಮಾಡಿದರು ಆದರೆ ದುರ್ದೈವಕ್ಕೆ ಅವು ಯಶಸ್ವಿಯಾಗಲಿಲ್ಲ ಓವನ್‌ರ ಸಹಕಾರಿ ಪ್ರಯೋಗಗಳಲ್ಲಿ ಕೆಲವು ಮಾತ್ರ ಜೀವದಿಂದ ಉಳಿದುಕೊಂಡವು ಆದರೂ ವಿಶೇಷತ ಔದ್ಯೋಗಿಕ ಕೇಂದ್ರಗಳಲ್ಲಿ ಒವೆನ್‌ರ ಅನುಯಾಯಿಗಳು ಸಹಕಾರ ಮತ್ತು ಸಮಾಜವಾದ ತತ್ವಗಳನ್ನು ಬೋಧಿಸುತ್ತಲೇ ನಡೆದರು

## ಆಧುನಿಕ ಸಹಕಾರಿ ಆಂದೋಲನ

(ಅ) **ಔದ್ಯೋಗಿಕ ಸಹಕಾರ** — ಆಧುನಿಕ ಸಹಕಾರಿ ಆಂದೋಲನವು ಪ್ರಾರಂಭಕ್ಕೆ ಇಂಗ್ಲಂಡಿನಲ್ಲಿ, ೧೯ನಯ ಶತಮಾನದ ' ಹಂಗ್ರಿ ಫೋರ್ಟೀಜ ' ದಲ್ಲಿ ಹೇಳಿರುವಂತೆ ಔದ್ಯೋಗಿಕ ಸಹಕಾರದಿಂದ ಪ್ರಾರಂಭವಾಯಿತು ೧೮೪೪ನೆಯ ಡಿಶಂಬರದಲ್ಲಿ ಸ್ಥಾಪಿತವಾದ ರಾಚ್‌ಡೇಲ ಇಕ್ವಿಟೇಬಲ್ ಪಾಯೋನಿಯರ ಸಂಘದ ಸಂಸ್ಥಾಪನೆಯಿಂದ ಔದ್ಯೋಗಿಕ ಸಹಕಾರವು ಪ್ರಾರಂಭವಾಯಿತನ್ನಬಹುದು ರಾಚ್‌ಡೇಲ ಮತ್ತು ಸುತ್ತುಮುತ್ತಲಿನ ಹಳ್ಳಿಗಳಲ್ಲಿ ನೇಕಾರರು ಹಚ್ಚಾಗಿ ವಾಸಿಸುತ್ತಿದ್ದರು ಔದ್ಯೋಗಿಕ ಕ್ರಾಂತಿಯಿಂದ ನೇಕಾರರಿಗೂ ಬಹಳ ತೊಂದರೆಯಾಯಿತು ನೇಕಾರರ ಪರಿಸ್ಥಿತಿಯು ತೀರ ಚಿಂತಾಜನಕವಾಯಿತು ಎಷ್ಟೋ ಸ್ತ್ರೀ—ಪುರುಷರು ನಿರುದ್ಯೋಗಿಗಳಾದರು ಹೀಗಾಗಿ ಈ ಜನರ ಆರ್ಥಿಕ ಸುಧಾರಣೆಯ ಚಳವಳಿಯ ಮತ್ತು ಕಾರ್ಯಕಲಾಪಗಳ ಕೇಂದ್ರವು ರಾಚ್‌ಡೇಲ ಹಳ್ಳಿಯು ಆಯಿತು ಸಂಪನ್ನು ಹೂಡಿ ನ್ಯಾಯಯಾಚನೆ ಮಾಡಿದರು ಆದರೆ ಅದರಲ್ಲಿ ಅವರಿಗ ಯಶಸ್ಸು ದೊರೆಯಲಿಲ್ಲ ಆನಂತರ ಅವರು ಕ್ರಾಂತಿಯ ಮಾರ್ಗವನ್ನು ಬಿಟ್ಟು ಆರ್ಥಿಕ ಚಟುವಟಿಕೆಗಳಲ್ಲಿ ಪ್ರಜಾಪ್ರಭುತ್ವವನ್ನು ಹೊಂದಿಸತೊಡಗಿದರು ೧೮೪೪ರಲ್ಲಿ ರಾಚ್‌ಡೇಲ ಪಾಯೋನಿಯರ್ಸ ಎಂದು ಕರೆಯಲಾದ ೨೮ ನೇಕಾರರು ಟೋಡ್ ಲೇನ್‌ದಲ್ಲಿ ಒಂದು ಕಿರಾಣಿ ಅಂಗಡಿಯನ್ನು ಪ್ರಾರಂಭಿಸಿದರು ಅವರಲ್ಲಿ ಕೆಲವರು ಸಮಾಜವಾದಿಗಳು ಮತ್ತೆ ಕೆಲವರು ಓವೆನ್ ಅನುಯಾಯಿಗಳು ಮತ್ತು ಚಾರ್ಟಿಸ್ಟರು ಇದ್ದರು ಆ ೨೮ ಜನರು ತಮ್ಮ ಉದ್ದೇಶಗಳನ್ನು ಕೆಳಗ ಕಂಡ ರೀತಿಯಲ್ಲಿ ಪ್ರಕಟಪಡಿಸಿದರು

" ಸಂಘದ ಸದಸ್ಯರ ಸಾಮಾಜಿಕ ಮತ್ತು ಕೌಟುಂಬಿಕ ಪರಿಸ್ಥಿತಿಯನ್ನು ಸುಧಾರಿಸುವದಕ್ಕಾಗಿಯೂ, ಹಣಕಾಸಿನ ಲಾಭ ಪಡೆಯುವದಕ್ಕಾಗಿಯೂ ಈ ಸಂಘವು ಹುಟ್ಟಿಕೊಂಡಿದೆ ಕೆಳಗಿನ ಚಟುವಟಿಕಗಳನ್ನು ಕೈಕೊಳ್ಳುವದರ ಸಲುವಾಗಿ ಪ್ರತಿಒಬ್ಬನಿಂದ ಒಂದು ಪೌಂಡು ಹಣವನ್ನು ಶೇರ ಎಂದು ಕೂಡಿಸಲಾಗುವದು ಈ ಚಟುವಟಿಕೆಗಳು ಕೆಳಗಿನಂತಿವೆ.—

(೧) ಸದಸ್ಯರಿಗೆ ಬೇಕಾಗುವ ಸಾಮಾನುಗಳ, ಬಟ್ಟೆ ಬರೆಗಳ ಮಾರಾಟಕ್ಕಾಗಿ ಒಂದು ಸ್ಟೋರನ್ನು ಸ್ಥಾಪಿಸುವದು

(೨) ಸದಸ್ಯರು ಒಬ್ಬರಿಗೊಬ್ಬರ ಸಹಾಯದಿಂದ ತಮ್ಮ ಸಾಮಾಜಿಕ ಮತ್ತು ಕೌಟುಂಬಿಕ ಪರಿಸ್ಥಿತಿಗಳನ್ನು ಸುಧಾರಿಸಿಕೊಳ್ಳಲಿಚ್ಛಿಸಿದರೆ ಬೇರೆ ಬೇರೆ ಕಡೆಗಳಲ್ಲಿ ವಾಸಿಸುವದಕ್ಕಾಗಿ ಮನೆಗಳನ್ನು ಕಟ್ಟಬಹುದು, ಕೊಳ್ಳಬಹುದು ಅಥವಾ ಮನೆಯ ವ್ಯವಸ್ಥೆಯನ್ನು ಮಾಡಿಕೊಳ್ಳಬಹುದು

(೩) ವೇತನವು ಕಡಿಮೆಯಾದವರಿಗೆ ಮತ್ತು ನಿರುದ್ಯೋಗಿಗಳಾದವರಿಗೆ ಉದ್ಯೋಗಗಳನ್ನು ಕಲ್ಪಿಸಿಕೊಡುವದಕ್ಕಾಗಿ ಸಂಘವು ನಿರ್ಧರಿಸಿದಂತೆ ನರಕುಗಳ ಉತ್ಪಾದನೆಯನ್ನು ಪ್ರಾರಂಭಿಸಬೇಕು

(೪) ಈ ಸಂಘದ ಸದಸ್ಯರ ಭಾವೀ ಜೀವನದ ಭದ್ರತೆ, ಸುರಕ್ಷಿತತೆಗಳ ಸಲುವಾಗಿ ನಿರುದ್ಯೋಗಿಗಳಾದ ಅಥವಾ ದುಡಿತಕ್ಕೆ ತಕ್ಕ ಪ್ರತಿಫಲ ಸಿಗದಿರುವ ಸದಸ್ಯರ ಸಲುವಾಗಿ ಈ ಸಂಘವು ಜಮೀನುಗಳನ್ನು ಕೊಂಡು ಅಥವಾ ಬಾಡಿಗೆಯಿಂದ ಹಿಡಿದು, ಸಾಗುವಳಿ ಮಾಡಲಿಕ್ಕೆ ಕೊಡುವ ಏರ್ಪಾಡು ಮಾಡುವದು

(೫) ಸಾಧ್ಯವಾದಷ್ಟು ಶೀಘ್ರದಲ್ಲಿ ಈ ಸಂಘವು ಉತ್ಪಾದನೆ, ಶಿಕ್ಷಣ, ವಿತರಣೆ, ಆಡಳಿತೆ ಅಂದರೆ ಈ ಎಲ್ಲ ಉದ್ದೇಶಗಳನ್ನೊಳಗೊಂಡ ಸ್ವಾವಲಂಬಿ ಸಮಾಜವನ್ನು ರಚಿಸಬೇಕು ಅಥವಾ ಈ ಧ್ಯೇಯದ ಇತರ ಸಂಘಗಳಿಗೆ ತನ್ನ ಸಹಾಯ ಸಹಕಾರವನ್ನು ನೀಡಬೇಕು.

(೬) ಸಂಘದ ಪ್ರಗತಿಯ ದೃಷ್ಟಿಯಿಂದ ಅದರ ಸ್ವಂತ ಕಟ್ಟಡದಲ್ಲಿ ಒಂದು ಹಾಟೆಲ್‌ನ್ನು ಸಾಧ್ಯವಾದಷ್ಟು ತೀವ್ರ ಪ್ರಾರಂಭಿಸಬೇಕು ”

ಮೇಲ್ಕಂಡ ಈ ಎಲ್ಲ ಉದ್ದೇಶಗಳು ಸಾಮಾನ್ಯವಾಗಿ ಓವೆನ್ ತತ್ವ ಮತ್ತು ಆ ಮೊದಲಿನ ಸಹಕಾರಿ ಆಂದೋಲನದ ಅನುಭವದ ಮೇರೆಗೆ ಸಿದ್ಧವಾಗಿವೆ

ನಿತ್ಯ ಪ್ರಪಂಚಕ್ಕೆ ಅಗತ್ಯವಿರುವ ವಸ್ತುಗಳನ್ನು ಪೂರೈಸುವ ಉಗ್ರಾಣಗಳನ್ನೂ ಮತ್ತು ಔದ್ಯೋಗಿಕ ಪ್ರಜಾಸತ್ತೆಯನ್ನು ರೂಪಿಸುವ ಉತ್ಪಾದಕ ಸಂಘಗಳನ್ನೂ ಸ್ಥಾಪಿಸುವ ಗುರಿಯನ್ನು ಈ ಮುಖಂಡರು ಇಟ್ಟುಕೊಂಡಿದ್ದರೂ, ಬಳಿಕಗಾರರ ಚಳುವಳಿಯನ್ನು ಕಟ್ಟುವಲ್ಲಿ ಇವರು ಯಶಸ್ವಿಗಳಾದರು ೧೮೫೦ ರಲ್ಲಿ ಸಹಕಾರಿ ಸಹಭಾಗೀದಾರಿಕೆಯ ಉತ್ಪಾದಕರ ಸಂಘಗಳನ್ನು ಸ್ಥಾಪಿಸಲು ಪ್ರಯತ್ನಗಳು ನಡೆದವು

ಕಿರಾಣಿ ಅಂಗಡಿಯು ಸ್ಥಾಪಿತವಾದ ತತ್ವಗಳಲ್ಲಿ ಕೆಳಗಿನವು ಮುಖ್ಯವು —

(೧) ಮುಕ್ತ ಸದಸ್ಯತ್ವ

(೨) ಒಬ್ಬ ಸದಸ್ಯನಿಗೆ ಒಂದೇ ಮತ

(೩) ಭಾಂಡವಲು ಮತ್ತು ಬಡ್ಡಿಗಳ ಪರಿಮಿತಿ
(೪) ಪೇಟೆ ಧಾರಣೆಯಂತೆ ನಗದು ವ್ಯವಹಾರ
(೫) ಪ್ರಜಾಪ್ರಭುತ್ವ ನಿಯಂತ್ರಣ.
(೬) ಸದಸ್ಯರ ವ್ಯವಹಾರದ ಪ್ರಮಾಣದಲ್ಲಿ ಲಾಭ ಹಂಚುವದು
(೭) ಶಿಕ್ಷಣ ಪ್ರಸಾರ
(೮) ಸ್ವಯಂ ಸಂಘಟನೆ
(೯) ರಾಜಕೀಯ ಮತ್ತು ಧಾರ್ಮಿಕ ತಾಟಸ್ಥ್ಯ

ಸಾಮಾನ್ಯವಾಗಿ ಈ ತತ್ವಗಳ ಮೇಲೆ ರಾಚ್‍ಡೇಲ ಸಂಘವು ಪ್ರಾರಂಭವಾಯಿತು ಈ ತತ್ವಗಳ ಮೇಲೆಯೇ ಇಂಗ್ಲಂಡದ ಇಂದಿನ ಗ್ರಾಹಕರ ಆಂದೋಲನವು ಬೆಳೆದು ಪ್ರಗತಿಹೊಂದಿದೆ ಇಂದಿಗೂ ಈ ತತ್ವಗಳಲ್ಲಿ ಎಷ್ಟೋ ತತ್ವಗಳು ಬದಲಾವಣೆಯಾಗದೇ ಉಳಿದಿವೆ ಇಂಗ್ಲಂಡದ ಸಹಕಾರಿ ಆಂದೋಲನವು ಬೇರೆ ಬೇರೆ ವಿಭಾಗಗಳನ್ನು ಒಳಗೊಂಡಿದ್ದರೂ ಅದು ಮೂಲತಃ ಗ್ರಾಹಕರ ಆಂದೋಲನವಾಗಿದ್ದು ಸದಸ್ಯರ ಜೀವನದ ನಿತ್ಯಾವಶ್ಯಕ ಸರಕುಗಳನ್ನು ಕೊಳ್ಳುವ ಮತ್ತು ಪೂರೈಸುವ ಕಾರ್ಯವನ್ನು ಮಾಡುತ್ತದ ಈ ಹಿಂದೆ ಹೇಳಿದಂತೆ ಮಿಡ್‍ಲಂಡದಲ್ಲಿ ಮುಖ್ಯವಾಗಿ ಸ್ಥಾಪಿತವಾದ ಉತ್ಪಾದಕ ಸಂಘಗಳ ಚಳವಳಿಯು ಗ್ರಾಹಕರ ಆಂದೋಲನದ ಮುಂದೆ ಕಳೆಗುಂದಿ ವಿಕಾಸಗೊಳ್ಳಲಿಲ್ಲ. ಅಲ್ಲಿ ಈಗ ೪೮ ಉತ್ಪಾದಕರ ಸಂಘಗಳಿದ್ದು ಅವು ಉತ್ತಮ ರೀತಿಯಲ್ಲಿ ಕಾರ್ಯಸಾಗಿಸಿವೆ

ಹೀಗೆ ಇಂಗ್ಲಂಡಿನಲ್ಲಿ ೧೯ನೆಯ ಶತಮಾನದ ಮಧ್ಯದಲ್ಲಿ ಸಹಕಾರಿ ಆಂದೋಲನವು ಔದ್ಯೋಗಿಕ ಕೇಂದ್ರಗಳಲ್ಲಿ ಔದ್ಯೋಗಿಕ ಸಹಕಾರದಿಂದ ಪ್ರಾರಂಭವಾಯಿತು ಫ್ರಾನ್ಸದ ಕ್ರಿಶ್ಚಿಯನ್ ಸಮಾಜವಾದಿಗಳ ಮುಖಾಂತರ ಪ್ರಚಾರಗೊಳಿಸಲ್ಪಟ್ಟ, ವಿಶೇಷವಾಗಿ ಉತ್ಪಾದಕ ಸಹಕಾರಿ ಸಂಘಗಳ ರೂಪದಲ್ಲಿರುವ ಇದು ಫ್ರಾನ್ಸದ ಸಮಾಜವಾದಿಗಳ ವಿಚಾರಕ್ಕೆ ಋಣಿಯಾದುದು ಅತ್ಯಲ್ಪ ಆದರ ಇಂಗ್ಲಂಡಿನ ಈ ಸಹಕಾರವು ತನ್ನದೇ ಆದ ಒಂದು ವೈಶಿಷ್ಟ್ಯದಿಂದ ಉಗಮ ಹೊಂದಿತು ಈ ಆಂದೋಲನವು ಪ್ರಾರಂಭಕ್ಕೆ ಗ್ರಾಹಕರ ಆಂದೋಲನದ ಸ್ವರೂಪವನ್ನು ತಾಳಿತು. ಆನಂತರ ಉತ್ಪಾದಕರ ಸಂಘಗಳನ್ನು ಪ್ರಾರಂಭಿಸಲಾಯಿತು. ಇದು ಸರಕಾರದ ಸಹಾಯವಿಲ್ಲದೆ ಸ್ವಯಂ ಸ್ಫೂರ್ತಿಯಿಂದ ಬೆಳೆಯಿತು ಇದು ಶೀಘ್ರವಾಗಿ ಬೆಳೆಯತೊಡಗಿ ದೊಡ್ಡ ಜನತಾ ಆಂದೋಲನವಾಗಿ ಪರಿಣಮಿಸಿತು ಪ್ರಪಂಚದ ಇನ್ನಿತರ ರಾಷ್ಟ್ರಗಳು ಇದರ ಅನುಕರಣ ಮಾಡಿದವು

(ಬ) **ಒಕ್ಕಲುತನದ ಸಹಕಾರ** —ಯುರೋಪದ ಒಕ್ಕಲುತನದ ದೇಶಗಳಲ್ಲಿ ಒಕ್ಕಲುತನದ ರಂಗದಲ್ಲಿಯೂ ಔದ್ಯೋಗಿಕ ಕ್ರಾಂತಿಯಂತಹ ಕ್ರಾಂತಿಯು ತಲೆದೋರಿತು ಸಾಗುವಳಿ, ಮಾರಾಟ ಮತ್ತು ಕೊಳ್ಳುವ ಪದ್ಧತಿಗಳಲ್ಲಿ ಬದಲಾವಣೆಗಳು ಕಂಡು ಬರತೊಡಗಿದವು ಅಮೇರಿಕೆ, ಕಾನಡಾ ಮೊದಲಾದ ವಿದೇಶಗಳ

ಸ್ಪರ್ಧೆಯೂ ಹೆಚ್ಚಾಗಿ ಇದ್ದುದರಿಂದ ಇಲ್ಲಿಯ ರೈತರು ಕಡಿಮೆ ಖರ್ಚಿನಿಂದ
ಉತ್ಪಾದಿಸಿ ಸ್ಪರ್ಧೆಯ ಬೆಲೆಗೆ ಮಾರುವದು ಅನಿವಾರ್ಯವಾಯಿತು. ಅದೇ
ರೀತಿಯಲ್ಲಿ ಅವರು ವಿವಿಧ ಬೆಳೆಗಳನ್ನೂ ಬೆಳೆದುಕೊಳ್ಳಬೇಕಾಯಿತು. ಔದ್ಯೋ
ಗಿಕ ಕ್ರಾಂತಿಯು ಸಾಗಾಟ ಸೌಕರ್ಯಗಳನ್ನು ಹೆಚ್ಚಿಸಿತು, ದೊಡ್ಡ ದೊಡ್ಡ
ಔದ್ಯೋಗಿಕ ನಗರಗಳನ್ನು ಸ್ಥಾಪಿಸಿತು. ಆದರೆ ಈ ಸ್ಥಳಗಳಲ್ಲಿಯ ಜನರಿಗೆ ಅಗತ್ಯ
ವಿರುವ ಬೆಣ್ಣೆ, ಹಾಲು, ಗಿಣ್ಣು, ತತ್ತಿ, ಮಾಂಸ, ಹಣ್ಣು ಮೊದಲಾದ ಒಕ್ಕಲುತನದ
ಸರಕುಗಳ ಬೇಡಿಕೆ ಹೆಚ್ಚಾಗಿ, ಈ ಸರಕುಗಳನ್ನು ಮಾರುವ ಹಳೆಯ ಪದ್ಧತಿ
ಗಳೆಲ್ಲ ಹೋಗಿ ಹೊಸ ವಿಧಾನಗಳು ಬರತೊಡಗಿದವು. ಮಧ್ಯಸ್ಥರು ರೈತರ
ಶೋಷಣೆಯನ್ನು ಹೆಚ್ಚು ಮಾಡತೊಡಗಿದರು. ಹೆಚ್ಚು ಹೆಚ್ಚು ಬೆಳೆದುಕೊಳ್ಳ
ಬೇಕೆಂಬ ಉದ್ದೇಶಕ್ಕಾಗಿ ದೊಡ್ಡ ಪ್ರಮಾಣದಲ್ಲಿ ಒಕ್ಕಲುತನವನ್ನು ಸಾಗಿಸಲಿಕ್ಕೆ
ರೈತನಿಗೆ ಹೆಚ್ಚು ಹೆಚ್ಚು ಹಣ ಬೇಕಾಗತೊಡಗಿತು. ಒಕ್ಕಲುತನದ ಪದ್ಧತಿಯಲ್ಲಿ
ಹೊಸ ಹೊಸ ಯಂತ್ರಗಳ ಶೋಧವಾದಂತೆ ರೈತರಿಗೆ ಹೊಸ ಹೊಸ ಸಮಸ್ಯೆಗಳು
ತಲೆದೋರತೊಡಗಿದವು. ಕೃತಕ ಫರ್ಟಿಲಾಯಿಝರುಗಳ (ಸುಪೀಕತೆಯ ಸಾಧನೆ
ಗಳು) ಉಪಯೋಗವು ದೊಡ್ಡ ಪ್ರಮಾಣದಲ್ಲಿ ಆಗತೊಡಗಿತು. ಈ ಮೇರೆಗೆ
ಪರಿವರ್ತನೆಹೊಂದಿದ ಪರಿಸ್ಥಿತಿಯಲ್ಲಿ ಯುರೋಪ ದೇಶಗಳ ಒಕ್ಕಲಿಗರು ತಮ್ಮ
ಎಲ್ಲ ವ್ಯವಹಾರಗಳಲ್ಲಿ ಅಡಿಗಡಿಗೂ ಸುಲಿಯಲ್ಪಡತೊಡಗಿದರು. ಇದಕ್ಕೆ ಮುಕುಟ
ವಾಗಿ ೧೮೮೦ರ ಒಕ್ಕಲುತನದ ಮುಗ್ಗಟ್ಟು ಪರಿಸ್ಥಿತಿಯನ್ನು ಇನ್ನೂ ಭೀಕರ
ಗೊಳಿಸಿತು. ರೈತರು ಹೆಚ್ಚುಹೆಚ್ಚು ಸಂಕಷ್ಟಗಳನ್ನು ಎದುರಿಸಬೇಕಾಯಿತು.

ಹೀಗಾಗಿ ಡೆನ್ಮಾರ್ಕ, ಹಾಲಂಡ, ಸ್ವೀಡನ್, ಜರ್ಮನಿ ಮೊದಲಾದ
ಸ್ಕ್ಯಾಂಡಿನೇವ್ಹಿಯನ್ ರಾಷ್ಟ್ರಗಳ ಮತ್ತು ತಳನಾಡುಗಳ ರೈತರು ಆರ್ಥಿಕ
ಮುಗ್ಗಟ್ಟನ್ನು ಎದುರಿಸಬೇಕಾಯಿತು. ನಡುವಿನ ವ್ಯಾಪಾರಿಗಳು ಅವರ ಶೋಷಣೆ
ಯನ್ನು ಪ್ರಾರಂಭಿಸಿದರು. ತಮ್ಮ ಉತ್ಪಾದನೆಗಳನ್ನು ಮಾರುವ, ತಮ್ಮ ಆವಶ್ಯಕ
ಸರಕುಗಳನ್ನು ಕೊಳ್ಳುವ ವ್ಯವಹಾರವನ್ನು ರೈತರು ಸ್ವಾರ್ಥಿಗಳಾದ ನಡುವಿನ
ಜನರ ಮುಖಾಂತರ ಸಾಗಿಸಬೇಕಾಯಿತು. ಅವರಲ್ಲಿ ಯಾವದೇ ತರಹದ
ಸಂಘಟನೆ ಇರಲಿಲ್ಲ. ಪುರಾತನ ಸಾಗುವಳಿ ಪದ್ಧತಿಯೇ ಇನ್ನೂ ಜಾರಿಯಲ್ಲಿದ್ದಿತು.
ಹೀಗೆ ರೈತರು ಒಬ್ಬೊಂಟಿಗರಾದುದರಿಂದ ಸುತ್ತುಮುತ್ತಲಿನ ಮಧ್ಯಸ್ಥರಿಂದಾಗುವ
ಶೋಷಣೆಯನ್ನು ತಡೆಗಟ್ಟುವದು ಅವರಿಗೆ ಸಾಧ್ಯವಾಗಲಿಲ್ಲ. ಈ ಎಲ್ಲ ಪರಿಸ್ಥಿತಿ
ಗಳಲ್ಲಿ ಬಡತನವೂ ಆವರಿಸಿತು. ಈ ಸಂಕಷ್ಟಗಳಿಂದ ಹೇಗೆ ಪಾರಾಗ
ಬೇಕು ಎಂಬುದೇ ಅವರಿಗೆ ಒಂದು ಸಮಸ್ಯೆಯಾಯಿತು. ಈ ಪರಿಸ್ಥಿತಿಯಲ್ಲಿ
ಅವರು ಸಹಕಾರದ ಪದ್ಧತಿಯಿಂದ ತಮ್ಮ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆ
ಗಳನ್ನು ಯಶಸ್ವಿ ರೀತಿಯಲ್ಲಿ ಬಗೆ ಹರಿಸಿಕೊಂಡರು. ಇಂಗ್ಲಂಡಿನಲ್ಲಿಯ
ರಾಚ್‌ಡೇಲ್ ನೇಕಾರರ ಕಿರಾಣಿ ಅಂಗಡಿಗಳ ಯಶಸ್ಸು ಸಹಕಾರಿ ಸಂಘಗಳನ್ನು
ಸ್ಥಾಪಿಸಿಕೊಳ್ಳಲು ಅವರಿಗೆ ಹುಮ್ಮಸ್ಸನ್ನು ನೀಡಿತು. ಮುಂದಾಳುಗಳು, ಸಾಮಾ
ಜಿಕ ಕಾರ್ಯಕರ್ತರು, ವಿಶೇಷತಃ ಪಾದ್ರಿಗಳು ಮತ್ತು ಶಿಕ್ಷಕರು ರೈತರಿಗೆ ತಮ್ಮ
ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಲಿಕ್ಕೆ ಸಹಕಾರಿ ಸಂಘಗಳನ್ನು ಸ್ಥಾಪಿಸು
ವಲ್ಲಿ ಬಹು ವಿಧದಲ್ಲಿ ನೆರವಾದರು. ಹೀಗೆ ೧೯ನೆಯ ಶತಮಾನದ ಉತ್ತರಾರ್ಧ

ದಲ್ಲಿ ಜರ್ಮನಿ, ಡೆನ್ಮಾರ್ಕ್, ಹಾಲಂಡ ಮತ್ತಿತರ ಯುರೋಪು ರಾಷ್ಟ್ರಗಳಲ್ಲಿ ಒಕ್ಕಲುತನದ ಸಹಕಾರಿ ಆಂದೋಲನವು ಪ್ರಾರಂಭವಾಯಿತು. ಋಣಮುಕ್ತರಾಗಲು ಸಹಕಾರಿ ಉಳಿತಾಯದ ಮತ್ತು ಸಾಲದ ಬ್ಯಾಂಕುಗಳನ್ನೂ, ಒಕ್ಕಲುತನದ ಮತ್ತು ಇತರ ನಿತ್ಯಾವಶ್ಯಕ ಸರಕುಗಳನ್ನು ಅಗ್ಗದರದಲ್ಲಿ ಕೊಂಡುಕೊಳ್ಳಲು ಮಾಲು ಖರೀದಿಯ ಸಂಘಗಳನ್ನೂ ಮತ್ತು ತಮ್ಮ ಕಚ್ಚಾಮಾಲಿನಿಂದ ಪಕ್ಕಾ ಮಾಲನ್ನು ತಯಾರಿಸಿ ಮಾರಾಟ ಮಾಡುವ ಸಂಘಗಳನ್ನೂ ಸ್ಥಾಪಿಸಲಾಯಿತು. ಇಂಗ್ಲಂಡಿನಲ್ಲಿ ಒಕ್ಕಲುತನದ ಸಹಕಾರವು ಇತರ ಯುರೋಪು ರಾಷ್ಟ್ರಗಳಿಗಿಂತ ಸ್ವಲ್ಪ ತಡವಾಗಿಯೇ ಪ್ರಾರಂಭವಾಯಿತು. ಮತ್ತು ಶೀಘ್ರ ಪ್ರಸಾರ ಹೊಂದಲಿಲ್ಲ. ಉತ್ತಮ ಬೇಸಾಯ, ಉತ್ತಮ ವ್ಯವಹಾರ, ಉತ್ತಮ ಜೀವನಗಳ ಉದ್ದೇಶಗಳನ್ನೊಳಗೊಂಡ ಡೆನ್ಮಾರ್ಕ ಮತ್ತು ಜರ್ಮನಿಯ ರೈಫೀಜನ ಮಾದರಿಯ ಬ್ಯಾಂಕುಗಳನ್ನು, ಹೈನದ ಸಂಘಗಳನ್ನು ಸ್ಥಾಪಿಸಿ ಸರ್ ಹೊರೇಸ್ ಪ್ಲಂಕೆಟರವರು ಅಯರ್ಲಂಡದಲ್ಲಿ ಒಕ್ಕಲುತನದ ಸಹಕಾರವನ್ನು ಪ್ರಾರಂಭಿಸಿದರು.

ಬೇರೆ ಬೇರ ದೇಶಗಳಲ್ಲಿ ಬೆಳೆದ ಒಕ್ಕಲುತನದ ಸಹಕಾರದ ಪ್ರಮುಖ ಸ್ವರೂಪಗಳ ಮೂಲವನ್ನು ನಾವಿಲ್ಲಿ ಚರ್ಚಿಸುವಾ —

೧. **ಜರ್ಮನಿ :—** ಪತ್ತಿನ ಬ್ಯಾಂಕಿನ ಸ್ವರೂಪದಲ್ಲಿ ಮೊಟ್ಟಮೊದಲಿಗೆ ಒಕ್ಕಲುತನದ ಸಹಕಾರವನ್ನು ಪ್ರಾರಂಭಿಸಿದ ದೇಶವೆಂದರೆ ಜರ್ಮನಿ. ೧೯ನೆಯ ಶತಮಾನದ ಮಧ್ಯದ ಸುಮಾರಿಗೆ ಅಲ್ಲಿಯ ರೈತರ ಪರಿಸ್ಥಿತಿಯು ಚಿಂತಾಜನಕವಾಗಿದ್ದಿತು. ರೈತರು ತೀರ ಬಡವರಾಗಿದ್ದರಲ್ಲದೆ ಸಾಲದಿಂದ ಬಂಧಿತರಾಗಿದ್ದರು. ಅವರ ಮಾಲ್ಕಿಯ ಭೂಮಿಯ ಪ್ರಮಾಣವು ಸಣ್ಣದಿದ್ದು ಸರಿಯಾಗಿ ಸಾಗುವಳಿಯಾಗುತ್ತಿದ್ದಿಲ್ಲ. ರೈತರ ಈ ಕರುಣಾಜನಕ ಪರಿಸ್ಥಿತಿಯು **ರೈಫೀಜನ್‌ನ** (೧೮೧೮–೮೮) ಲಕ್ಷವನ್ನು ಸೆಳೆಯಿತು. ಅವನು ಅವರ ಸಂಕಷ್ಟಗಳ ನಿವಾರಣೋಪಾಯಗಳನ್ನು ಶೋಧಿಸತೊಡಗಿದನು. ೧೮೪೮ರಲ್ಲಿ ಬಡವರಿಗೆ ಅಗ್ಗದರದಿಂದ ಬ್ರೆಡ್ ಮತ್ತು ಆಲೂಗಡ್ಡೆಗಳನ್ನು ಹಂಚುವ ಉದ್ದೇಶದಿಂದ ರಾಚ್‌ಡೇಲ್ ಮಾದರಿಯ ಒಂದು ಉಗ್ರಾಣವನ್ನು ಪ್ರಾರಂಭಿಸಿದನು. ಆದರೆ ಇಲ್ಲಿಯ ರೈತರ ಬೇಡಿಕೆಗಳು ಇಂಗ್ಲಂಡದ ಔದ್ಯೋಗಿಕ ಕಾರ್ಯಕರ್ತರ ಬೇಡಿಕೆಗಳಿಗಿಂತ ಭಿನ್ನವಾಗಿದ್ದುದರಿಂದ ಇಂಥ ಉಗ್ರಾಣಗಳಿಂದ ಹೆಚ್ಚು ಉಪಯೋಗವಿಲ್ಲವೆಂದು ಇವನ ಮನವರಿಕೆಯಾಯಿತು. ರೈತರು ತಾವಾಗಿಯೇ ಸ್ವಸುಧಾರಣೆಗಾಗಿ ಒತ್ತಾಯಪಡಿಸಿದರೆನೇ ಅವರ ಸುಧಾರಣೆಯು ಸಾಧ್ಯವೆಂದು ಅವನಿಗೆ ಕಂಡು ಬಂದಿತು. ಆದುದರಿಂದ ೧೮೬೨ರಲ್ಲಿ ಸಹಕಾರಿ ಗ್ರಾಮ ಬ್ಯಾಂಕ್ ಎಂಬ ಬೇರ ಪ್ರಕಾರದ ಸಹಕಾರಿ ಸಂಸ್ಥೆಯನ್ನು ಸ್ಥಾಪಿಸಿದನು. ಅದರ ಕಾರ್ಯಕ್ಷೇತ್ರವು ಆ ಗ್ರಾಮದ ಮಟ್ಟಿಗೆನೇ ಮರ್ಯಾದಿತವಾಯಿತು. ಮತ್ತು ಅದರ ಸದಸ್ಯರು ಸಾಮೂಹಿಕವಾಗಿಯೂ ಪ್ರತ್ಯೇಕವಾಗಿಯೂ ಬ್ಯಾಂಕಿನ ಹೊಣೆಗಾರರಾದರು. ಸದಸ್ಯರನ್ನು ಬಹು ಜಾಗರೂಕತೆಯಿಂದ ಆರಿಸಿಕೊಳ್ಳಲಾಗುತ್ತಿತ್ತು. ಉತ್ಪಾದನೆಯ ಉದ್ದೇಶಕ್ಕಾಗಿ ಮಾತ್ರ ಸಾಲವನ್ನು ಕೊಡಲಾಗುತ್ತಿತ್ತು. ಬ್ಯಾಂಕಿನಿಂದ ಬಂದ ಲಾಭವೆಲ್ಲವನ್ನೂ ಕಾದಿಟ್ಟ

ನಿಧಿಗೆ ವರ್ಗಾಯಿಸಲಾಗುತ್ತಿತ್ತು ಕೋಶಾಧಿಕಾರಿಯನ್ನುಳಿದು ಇತರ ಅಧಿಕಾರಿಗಳು ತಮ್ಮ ಸೇವೆಯನ್ನು ಉಚಿತವಾಗಿ ಸಲ್ಲಿಸುತ್ತಿದ್ದರು ಪ್ರತಿ ಸದಸ್ಯನು ಸಣ್ಣ ಪ್ರಮಾಣದಲ್ಲಿ ಶೇರುಗಳನ್ನು ಧಾರಣ ಮಾಡುತ್ತಲಿದ್ದನು ಈ ಸಂಘಗಳು ಕೆಳಗಿನ ತತ್ವಗಳನ್ನು ಅನುಸರಿಸುತ್ತಿದ್ದವು

(೧) ಪ್ರಜಾಪ್ರಭುತ್ವ ನಿಯಂತ್ರಣ

(೨) ಒಬ್ಬ ಸದಸ್ಯನಿಗೆ ಒಂದೇ ಮತ

(೩) ರಾಚ್‌ಡೇಲ ಮುಖಂಡರಂತಹ ಸ್ವಯಂ ಸಂಘಟಿತ ಸಂಸ್ಥೆ

ಆ ತರುವಾಯ ಪತ್ತಿನ ಪದ್ಧತಿಯು ಸರ್ವ ರೀತಿಯಲ್ಲಿಯೂ ಸುಗಮವಾಗಬೇಕೆಂದು ಮಧ್ಯವರ್ತಿ ಸಂಸ್ಥೆಗಳನ್ನು ಸ್ಥಾಪಿಸಲಾಯಿತು ಪ್ರಾಥಮಿಕ ಪತ್ತಿನ ಸಂಘಗಳೆಲ್ಲವೂ ಈ ಸಂಸ್ಥೆಗೆ ಸಮಾವೇಶವಾದವು ಆದರೆ ಈ ಸಂಘಗಳು ಡೆನ್ಮಾರ್ಕ, ಹಾಲಂಡ, ಸ್ವೀಡನ್‌ಗಳಲ್ಲಿಯ ಸಂಸ್ಥೆಗಳಂತೆ ಇರದೆ ವಿವಿಧೋದ್ದೇಶ ಸಂಘಗಳಾಗಿದ್ದವು ಅಂದರೆ ಸರ್ವಸಾಮಾನ್ಯ ಸಂಘಗಳಾಗಿದ್ದು ಸದಸ್ಯರ ಎಲ್ಲ ಬೇಡಿಕೆಗಳನ್ನೂ ಪೂರೈಸುತ್ತಲಿದ್ದವು ರೈಫೀಜನ್‌ನ್ನಿಂದ ಪ್ರಾರಂಭಿಸಲಾದ ಈ ಆಂದೋಲನದ ಪ್ರಗತಿಯು ಪ್ರಾರಂಭಕ್ಕೆ ಮುಂದವಾಗಿ ಸಾಗಿದ್ದರೂ ಅನಂತರ ಶೀಘ್ರವಾಗಿ ಬೆಳೆಯತೊಡಗಿತು ೧೮೮೧ರ ಸುಮಾರಿಗೆ ಜರ್ಮನಿಯಲ್ಲಿ ಇಂಥ ಸಂಘಗಳ ಸಂಖ್ಯ ೮೮೫ ಇದ್ದಿತು ಈ ಸಂಘಗಳ ಅಸ್ತಿತ್ವದಿಂದ ಗ್ರಾಮಾಂತರಗಳಲ್ಲಿ ಮಹತ್ತರ ಬದಲಾವಣೆಗಳು ಕಂಡುಬರತೊಡಗಿದವು ಅದೊಂದು ಕ್ರಾಂತಿ ಎಂದೇ ಭಾವಿಸಲಾಯಿತು ಹೀಗೆ ಇತರ ಐರೋಪ್ಯ ರಾಷ್ಟ್ರಗಳಲ್ಲಿ ರೈತರ ಸಾಲ ನಿವಾರಣೆಗಾಗಿ, ಕಡಿಮೆ ದರದಿಂದ ರೈತನಿಗೆ ಹಣ ಪೂರೈಸುವದಕ್ಕಾಗಿ ಇಂಥ ಅನೇಕ ಸಂಘಗಳನ್ನು ಸ್ಥಾಪಿಸಲಾಯಿತು ಪೌರ್ವಾತ್ಯ ರಾಷ್ಟ್ರಗಳಾದ ಭಾರತ, ಪಾಕಿಸ್ತಾನ, ಸಿಲೋನಗಳಲ್ಲ ಮಾತ್ರ ಒಕ್ಕಲುತನದ ಪತ್ತಿನ ಸಂಘಗಳನ್ನು ೨೦ನೆಯ ಶತಮಾನದ ಆದಿಯಲ್ಲಿ ಪ್ರಾರಂಭಿಸಲಾಯಿತು

**ಶೂಲ್ ಡಿಲಿಝ್ಶ್** ಎಂಬವರು ೧೮೫೦ರಲ್ಲಿ ಜರ್ಮನಿಯಲ್ಲಿ **ಶೇಅರ್** ಪದ್ಧತಿಯ ಮೇಲೆ ನಗರ ಬ್ಯಾಂಕುಗಳನ್ನು ಸ್ಥಾಪಿಸಿದರು ಈ ಬ್ಯಾಂಕುಗಳು ನಗರಗಳಲ್ಲಿಯ ಸಣ್ಣ ಸಣ್ಣ ವ್ಯಾಪಾರಿಗಳಿಗೆ, ಉದ್ದಿಮೆದಾರರಿಗೆ, ನೌಕರರಿಗ ಮತ್ತು ಮಧ್ಯಮ ವರ್ಗದವರಿಗೆ ಹಣಕಾಸಿನ ಸೌಕರ್ಯಗಳನ್ನು ಒದಗಿಸಿ ಕೊಡುತ್ತಲಿದ್ದವು ಈ ಬ್ಯಾಂಕುಗಳ ತತ್ವಗಳೆಂದರೆ —

(೧) ಬ್ಯಾಂಕುಗಳ ವಿಸ್ತೃತವಾದ ಕಾರ್ಯಕ್ಷೇತ್ರ

(೨) ಹೆಚ್ಚಿನ ಬೆಲೆಯ ಶೇರುಗಳು

(೩) ಸಣ್ಣ ಪ್ರಮಾಣದ ಲಾಭವು ಕಾಯ್ದಿಟ್ಟ ನಿಧಿಗೆ ಒಯ್ಯಲ್ಪಡುತ್ತಿದ್ದರೂ ಅದನ್ನು ಅವಿಭಾಜ್ಯ ನಿಧಿಯೆಂದು ಗಣಿಸಲಾಗುತ್ತಿರಲಿಲ್ಲ

(೪) ಅಲ್ಪಾವಧಿಯ ಸಾಲಪೂರೈಕೆ

(೫) ಪರಿಮಿತ ಹೊಣೆಗಾರಿಕೆ

ಭಾರತದಲ್ಲಿ ಅರ್ಬನ್ ಬ್ಯಾಂಕ ಮತ್ತು ಪತ್ತಿನ ಸಂಘಗಳನ್ನು ಜರ್ಮನಿಯ ಮಾದರಿಯ ಮೇಲೆ ರಚಿಸಲಾಗಿದೆ

೨ **ಹಾಲಂಡ** — ಈ ಮೊದಲೇ ಹೇಳಿರುವಂತೆ ೧೯ನೆಯ ಶತಮಾನದ ಮಧ್ಯದಲ್ಲಿ ರೈತರ ಪರಿಸ್ಥಿತಿಯು ತೀರ ನಿಕೃಷ್ಟವಾಗಿದ್ದಿತು ಹಾಲಂಡಿನಲ್ಲಿ ಒಕ್ಕಲಿಗರ ಸಂರಕ್ಷಣೆಗಾಗಿ ಸಹಕಾರ ಚಳವಳಿಯು ಆರಂಭವಾಯಿತು ಆರ್ಥಿಕ ಪರಿಸ್ಥಿತಿಯಲ್ಲಿ ಈ ಕ್ರಮವು ಅನಿವಾರ್ಯವೆಂದೇ ಉದಯವಾಯಿತು ಈ ಆಂದೋಲನವು ಇಲ್ಲಿ ಇಂಗ್ಲಂಡಿನಲ್ಲಿಯಂತೆ ಇರದೆ, ರೈತರಲ್ಲಿಯೇ ಉದಯವಾಗಿ ರೈತರ ಆಂದೋಲನವಾಗಿಯೇ ಉಳಿಯಿತು ಇಲ್ಲಿ ಮುಖ್ಯವಾಗಿ ಅದು ಒಕ್ಕಲು ತನದ ಉತ್ಪಾದಕರ ಆಂದೋಲನವಾಗಿ ಬೆಳೆಯಿತು ಪರಸ್ಪರ ವಿಮಾ ಸಂಸ್ಥೆಯ ರೂಪದಲ್ಲಿ ಈ ಆಂದೋಲನವು ಪ್ರಾರಂಭವಾಯಿತು ೧೮೮೭ರಲ್ಲಿ ಸುಪೀಕತೆಯ ಸಾಧನೆಗಳನ್ನು ಕೊಳ್ಳುವ ಒಂದು ಸಹಕಾರಿ ಸಂಘವನ್ನು ಸ್ಥಾಪಿಸಲಾಯಿತು ಹೈನದ ಸಂಘ ಕಾಯಿಪಲ್ಲೆ ಲಿಲಾವಿನ ಸಂಘ ಮತ್ತು ಪತ್ತಿನ ಸಂಘಗಳು ಅನುಕ್ರಮವಾಗಿ ೧೮೮೬, ೧೮೮೭ ಮತ್ತು ೧೮೯೬ರಲ್ಲಿ ಪ್ರಾರಂಭವಾದವು ಈ ಎಲ್ಲ ಪ್ರಾಥಮಿಕ ಸಂಘಗಳು ಸಾಮಾನ್ಯವಾಗಿ ಅನಿಯಮಿತ ಜವಾಬ್ದಾರಿ ಸಂಘ ಗಳಾಗಿವೆ ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ಸ್ವಯಂ ಸಂಘಟನೆ ತತ್ವಗಳನ್ನು ಈ ಸಂಘಗಳು ಅಕ್ಷರಶ ಪಾಲಿಸುತ್ತವೆ ಆದರೆ ಒಬ್ಬ ಸದಸ್ಯನಿಗೆ ಒಂದು ಮತ ಎಂಬ ತತ್ವವನ್ನು ಪೂರ್ತಿಯಾಗಿ ಅನುಸರಿಸಲಿಲ್ಲ ಹಾಲಂಡಿನಲ್ಲಿ ಲಿಲಾವಿನ ಸಂಘ, ಪರಸ್ಪರ ವಿಮಾ ಸಂಘ, ಖರೀದಿ ವಿಕ್ರಿ ಸಂಘ ಮತ್ತು ಹೈನದ ಸಂಘಗಳು ಚನ್ನಾಗಿ ಬೆಳೆದವು

೩ **ಡೆನ್ಮಾರ್ಕ** —ನೆಪೋಲಿಯನ್ನನ ಯುದ್ಧಗಳಲ್ಲಿ ಡೆನ್ಮಾರ್ಕವು ಸೋಲಿ ನಪ್ಪಿಟ್ಟನಂತರ ಅದು ಆರ್ಥಿಕ ಮುಗ್ಗಟ್ಟನ್ನು ಎದುರಿಸಬೇಕಾಯಿತು ಯುದ್ಧದ ಪರಿಣಾಮವಾಗಿ ಜರ್ಮನಿಗೆ ಯುದ್ಧ ಕರ ಕೊಡಬೇಕಾಗಿ ಬಂದುದರಿಂದ ಡೆನ್ಮಾರ್ಕದ ಪರಿಸ್ಥಿತಿಯು ಮತ್ತಿಷ್ಟು ಹದಗೆಟ್ಟಿತು ರೈತರ ಪರಿಸ್ಥಿತಿಯಂತೂ ತೀರ ಚಿಂತಾ ಜನಕವಾಯಿತು ಔದ್ಯೋಗಿಕ ಕ್ರಾಂತಿಯೂ ಕ್ರಮೇಣವಾಗಿ ಡೆನ್ಮಾರ್ಕದಲ್ಲಿ ಪಸರಿಸುತ್ತಲಿತ್ತು ಒಕ್ಕಲುತನದ ಕ್ರಾಂತಿ ಮತ್ತು ೧೮೮೦ರ ಒಕ್ಕಲುತನದ ಮುಗ್ಗಟ್ಟು ಇವುಗಳಿಂದ ಮಹಾ ಸಮಸ್ಯೆಗಳು ಇಲ್ಲಿಯೂ ಉದ್ಭೂತವಾದವು ಇತರ ದೇಶಗಳಲ್ಲಿಯಂತೆ ಸಹಕಾರಿ ಆಂದೋಲನವು ೧೯ನೆಯ ಶತಮಾನದ ಆದಿಯಲ್ಲಿ ಔದ್ಯೋಗಿಕ ಪರಿಸ್ಥಿತಿಯಲ್ಲಿಯೇ ಉತ್ಪನ್ನವಾಯಿತು ಕಳೆದ ಶತ ಮಾನದ ಆದಿಯಲ್ಲಿ ಬೆಣ್ಣೆ, ಗಿಣ್ಣ ತಯಾರಮಾಡುವ ಮತ್ತು ಒಕ್ಕಲುತನದ ಸರಕು ಗಳ ಮಾರಾಟ ಮಾಡುವ ಪದ್ಧತಿಗಳಲ್ಲಿ ಕಂಡುಬಂದ ಬದಲಾವಣೆಗಳೇ ಸಹಕಾರಿ ಸಂಘಗಳ ಸಂಸ್ಥಾಪನೆಗೆ ಕಾರಣವಾದವು ಲಾಭದಾಯಕ ರೀತಿಯಲ್ಲಿ ವಿದೇಶಗಳಿಗೆ ತಮ್ಮ ಸರಕುಗಳನ್ನು ಕಳಿಸುವದು ವೈಯಕ್ತಿಕವಾಗಿ ಸಾಧ್ಯವಿಲ್ಲ

ವೆಂದು ರೈತರು ಅರಿತುಕೊಂಡರು. ಅದೇ ಮೇರೆಗೆ ಅಮೇರಿಕಾ, ಕಾನಡಾ ದೇಶಗಳ ಸ್ಪರ್ಧೆಯನ್ನು ಎದುರಿಸಬೇಕಾದರೆ ಸಹಕಾರಿ ಸಂಘಟನೆಯು ಅತ್ಯವಶ್ಯವೆಂದೂ ಹೆಚ್ಚು ಹೆಚ್ಚು ಯಂತ್ರ ಸಾಮುಗ್ರಿಗಳನ್ನು ಉಪಯೋಗಿಸಬೇಕೆಂದೂ ಅವರು ಮನಗಂಡರು ಮೊದಲನೆಯ ಹೈನದ ಸಂಘವು ೧೮೮೨ರಲ್ಲಿ ಝುಟ್‌ಲಂಡಿನಲ್ಲಿ ಸ್ಥಾಪಿಸಲ್ಪಟ್ಟಿತು ಆ ತರುವಾಯ ಅಸಂಖ್ಯಾತ ಹೈನದ ಸಂಘಗಳು ಸ್ಥಾಪಿಸಲ್ಪಟ್ಟವು ೧೮೮೭ರಲ್ಲಿ ಹಂದಿ ಮಾಂಸದ ಸಂಘವು, ೧೮೯೫ರಲ್ಲಿ ತತ್ತಿ ನಿರ್ಯಾತ ಸಂಘಗಳೂ ಸ್ಥಾಪಿಸಲ್ಪಟ್ಟವು ಅಂದರೆ ೧೯೦೦ರ ಸುಮಾರಿಗೆ ಹೈನದ ಸಂಘಗಳು, ಮಾಂಸ, ತತ್ತಿ, ದನಕರುಗಳ ನಿರ್ಯಾತದ ಸಂಘಗಳು, ಬೀಜದ ಸಂಘಗಳು, ಮಾರಾಟ ಮಾಡುವ ಸಂಘಗಳು, ರೂಪಾಂತರಿಸುವ ಸಂಘಗಳು, ಆಹಾರ ಸತ್ವವನ್ನು ಪೂರೈಸುವ ಸಂಘಗಳು ಈ ಮೊದಲಾದವುಗಳು ಬೆಳೆದವು ವಿಶೇಷವಾಗಿ ಹೈನದ ಮಾರಾಟದ ಸಂಘಗಳ ರೂಪದಲ್ಲಿ ಇಲ್ಲಿಯ ಒಕ್ಕಲುತನದ ಸಹಕಾರ ಆಂದೋಲನವು ಬೆಳೆಯಿತು ಬಹುಸಂಖ್ಯಾಕ ಪ್ರಾಥಮಿಕ ಸಂಘಗಳು ಮೂಲತಃ ಅನಿಯಮಿತ ಜವಾಬ್ದಾರಿಯ ಸಂಘಗಳಾಗಿವೆ ಮತ್ತು ಪ್ರಜಾಪ್ರಭುತ್ವ ಆಢಳಿತಗೊಳಪಟ್ಟಿವೆ ಈ ಎಲ್ಲ ಸಂಘಗಳು ಸ್ವಯಂ ಸಂಘಟನೆಗಳಾಗಿವೆ ಡೆನ್ಮಾರ್ಕ ಮತ್ತು ಹಾಲಂಡಗಳಲ್ಲಿ ಒಕ್ಕಲುತನದ ಉತ್ಪಾದನೆ ಮತ್ತು ಹಾಲು, ಬಣ್ಣೊ ಮಾರಾಟಗಳ ಆಂದೋಲನವು ಬಹಳ ಯಶಸ್ವಿಯಾಗಿದೆ

೪ **ಆಯರ್ಲಂಡ:**— ಸರ್ ಹೊರೇಸ್ ಪ್ಲಂಕೆಟ್ ಅವರು ೧೯ನೆಯ ಶತಮಾನದ ಅಂತ್ಯದಲ್ಲಿ ಡೆನ್ಮಾರ್ಕ ಮಾದರಿಯ ಮೇಲೆ ಸಹಕಾರಿ ಹೈನದ ( ಕ್ರೀಮರೀಜ್ ) ಮತ್ತು ಎಷ್ಟೋ ಒಕ್ಕಲುತನದ ಸಹಕಾರಿ ಸಂಘಗಳನ್ನು ಪ್ರಾರಂಭಿಸಿದರು ಆಯರ್ಲಂಡದಲ್ಲಿಯ ಸಹಕಾರದಿಂದ ಭಾರತವು ಒಂದು ದೊಡ್ಡ ಪಾಠವನ್ನು ಕಲಿಯಿತು ಮುಂಬಯಿ ಸಹಕಾರಿ ಸಂಘಗಳ ಕಾಯಿದೆಯ ಪೀಠಿಕೆಯು ಆಯರ್ಲಂಡಿನ ಕಾಯಿದೆಯ ಪೀಠಿಕೆಗಿಂತ ತಿಲಮಾತ್ರವಾದರೂ ಭಿನ್ನವಾಗಿಲ್ಲ ಅದೆಂದರೆ, ಸರ್ ಹೊರೇಸ ಪ್ಲಂಕೆಟರವರ ಉಪದೇಶ ಸೂತ್ರವಾದ **ಉತ್ತಮ ಬೇಸಾಯ, ಉತ್ತಮ ವ್ಯವಹಾರ ಮತ್ತು ಉತ್ತಮ ಜೀವನ** **ಗಳೇ** ನಮ್ಮ ಮುಂಬಯಿ ಸಹಕಾರಿ ಕಾಯಿದೆಯ ಪೀಠಿಕೆಯಾಗಿವೆ

ಅಮೇರಿಕಾ ಕಾನಡಾ ದೇಶಗಳು ಗೋದಿ, ಹತ್ತಿ ಕಾಳುಗಳ ಮಾರಾಟದ ಸಂಘಗಳನ್ನು ಸ್ಥಾಪಿಸಿದವು ಈ ದಿಶೆಯಲ್ಲಿ ಕಾನಡಾದ ಗೋದಿಯ ಸಂಗ್ರಹದ ಸಂಘವು ( ಕಾನಡಿಯನ್ ವ್ಹಿಟ್ ಪೂಲ್ ) ಗಮನಾರ್ಹವಾಗಿದೆ ಈ ಎರಡೂ ದೇಶಗಳ ಸಹಕಾರಿ ಮಾರಾಟದ ಪದ್ಧತಿಯು ಅನುಕರಣೀಯವಾಗಿದೆ ಪ್ಯಾಲೆಸ್ಟಾಯಿನ್, ಬಲ್ಗೇರಿಯಾ, ರಸಿಯಾ ಮತ್ತು ಹಂಗರಿಯಾ ದೇಶಗಳು ಸಾಮೂಹಿಕ ಮತ್ತು ಸಹಕಾರಿ ಬೇಸಾಯವನ್ನು ಬೆಳೆಯಿಸಿಕೊಂಡಿವೆ ಭಾರತವೂ ಇತ್ತಿತ್ತಲಾಗಿ ಸಹಕಾರಿ ಬೇಸಾಯವನ್ನು ಬೆಳೆಯಿಸಿದೆ. ಅಮೇರಿಕೆಯಲ್ಲಿಯ ಒಕ್ಕಲುತನವು ಇಷ್ಟೊಂದು ಬೆಳೆಯಲು ಅಲ್ಲಿಯ ಸಹಕಾರಿ ನೀರಾವರಿ ಸಂಘಗಳೇ ಕಾರಣಗಳಾಗಿವೆ. ಭಾರತವೂ ಸಹಿತ ಎಷ್ಟೋ ಸಹಕಾರಿ ನೀರಾವರಿ ಸಂಘಗಳನ್ನು

ಸಂಘಟಿಸಿಕೊಂಡಿದೆ ಯುಗೊಸ್ಲೋವಾಕಿಯಾದಲ್ಲಿ ಅನೇಕ ಸಹಕಾರಿ ಆರೋಗ್ಯ ಸಂಘಗಳು ಮತ್ತು ಅಮೇರಿಕಯಲ್ಲಿ ಸಹಕಾರಿ ಆರೋಗ್ಯ ಸಂಸ್ಥೆಗಳು ಹಾಗೂ ವಿದ್ಯುತ್ ಪೂರೈಕ ಸಂಘಗಳು ಬೆಳೆದುಕೊಂಡಿವೆ

ಮೇಲ್ಕಾಣಿಸಿದ ಈ ಎಲ್ಲ ವಿವರಣೆಗಳಿಂದ ಕಂಡುಬರುವದೇನಂದರೆ ಯುರೋಪದಲ್ಲಿ ಮೊದಲಿಗೆ ಸಹಕಾರ ಆಂದೋಲನವು ಉಗಮವಾಯಿತು ಇಂಗ್ಲಂಡಿನಲ್ಲಿ ಔದ್ಯೋಗಿಕ ಸಹಕಾರ ಸ್ವರೂಪದಲ್ಲಿಯೂ, ಜರ್ಮನಿ, ಡೆನ್ಮಾರ್ಕ ಮತ್ತು ಹಾಲಂಡಗಳಲ್ಲಿ ಒಕ್ಕಲುತನದ ಸಹಕಾರ ಸ್ವರೂಪದಲ್ಲಿಯೂ ಉಗಮವಾಗಿ ಆ ತರುವಾಯ ಜಗತ್ತಿನಲ್ಲೆಲ್ಲ ಶೀಘ್ರವಾಗಿ ಪಸರಿಸಿತು ಬಡತನದ ಬೇಗೆಯಲ್ಲಿ ಬಳಲುತ್ತಿದ್ದ ಜನರ ರಕ್ಷಣೆಗೆಂದೂ ಮತ್ತು ಅವರ ಶೋಷಣೆಯ ನಿರ್ಬಂಧಕ್ಕೆಂದೂ, ಸರ್ವಸಾಮಾನ್ಯ ಆರ್ಥಿಕ ಬೇಡಿಕಗಳ ಪೂರೈಕೆಗಾಗಿಯೂ ಸಹಕಾರವು ಜನ್ಮ ತಾಳಿತು. ಇಂದಿಗೆ ಅದು ವಿವಿಧ ಸ್ವರೂಪಗಳನ್ನು ಹೊಂದಿದೆ ಇಂಗ್ಲಂಡ ಮತ್ತಿತರ ಔದ್ಯೋಗಿಕ ನಾಡುಗಳಲ್ಲಿ ಗ್ರಾಹಕರ ಸಹಕಾರವು, ಜರ್ಮನಿ, ಅಮೇರಿಕಾ, ಹಾಲಂಡ, ಭಾರತ, ಪ್ಯಾಲೆಸ್ಟಾಯಿನ್, ಸಿಲೋನಗಳಲ್ಲಿ ಹಳ್ಳಿಯ ಪತ್ತಿನ ಸಂಘಗಳು, ಕಾನಡಾ ಮತ್ತು ಅಮೇರಿಕೆಗಳಲ್ಲಿ ಗೋದಿ ಮತ್ತು ಕಾಳಿನ ಮಾರಾಟ ಸಂಘಗಳು, ಡೆನ್ಮಾರ್ಕ, ಸ್ವಿತ್ಸರ್ಲಂಡ, ನ್ಯೂಝಿಲಂಡ, ಆಸ್ಟ್ರೇಲಿಯಾ, ಸ್ವೀಡನ್‌ಗಳಲ್ಲಿ ಹೈನದ ಸಂಘಗಳು, ಲಿಲಾವಿನ ಸಂಘ, ಮಾಂಸದ ಕಾರಖಾನೆ, ಕೊಳ್ಳುವ ಮತ್ತು ಮಾರುವ ಸಂಘಗಳು, ಇಂಗ್ಲಂಡಿನಲ್ಲಿ ಮಾರಾಟದ ಮತ್ತು ಪತ್ತಿನ ಮತ್ತು ಆರೋಗ್ಯ ಸಂಘಗಳು, ಪ್ಯಾಲೆಸ್ಟಾಯಿನ್, ರಶಿಯಾ, ಬಲ್ಗೇರಿಯಾ ಮತ್ತು ಭಾರತಗಳಲ್ಲಿ ಸಹಕಾರಿ ಬೇಸಾಯದ ಸಂಘಗಳು, ಇಟಲಿ, ಭಾರತ ಮತ್ತು ಪಾಕಿಸ್ತಾನಗಳಲ್ಲಿ ನಗರ ಪತ್ತಿನ ಸಹಕಾರವು, ಭಾರತ, ಚೀನಾ, ಮತ್ತು ಫ್ರಾನ್ಸಗಳಲ್ಲಿ ಔದ್ಯೋಗಿಕ ಸಹಕಾರವು, ಸ್ವಿತ್ಸರ್ಲಂಡದಲ್ಲಿ ಸಹಕಾರಿ ವಿಶ್ರಾಂತಿ ಗೃಹಗಳು, ಪೂರ್ವ ಆಫ್ರಿಕೆ ಮತ್ತು ಪಶ್ಚಿಮ ಕಾನಡಾದಲ್ಲಿ ಭೂಮಿಯ ಸಂಯುಕ್ತಸಾಗುವಳಿ, ಯುಗೊಸ್ಲೋವಾಕಿಯಾದಲ್ಲಿ ಆರೋಗ್ಯ ಸಂಸ್ಥೆಗಳು, ಈ ಎಲ್ಲ ಸಂಘಗಳ ಚಟುವಟಿಕೆಗಳು ಭಿನ್ನ ಭಿನ್ನವಾಗಿದ್ದರೂ ಮತ್ತು ಇವುಗಳ ವ್ಯವಹಾರದ ಕ್ರಮವು ಬೇರೆ ಬೇರೆ ಪ್ರಕಾರದ್ದಿದ್ದರೂ, ಪ್ರಜಾಪ್ರಭುತ್ವದ ಆಡಳತೆ, ಮುಕ್ತ ಸದಸ್ಯತ್ವ, ಒಬ್ಬ ಸದಸ್ಯನಿಗೆ ಒಂದು ಮತ, ತೊಡಗಿಸಿರುವ ಬಾಂಡವಳಕ್ಕೆ ಪರಿಮಿತ ಬಡ್ಡೀ ಪ್ರಮಾಣ ಈ ಮೂಲಭೂತ ತತ್ವಗಳ ಮೇಲೆಯೇ ಎಲ್ಲ ( ರಸಿಯ ಮತ್ತಿತರ ಕಮ್ಯುನಿಸ್ಟ ರಾಷ್ಟ್ರಗಳನ್ನು ಬಿಟ್ಟು ) ಸಂಘಗಳ ಕಾರ್ಯನಿರ್ವಹಣೆ ನಡೆಸಿದ

ಸಹಕಾರಿ ಪದ್ಧತಿಗಳನ್ನು ಮೂಲತಃ ಬಡ ಮತ್ತು ಮಧ್ಯಮ ವರ್ಗದ ಜನರೇ ಅನುಸರಿಸಿರುವರೆಂದು ಮೇಲಿನ ವಿವರಣೆಯಿಂದ ಕಂಡು ಬರುತ್ತದೆ ಶೋಷಣೆಯನ್ನು ತಡೆಗಟ್ಟಬೇಕೆಂದು ಮತ್ತು ವೈಯಕ್ತಿಕವಾಗಿ ಮಾಡಲು ಸಾಧ್ಯವಿರದ ಆರ್ಥಿಕ ಚಟುವಟಿಕೆಗಳನ್ನು ಕೈಕೊಳ್ಳುವದಕ್ಕಾಗಿ ಈ ಜನರು ಸಹಕಾರಿ ತತ್ವಗಳನ್ನು ಅನುಸರಿಸಿರುವರು ಆದರೆ ಸಹಕಾರಿ ಆಂದೋಲನದ ತತ್ವ ಮತ್ತು ಧ್ಯೇಯಗಳು ಈಗ ಪ್ರಪಂಚದಲ್ಲೆಲ್ಲ ಸರ್ವರಿಗೂ ವಿದಿತವಾಗಿವೆ ಸಹಕಾರವು ಬಾಂಡವಳ

ಶಾಹಿ ರಾಷ್ಟ್ರಗಳಲ್ಲಿ ಹುಟ್ಟಿ ಅದಕ್ಕೆ ಆವ್ಹಾನ ಕೊಟ್ಟು ಅಲ್ಲಿಯೇ ಬಳೆಯುತ್ತಿದ್ದರೂ ಅದು ಈಗ ಕಮ್ಯುನಿಸ್ಟ ರಾಷ್ಟ್ರಗಳಲ್ಲಿಯೂ ಬೆಳೆದಿರುವದೆಂದು ಮೇಲಿನ ವಿವರಣೆಯಿಂದ ಕಂಡು ಬರುತ್ತದೆ ರಸಿಯಾದಲ್ಲ ಎಷ್ಟೋ ಸಹಕಾರಿ ಸಂಘಗಳು ಅಸ್ತಿತ್ವದಲ್ಲಿರುತ್ತವೆ ದಿನೇ ದಿನೇ ಸಹಕಾರವು ಅಲ್ಲಿ ವೃದ್ಧಿ ಹೊಂದುತ್ತಲಿದೆ ಸಹಕಾರವು ಸಮ್ಮಿಶ್ರ ಹಾಗೂ ಸ್ವತಂತ್ರ ಆರ್ಥಿಕ ನೀತಿಗಳ ದೇಶಗಳಲ್ಲಿ ಅಷ್ಟೇ ಅಲ್ಲ, ನಿಯಂತ್ರಿತ ಮತ್ತು ಯೋಜಿತ ಆರ್ಥಿಕ ನೀತಿಗಳಲ್ಲಿಯೂ ಯಶಸ್ವಿಯಾಗಿದೆ ರೈತರ, ಔದ್ಯೋಗಿಕ ಜನರ ಮತ್ತು ಸಣ್ಣ ಸಣ್ಣ ಉದ್ದಿಮೆದಾರರ ಆರ್ಥಿಕ ಸಮಸ್ಯಗಳ ನಿವಾರಣೆಗೆ ಸಹಕಾರವೇ ರಾಮಬಾಣವೆಂದು ಈಗ ಪ್ರಪಂಚದ ನಿದರ್ಶನಕ್ಕೆ ಬಂದಿದೆ ಸಹಕಾರದಿಂದ ಒಬ್ಬ ಮನುಷ್ಯನು ಕೊಟ್ಯಾಧೀಶನಾಗಲೀ, ನಿರ್ಗತಿಕನಾಗಲೀ ಆಗುವದಿಲ್ಲ ಬಾಂಡವಲವಾದ ಮತ್ತು ಸಮಾಜವಾದಗಳ ನಡುವಿನ ಮಾರ್ಗವನ್ನು ಸಹಕಾರವು ಅನುಸರಿಸುತ್ತದೆ ಆದರೂ ಸಹಕಾರಕ್ಕೂ ಕೆಲವು ಪರಿಮಿತಿಗಳಿವೆ ಎಂದು ಈಗ ಪ್ರಚಲಿತವಿರುವ ಸಹಕಾರದ ಕಾರ್ಯಾಚರಣೆಯಿಂದ ಕಂಡುಬರುತ್ತದೆ

## ಪ್ರಪಂಚದಲ್ಲಿ ಸಹಕಾರದ ಸದ್ಯದ ಪರಿಸ್ಥಿತಿ

ಸಹಕಾರ ಆಂದೋಲನವು ಬೆಳೆದಿರುವ ಕೆಲವು ದೇಶಗಳ ವಿವರಣೆಯನ್ನು ನಾವೀಗ ಚರ್ಚಿಸಬಹುದು ಅನೇಕ ಕಡೆಗಳಿಂದ ಅಂಕ ಸಂಖ್ಯಗಳನ್ನು ಕಲಹಾಕಿದ್ದರೂ ಅವುಗಳ ನ್ಯೂನತೆಯ ಕಲ್ಪನೆಯು ನನಗಿದೆ ಆದರೂ ಈ ಸಂಖ್ಯಗಳು ಅಲ್ಲಿಯ ಸಾಮಾನ್ಯ ಚಿತ್ರವನ್ನಾದರೂ ನಮಗೆ ಕೊಡಬಹುದು ಸಹಕಾರವು ಈಗ ಜಾಗತಿಕ ಆಂದೋಲನವಾಗಿದೆ ಈಗ ಅದು ಒಂದಿಲ್ಲೊಂದು ಸ್ವರೂಪದಲ್ಲ ಜಗತ್ತಿನ ಪ್ರತಿ ಒಂದು ರಾಷ್ಟ್ರದಲ್ಲಿಯೂ ಅಸ್ತಿತ್ವದಲ್ಲರುತ್ತದೆ ಆದರ ವಿಧಾನ ಮತ್ತು ಸ್ವರೂಪಗಳಲ್ಲಿ ಒಂದು ನಾಡಿನ ಆಂದೋಲನವು ಬೇರೊಂದು ನಾಡಿನ ಆಂದೋಲನಕ್ಕಿಂತ ತೀರ ಭಿನ್ನವಾಗಿಯೂ ಇರಬಹುದು ಕೆಲವೊಂದು ರಾಷ್ಟ್ರಗಳಲ್ಲಿ ಒಕ್ಕಲುತನದ ಸಹಕಾರವು ಬೇರೂರಿದ್ದರೆ ಮತ್ತೆ ಕೆಲವು ಔದ್ಯೋಗಿಕ ರಾಷ್ಟ್ರಗಳಲ್ಲಿ ಗ್ರಾಹಕರ ಆಂದೋಲನವು ಬೆಳೆದು ಬಂದಿದೆ ಅಂತರ್ ರಾಷ್ಟ್ರೀಯ ಕೂಲಿಕಾರ ಕಚೇರಿಯು ಸಂಗ್ರಹಿಸಿರುವ ಅಂಕೆ ಸಂಖ್ಯಗಳನ್ವಯ ೧೯೩೭ ರಲ್ಲಿ, ಜಗತ್ತಿನಲ್ಲಿ ೮೧೦, ೫೧೨ ಸಹಕಾರಿ ಸಂಘಗಳು ಮತ್ತು ೧೪,೩೨,೬೦,೯೫೩ ಸದಸ್ಯರು ಇದ್ದರು ಈ ಒಟ್ಟು ಸಂಘಗಳಲ್ಲಿ ೫೯,೫,೧೪,೧೫೭ ಸದಸ್ಯರನ್ನೊಳಗೊಂಡ ೫೦,೨೭೯ ಗ್ರಾಹಕರ ಸಂಘಗಳೂ, ೬ ೩೯,೩೫,೨೯೫ ಸದಸ್ಯರನ್ನೊಳಗೊಂಡ ೬,೨೨,೧೮೪ ಒಕ್ಕಲುತನದ ಸಂಘಗಳೂ ಇದ್ದವು ಇವುಗಳಲ್ಲದೆ ಉತ್ಪಾದಕರ ಸಂಘಗಳು, ಗೃಹ ನಿರ್ಮಾಣ ಸಂಘಗಳು, ವಿಮಾ ಸಂಘಗಳು, ಆರೋಗ್ಯ ಸಂಘಗಳು ಹೀಗೆ ಬೇರೆ ಬೇರೆ ಸಹಕಾರಿ ಸಂಘಗಳಿದ್ದವು ಎರಡನೆಯ ಜಾಗತಿಕ ಯುದ್ಧದ ಕಾಲಕ್ಕೆ ಫ್ಯಾಸಿಸ್ಟ ಮತ್ತು ನಾಜೀ ರಾಷ್ಟ್ರಗಳಲ್ಲಿ ಸಹಕಾರವನ್ನು ತುಳಿದು ಬಿಡಲಾಯಿತು ಆದರೆ ಅದೇ ಕಾಲಕ್ಕ ಭಾರತ, ಸಿಲೋನ, ಆಸ್ಟ್ರೇಲಿಯಾ, ಅಮೇರಿಕಾ, ಕಾನಡಾ, ನ್ಯೂಝಿಲಂಡ, ಆಫ್ರಿಕಾ ಮೊದಲಾದ ದೇಶಗಳಲ್ಲಿ ಸಹಕಾರವು ಹೆಚ್ಚು ಹೆಚ್ಚು ಪ್ರಗತಿಹೊಂದುತ್ತ ವಿವಿಧ ಕಾರ್ಯರಂಗ

ಗಳಲ್ಲಿ ಬೆಳೆದುಕೊಂಡಿತು  ಕಳೆದ ೧೫ ವರ್ಷಗಳಲ್ಲಿ ಮಾತ್ರ ಜಗತ್ತಿನಲ್ಲೆಲ್ಲ ಸಂಘಗಳು, ಸದಸ್ಯರ ಸಂಖ್ಯೆ ಮತ್ತು ದುಡಿಯುವ ಭಾಂಡವಲದ ಪ್ರಮಾಣಗಳು ನಿಸ್ಸಂದೇಹವಾಗಿ ಹೆಚ್ಚಾಗಿವೆ

ಕೆಳಗಿನ ಅಂಕೆ ಸಂಖ್ಯೆಗಳು ಯುದ್ಧಪೂರ್ವದಲ್ಲಿಯು ಬೇರೆ ಬೇರೆ ದೇಶಗಳಲ್ಲಿಯು ಸಹಕಾರಿ ಆಂದೋಲನದ ಚಿತ್ರವನ್ನು ತೋರಿಸುತ್ತವೆ *

| | ದೇಶಗಳು | ಸಹಕಾರಿ ಸಂಘಗಳ ಸಂಖ್ಯೆ | ಸದಸ್ಯರು. (ಸಾವಿರದಲ್ಲಿ) |
|---|---|---|---|
| **ಗ್ರಾಹಕರ ಸಂಘಗಳು.** | | | |
| ಯುರೋಪ (ರಸಿಯವನ್ನು ಬಿಟ್ಟು) | ೨೫ | ೨೦,೯೦೭ | ೧೯,೨೫೧ |
| ರಸಿಯಾ | ೧ | ೨೪,೧೧೩ | ೩೯,೨೦೦ |
| ಅಮೇರಿಕಾ | ೧೨ | ೪,೦೬೧ | ೫೮೫ |
| ಓಸೆನಿಯಾ | ೩ | ೧೬೯ | ೧೩೧ |
| ಆಫ್ರಿಕಾ | ೪ | ೪೬ | ೧೬ |
| ಏಶಿಯಾ | ೯ | ೯೮೩ | ೩೩೦ |
| **ಉತ್ಪಾದಕರ ಸಂಘಗಳು** | | | |
| ಯುರೋಪ | — | ೪,೪೦೮ | ೨೩೪ |
| ರಶಿಯಾ | — | ೧೪,೫೫೫ | ೧,೮೮೨ |
| ಅಮೇರಿಕಾ | — | ೧,೧೭೮ | ೧೦೧ |
| ಏಶಿಯಾ ( ಅಪೂರ್ಣ ) | — | ೨೦೪ | ೫ |
| **ಒಕ್ಕಲುತನದ ಮಾರ್ಕೆಟಿಂಗ ಸಂಘಗಳು.** | | | |
| ಯುರೋಪ | — | ೪೨,೨೨೬ | ೫,೬೦೬ |
| ಅಮೇರಿಕಾ | — | ೯,೧೭೩ | ೨,೪೬೩ |
| ಓಸೆನಿಯಾ | — | ೬೨೨ | ೨೨೭ |
| ಆಫ್ರಿಕಾ | — | ೧,೨೫೩ | ೧೨೮ |
| ಏಶಿಯಾ | — | ೧೭,೧೭೨ | ೪,೮೨೮ |

*ವಿ ಸೂ —ಅಂತರ್ ರಾಷ್ಟ್ರೀಯ ಕೂಲಿಕಾರ ಕಚೇರಿಯು ( I L O ) ತನಗೆ ಬಂದ ವರದಿಗಳನ್ವಯ ಈ ಅಂಕೆ ಸಂಖ್ಯೆಗಳನ್ನು ಸಿದ್ಧಪಡಿಸಿದೆ ಮನೆಕಟ್ಟುವ, ವಿಮಾ, ಮೀನ ಹಿಡಿಯುವ ಮೊದಲಾದ ಸಂಘಗಳ ಅಂಕೆ ಸಂಖ್ಯೆಗಳನ್ನು ಈ ಅಂಕೆ ಸಂಖ್ಯೆಗಳಲ್ಲಿ ಸೇರಿಸಿಲ್ಲ

**ಒಕ್ಕಲುತನದ ಮತ್ತು ಗ್ರಾಮಾಂತರ ಪತ್ತಿನ ಸಂಘಗಳು.**

| | | | |
|---|---|---|---|
| ಯುರೋಪ | — | ೬೫,೭೭೪ | ೨,೮೮೩ |
| ಅಮೇರಿಕಾ | — | ೫,೯೩೩ | ೬೭೯ |
| ಆಫ್ರಿಕಾ | — | ೪೬೫ | ೫೦ |
| ಏಶಿಯಾ | — | ೧,೧೭,೩೬೭ | ೭ ೯೩೫ |

**ಇತರ ಒಕ್ಕಲುತನದ ಸಂಘಗಳು**

| | | | |
|---|---|---|---|
| ಯುರೋಪ | — | ೭೯,೭೮೯ | ೭,೮೩೮ |
| ಅಮೇರಿಕಾ | — | ೬,೭೮೫ | ೧,೧೪೦ |
| ಅಶ್ಶೇನಿಯಾ | — | ೧೨೩ | ೪೯ |
| ಆಫ್ರಿಕಾ | — | ೧,೭೭೩ | ೧೧೪ |
| ಏಶಿಯಾ | — | ೧೨,೫೬೩ | ೬,೫೩೭ |

ಜಗತ್ತಿನಲ್ಲಿ ೧೯೪೬–೪೭ ರಲ್ಲಿ ಗ್ರಾಹಕರ ಸಂಘಗಳ ಸದಸ್ಯರ ಸಂಖ್ಯೆಯು ೭ ಕೋಟಿ ಮತ್ತು ಒಕ್ಕಲುತನದ ಸಂಘಗಳ ಸದಸ್ಯರ ಸಂಖ್ಯೆಯು ೮ ಕೋಟಿ ೭೦ ಲಕ್ಷ ಇದ್ದಿತು ಎಂದು ಕೋಪನ್ ಹೇಗನ್‌ದಲ್ಲಿ ೧೯೫೧ ರಲ್ಲಿ ನೇರಿದ ಅಂತರ್‌ರಾಷ್ಟ್ರೀಯ ಒಕ್ಕಲುತನದ ಪರಿಷತ್ತಿನಲ್ಲಿ ಓದಿದ ವರದಿಯಲ್ಲಿ ಶ್ರೀ ಓಡೆಲ್ ಸ್ಟೇಡಿಯಸ್ ಅವರು ಹೇಳಿರುವರು

ಸಹಕಾರಿ ಸಂಘಗಳು ಬೆಳೆದಿರುವ ಕೆಲವು ದೇಶಗಳಲ್ಲಿಯ ಕಾರ್ಯಪದ್ಧತಿಯನ್ನು ಈ ಕಳಗೆ ಕೊಡಲಾಗಿದೆ

೧ **ಗ್ರೇಟಬ್ರಿಟನ್.**— ಔದ್ಯೋಗಿಕ ಸಹಕಾರದ ತವರುಮನೆಯಾದ ಇಂಗ್ಲಂಡಿನಲ್ಲಿ ಗ್ರಾಹಕರ ಚಳವಳಿಯು ರಭಸದಿಂದ ಬೆಳೆಯಿತು ೧೯೫೦ರಲ್ಲಿ ೧೧೧೦ ಕಿರಕುಳ ವ್ಯಾಪಾರಿ ಸಂಘಗಳು ಇದ್ದು ಅವುಗಳ ಸದಸ್ಯರ ಸಂಖ್ಯೆಯು ೧,೦೫,೨೭,೫೮೭ ಇದ್ದಿತು ಶೇರು ಹಣವು ಸುಮಾರು ೨೩,೦೩,೩೭,೦೦೦ ಪೌಂಡು ಇದ್ದಿತು ವ್ಯವಹಾರವು ೫೯ ೯೮,೬೫,೦೦೦ ಪೌಂಡು ಇದ್ದಿತು ಮಾರಾಟದ ಮೇಲೆ ಕೊಡಲ್ಪಟ್ಟ ಡಿವ್ಹಿಡೆಂಡಿನ ಹಣವು ೩,೮೭ ೦೭,೦೦೦ ಪೌಂಡು ಇದ್ದಿತು ಪ್ರತಿ ಸದಸ್ಯನ ಸರಾಸರಿ ಶೇರು ಹಣವು ೨೧ ೯೦ ಪೌಂಡು ಇದ್ದಿತು ಅದೇ ವರ್ಷದಲ್ಲಿ ಈ ಸಂಘಗಳ ನೌಕರರ ಸಂಖ್ಯೆಯು ೨,೭೭,೦೯ ಇದ್ದಿತು ೧ ಲಕ್ಷಕ್ಕಿಂತ ಹೆಚ್ಚಾಗಿ ಸದಸ್ಯರಿದ್ದ ಸಂಘಗಳ ಸಂಖ್ಯೆಯು ೧೧ ಇದ್ದಿತು ಲಂಡನ್ ಗ್ರಾಹಕರ ಸಂಘದ ಸದಸ್ಯರ ಸಂಖ್ಯೆಯು ೧೦,೨೦,೭೯ ಇದ್ದಿತು ಇಂಗ್ಲಂಡಿನಲ್ಲಿ ಸಹಕಾರಿ ಸಂಘಗಳು ಪ್ರತಿ ಮೂರು ಕುಟುಂಬಗಳಲ್ಲಿ ಒಂದು ಕುಟುಂಬಕ್ಕೆ ಹಾಲನ್ನು, ಪ್ರತಿ ನಾಲ್ಕು ಕುಟುಂಬಗಳಲ್ಲಿ ಒಂದಕ್ಕೆ ಸೀದಾ ಆಹಾರವನ್ನು, ಪ್ರತಿ ನಾಲ್ಕು ಕುಟುಂಬಗಳಲ್ಲಿ ಒಂದಕ್ಕ ಬ್ರೆಡ್‌ನ್ನು, ಪ್ರತಿ ಐದು ಕುಟುಂಬಗಳಲ್ಲಿ ಒಂದಕ್ಕೆ ಚಹವನ್ನು

ಮತ್ತು ಕಲ್ಲಿದ್ದಲಿಯನ್ನು ಮತ್ತು ಪ್ರತಿ ಎಂಟು ಕುಟುಂಬಗಳಲ್ಲಿ ಒಂದಕ್ಕೆ ಬಟ್ಟೆಗಳನ್ನು ಪೂರೈಸುತ್ತವೆ ನಾಲ್ಕು ಕುಟುಂಬಗಳಲ್ಲಿ ಒಂದು ಕುಟುಂಬದ ಅಂತ್ಯಕ್ರಿಯೆಯ ವ್ಯವಸ್ಥೆಯನ್ನು ಮಾಡುತ್ತವೆ ಮನುಷ್ಯನ ಜನನದಿಂದ ಮರಣದ ವರೆಗೆ ಇರುವ ಅವಶ್ಯಕತೆಗಳನ್ನೆಲ್ಲ—ಟಾಚಣಿಯಂತಹ ಸಣ್ಣ ಪದಾರ್ಥದಿಂದ ಮೊದಲುಗೊಂಡು ಮೋಟಾರಿನಂತಹ ದೊಡ್ಡ ಪದಾರ್ಥದ ವರೆಗೂ ಅಗತ್ಯವಿರುವ ವಸ್ತುಗಳನ್ನೆಲ್ಲ ಈ ಸಂಘಗಳು ಪೂರೈಸುತ್ತವೆ ಇಂಗ್ಲಂಡ, ವೇಲ್ಸಗಳಿಗೆ ಕೂಡಿ ಒಂದು ಮತ್ತು ಸ್ಕಾಟಲಂಡಿಗೆ ಒಂದು, ಹೀಗೆ ಎರಡು ರೋಕ ವ್ಯವಹಾರದ ಸಂಘಗಳಿವೆ. ಈ ಎರಡೂ ಸಂಘಗಳು ಬ್ಯಾಂಕಿನ ವ್ಯವಹಾರವನ್ನು ನಡೆಯಿಸುತ್ತವೆ. ಅಲ್ಲದೆ ಕಾರಖಾನೆದಾರರ, ಉತ್ಪಾದಕರ, ಕಚ್ಚಾ ಮಾಲಿನಿಂದ ಪಕ್ಕಾ ಮಾಲನ್ನು ರೂಪಾಂತರಿಸುವವರ ಮತ್ತು ರೋಕ ವ್ಯವಹಾರಸ್ಥರ ಸಂಸ್ಥೆಗಳಾಗಿವೆ ಹಣ ಕಾಸು, ಸೇವೆ, ಮತ್ತಿತರ ಅವಶ್ಯಕತೆಗಳ ಪೂರೈಕೆಯ ವಿಷಯದಲ್ಲಿ ಈ ಎರಡೂ ಸಂಘಗಳು ತಮ್ಮ ತಮ್ಮ ಕಾರ್ಯಕ್ಷೇತ್ರದಲ್ಲಿಯ ಕಿರಕುಳ ಸಂಘಗಳ ಸಂಯುಕ್ತ ಸಂಸ್ಥೆಗಳಾಗಿ ಪರಿಣಮಿಸಿವೆ. ೧೯೫೦ರಲ್ಲಿ ಇಂಗ್ಲಂಡದ ರೋಕ ಸಂಘದ ಹಣ ಕಾಸಿನ ಪರಿಸ್ಥಿತಿಯು ಹೀಗೆ ಇದ್ದಿತು :—

ಶೇರು — ಪೌಂಡು ೨,೦೬,೯೭,೨೮೮
ಸಾಲ — ಪೌಂಡು ೧,೧೬,೪೩,೫೪೪
ರೋಕ ವ್ಯವಹಾರ — ಪೌಂಡು ೩೨,೧೬,೪೧,೯೨೩

ಇದೇ ಮೋರೆಗೆ ಸ್ಕಾಟಲಂಡದ ರೋಕ ವ್ಯವಹಾರದ ಸಂಸ್ಥೆಯ ಆರ್ಥಿಕ ಸ್ಥಿತಿಯು ಕೆಳಗಿನಂತೆ ಇದ್ದಿತು —

ಶೇರು — ಪೌಂಡು ೨೩,೮೧,೯೪೦
ಸಾಲ — ಪೌಂಡು ೧,೩೮,೦೩,೧೯೬
ರೋಕ ವ್ಯವಹಾರ — ಪೌಂಡು ೬,೮೨,೧೬,೫೭೯

ಈ ಎರಡೂ ಸಂಘಗಳ ಸಾಮೂಹಿಕ ಪ್ರಯತ್ನದ ಫಲವಾಗಿ ಒಂದು ಸಹಕಾರಿ ವಿಮಾ ಸಂಸ್ಥೆಯು ಉದಯವಾಗಿದೆ ವಿಮಾ ಕಂಪನಿಯ ಶೇರು ಹಣವು ೧೯೪೮ರಲ್ಲಿ ೫೨,೫೦೦ ಪೌಂಡು, ಪ್ರೀಮಿಯಂ ಉತ್ಪನ್ನವು ೨೧,೭೯,೦೦೦ ಪೌಂಡು ಇದ್ದಿತು. ಇತ್ತಿತ್ತಲಾಗಿ ಅಂತರ್ ರಾಷ್ಟ್ರೀಯ ಸಹಕಾರಿ ವ್ಯಾಪಾರಿ ಸಂಸ್ಥೆಯು ಸಂಘಟಿಸಲ್ಪಟ್ಟಿದೆ ಗ್ರೇಟಬ್ರಿಟನ್ನಿನ ಕಾರ್ಯಕ್ಷೇತ್ರ ವಿಸ್ತಾರವನ್ನೊಳಗೊಂಡ ಸಹಕಾರಿ ಯುನಿಯನ್ನಿಗೆ ಎಲ್ಲ ಸಹಕಾರಿ ಸಂಘಗಳು, ಕಿರಕುಳ ಸಂಘಗಳು, ಸ್ಥಾನಿಕ ಸಂಯುಕ್ತ ಸಂಘಗಳು, ರಾಷ್ಟ್ರೀಯ ಸಂಯುಕ್ತ ಸಂಸ್ಥೆಗಳು, ಉತ್ಪಾದಕ ಸಂಘಗಳು ಮತ್ತು ವಿಶಿಷ್ಟ ಸಂಘಗಳು ಸಮಾವೇಶವಾಗಿವೆ

೧೯೫೧ರಲ್ಲಿ ೪೨ ಸಹಕಾರಿ ಸಹಭಾಗೀದಾರಿಕೆಯ ಉತ್ಪಾದಕರ ಸಂಘಗಳಿದ್ದವು. ಶೇರು ಹಣವು ೫,೯೮,೧೫೦ ಪೌಂಡು ಇದ್ದಿತು. ಈ ಎಲ್ಲ ಸಂಘಗಳು

ಉತ್ಪಾದಕ ಸಹಕಾರಿ ಸಂಯುಕ್ತ ಸಂಸ್ಥೆಯ ಸದಸ್ಯರಾಗಿರುವವು ಈ ಸಂಘಗಳ ಎದ್ದು ಕಾಣುವ ವೈಶಿಷ್ಟ್ಯಗಳು ಕೆಳಗಿನಂತೆ ಇವೆ —

೧. ಕಾರ್ಯಕರ್ತರು ಶೇರುಗಳನ್ನು ಧಾರಣಮಾಡಿದ್ದರ ಪರಿಣಾಮವಾಗಿ ಅಂಶತಃ ಒಡೆಯರೂ ಆಗಿದ್ದಾರೆ.

೨ ಸಂಘದ ಕಾರ್ಯಕಲಾಪಗಳ ನಿರ್ವಹಣೆಗಾಗಿ ವ್ಯವಸ್ಥಾಪಕ ಮಂಡಲವನ್ನು ಸದಸ್ಯರು ಚುನಾಯಿಸುತ್ತಾರೆ ಹೀಗಾಗಿ ಅವರು ನೇರವಾಗಿ ಸಂಘದ ನಿಯಂತ್ರಣದಲ್ಲಿ ಭಾಗವಹಿಸುತ್ತಾರೆ

೩. ದುಡಿಮೆಗಾರರಿಗೆ ಅವರ ಕೂಲಿಯು ಜೊತೆಗೆ ಲಾಭವೂ ಹಂಚಲ್ಪಡುವದು

ಇಂಗ್ಲಂಡಿನಲ್ಲಿ ಬೇರೆ ಕಡೆಗಳಿಗಿಂತ ಒಕ್ಕಲುತನದ ಸಹಕಾರವು ಸ್ವಲ್ಪ ತಡವಾಗಿಯೇ ಪ್ರಾರಂಭವಾಯಿತು ಇಂಗ್ಲಂಡ ಮತ್ತು ಆಯರ್ಲಂಡುಗಳಲ್ಲಿ ೧೯೪೯ರಲ್ಲಿಯ ಒಕ್ಕಲುತನದ ಸಹಕಾರದ ಅಂಕೆ ಸಂಖ್ಯೆಗಳನ್ನು ಈ ಕೆಳಗೆ ಕೊಡಲಾಗಿದೆ

| | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ಶೇರು ಹಣ (ಪೌಂಡು) | ಒಟ್ಟು ವ್ಯವಹಾರ (ಪೌಂಡು) |
|---|---|---|---|---|
| ಇಂಗ್ಲಂಡ | ೨೦೧ | ೧,೪೨,೨೨೭ | ೨೮,೬೭,೩೯೦ | ೪,೭೨,೮೩,೮೪೯ |
| ವೇಲ್ಸ | ೮೨ | ೪೨,೯೭೮ | ೪,೫೪,೩೮೨ | ೫೪,೨೩,೭೬೭ |
| ಸ್ಕಾಟಲಂಡ | ೬೪ | ೨೪,೮೮೨ | ೨,೮೦,೮೧೭ | ೪೮,೧೯,೪೨೯ |
| ಅಲ್ಸ್ಟರ್ | ೩೯ | ೭,೮೩೦ | ೮೯,೩೦೩ | ೪೪.೦೩,೯೯೯ |
| ಆಯರ್ಲಂಡ | ೩೧೨ | ೯೫,೯೩೦ | ೭,೪೮,೨೭೧ | ೨,೭೬,೭೪,೭೪೧ |
| ಒಟ್ಟು | ೬೯೮ | ೩,೧೩,೮೪೭ | ೪೪,೪೦,೧೬೩ | ೮,೯೬,೦೫,೭೮೫ |

ಒಕ್ಕಲುತನದ ಸಹಕಾರಿ ಸಂಘಗಳಲ್ಲಿ ಮುಖ್ಯವಾಗಿ ಸಲಕರಣೆ ಪೂರೈಕೆ, ಮಾರಾಟ ಮತ್ತು ಸೇವಾ ಸಂಘಗಳಿರುತ್ತವೆ

೨ **ಡೆನ್ಮಾರ್ಕ :—** ಡೆನ್ಮಾರ್ಕದಲ್ಲಿ ಹೈನದ ಮಾರಾಟದ ಮತ್ತು ಮಾಂಸದ ಮತ್ತು ರೂಪಾಂತರಗೊಳಿಸುವ ಸಂಘಗಳ ರೂಪದಲ್ಲಿ ಒಕ್ಕಲುತನದ ಸಹಕಾರವು ಪ್ರಾರಂಭವಾಗಿ ಬಹಳೇ ಪ್ರಗತಿಯನ್ನು ಹೊಂದಿತು ಗ್ರಾಹಕರ ಆಂದೋಲನವು ಸಾಕಷ್ಟು ಬೆಳೆದಿದೆ. ಆದರೆ ಇಲ್ಲಿಯ ಗ್ರಾಹಕರ ಚಳವಳಿಯ ವೈಶಿಷ್ಟ್ಯವೆಂದರೆ, ಅದು ಗ್ರಾಮಾಂತರ ಸ್ವರೂಪದ್ದಾಗಿದೆ. ಕೆಳಗಿನ ಅಂಕೆ ಸಂಖ್ಯೆಗಳಿಂದ ೧೯೫೦ ರಲ್ಲಿ ಡೆನ್ಮಾರ್ಕದ ಸಹಕಾರಿ ಆಂದೋಲನದ ಚಿತ್ರವನ್ನು ಕಾಣಬಹುದು.

| ಸಂಘಗಳ ಪ್ರಕಾರ | ವ್ಯವಹಾರ (ಕ್ರೊನರ್‌ಗಳು ದಶಲಕ್ಷದಲ್ಲಿ) | ಸಂಘಗಳ ಸಂಖ್ಯೆ | ವೈಯಕ್ತಿಕ ಸದಸ್ಯರು |
| --- | --- | --- | --- |
| ಗ್ರಾಹಕರ ಸಂಘಗಳು | ೧೩,೧೪೫ | ೧,೯೮೪ | ೪,೪೬,೬೦೦ |
| ಉತ್ಪಾದಕರ ಸಂಘಗಳು | ೪೨,೧೨೦ | ೨,೪೭೬ | ೬,೬೦,೧೦೦ |
| ಒಕ್ಕಲುತನದ ಖರೀದಿ ಸಂಘಗಳು | ೪,೯೬೯ | ೩,೩೪೪ | ೧,೦೪,೬೯೫ |
| ಇತರ ಸಂಘಗಳು | ೩೫೯ | ೬ | ೮,೪೮,೦೦೦ |
| ಒಟ್ಟು | ೬೦,೫೯೩ | ೭,೮೧೦ | ೨೦,೫೯,೩೯೫ |

ಡೆನ್ಮಾರ್ಕವು ಸಣ್ಣ ದೇಶವಾಗಿದೆ ಅದರ ಕ್ಷೇತ್ರವು ಸುಮಾರು ೪,೦೦೦ ಚೌರಸ ಮೈಲು ಇದ್ದು, ಜನಸಂಖ್ಯೆಯು ೫೦ ಲಕ್ಷಕ್ಕೆ ಸಮೀಪಿಸಿದೆ ಈ ದೇಶದ ಜನಸಂಖ್ಯೆ ಮತ್ತು ಕ್ಷೇತ್ರದ ಪ್ರಮಾಣವನ್ನು ಗಮನಕ್ಕೆ ತಂದುಕೊಂಡರೆ ಇಲ್ಲಿ ಸಂಘಗಳ ಸಂಖ್ಯೆಯೂ ಮತ್ತು ಸದಸ್ಯರ ಸಂಖ್ಯೆಯೂ ಅತಿ ಹೆಚ್ಚಾಗಿವೆ ಎಂದು ಹೇಳಬಹುದು ಒಂದೇ ಪ್ರದೇಶದಲ್ಲಿ ಬೇರೆ ಬೇರೆ ಉದ್ದೇಶಗಳಿಗಾಗಿ ಬೇರೆ ಬೇರೆ ಸಂಘಗಳಿರುವದು ಗಮನಾರ್ಹವಾಗಿದೆ ಒಬ್ಬ ವ್ಯಕ್ತಿಯು ೩ ರಿಂದ ೫ ಸಂಘಗಳ ಸದಸ್ಯನಾಗಿದ್ದಾನೆ ಇದರಿಂದ ಒಬ್ಬೊಬ್ಬನು ಎರಡೆರಡು ಸಲ ಸದಸ್ಯನಾದುದು ಕಂಡುಬರುತ್ತದೆ ಗ್ರಾಹಕರ ಸಂಘಗಳು ಮತ್ತು ಅವುಗಳ ಶಾಖೆಗಳು ಒಟ್ಟು ಕಿರ ಕುಳ ವ್ಯವಹಾರದಲ್ಲಿ ನೂರಕ್ಕೆ ೧೦ರಷ್ಟು ವ್ಯವಹಾರ ಮಾಡುತ್ತವೆ ೧೯೫೦ರಲ್ಲಿ ಎಲ್ಲ ಹೈನದ ಸಂಸ್ಥೆಗಳಿಗೆ ಪೂರೈಸಲ್ಪಟ್ಟ ಒಟ್ಟು ಹಾಲಿನ ಪ್ರಮಾಣದಲ್ಲಿ ೧೦೦ಕ್ಕೆ ೯೦ರಷ್ಟು ಮತ್ತು ಒಟ್ಟು ಬೆಣ್ಣೆಯ ಪ್ರಮಾಣದಲ್ಲಿ ೧೦೦ಕ್ಕೆ ೬೦ರಷ್ಟು ವ್ಯವಹಾರ ವನ್ನು ಸಹಕಾರಿ ಸಂಘಗಳು ನಿರ್ವಹಿಸಿದವು ಇದರಂತೆ ನೂರಕ್ಕೆ ೮೮ರಷ್ಟು ಮಾಂಸ ನಿರ್ಯಾತ, ೨೮ರಷ್ಟು ತತ್ತಿಗಳ ನಿರ್ಯಾತ, ೪೦ರಷ್ಟು ದನಗಳ ನಿರ್ಯಾತ ಕಾರ್ಯವನ್ನು ಸಹಕಾರಿ ಸಂಘಗಳೇ ಮಾಡುತ್ತವೆ ಕೊಳ್ಳಬಹು ದಾದ ಮೇವು-ಮಿಡಚೆಗಳ ಒಟ್ಟು ಪ್ರಮಾಣದಲ್ಲಿ ೧೦೦ಕ್ಕೆ ೫೫ರಷ್ಟು, ಸುಪೀಕ ತೆಯ ಸಾಧನಗಳ ಒಟ್ಟು ಪ್ರಮಾಣದಲ್ಲಿ ೧೦೦ಕ್ಕೆ ೪೦ರಷ್ಟು ವ್ಯವಹಾರವನ್ನು ಈ ಸಹಕಾರಿ ಸಂಘಗಳೇ ಮಾಡುತ್ತವೆ.

೩ **ಹಾಲಂಡ:**—ಪತ್ತಿನ ಬ್ಯಾಂಕು, ಹೈನದ ಸಂಘ, ಖರೀದಿಯ ಸಂಘ, ಒಕ್ಕುವ ಸಂಘ, ವಿಮಾ ಸಂಘ ಈ ಮೊದಲಾದ ರೂಪಗಳಲ್ಲಿ ಹಾಲಂಡಿನಲ್ಲಿ ಒಕ್ಕಲುತನದ ಸಹಕಾರವು ಬೆಳೆಯಿತು ೧೯೪೯ರಲ್ಲಿ ಸಹಕಾರಿ ಕಾಯಿದೆ ಯನ್ವಯ ನೋಂದಿಸಲ್ಪಟ್ಟ ಸಂಘಗಳ ಸಂಖ್ಯೆ ೩೯೭೫ ಇದ್ದಿತು. ಇವುಗಳ ಜೊತೆಗೆ ನೋಂದಿಸಲ್ಪಡದೇ ಇದ್ದ ಅಸಂಖ್ಯ ಸಂಘಗಳು ಸಹಕಾರಿ ತತ್ವಗಳನ್ನಾಯು

ತಮ್ಮ ವ್ಯವಹಾರವನ್ನು ಸಾಗಿಸುತ್ತವೆ ಸಹಕಾರಿ ಕಾಯಿದೆ ಮತ್ತು ವಿಶೇಷ ಮತ್ತು ಸರ್ವಸಾಮಾನ್ಯ ಕಾಯಿದೆಗಳನ್ವಯ ನೋಂದಿಸಲ್ಪಟ್ಟ ಸಹಕಾರಿ ಸಂಘಗಳ ಅಂಕೆ ಸಂಖ್ಯೆಗಳನ್ನು ಇಲ್ಲಿ ಕೊಡಲಾಗಿದೆ.

| ಪ್ರಕಾರಗಳು | ಸಂಖ್ಯೆ |
|---|---|
| ಮಧ್ಯವರ್ತಿ ಬ್ಯಾಂಕುಗಳು | ೨ |
| ಹೈನದ ಬ್ಯಾಂಕುಗಳು | ೨ |
| ಒಕ್ಕಲುತನದ ಪತ್ತಿನ ಸಂಘಗಳು | ೧,೩೯೦ |
| ಖರೀದಿ ವಿಕ್ರಿ ಸಂಘಗಳು | ೧,೧೬೦ |
| ಖರೀದಿ ವಿಕ್ರಿ ಸಂಘಗಳ ಕೇಂದ್ರ ಸಂಸ್ಥೆಗಳು | ೫ |
| ಬೀಜದ ಆಲೂಗಡ್ಡೆಗಳ ಉಗ್ರಾಣಗಳು | ೧೨೩ |
| ಸಹಕಾರಿ ಹೈನದ ಸಂಘಗಳು | ೪೫೦ |
| ಮಾರಾಟದ ಸಂಸ್ಥೆಗಳು | ೭ |
| ಸಹಕಾರಿ ಹೈನದ ಕಾರಖಾನೆಯ ಪ್ರಾಂತಿಕ ಸಂಸ್ಥೆಗಳು | ೮ |
| ರಾಷ್ಟ್ರೀಯ ಹೈನದ ಯೂನಿಯನ್ | ೧ |
| ಸಹಕಾರಿ ನಾರಿನ ಕಾರಖಾನೆ | ೧ |
| ಹುಲ್ಲು ಒಣಗಿಸುವ ಸಹಕಾರಿ ಸಂಘಗಳು | ೫೨ |
| ಕಾಯಿಪಲ್ಲೆ ಸಂಘಗಳು | ೧೬೩ |
| ಹಣ್ಣು ಹಂಪಲ, ಕಾಯಿಪಲ್ಲೆ, ಹೂ ಮೊದಲಾದವುಗಳ ಮಾರಾಟದ ಸಂಘಗಳ ಕೇಂದ್ರ ಸಂಸ್ಥೆ | ೧ |
| ತತ್ತಿ ಮಾರಾಟ ಸಂಘಗಳು | ೪೪ |
| ತತ್ತಿ ಸಂಗ್ರಹ ಸಂಘಗಳು | ೮೦೦ |
| ಬೀಜ ಮತ್ತು ಬೀಜದ ಆಲೂಗಡ್ಡೆ ಮಾರಾಟ ಸಂಘಗಳು | ೩೮ |
| ಯಂತ್ರ ಸಾಮಗ್ರಿ ಸಂಘಗಳು | ೩೨೩ |
| ಒಕ್ಕಲುತನದ ಸಾಧನ ಸಾಮಗ್ರಿ ಮತ್ತು ಯಂತ್ರ ಸಾಮಗ್ರಿಗಳನ್ನು ಖರೀದಿ ವಿಕ್ರಿ ಮಾಡುವ ಸಂಸ್ಥೆಗಳು | ೩೬೪ |
| ಕೃತ್ರಿಮ ರೀತಿಯಿಂದ ಬಿತ್ತುವ ಪ್ರಯೋಗ ಮಾಡುವ ಸಂಘಗಳು | ೧೪೩ |
| ಗ್ರಾಹಕರ ಸಂಘಗಳು | ೩೦೮ |
| ಗ್ರಾಹಕ ಸಂಘಗಳ ಕೇಂದ್ರ ಸಂಸ್ಥೆ | ೧ |
| ವಿಮಾ ಕಂಪನಿಗಳು | ೬೪೧ |
| ಪರಸ್ಪರ ಪುನರ್ವಿಮಾ ಕಂಪನಿಗಳು | ೧೩೬ |
| ಆಣೆಕಲ್ಲು ವಿಮಾ ಸಂಘಗಳು | ೧೩ |
| ಅಂತ್ಯಕ್ರಿಯೆಯ ಸಂಘಗಳು | ೧,೦೧೫ |
| ಗೃಹ ನಿರ್ಮಾಣ ಸಂಘಗಳು | ೧,೧೦೦ |
| ಕಿರಕುಳ ವ್ಯಾಪಾರಿಗಳ ಸಹಕಾರಿ ಸಂಘಗಳು | ೫೧ |

| | |
|---|---|
| ಕಟುಕರ ಸಹಕಾರಿ ಸಂಘಗಳು | ೧೦ |
| ಕಾಳು ಒಕ್ಕುವ ಸಹಕಾರಿ ಸಂಘಗಳು | ೨೬೩ |
| ರಟ್ಟು ತಯಾರಿಸುವ ಕಾರಖಾನೆಗಳು | ೧೯ |
| ಬೀಟಗಡ್ಡೆಯಿಂದ ಸಕ್ಕರಿ ತಯಾರಿಸುವ ಕಾರಖಾನೆಗಳು | ೬ |
| ಆಲೂಗಡ್ಡೆ ಹಿಟ್ಟಿನ ಕಾರಖಾನೆಗಳು | ೧೫ |
| ಕೃತ್ರಿಮ ಸುಪೀಕತೆಯ ಸಾಧನೆಗಳ ಕಾರಖಾನೆಗಳು | ೧ |

**ಪತ್ತಿನ ಬ್ಯಾಂಕುಗಳು.—** ವಿಶೇಷತ ಇಲ್ಲಿಯ ಪತ್ತಿನ ಬ್ಯಾಂಕುಗಳು ಹೆಚ್ಚು ಗಮನಾರ್ಹವಾಗಿವೆ ಮೂಲತಃ ಅವು ಸಾಲ ಕೊಡುವ ಬ್ಯಾಂಕುಗಳಿಗಿಂತ ಹೆಚ್ಚಾಗಿ ಉಳಿತಾಯದ ಬ್ಯಾಂಕುಗಳಾಗಿ ಪರಿಣಮಿಸಿವೆ. ೧೯೪೫ರ ಅಂತ್ಯಕ್ಕೆ ಈ ಬ್ಯಾಂಕುಗಳಲ್ಲಿ ಉಳಿತಾಯದ ರೇವಿನ ಹಣವು ೨೫೦ ಕೋಟಿ ರೂ.ಗಳಿಗಿಂತ ಹೆಚ್ಚಾಗಿದ್ದಿತು ಅಲ್ಲಿಯ ಹಳ್ಳಿಯ ಬ್ಯಾಂಕುಗಳನ್ನು ಮುಂಬಯಿ ರಾಜ್ಯದಲ್ಲಿಯ ಅರ್ಬನ್ ಬ್ಯಾಂಕುಗಳಿಗೆ ಹೋಲಿಸಬಹುದು ಇಂಥ ಬ್ಯಾಂಕುಗಳ ಸಂಖ್ಯೆ ಅಲ್ಲಿ ೧೩೯೦ ಇದ್ದಿತು ೩೧-೧೨-೧೯೪೭ಕ್ಕೆ ಅವುಗಳ ಸದಸ್ಯರ ಸಂಖ್ಯೆಯು ೨,೬೦,೫೨೨ ಮತ್ತು ರೇವುದಾರರ ಸಂಖ್ಯೆಯು ೧೨,೭೦,೮೦೭ ಇದ್ದಿತು ಸದಸ್ಯರಿಗೆ ಕೊಟ್ಟ ಸಾಲ ಮತ್ತು ಅವರಿಂದ ಬರತಕ್ಕ ಸಾಲ ಅನುಕ್ರಮವಾಗಿ ೧೦,೮೦,೯೫,೦೦೦ ರೂ ಗಳು ಮತ್ತು ೧೨,೮೪,೨೬,೦೦೦ ರೂ ಇದ್ದಿತು ಅಲ್ಲಿ ೪೫೦ ಸಹಕಾರಿ ಹೈನದ ಸಂಘಗಳು ಇದ್ದವು ಅವು ನೂರಕ್ಕೆ ೮೨ರಷ್ಟು ಬೆಣ್ಣೆ ಉತ್ಪಾದನೆ, ೬೩ರಷ್ಟು ಸಂಗ್ರಹಿತ ಹಾಲು, ೮೧ರಷ್ಟು ಗಿಣ್ಣು, ೮೩ರಷ್ಟು ಖವೆ ಉತ್ಪಾದನೆಯ ಕಾರ್ಯವನ್ನು ಕೈಕೊಂಡಿವೆ. ಅಲ್ಲಿ ೬೧೨ ಲಿಲಾವಿನ ಮಳಿಗೆ ಗಳಿದ್ದು ೬೦ ಸಾವಿರ ಸದಸ್ಯರಿರುವರು ೧೯೫೦ರಲ್ಲಿ ಒಟ್ಟು ಲಿಲಾವಿನ ವ್ಯವಹಾರವು ೩೦,೦೦,೦೦,೦೦೦ ರೂ ಗಳಷ್ಟಾಗಿದ್ದಿತು ೧೧೬೧ ಸ್ಥಾನಿಕ ಖರೀದಿ ವಿಕ್ರಿ ಸಂಸ್ಥೆಗಳಿದ್ದು ೧,೪೫,೦೦೦ ಸದಸ್ಯರಿರುವರು ಈ ಸಂಘಗಳು ತಮ್ಮ ಸದಸ್ಯರಿಗೆ ಮೇವು-ಮಿಡಚಿ, ಬೆಳೆಯ ಸಾಧನೆ, ಯಂತ್ರಸಾಮಗ್ರಿ, ಉರವಲು, ಬೀಜ ಮೊದಲಾದ ಒಕ್ಕಲುತನದ ಸಾಮಗ್ರಿಗಳನ್ನು ಪೂರೈಸುತ್ತವೆ ಒಕ್ಕಲಿಗರ ಹೊಲದ ಹುಟ್ಟುವಳಿಯನ್ನೂ ಉತ್ಪಾದನೆಗಳನ್ನೂ ಇವು ಮಾರುತ್ತವೆ. ಈ ಎಲ್ಲ ಸಂಘಗಳ ವಾರ್ಷಿಕ ವ್ಯವಹಾರವು ೨,೦೦,೧೫೨ ಟನ್ ಇದ್ದು ಆದರ ಬೆಲೆಯು ೧೩ ಕೋಟಿ ಗಿಲ್ಡರದಷ್ಟಾಗಬಹುದು. ಆಹಾರ ಮತ್ತು ಬೆಳೆಯ ಸಾಧನೆಗಳ ಒಟ್ಟು ಪ್ರಮಾಣದಲ್ಲಿ ಈ ಸಂಘಗಳು ನೂರಕ್ಕೆ ೬೦ರಷ್ಟು ಪೂರೈಸುತ್ತವೆ ಸ್ಥಾನಿಕ ತತ್ತಿ ಸಂಗ್ರಹ ಸಂಘಗಳು ೮೦೦ ಇದ್ದು ೪೪ ಸಾವಿರ ಸದಸ್ಯರಿರುವರು ಈ ಸ್ಥಾನಿಕ ತತ್ತಿ ಸಂಘಗಳು ತಮ್ಮತಮ್ಮಲ್ಲಿ ೪೪ ಕೇಂದ್ರ ಸಂಸ್ಥೆಗಳನ್ನು ರಚಿಸಿಕೊಂಡಿವೆ ಈ ಎಲ್ಲ ಕೇಂದ್ರಗಳ ಸರಾಸರಿ ವ್ಯವಹಾರವು ೨ ಕೋಟಿ ೯೦ ಲಕ್ಷ ಗಿಲ್ಡರ (೩,೬೨,೫೦,೦೦೦ ರೂ ) ಇರುತ್ತದೆ ಅದೇ ಮೇರೆಗೆ ಗೃಹರಚನಾ ಸಂಘಗಳ ಸಂಖ್ಯೆಯು ೧೦೦೦ ಇರುತ್ತದೆ. ಈ ಸಂಘಗಳು ಸುಮಾರು ೧,೬೦,೦೦೦ ಗೃಹಗಳ ರಚನೆಯನ್ನು ಮಾಡಿವೆ ೧೦೧೫ ಅಂತ್ಯಕ್ರಿಯೆಯ ಸಂಸ್ಥೆಗಳು ಇದ್ದು ೫,೮೧,೦೦೦ ಸದಸ್ಯರಿರುವರು ೨೪೧ ಪರಸ್ಪರ ಬೆಂಕಿ ವಿಮಾ ಸಂಘಗಳಿದ್ದು

**ಉತ್ಪಾದಕ ಸಂಸ್ಥೆಗಳು.**

| | | |
|---|---|---|
| ಪರಸ್ಪರ ನೀರಾವರಿ ಕಂಪನಿಗಳು (೧೯೪೦) | ೪,೪,೩೨ | ೧,೪೮,೪೯೬ |
| ಹೈನದ ಹೋರಿ ಸಂಘಗಳು (ಜಾನೇವಾರಿ ೧೯೪೯) | ೭೯ | ೧,೧೩೩ |
| ಗೋ ಸುಧಾರಣಾ ಸಂಸ್ಥೆಗಳು (ಜಾನೇವಾರಿ ೧೯೪೯) | ೧,೭೮೭ | ೩೫,೮೫೭ |
| ಸಹಕಾರಿ ಗೋ ಸಂವರ್ಧನ ಸಂಘಗಳು (ಜನವರಿ ೧೯೪೯) | ೧,೨೬೩ | ೩,೧೬,೧೭೭ |
| ಹುಲ್ಲುಗಾವಲು ಸಂಘಗಳು (೩೦–೬–೧೯೪೮) | ೩೦ | ೧,೩೧೧ |
| ಭಾರತೀಯ ಉತ್ಕರ್ಷ ಸಂಘಗಳು (೩೧–೧೨–೧೯೪೭) | ೨೦೫ | ೧೧,೨೭೨ |
| ಭೂಸತ್ವ ರಕ್ಷಣಾ ಸಂಘಗಳು (೩೦–೬–೧೯೪೯) | ೨,೧೬೪ | ೭,೪೦,೦೦೦ |

**ಇತರ ಸಂಘಗಳು**

| | | |
|---|---|---|
| ರೈತರ ಅಂತ್ಯಕ್ರಿಯೆಯ ಸಂಸ್ಥೆಗಳು (೩೧–೧೨–೧೯೪೮) | ೪೧ | ೩೦,೨೯೦ |
| ಗ್ರಾಮಾಂತರ ಆರೋಗ್ಯ ಸಂಘಗಳು (೧೯೪೮) | ೪೭ | ೨೩,೬೩೧ |

ಅಮೇರಿಕೆಯಲ್ಲಿಯ ಒಕ್ಕಲಿಗರ ಸಾಮಾಜಿಕ ಆರ್ಥಿಕ ಸಮಸ್ಯೆಗಳ ನಿವಾರಣೆಗಾಗಿ ಸಹಕಾರವು ಬೆಳೆದುಕೊಂಡಿರುವ ಚಿತ್ರವನ್ನು ಮೇಲಿನ ಅಂಕೆ ಸಂಖ್ಯೆಗಳು ತೋರಿಸುತ್ತವೆ

೭ **ಫ್ರಾನ್ಸ್:—** ಉತ್ಪಾದಕರ ಆಂದೋಲನಕ್ಕೆ ಫ್ರಾನ್ಸೇ ತವರುಮನೆ ಎಂದು ಹೇಳಬಹುದು ಸಹಕಾರದ ಈ ದಿಶೆಯಲ್ಲಿ ಫ್ರಾನ್ಸು ಮುಂದುವರಿಯಿತು ೧೯೪೬ರಲ್ಲಿ ಫ್ರಾನ್ಸಿನಲ್ಲಿ ೬೭೪ ಉತ್ಪಾದಕರ ಸಂಘಗಳಿದ್ದವು. ಅವುಗಳಲ್ಲಿ ೩೫,೦೦೦ ನೌಕರರಿದ್ದು ಈ ನೌಕರರಲ್ಲಿ ೧೫,೦೦೦ ಸದಸ್ಯರಿದ್ದರು

ಇಂಗ್ಲಂಡಿಗಿಂತ ಫ್ರಾನ್ಸಿನಲ್ಲಿ ಉತ್ಪಾದಕ ಸಹಕಾರಿ ಆಂದೋಲನವು ಚನ್ನಾಗಿ ಬೆಳೆದಿದೆಯಾದರೂ ಇನ್ನೂ ಅದರ ಪರಿಮಿತಿಯು ಚಿಕ್ಕ ಚಿಕ್ಕ ಉದ್ಯೋಗಗಳ ಮತ್ತು ಕುಶಲ ವ್ಯಾಪಾರಿಗಳ ಮಟ್ಟಿಗೆನೇ ಇದೆ ಉತ್ಪಾದಕರ ಸಂಘಗಳ ಸರಕುಗಳನ್ನು ಮಾರಾಟ ಮಾಡುವ ವಿಧಾನವು ಇಲ್ಲಿ ಇಂಗ್ಲಂಡಿಗಿಂತ ಬೇರೆ ಸ್ವರೂಪದ್ದಾಗಿದೆ ಈ ಎಲ್ಲ ಸರಕುಗಳನ್ನು ಸರಕಾರ ಮತ್ತು ನಗರ ಸಭಾ ಸಂಸ್ಥೆಗಳು ಕೊಂಡುಕೊಳ್ಳುತ್ತವೆ. ಸರಕಾರವು ಈ ಸಂಘಗಳಿಗೆ ಸಹಾಯಧನ, ಸಾಲ, ಸವಲತ್ತು, ಸೌಕರ್ಯ ಮೊದಲಾದವುಗಳನ್ನು ಮತ್ತು ಗುತ್ತಿಗೆಯ ವ್ಯವಹಾರವನ್ನು

ಒದಗಿಸಿಕೊಡುತ್ತದೆ ಉತ್ಪಾದಕರ ಸಂಘಗಳಿಗೆ ಸರಕಾರವೇ ದೊಡ್ಡ ಗಿರಾಕಿಯಾಗಿದೆ ಅಲ್ಲಿ ಈಗ ೬೨೦ ದುಡಿಮೆಗಾರರ ಉತ್ಪಾದಕ ಸಂಘಗಳಿವೆ ಕೆಳಗಿನ ವ್ಯವಹಾರವನ್ನು ಕೈಕೊಂಡ ( ಕಾನ್‌ಫೆಡರೇಶನ್ ) ರಾಷ್ಟ್ರೀಯ ಸಂಸ್ಥೆಯ ಸದಸ್ಯತ್ವವನ್ನು ಅನೇಕ ಮಹತ್ವದ ಉತ್ಪಾದಕ ಸಂಘಗಳು ವಹಿಸಿವೆ

| | |
|---|---|
| ಗೃಹರಚನೆ ಮತ್ತು ಸಾರ್ವಜನಿಕ ಕಾರ್ಯ | ೩೮೭ |
| ಮುದ್ರಣ ಮತ್ತು ಕಾಗದ ವ್ಯವಹಾರ | ೬೩ |
| ಧಾತುಗಳು | ೪೫ |
| ಇಮಾರತಿ ಕಟ್ಟಿಗೆ ಉದ್ದಿಮೆಗಳು | ೩೧ |
| ನಾರಿಗೆ | ೧೪ |
| ಜವಳಿ | ೨೫ |
| ಆಹಾರ | ೧೦ |
| ಕಟ್ಟಿಗೆ ಮತ್ತು ಕಲ್ಲಿದ್ದಲಿ | ೬ |
| ಕಲ್ಲುಗಣಿಗಳು | ೧೫ |
| ಕಾಜಿನ ಕೆಲಸ | ೬ |
| ಗುಮಾಸ್ತರ ಬ್ಯಾಂಕುಗಳು | ೩ |
| ಇತರ | ೩೯ |
| ತಾಂತ್ರಿಕ ತಜ್ಞರು | ೧೫ |
| ಚಲಚ್ಚಿತ್ರ | ೧೫ |
| ಒಟ್ಟು | ೬೭೪ |

ಈ ಕಾನ್‌ಫೆಡರೇಶನ್ನಿನ ಉದ್ದೇಶಗಳು —

೧ ಸದಸ್ಯ ಸಂಘಗಳ ಅವಶ್ಯಕತೆಗಳನ್ನು ತನ್ನ ಬೇರೆ ಬೇರೆ ಶಾಖೆಗಳಿಂದಾಗಲೀ ಅಥವಾ ಸ್ವ ಆಡಳಿತದ ವಿಭಾಗಗಳಿಂದಾಗಲೀ ಪೂರೈಸುವದು

೨ ಹೊಸ ಸಂಘಗಳ ಸಂಸ್ಥಾಪನೆಗೆ ಸಹಾಯ ನೀಡುವದು

ಕಾರ್ಯಕರ್ತರ ಪರಿಸ್ಥಿತಿ ಸುಧಾರಣೆಯೇ ಅದರ ಮೂಲ ಧ್ಯೇಯವಾಗಿದ ಸಹಕಾರಿ ತತ್ವಗಳನ್ವಯ ಕಾರ್ಯಮಾಡುವ ಸಹಕಾರಿ ಸಂಘಗಳೇ ಈ ಸಂಸ್ಥೆಯ ಸದಸ್ಯರು ಇತ್ತಿತ್ತಲಾಗಿ ಒಕ್ಕಲುತನದ ಸಹಕಾರಿ ಸಂಘಗಳು ಹೆಚ್ಚಾಗಿ ಬೆಳೆಯತೊಡಗಿವೆ ೧೯೩೯ರಲ್ಲಿ ಈ ಸಂಘಗಳ ಸಂಖ್ಯೆಯು ೬,೫೦೦

ಇದ್ದರೆ ೧೯೪೭ರಲ್ಲಿ ೧೩,೦೦೦ಕ್ಕೇರಿತು ಈಗ ಆ ಸಂಖ್ಯೆಯು ೧೫,೦೦೦ಕ್ಕೆ ಮುಟ್ಟಿದೆ ಎಂದು ಹೇಳಲಾಗುತ್ತದೆ ಸುಮಾರು ೪,೯೫೯ ಒಕ್ಕಲುತನದ ಪತ್ತಿನ ಸಂಘಗಳು ಇವೆ ಒಕ್ಕಲುತನದ ಉತ್ಪಾದನೆ, ರೂಪಾಂತರ, ಸಂಗ್ರಹ, ಮಾರಾಟ ಈ ಮೊದಲಾದ ಕ್ಷೇತ್ರಗಳಲ್ಲಿ ಸಹಕಾರಿ ಸಂಘಗಳು ಪ್ರಧಾನ ಪಾತ್ರವನ್ನು ವಹಿಸುತ್ತವೆ ಹೈನದ ಸಂಘಗಳು ಪೇಟೆಗೆ ಬರುವ ಹಾಲಿನಲ್ಲಿ ನೂರಕ್ಕೆ ೪೧ರಷ್ಟು ವ್ಯವಹಾರ ಮಾಡುತ್ತವೆ ೯೪೧ ಮದ್ಯ ಮಾರುವ ಸಂಘಗಳಿದ್ದು ೧,೮೮,೦೦೦ ಸದಸ್ಯರಿರುವರು ಅವುಗಳಲ್ಲಿ ೧,೭೮,೦೦,೦೦೦ ಲೆಕ್ಟೊಲಿಟರ (ಮಾಪು) ಮದ್ಯವನ್ನು ಸಂಗ್ರಹಿಸುವ ವ್ಯವಸ್ಥೆ ಇದೆ ಒಟ್ಟು ಉತ್ಪಾದನೆಯಲ್ಲಿ ನೂರಕ್ಕೆ ೨೪ರಷ್ಟು ಮದ್ಯದ ವ್ಯವಹಾರವನ್ನು ಈ ಸಂಘಗಳು ಸಾಗಿಸುತ್ತವೆ ೧೦೯೩ ದ್ವಿದಲ ಧಾನ್ಯಗಳ ಸಹಕಾರಿ ಸಂಘಗಳಿದ್ದು ೧,೨೫,೦೦೦ ಸದಸ್ಯರಿರುವರು; ಮತ್ತು ೨,೫೫,೦೦೦ ಸದಸ್ಯೇತರ ಗಿರಾಕಿಗಳಿರುವರು ೧೯೪೮ರಲ್ಲಿ ಈ ಸಂಘಗಳು ಒಟ್ಟು ಉತ್ಪಾದನೆಯಲ್ಲಿ ನೂರಕ್ಕೆ ೭೧ರಷ್ಟು ವ್ಯವಹಾರ ಮಾಡಿದವು ನೂರಕ್ಕೆ ೬೫ರಷ್ಟು ಗೊಬ್ಬರ, ೪೦ರಿಂದ ೪೫ರಷ್ಟು ಹುರಿ, ೪೫ರಷ್ಟು ಹಿಂಡಿ ಮತ್ತು ಮೇವು, ೪೦ರಷ್ಟು ಕ್ರಿಮಿನಾಶಕ ದ್ರವ್ಯಗಳನ್ನು ಸಹಕಾರಿ ಸಂಘಗಳು ಪೂರೈಸುತ್ತವೆ ಹೀಗೆ ವಿವಿಧ ರೀತಿಗಳಲ್ಲಿ ರೈತರ ಬೇಡಿಕೆಗಳನ್ನು ಪೂರೈಸುತ್ತ ಒಕ್ಕಲುತನದ ಸಹಕಾರವು ಫ್ರಾನ್ಸಿನಲ್ಲಿ ಸರ್ವತೋಮುಖವಾಗಿ ಬೆಳೆಯಿತು

೮ **ಆಸ್ಟ್ರಿಯಾ** — ಆಸ್ಟ್ರಿಯಾದಲ್ಲಿ ೧೯ನೆಯ ಶತಮಾನದ ಕೊನೆಯಲ್ಲಿ ಒಕ್ಕಲುತನದ ಸಹಕಾರವು ಬೆಳೆಯತೊಡಗಿತು ರೈಫೀಜನ್ ಮಾದರಿಯ ಮೇರೆ ಪತ್ತಿನ ಸಂಘಗಳು ಸ್ಥಾಪಿಸಲ್ಪಟ್ಟವು ೧೮೮೬ರಲ್ಲಿ ಮೊಟ್ಟಮೊದಲಿಗೆ ಸ್ಥಾಪಿತವಾದ ಸಂಘವೆಂದರೆ ಮಿತವ್ಯಯ ಮತ್ತು ಪತ್ತಿನ ಸಂಘವು ಹೀಗೆ ಇತರ ಉತ್ಪಾದಕ ಮತ್ತು ಆರ್ಥಿಕ ಸಹಕಾರಿ ಸಂಘಗಳಿಗಿಂತ ರೈಫೀಜನ್ ಬ್ಯಾಂಕುಗಳೇ ಇಲ್ಲಿ ಮೊದಲು ಬೆಳೆಯತೊಡಗಿದವು ೧೯೩೮ರಲ್ಲಿ ಜರ್ಮನಿಯು ಆಸ್ಟ್ರಿಯಾವನ್ನು ಆಕ್ರಮಿಸಿದ ತರುವಾಯ ಸಹಕಾರಿ ಆಂದೋಲನದ ಬೆಳವಣಿಗೆಯು ಕುಂಠಿತವಾಯಿತು ನಾಜಿ ಪಕ್ಷಕ್ಕೆ ಸೋಲುಂಟಾದ ತರುವಾಯವೇ ಸಹಕಾರವು ಬೆಳೆಯತೊಡಗಿತು ೧೯೫೦ ಜನವರಿ ೧ಕ್ಕೆ ಕೇಂದ್ರ ಯುನಿಯನ್ನಿಗೆ ೪೨೨೩ ಸಂಘಗಳು ಸಮಾವೇಶವಾಗಿದ್ದು, ಅವುಗಳ ಸದಸ್ಯರ ಸಂಖ್ಯೆಯು ಸುಮಾರು ೮,೨೫,೦೦೦ ಇದ್ದಿತು ಈ ಸಂಘಗಳಲ್ಲಿ ೧೭೬೬ ಪತ್ತಿನ ಸಂಘಗಳು, ೧೨೪೭ ಹಾಲನ್ನು ರೂಪಾಂತರಿಸುವ ಸಂಘಗಳು, ೧೯೫ ಖರೀದಿ ವಿಕ್ರಿ ಸಂಘಗಳು, ೩೯೮ ದನಗಳ ಮತ್ತು ಹುಲ್ಲುಗಾವಲುಗಳ ಸಂಘಗಳು ಮತ್ತು ೨೬೬ ವಿದ್ಯುತ್ ಪೂರೈಕೆಯ ಸಂಘಗಳು ಇದ್ದವು

೯ **ಇಸ್ರಾಯಿಲ್ (ಪ್ಯಾಲೆಸ್ಟಾಯಿನ್)** — ಇತ್ತಿತ್ತಲಾಗಿ ಸಹಕಾರಿ ಬೇಸಾಯವು ಪ್ಯಾಲೆಸ್ಟಾಯಿನ್ನಿನಲ್ಲಿ ಚನ್ನಾಗಿ ಬೆಳದಿದೆ ೧೯೫೦ರಲ್ಲಿಯ ಯಹೂದಿ ಜನರ ಸಹಕಾರಿ ಸಂಘಗಳ ಅಂಕೆ ಸಂಖ್ಯೆಗಳನ್ನು ಕೆಳಗೆ ಕೊಡಲಾಗಿದೆ

| ಪ್ರಕಾರಗಳು. | ಸಂಖ್ಯೆ |
|---|---|
| ವಸಾಹತುಗಳ ಸಂಘಗಳು | ೪೧೯ |
| ಒಕ್ಕಲುತನದ ಸಂಘಗಳು ( ನೀರು ಪೂರೈಕೆಯ ಸಂಘಗಳನ್ನುಳಿದು ) | ೨೭೯ |
| ಪತ್ತಿನ ಸಂಘಗಳು | ೧೦೨ |
| ಆಪದ್ಧನ ಮತ್ತು ವಿರಾಮ ವೇತನ ನಿಧಿ ಸಂಘಗಳು | ೩೦೪ |
| ಉತ್ಪಾದಕ ಸಾರಿಗೆಯ ಮತ್ತು ಸೇವೆಯ ದುಡಿಮೆದಾರರ ಸಂಘಗಳು | ೪೫೪ |
| ಗ್ರಾಹಕರ ಸಂಘಗಳು | ೧೮೯ |
| ಮನೆ ಕಟ್ಟುವ ಮತ್ತು ಉಪನಗರದ ಸಂಘಗಳು | ೩೬೬ |
| ಇತರ ಪ್ರಾಥಮಿಕ ಸಂಘಗಳು | ೧೮ |
| ಲೆಕ್ಕಪರಿಶೋಧಕರ ಸಂಘಗಳು | ೯ |
| ಒಟ್ಟು | ೨,೧೮೦ |

೧೯೪೮ರಿಂದ ಸಹಕಾರಿ ವಸಾಹತು ಸಂಘಗಳು ಹೆಚ್ಚಾಗಿ ಬೆಳೆಯುತ್ತಿದ್ದು ಉತ್ತಮರೀತಿಯಲ್ಲಿ ಕಾರ್ಯಮಾಡುತ್ತವೆ ಕುಟ್ಝಾ ಎಂಬ ಪದ್ಧತಿಯು ವ್ಯಾಲೆಸ್ಟಾಯಿನ್ನಿನಲ್ಲಿ ಸುಪ್ರಸಿದ್ಧವಾದ ಸಹಕಾರಿ ಬೇಸಾಯದ ಪದ್ಧತಿಯಾಗಿದೆ ಈ ಸಂಘಗಳು ಸ್ವಯಂ ಸ್ಫೂರ್ತಿಯಿಂದ ಉದಯವಾಗಿ, ರಭಸದಿಂದ ವಿಕಾಸ ಗೊಂಡವು ಜೀವನ ಸಾಧನಗಳನ್ನೂ ಈ ಸಂಘಗಳು ಪೂರೈಸುತ್ತವೆ ೧೯೪೭ರಲ್ಲಿ ಒಕ್ಕಲುತನದ ಸಹಕಾರಿ ವಸಾಹತು ಸಂಘಗಳು ಸುಮಾರು ೬೫,೦೦೦ ಜನರಿಗೆ ಜೀವನೋಪಾಯವನ್ನು ಕಲ್ಪಿಸಿಕೊಟ್ಟವು

೧೦ **ರಸಿಯಾ** — ರಸಿಯಾದಲ್ಲಿ ಬೊಲ್ಸೆವಿಕ್ ಪಕ್ಷದ ಧುರೀಣರ ಕಾಲಕ್ಕೆ ಸಹಕಾರಿ ಆಂದೋಲನವು ಮುಗ್ಗರಿಸಿತು ಆದರೆ ಮೊದಲನೆಯ ಪಂಚ ವಾರ್ಷಿಕ ಯೋಜನೆಯ ಕಾಲಕ್ಕೆ ಗ್ರಾಹಕರ ಸಹಕಾರಿ ಸಂಘಗಳು ವಿಶೇಷವಾಗಿ ಬೆಳೆದುಕೊಂಡವು ೧೯೩೫ರಲ್ಲಿ ಸೊವಿಯಟ್ ಸರಕಾರವು ಆಜ್ಞೆ ವಿಧಿಸಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿಯ ಎಲ್ಲ ವಿತರಣಾ ಸಂಘಗಳ ಕಾರ್ಯಗಳನ್ನು ಸರಕಾರೀ ವ್ಯಾಪಾರೀ ಸಂಸ್ಥೆಗಳಿಗೆ ಪಗಾರಯಿಸಿತು ಇದರ ಪರಿಣಾಮವಾಗಿ ಸದಸ್ಯರ ಸಂಖ್ಯೆಯು ೭ ಕೋಟಿ ೩೦ ಲಕ್ಷದಿಂದ ೩ ಕೋಟಿಗೆ ಒಮ್ಮೆಲೆ ಇಳಿಯಿತು ಆದಾಗ್ಯೂ ಹಳ್ಳಿಗಳಲ್ಲಿ ವಿತರಣಾ ಸಂಘಗಳು ಪ್ರಗತಿಹೊಂದುತ್ತಲಿವೆ ೧೯೪೦ರಲ್ಲಿ ೨೮,೪೦೦ ಸಂಘಗಳಿದ್ದು ೩೬,೦೦೦,೦೦೦ ಸದಸ್ಯರಿದ್ದರು ಈ ಸಂಘಗಳಿಗೆ ೧೭೨,೦೦೦ ಅಂಗಡಿಗಳು, ೩೩,೬೦೦ ಮಳಿಗಗಳು, ೧೯,೦೦೦ ಗ್ರಾಮಾಂತರ ಸಾರ್ವತ್ರಿಕ ಉಗ್ರಾಣಗಳು ಮತ್ತು ೨೭ ಜಿಲ್ಲಾ ಸ್ಟೋರುಗಳಿದ್ದವು ಗ್ರಾಹಕರ ಸಂಘಗಳ ವ್ಯವಹಾರವು ೪೩,೦೦,೦೦,೦೦,೦೦೦ ರೂಬಲ್ಸ್ ಅಂದರೆ ದೇಶದ ಒಟ್ಟು ವ್ಯವಹಾರದಲ್ಲಿ ನೂರಕ್ಕೆ ೨೫ರಷ್ಟು ಆಗಿದ್ದಿತು

ಸಹಕಾರಿ ಬೇಸಾಯ ಪದ್ಧತಿಯು ರಶಿಯದಲ್ಲಿ ಚನ್ನಾಗಿ ಬೆಳೆದಿದೆ ಇಡೀ ಗ್ರಾಮವು ಭೂಮಿಯ ಮುಖ್ಯ ಭಾಗವನ್ನು ಸಾಮೂಹಿಕವಾಗಿ ಸಾಗುವಳಿ ಮಾಡುತ್ತದೆ ಮತ್ತು ರೈತರು ತಮ್ಮ ತಮ್ಮ ಹೊಲಗಳಲ್ಲಿ ಒಕ್ಕಲುತನದ ಉಪದಂಧೆಗಳನ್ನು ಮಾಡುತ್ತಾರೆ ಇಲ್ಲಿಯ ಸಹಕಾರಿ ಬೇಸಾಯ ಪದ್ಧತಿ ಎಂದರೆ ಸರಕಾರವು ನಿರ್ಮಿಸಿರುವ ಸಹಕಾರಿ ಸಂಸ್ಥೆಯಾಗಿದ್ದು, ಇದರಲ್ಲಿ ಕಡ್ಡಾಯದ ಸದಸ್ಯತ್ವವು ಬಳಕೆಯಲ್ಲಿ ಇದೆ, ಎಂದು ಜಿ ಡಿ ಎಚ್ ಕೋಲ್ ಮೊದಲಾದ ಸಹಕಾರಿ ತಜ್ಞರು ಅಭಿಪ್ರಾಯಪಟ್ಟಿರುವರು ಆದರೆ ಅಂತರ್ ರಾಷ್ಟ್ರೀಯ ಕೂಲಿ ಕಾರ ಸಂಸ್ಥೆಯು ಇದೊಂದು ಸಹಕಾರದ ಮಾದರಿಯಾಗಿದೆ ಎಂದು ಅಭಿಪ್ರಾಯ ಪಟ್ಟಿದೆ ಅದೇ ಮೇರೆಗೆ ರಶಿಯದಲ್ಲಿ ಯುದ್ಧ ಪೂರ್ವದಲ್ಲಿ ೧೪,೫೫೫ ಉತ್ಪಾದಕ ಸಂಘಗಳಿದ್ದು ಅವುಗಳ ಸದಸ್ಯರ ಸಂಖ್ಯೆ ೧,೮೭೨೦೦೦ ಇದ್ದಿತು ೧೯೩೭-೩೭ ರಲ್ಲಿ ೩೦೭೨ ಹೈನದ ಸಂಘಗಳು ಇದ್ದು ೩೯೯೧೪ ಟನ್ ಬೆಣ್ಣೆ, ૩೧೭೫ ಟನ್ ಗಿಣ್ಣಗಳ ಉತ್ಪಾದನೆ ಮಾಡಿದವು ಆದರೆ ಇತ್ತಿತ್ತಲಾಗಿ ರಶಿಯದಲ್ಲಿ ಸಹಕಾರಿ ಪ್ರಜಾಪ್ರಭುತ್ವವು ಹೆಚ್ಚಾಗಿ ಬಲಗೊಳ್ಳತೊಡಗಿದೆ ಸಂಘಗಳ ಕಾರ್ಯ ನಿರ್ವಹಣೆ ಮತ್ತು ನಿಯಂತ್ರಣಗಳಲ್ಲಿ ಸದಸ್ಯರು ಆಸಕ್ತಿಯಿಂದ ಭಾಗವಹಿಸುತ್ತಾರೆ

೧೧ **ಜಪಾನ —** ಆಧುನಿಕ ಸಹಕಾರವು ಜಪಾನದಲ್ಲಿ ೨೦ನೆಯ ಶತಮಾನದಲ್ಲಿ ಉದಯವಾಯಿತು ಸರಕಾರವೇ ಅದನ್ನು ಜಾರಿಯಲ್ಲಿ ತಂದಿತು ೧೯೦೦ರಲ್ಲಿ ಸಹಕಾರಿ ಸಂಘಗಳ ಕಾಯಿದೆಯು ಪಾಸಾಯಿತು ಕಾಯಿದೆಯ ಮೇರೆಗೆ ಪತ್ತಿನ ಸಂಘ, ಖರೀದಿ ಸಂಘ, ವಿಕ್ರೀ ಸಂಘ ಮತ್ತು ಪ್ರಯೋಜನ ಸಂಘ, ಹೀಗೆ ನಾಲ್ಕು ಪ್ರಕಾರದ ಸಂಘಗಳಿಗೆ ಮನ್ನಣೆ ಇದ್ದಿತು ಈ ಉದ್ದೇಶಗಳಲ್ಲಿ ಒಂದಕ್ಕಿಂತ ಹೆಚ್ಚು ಉದ್ದೇಶಗಳುಳ್ಳ ಸಂಘವನ್ನು ಸ್ಥಾಪಿಸಬಹುದು ಅಂಥ ಸಂಘ ಗಳಿಗೆ ಸಮ್ಮಿಶ್ರ ಉದ್ದೇಶಗಳ ಸಂಘಗಳೆಂದು ಕರೆಯಲಾಗುವದು ಸದಸ್ಯತ್ವದ ಮರ್ಯಾದೆಯು ಅನಿರ್ಬಂಧವಾಗಿದ್ದು ಪತ್ತಿನ ಸಂಘದಲ್ಲಿ ಮಾತ್ರ ಸದಸ್ಯರು ಒಂದೇ ಊರವರು ಇರತಕ್ಕದ್ದು. ಪ್ರತಿ ಸದಸ್ಯನಿಗೆ ಒಂದು ಮತ ಒಬ್ಬರ ಪರವಾಗಿ ಮತ್ತೊ ಬ್ಬರು ಮತ ಕೊಡಬಹುದು ಲಾಭದ ಕೆಲವು ಭಾಗವನ್ನು ಕಾದಿಟ್ಟ ನಿಧಿಗೆ ಒಯ್ಯ ಲಾಗುವದು ವ್ಯವಹಾರ ಮತ್ತು ಉತ್ಪನ್ನ ಕರಗಳಿಂದ ಈ ಸಂಸ್ಥೆಗಳು ಮುಕ್ತವಿರು ತ್ತವೆ ನೋಂದಣಿಯ ಮತ್ತು ಸ್ಟಾಂಪ ಕರದ ವಿಷಯದಲ್ಲಿಯೂ ಇವಕ್ಕೆ ವಿಶೇಷ ಸವಲತ್ತುಗಳಿವೆ "ಸಹಕಾರ" ಶಬ್ದದ ಉಪಯೋಗಕ್ಕೆ ಇತರ ಕ್ಷೇತ್ರದಲ್ಲಿ ನಿರ್ಬಂಧ ವಿರುತ್ತದೆ ವಿಶೇಷ ಕಾಯಿದೆಯನ್ವಯ ಸರಕಾರದವರು ಸಂಘಗಳನ್ನು ನೋಂದಿಸಿ ಅವುಗಳ ಮೇಲ್ವಿಚಾರಣೆ ನಿಯಂತ್ರಣಗಳನ್ನು ನಡೆಸುತ್ತಾರೆ ಕೇಂದ್ರ ಬ್ಯಾಂಕುಗಳ ಮುಖಾಂತರ ಈ ಸಂಸ್ಥೆಗಳಿಗೆ ಸರಕಾರದವರಿಂದ ಸಾಲದ ಸೌಕರ್ಯಗಳು ದೊರೆ ಯುತ್ತವೆ ಜಪಾನದಲ್ಲಿ ಸರಕಾರವೇ ಸಹಕಾರವನ್ನು ಪ್ರಾರಂಭಿಸಿ ಕೈಹಿಡಿದು ನಡೆಯಿಸಿ, ಬೆಳೆಯಿಸಿಕೊಂಡು ಬಂದಿದೆ

ಆದರೆ ೧೯೪೮ರಿಂದ ಜಪಾನದ ಆರ್ಥಿಕ ಪರಿಸ್ಥಿತಿಯಲ್ಲಿ ಮಹತ್ತರವಾದ ಸ್ಥಿತ್ಯಂತರಗಳು ಕಂಡುಬರುತ್ತಲಿವೆ ನಾಡಿನ ಆರ್ಥಿಕ ಪುನರ್ರಚನೆಯ ಕಾರ್ಯದಲ್ಲಿ ಸಹಕಾರವು ಮಹತ್ತರವಾದ ಪಾತ್ರವನ್ನು ವಹಿಸುತ್ತಲಿದೆ ಒಟ್ಟು ೩೨,೮೦೮

ಸ್ಥಾನಿಕ ಸಹಕಾರಿ ಸಂಘಗಳಿದ್ದು ಅವುಗಳಲ್ಲಿ ೧೬೭೫ ಗ್ರಾಮ ಬ್ಯಾಂಕುಗಳು ಇರುತ್ತವೆ ೧೩೩೦೮ ಸಂಘಗಳು ಸಾಮಾನ್ಯ ಉದ್ದೇಶದವುಗಳಾಗಿದ್ದರೂ, ಬ್ಯಾಂಕಿನ ವ್ಯವಹಾರವನ್ನು ಕೈಕೊಂಡಿವೆ ಇನ್ನುಳಿದವುಗಳು ವಿಶಿಷ್ಟ ಪ್ರಕಾರದ ಸಂಘಗಳು ಒಕ್ಕಲುತನದ ಸಹಕಾರಿ ಸಂಘಗಳ ಸದಸ್ಯರ ಸಂಖ್ಯೆಯು ಒಟ್ಟು ೮೨,೯೧,೧೮೬ ಇದ್ದು ಸುಮಾರು ೫ ಲಕ್ಷ ಜನರು ಕೃಷಿಕೇತರ ಸದಸ್ಯರಿರುವರು ರಾಷ್ಟ್ರೀಯ ವ್ಯವಹಾರದಲ್ಲಿ ಸಹಕಾರಿ ಸಂಘಗಳು ಮಾಡುವ ಒಕ್ಕಲುತನದ ವ್ಯವಹಾರದ ಅಂಕ–ಸಂಖ್ಯೆಗಳನ್ನು ಇಲ್ಲಿ ಕೊಡಲಾಗಿದೆ.—

| ಮಾರಾಟ. | | ಆವಶ್ಯಕ ಸರಕುಗಳು | |
|---|---|---|---|
| ಅಕ್ಕಿ | ೯೫% | ಒಕ್ಕಲುತನದ ಉಪಕರಣಗಳು | ೫೪% |
| ಜವೆ ಗೋದಿ (ಬಾರ್ಲಿ) | ೯೪% | ದನಗಳ ಔಷಧ | ೭೫% |
| ಸಿಹಿ ಆಲೂಗಡ್ಡ | ೯೯% | ಫಾರ್ಮ ವೇಪರ | ೫೦% |
| ಆಲೂಗಡ್ಡೆ | ೭೭% | ಆಹಾರ | ೩೫% |
| ಹುಲ್ಲಿನ ಸರಕುಗಳು | ೬೦% | ವಿಶೇಷ ಬಟ್ಟೆಗಳು | ೮೦% |
| ಚಹ | ೪೪% | ಸಾಮಾನ್ಯ ಬಟ್ಟೆಗಳು | ೨೦% |
| ಕಲ್ಲಿದ್ದಲಿ | ೫೦% | ರಬ್ಬರಿನ ಪಾದರಕ್ಷೆಗಳು | ೮೦% |
| ಲೀಸ್ಮಿ ಹುಳದ ಕೋಶ | ೭೦% | ಸಕ್ಕರ | ೬೭% |
| ಕಾಯಿಪಲ್ಲ | ೨೨% | ಉಪ್ಪು | ೬೦% |
| ಹಿಟ್ಟು | ೪೮% | ಬೆಳೆಯ ಸಾಧನೆ | ೬೯% |
| ಬಾಟ್ಲೆಯಲ್ಲಿ ಹಾಕಿದ ಸರಕು | ೩೩% | ಕಣಿಕ (ಮೇವು) | ೧೦೦% |
| ತ್ತಿ | ೨೦% | ಪೆಟ್ರೋಲಿಯಂ | ೬೦% |
| ಬೆಣ್ಣೆ | ೪% | ಟಾಯರ ಟ್ಯೂಬಗಳು | ೯೦% |
| ಖವೆ | ೩% | ಸಬಕಾರ | ೨೩% |

ಔದ್ಯೋಗಿಕ ಸಹಕಾರಿ ಸಂಘಗಳೂ ಜಪಾನದಲ್ಲಿ ಚನ್ನಾಗಿ ಬೆಳೆಯ ತೊಡಗಿವೆ

೧೨ **ಚೀನ:—** ಚೀನ ದೇಶಕ್ಕೆ ಸಹಕಾರ ತತ್ವವು ಹೊಸದಲ್ಲ ಅಲ್ಲಿಯ ಕೌಟುಂಬಿಕ ಪದ್ಧತಿಯು ಚೀನಿಯವರಿಗೆ ಗುಂಪುಗೂಡಿ ಕೆಲಸ ಮಾಡಲು ಕಲಿಸಿದೆ ಬುನಾದಿ ಕಾಲದಿಂದಲೂ ಅಲ್ಲಿ ಪತ್ತಿನ ಮತ್ತು ಪರಸ್ಪರ ಹಿತಕಾರಕ ಸಂಘಗಳು ಅಸ್ತಿತ್ವದಲ್ಲಿದ್ದವು ಆದರೆ ಆಧುನಿಕ ಸಹಕಾರವು ಇಪ್ಪತ್ತನೆಯ ಶತಮಾನದ

ಎರಡನೆಯ ದಶಕದಲ್ಲಿ ಪ್ರಾರಂಭವಾಯಿತು ಡಾ ಸನ್ ಯಟ್ ಸೇನ್ ಅವರೇ ಸಹಕಾರಿ ಆಂದೋಲನದ ಜನಕರೆಂದು ಹೇಳಬಹುದು ಇವರ ಪ್ರಯತ್ನ ಪ್ರೇರಣೆಗಳ ಮೇರೆಗೆ ಪ್ರೊ ಹೈಚ್ ಅವರು ೧೯೧೯ರಲ್ಲಿ ರಾಷ್ಟ್ರೀಯ ಸಹಕಾರಿ ಉಳಿತಾಯದ ಬ್ಯಾಂಕನ್ನು ಸ್ಥಾಪಿಸಿದರು ೧೯೨೨ರಿಂದ ಇತ್ತೀಚೆಗೆ ಆಂದೋಲನವು ಚನ್ನಾಗಿ ಬೆಳೆಯತೊಡಗಿತು ೧೯೩೭ರಲ್ಲಿ ಚೀನಾದಲ್ಲಿ ೪೭,೦೦೦ ಸಹಕಾರಿ ಸಂಘಗಳಿದ್ದವು ಅಂದಿನಿಂದ ಸಂಘಗಳ ಮತ್ತು ಸದಸ್ಯರ ಸಂಖ್ಯೆಯು ಭರದಿಂದ ಬೆಳೆಯುತ್ತಲೇ ಇದೆ ಇದಕ್ಕೆ ಸಾಕ್ಷಿಯಾಗಿ ೧೯೪೪ರಲ್ಲಿ ೧,೭೦,೦೦೦ ಸಂಘಗಳೂ, ೧೫೩ ಲಕ್ಷ ಸದಸ್ಯರೂ ಇದ್ದರು ಭಾರತದಲ್ಲಿ ಪತ್ತಿನ ಸಂಘಗಳ ಪ್ರಮಾಣವು ಹೆಚ್ಚಿದ್ದಂತೆ ಇಲ್ಲಿ ಇಲ್ಲ ೧೯೪೫ರಲ್ಲಿ ಗ್ರಾಹಕರ ಸಂಘಗಳ ಸಂಖ್ಯೆಯು ೩೭,೫೩೮ ಇದ್ದಿತು. ೧೯೩೭ರ ಬೇಸಿಗೆಯಲ್ಲಿ ಚೀನ, ಜಪಾನಗಳ ನಡುವೆ ಯುದ್ಧವು ಪ್ರಾರಂಭವಾಗಲು ಅನೇಕ ಹೊಸ ಹೊಸ ಸಮಸ್ಯೆಗಳು ಉದ್ಭವಿಸಿದವು ಚೀನಾದ ಕೆಲವು ಭಾಗಗಳನ್ನು ಜಪಾನವು ಆಕ್ರಮಿಸಿದುದರಿಂದ ಮತ್ತು ಉದ್ಯೋಗಗಳು ನಾಶವಾದುದರಿಂದ ನಿರಾಶ್ರಿತ ಗುಳೇಕಾರರ ಸಂಖ್ಯೆಯು ಹೆಚ್ಚಾಗತೊಡಗಿತು ಈ ಜನರ ಯೋಗ ಕ್ಷೇಮ ಮತ್ತು ಉದ್ಯೋಗಗಳ ಪ್ರಶ್ನೆಯು ಒಂದು ದೊಡ್ಡ ಸಮಸ್ಯೆಯಾಯಿತು ದೊಡ್ಡ ದೊಡ್ಡ ಉದ್ದಿಮೆಗಳೂ ನಾಶವಾಗಿ ಹೋದುದರಿಂದ ಸೈನಿಕ ಸರಕುಗಳ ಪೂರೈಕೆಯೂ ಒಂದು ಸಮಸ್ಯೆಯಾಗಿ ಉಳಿಯಿತು ಹೀಗಾಗಿ ಪರಿಸ್ಥಿತಿಯನ್ನು ಎದುರಿಸಲೋಸುಗ, ೧೯೩೮ ಎಪ್ರಿಲ್‌ದಲ್ಲಿ ತರುಣ ಕಾರ್ಯಕರ್ತರು ೩೦ ಸಾವಿರ ಸಹಕಾರಿ ಉತ್ಪಾದಕ ಸಂಘಗಳ ಸ್ಥಾಪನೆಯ ಬಗ್ಗೆ ಒಂದು ಯೋಜನೆಯನ್ನು ಸಿದ್ಧಪಡಿಸಿದರು ಈ ಯೋಜನೆಯನ್ನು ರಾಷ್ಟ್ರೀಯ ಸರಕಾರಕ್ಕೆ ಸಾದರಪಡಿಸಲಾಯಿತು ಸರಕಾರವು ಈ ಯೋಜನೆಗೆ ಮನ್ನಣೆ ಕೊಟ್ಟಿತು ಈ ಸಂಘಗಳನ್ನು ಪ್ರಾರಂಭಿಸುವದಕ್ಕೆ ಹಣವನ್ನು ಒದಗಿಸಲಾಯಿತು "ಇಂಡಸ್ಕೊ" ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದ ಈ ಉತ್ಪಾದಕ ಸಂಘಗಳ ಮುಖ್ಯ ವೈಶಿಷ್ಟ್ಯಗಳು ಕೆಳಗಿನಂತೆ ಇವೆ

೧ ಪ್ರತಿ ಒಂದು ಸಂಘವೂ ಒಂದು ಸ್ವತಂತ್ರ ಘಟಕವಾಗಿದೆ

೨ ಕನಿಷ್ಟ ಪ್ರತಿ ಸಂಘಕ್ಕೆ ಏಳು ಸದಸ್ಯರಿರಬೇಕು

೩ ಸಂಘದ ಕಾರ್ಯಕ್ಷೇತ್ರದಲ್ಲಿ ವಾಸಿಸುವ ಎಲ್ಲ ಜನರಿಗೂ ಸದಸ್ಯತ್ವವು ಮುಕ್ತವಿದೆ ಆದರೆ ಅವರು ಪ್ರಾಮಾಣಿಕರೂ, ಶೀಲ ಸಂಪನ್ನರೂ, ವ್ಯವಹಾರ ತಜ್ಞರೂ ಇರಬೇಕು ಮತ್ತು ಅವರಿಗೆ ನಾಗರಿಕನ ಹಕ್ಕು ಬಾಧ್ಯತೆಗಳೂ ಇರತಕ್ಕದ್ದು

೪ ಪ್ರತಿ ಸದಸ್ಯನು ಕನಿಷ್ಟ ಚೀನಾದ ಎರಡು ಡಾಲರು ಬೆಲೆಯ ಒಂದು ಶೇರನ್ನಾದರೂ ಕೊಂಡುಕೊಳ್ಳಬೇಕು ಆದರೆ ಪ್ರಾರಂಭಕ್ಕೆ ೫೦ ಸೆಂಟುಗಳನ್ನು (ನಾಣ್ಯದ ಹೆಸರು) ಕೊಡಬೇಕು ಸಂಘದ ಒಟ್ಟು ಶೇರು ಹಣದ ೧/೫ ಕ್ಕಿಂತ ಹೆಚ್ಚಿಗೆ ಶೇರುಗಳನ್ನು ಯಾವದೇ ಸದಸ್ಯನು ಧಾರಣಮಾಡಲಾರನು ಪ್ರತಿಯೊಂದು ಶೇರು ತನ್ನ ಬೆಲೆಯ ಇಪ್ಪತ್ತು ಪಟ್ಟಿಗೆ ಮಿಕ್ಕದಷ್ಟು ಕಾದಿಟ್ಟ ಜವಾಬ್ದಾರಿಯನ್ನು ವಹಿಸುತ್ತದೆ

೫ ಪ್ರತಿಯೊಬ್ಬ ಸದಸ್ಯನಿಗೆ, ಅವನು ಎಷ್ಟೋ ಶೇರುಗಳನ್ನು ಕೊಂಡಿದ್ದರೂ, ಒಂದೇ ಮತವಿರುತ್ತದೆ

೬. ಸದಸ್ಯರ ಸಾಮಾನ್ಯ ಸಭೆಯು ಅಂತಿಮ ಅಧಿಕಾರಿಯು

೭ ಡಾಯರೆಕ್ಟರರ ಬೋರ್ಡನ್ನು ಪ್ರತಿವರ್ಷ ಸಾಮಾನ್ಯ ಸಭೆಯು ಆರಿಸುತ್ತದೆ

೮ ಪ್ರತಿ ಸದಸ್ಯನು ಸಂಘದ ಕಾರ್ಯಾಲಯದಲ್ಲಿ ಕೆಲಸ ಮಾಡಬೇಕು. ಸದಸ್ಯರ ಮತ್ತು ಸದಸ್ಯೇತರರ ವೇತನ ಮತ್ತು ಕೂಲಿಯನ್ನು ಸಾಮಾನ್ಯ ಸಭೆಯು ನಿರ್ಧರಿಸುತ್ತದೆ

೯ ಸಂಘದ ಕಾರ್ಯಾಲಯದಲ್ಲಿ ಪ್ರತಿಯೊಬ್ಬ ಸದಸ್ಯನು ತಯಾರಿಸಿದ ಅಥವಾ ಸಂಘದಿಂದ ಪೂರೈಸಲ್ಪಟ್ಟ ಉಪಕರಣಗಳಿಂದ ಸಿದ್ಧಪಡಿಸಿದ ವಸ್ತುಗಳನ್ನು ಸಂಘದ ಮುಖಾಂತರವಾಗಿಯೇ ಮಾರಬೇಕು ಲಾಭವನ್ನು ಹೇಗೆ ಹಂಚಬೇಕೆಂಬುದನ್ನು ಸಾಮಾನ್ಯ ಸಭೆಯು ವರ್ಷದ ಅಂತ್ಯಕ್ಕೆ ನಿರ್ಧರಿಸುತ್ತದೆ.

೧೯೪೧ರ ಸುಮಾರಿಗೆ ಚೀನಾದಲ್ಲಿ ೨೨೩೩ ಸಂಘಗಳು, ೩೨,೫೦೦ ಸದಸ್ಯರಿದ್ದರು ದುಡಿಯುವ ಭಾಂಡವಲು ೧ ಕೋಟಿ ಡಾಲರು, ತಿಂಗಳ ಸರಾಸರಿ ವ್ಯವಹಾರವು ೨ ಕೋಟಿ ಡಾಲರು ಇದ್ದಿತು ಶೇರು ಭಾಂಡವಲು ಸುಮಾರು ೧೦ ಲಕ್ಷ ಡಾಲರು ಇದ್ದಿತು ಚೀನಾದ ಸಹಕಾರಿ ಉದ್ದಿಮೆಗಳು ನಾಗರಿಕರ ಮತ್ತು ಸೈನಿಕರ ಬೇಡಿಕೆಗಳನ್ನು ಪೂರೈಸುತ್ತ ಜಪಾನದ ಆಕ್ರಮಣವನ್ನು ತಡೆಯಲು ಎಷ್ಟೋ ಸಹಾಯಕಾರಿಯಾದವು ಕಮ್ಯುನಿಸ್ಟ ಆಡಳಿತೆಯಲ್ಲಿಯ ಈಗಿನ ಚೀನಾದ ಆಂದೋಲನದ ಪರಿಸ್ಥಿತಿಯನ್ನು ಅರಿತುಕೊಳ್ಳುವದು ಕಷ್ಟಕರವಾಗಿದೆ

ಏಶಿಯಾದ ವಿವಿಧ ದೇಶಗಳಲ್ಲಿ ಒಂದು ದಶಕದಲ್ಲಿ ಬೆಳೆದ ಸಹಕಾರಿ ಆಂದೋಲನದ ಅಂಕೆ-ಸಂಖ್ಯೆಗಳನ್ನು ಇಲ್ಲಿ ಕೊಡಲಾಗಿದೆ.

| ದೇಶ | ವರ್ಷ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ |
|---|---|---|---|
| ಬ್ರಹ್ಮದೇಶ | ೧೯೩೯ (ಡಿಸೆಂಬರ) | ೨,೦೪೭ | ೮೧,೮೦೪ |
| | ೧೯೪೮ (ಡಿಸೆಂಬರ) | ೧೦,೦೬೬ | ೩೫,೦೦,೦೦೦ |
| ಸಿಲೋನ | ೧೯೩೮ (ಎಪ್ರಿಲ್) | ೧,೨೯೧ | ೫೫,೭೨೬ |
| | ೧೯೪೮ (ಎಪ್ರಿಲ್) | ೬,೫೬೭ | ೧೧,೫೭,೨೦೨ |
| ಚೀನಾ | ೧೯೩೭–೩೮ | ೪೬,೯೮೩ | ೨೧,೩೯,೬೩೪ |
| | ೧೯೪೮ (ಅಗಸ್ಟ) | ೧,೬೭,೩೪೦ | ೩,೩೬,೯೫,೦೦೦ |
| ಭಾರತ ಮತ್ತು ವಾಕಿಸ್ತಾನ | ೧೯೩೮–೩೯ | ೧,೨೧,೦೩೭ | ೫೩,೭೦,೦೦೦ |
| | ೧೯೪೫–೪೬ | ೧,೭೦,೮೭೦ | ೮೯,೩೫,೪೫೦ |
| ಜಪಾನ | ೧೯೩೧ | ೧೫,೪೫೦ | ೬೧,೭೦,೮೩೯ |
| | ೧೯೪೭ (ಜೂನ) | ೩೮,೬೦೦ | ೯೨,೩೦,೦೦೦ |
| ಫಿಲಿಪಾಯಿನ ಪ್ರಜಾರಾಜ್ಯ | ೧೯೩೯ | ೬೪೦ | ೧,೧೬,೦೦೦ |
| | ೧೯೪೬ (ಡಿಸೆಂಬರ) | ೧,೦೬೫ | ೨,೫೬,೯೮೮ |
| ಥೈಲಂಡ | ೧೯೩೭ | ೭೭೦ | ೧೧,೦೧೯ |
| | ೧೯೪೮ (ಎಪ್ರಿಲ್) | ೫,೫೭೪ | ೯೩,೬೦೦ |
| ಸಿಂಗಾಪೂರ ಮತ್ತು ಮಲಯಾ ಒಕ್ಕೂಟ | ೧೯೩೬ | ೪೭೦ | ೮೦,೧೪೩ |
| | ೧೯೪೭ | ೮೭೪ | ೧,೦೨,೭೮೪ |

ಯುದ್ಧ ಮತ್ತು ಯುದ್ಧೋತ್ತರ ಕಾಲಗಳಲ್ಲಿ ಸಹಕಾರ ಆಂದೋಲನವು ಏಶಿಯಾ ರಾಷ್ಟ್ರಗಳಲ್ಲಿ ಕಲ್ಪನಾತೀತವಾದ ಪ್ರಗತಿ ಹೊಂದಿದೆ ಬುನಾದಿಕಾಲದ ಮತ್ತು ಸರ್ವವ್ಯಾಪಕ ಸಹಕಾರವನ್ನು ಪ್ರತಿನಿಧಿಸುತ್ತಿದ್ದ ಹಳ್ಳಿಯ ಪತ್ತಿನ ಸಂಘಗಳು ಸರ್ವತೋಮುಖವಾಗಿ ಬೆಳೆದು, ತಮ್ಮ ಕಾರ್ಯಕಲಾಪಗಳನ್ನು ವೃದ್ಧಿಗೊಳಿಸಿವೆ ವಿವಿಧೋದ್ದೇಶಗಳ ಸಹಕಾರವು ಈಗ ಅನೇಕ ದೇಶಗಳಲ್ಲಿ ಪ್ರಯೋಗಿಸಲ್ಪಟ್ಟಿದೆ ೧೦ ವರ್ಷಗಳ ಹಿಂದೆ ಕನಸು ಮನಸ್ಸಿನಲ್ಲಿಯೂ ಕೂಡ ಸುಳಿಯದಿದ್ದ ವಿವಿಧ ಸ್ವರೂಪಗಳನ್ನು ಈ ಆಂದೋಲನವು ಧಾರಣಮಾಡಿದೆ ಕಳೆದ ೧೦–೧೨ ವರ್ಷಗಳಲ್ಲಿ ಎಷ್ಟೋ ಗ್ರಾಹಕರ ಔದ್ಯೋಗಿಕ ಮತ್ತು ಮಾರಾಟದ ಸಂಘಗಳು ಅಸ್ತಿತ್ವದಲ್ಲಿ ಬಂದವು ೧೯೪೮ರಲ್ಲಿ ಬ್ರಹ್ಮದೇಶದಲ್ಲಿ ೭೦೦ ಗ್ರಾಹಕರ ಸಹಕಾರಿ ಸಂಘಗಳು ಸ್ಥಾಪಿತವಾದ ತಾರೀಖಿನಿಂದ ಎರಡು ವರ್ಷದೊಳಗಿನವಿದ್ದರೂ ೨೦ ಲಕ್ಷ ಗ್ರಾಹಕರ ಬೇಡಿಕೆಗಳನ್ನು ಪೂರೈಸುತ್ತಲಿದ್ದವು. ೧೯೨೦ರಲ್ಲಿ ಸಿಲೋನಿನಲ್ಲಿದ್ದ (ಸಿಂಹಳ) ಗ್ರಾಹಕ ಸಂಘಗಳ ಸಂಖ್ಯೆ ೨೫ರಿಂದ ೧೯೪೮ರಲ್ಲಿ

೩೮೮೫ಕ್ಕೆ ಏರಿತು. ಇವು ಜಿಲ್ಹಾ ಲೋಕ ವ್ಯವಹಾರದ ಸಂಸ್ಥೆಗಳಿಗೆ ಸಮಾವೇಶವಾಗಿದ್ದವು ಈ ಎಲ್ಲ ಸಂಘಗಳ ಸದಸ್ಯರ ಸಂಖ್ಯೆಯು ೧೦ಲಕ್ಷಕ್ಕೂ ಹೆಚ್ಚಾಗಿದ್ದಿತು ಇಲ್ಲಿಯ ೨/೩ಕ್ಕಿಂತ ಹೆಚ್ಚು ಜನರ ಬೇಡಿಕೆಗಳನ್ನು ಈ ಸಂಘಗಳು ಪೂರೈಸುತ್ತಿದ್ದವು. ಚೀನದಲ್ಲಿ ೧೯೩೭ರಲ್ಲಿ ಇದ್ದ ಗ್ರಾಹಕರ ಸಂಘಗಳು ೩೦೦ರಿಂದ ೧೯೪೮ರಲ್ಲಿ ೫೦೦೦ಕ್ಕೆ ಏರಿದವು ಈ ೫೦೦೦ ಗ್ರಾಹಕರ ಸಂಘಗಳ ಜೊತೆಗೆ ಇತರ ೫೦ ಸಾವಿರ ಸಹಕಾರಿ ಸಂಘಗಳು ತಮ್ಮ ಮೂಲ ಕಾರ್ಯವನ್ನಲ್ಲದೆ ಗ್ರಾಹಕರ ಬೇಡಿಕೆಗಳನ್ನು ಪೂರೈಸುವ ವ್ಯವಹಾರವನ್ನು ಕೈಕೊಂಡಿದ್ದವು ಭಾರತದಲ್ಲಿ ೧೯೩೮-೩೯ರಲ್ಲಿ ಕೇವಲ ೪೦೦ ಗ್ರಾಹಕರ ಸಂಘಗಳಿದ್ದವು ೪೩ಸಾವಿರ ಸದಸ್ಯರಿದ್ದರು ಆದರೆ ೧೯೪೫-೪೬ರಲ್ಲಿ ೪೫ ಸಾವಿರ ಸಂಘಗಳು ಮತ್ತು ೯,೦೬,೦೦೦ ಸದಸ್ಯರಿದ್ದರು ಗ್ರಾಹಕರ ಸಂಘಗಳ ಜೊತೆಗೆ ಹಳ್ಳಿಗಳಲ್ಲಿಯ ಅನೇಕ ಪ್ರಾಥಮಿಕ ಸಂಘಗಳು ನಿಯಂತ್ರಿತ ಸರಕುಗಳ ವಿತರಣಾ ಕಾರ್ಯವನ್ನು ಕೈಕೊಂಡಿದ್ದವು ಸದಸ್ಯರ ಎಲ್ಲ ಬೇಡಿಕೆಗಳನ್ನು ಪೂರೈಸಬೇಕೆಂಬ ಮತ್ತು ವ್ಯಾಪಾರಿ, ಸಾಹುಕಾರ, ಇವರ ಸ್ಥಳದಲ್ಲಿ ಸಂಘಗಳೇ ತಮ್ಮ ವ್ಯವಹಾರದ ವರ್ಚಸ್ಸನ್ನು ಬೀರಬೇಕೆಂಬ ಉದ್ದೇಶದಿಂದ ಹಳ್ಳಿಯ ಎಲ್ಲ ಪತ್ತಿನ ಸಂಘಗಳನ್ನು ವಿವಿಧೋದ್ದೇಶ ಸಂಘಗಳಿಗೆ ರೂಪಾಂತರಿಸಬೇಕೆಂಬ ವಿಚಾರವು ಹಿಂದುಸ್ಥಾನ, ಚೀನ, ಸಿಲೋನ ಮತ್ತು ಪಾಕಿಸ್ತಾನಗಳಲ್ಲೆಲ್ಲ ಪ್ರಬಲವಾಗತೊಡಗಿತು ಚೀನ ಜಪಾನ, ಥೈಲಂಡ ಮೊದಲಾದ ದೇಶಗಳಲ್ಲಿ ಸಹಕಾರಿ ಬೇಸಾಯ ಪದ್ಧತಿಯು ಸಂಘಟಿಸಲ್ಪಟ್ಟಿದೆ ಚೀನ, ಭಾರತ ಮತ್ತು ಜಪಾನಗಳಲ್ಲಿ, ಸಹಕಾರಿ ತತ್ವಗಳ ಮೇಲೆ ಗೃಹೋದ್ಯೋಗ, ಗ್ರಾಮೋದ್ಯೋಗಗಳು ವಿಕಾಸಗೊಳ್ಳತೊಡಗಿವೆ

ಈ ಮೇರೆಗೆ ಸಹಕಾರಾಂದೋಲನವು ತನ್ನ ತಳಹದಿಯಲ್ಲಿ ತತ್ವಗಳ ಏಕರೂಪತೆಯನ್ನು, ನಿರ್ದಿಷ್ಟ ಗುರಿಯನ್ನು ಇಟ್ಟುಕೊಂಡು. ವಿವಿಧ ರೂಪಗಳಲ್ಲಿ ಪ್ರಪಂಚದ ಎಲ್ಲ ಭಾಗಗಳಲ್ಲಿ ಪಸರಿಸಿದೆ ಪ್ರಾದೇಶಿಕ, ಸಂಯುಕ್ತ, ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಸಂಸ್ಥೆಗಳಂತಹ ಉಚ್ಚ ತರಗತಿಯ ಸಂಘಗಳು ಉದಯವಾಗತೊಡಗಿವೆ ಇತರ ಆರ್ಥಿಕ ಸಂಘಟನೆ, ಸಾಹಸಗಳಂತೆ, ಸಹಕಾರಿ ಸಂಘಗಳ ಕಾರ್ಯಕ್ಷಮತೆಯನ್ನು ಬೆಳೆಯಿಸುವ ದೃಷ್ಟಿಯಿಂದ ಒಂದೇ ಬಗೆಯ, ಅದರಂತೆ ಭಿನ್ನಭಿನ್ನ ಪ್ರಕಾರದ ಸಂಘಗಳ ನಡುವೆ ಏಕಾಗ್ರತೆ, ಆಂತರಿಕ ಸಂಬಂಧ ಸಂಪರ್ಕ, ಸಮರಸ, ಸಂಯೋಜನೆಗಳನ್ನುಂಟು ಮಾಡಲಾಗಿದೆ ಹೀಗೆ ಔದ್ಯೋಗಿಕ ದುಡಿಮೆಗಾರನ ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆಯೊಂದೇ ಸಹಕಾರದ ಉದ್ದೇಶವಾಗಿರದೆ, ರೈತರ ಸಾಮಾಜಿಕ, ಆರ್ಥಿಕ ಸಮಸ್ಯೆಗಳ ನಿವಾರಣೆಯೂ ಅದರ ಗುರಿಯಾಗಿದೆ ಸಹಕಾರವು ಶಿಕ್ಷಣ ಮತ್ತು ಸಾಮಾಜಿಕ ಭದ್ರತೆಯ ಸಮಸ್ಯೆಗಳ ವರೆಗೂ ತನ್ನ ಕಾರ್ಯಕಲಾಪಗಳ ಕ್ಷೇತ್ರವನ್ನು ವಿಸ್ತೃತಗೊಳಿಸಿದೆ ಪ್ರಪಂಚದ ಬಹುತರ ಎಲ್ಲ ದೇಶಗಳಲ್ಲಿ, ಎಲ್ಲ ತರಗತಿಯ ಎಲ್ಲ ಪ್ರಕಾರದ ಸಹಕಾರಿ ಸಂಘಗಳು ಮಾನವ ಸಮಾಜಕ್ಕೆ ಸಾಕಷ್ಟು ಕಲ್ಯಾಣಕಾರಿಯಾಗುವಂತೆ, ಅವ್ಯಾಹತ ಪ್ರಯತ್ನಗಳು ನಡೆದಿವೆ ಪ್ರಾಥಮಿಕ ಉತ್ಪಾದಕರನ್ನು, ಕಾರ್ಖಾ

ಗೀರರನ್ನು, (ಶಿಲ್ಪಿಗಳನ್ನು) ಗೃಹೋದ್ಯೋಗಿಗಳನ್ನು, ಔದ್ಯೋಗಿಕ ಕೂಲಿಕಾರರನ್ನು, ಅವರ ದೈನಂದಿನ ವ್ಯವಹಾರದಲ್ಲಿ ಘಟಿಸುವ ಸುಲಿಗೆಗಳಿಂದ ಮುಕ್ತಗೊಳಿಸಿ, ತಾಂತ್ರಿಕ ವ್ಯವಹಾರದ ಸುಧಾರಣೆಗಾಗಿ ಪೇಟೆಯ ಆರ್ಥಿಕ ಪ್ರಪಂಚದ ತೊಡಕಿನೊಳಗಿಂದ ಬಿಡುಗಡೆಗೊಳಿಸಿ, ಮಾರ್ಗದರ್ಶನ ಮಾಡಿಸಿ, ಉತ್ಪಾದನೆಯ ಶಕ್ತಿಯನ್ನು ಹೆಚ್ಚಿಸಿ, ಉತ್ಪಾದನೆಯ ಮತ್ತು ವಿತರಣೆಯ ವೆಚ್ಚವನ್ನು ತಗ್ಗಿಸಿ, ಸಹಕಾರವು ಲೋಕ ವ್ಯಾಪಿಯಾಗಿ, ಬಹುರೂಪಿಯಾಗಿ ನಿಂತಿದೆ ಮಿತವ್ಯಯದ ಚಟಗಳನ್ನು ಬಳಕೆಯಲ್ಲಿ ತಂದು, ಸದಸ್ಯರಲ್ಲಿ ಸಾಮಾನ್ಯ ಜ್ಞಾನಪ್ರಕಾಶವನ್ನು ಹರಡಿ, ಅರ್ಥಶಾಸ್ತ್ರ ವ್ಯವಹಾರಗಳ ಪರಿಚಯ ಮಾಡಿಕೊಟ್ಟು, ಆಡಳಿತೆಯ ಮತ್ತು ಪ್ರಜಾಸತ್ತೆಯ ಕಲೆಯಲ್ಲಿ ಪರಿಣತಗೊಳಿಸಿ, ಪ್ರಯತ್ನದ ಪ್ರೇರಣೆಗೂ ಹೊಣೆಯ ಕಲ್ಪನೆಗೂ ಚಾಲನೆಯನ್ನಿತ್ತು, ಸಹಕಾರಿ ಸಂಘಗಳು ಶಿಕ್ಷಣ ರಂಗದಲ್ಲಿ ಸರ್ವಾಂಗೀಣ ಉನ್ನತಿಯನ್ನು ಸಾಧಿಸುವಂತೆ ಪ್ರಯತ್ನ ಸಾಹಸಗಳೂ ನಡೆದಿವೆ.

---

## ೩ನೆಯ ಅಧ್ಯಾಯ

# ಭಾರತದಲ್ಲಿ ಸಹಕಾರಿ ಸಂಘಟನೆ ಮತ್ತು ಆಂದೋಲನ

ಸಹಕಾರಿ ಆಂದೋಲನವು ಭಾರತದಲ್ಲಿ ಕಳೆದ ಸುಮಾರು ೪೮ ವರ್ಷಗಳಿಂದ ಸಾಗಿದ್ದರೂ ಅದರ ವಿವಿಧ ಸ್ವರೂಪಗಳು ಮಾತ್ರ ಇತ್ತೀತ್ತಲಾಗಿ ಬೆಳೆದುಕೊಂಡಿವ ಆದರೂ ಸಹಕಾರಿ ತತ್ವಗಳು ಭಾರತಕ್ಕೆ ಹೊಸನಲ್ಲ ಅದು ಇಲ್ಲಿ ನಮ್ಮ ಪುರಾತನ ಸಂಸ್ಕೃತಿಯಷ್ಟೇ ಹಳೆಯದಾಗಿದೆ ಭಾರತದಲ್ಲಿ ಪುರಾತನ ಕಾಲದಲ್ಲಿಯ ಗ್ರಾಮಾಂತರ ಆರ್ಥಿಕ ಪರಿಸ್ಥಿತಿಯು ಸಹಕಾರ ತತ್ವಗಳ ಮೇಲೆ ರಚಿತವಾಗಿತ್ತೆಂದು ಹೇಳಲಾಗುತ್ತದೆ ಆಗ ಪರಸ್ಪರ ಸಹಾಯ ಮತ್ತು ಬಂಧುತ್ವ ತತ್ವಗಳು ಹಳ್ಳಿಗಳಲ್ಲಿ ಆರ್ಥಿಕ ಮತ್ತು ಸಾಮಾಜಿಕ ಜೀವನದಲ್ಲಿ ಅಳವಡಿಸಲ್ಪಟ್ಟಿದ್ದವು ಆರ್ಥಿಕ ರಚನೆ, ಹೊಸಯು ಸ್ವರೂಪ, ಸಾಮಾಜಿಕ ಶಿಸ್ತು ಈ ಮೊದಲಾದವುಗಳಲ್ಲಿ ವ್ಯವಹರಿಸುವ ಸಹಕಾರವು ಔದ್ಯೋಗಿಕ ಪಾಶ್ಚಿಮಾತ್ಯ ರಾಷ್ಟ್ರಗಳಿಂದ ಬಂದಿರುವದೆಂದು ಹೇಳಬಹುದು ಬಡಜನರ ವಿಶೇಷತ ಒಕ್ಕಲಿಗರ ಆರ್ಥಿಕ ಪರಿಸ್ಥಿತಿಯ ಸುಧಾರಣೆಗಾಗಿ ನಮ್ಮ ದೇಶದಲ್ಲಿ ಸರಕಾರದವರಿಂದ ಪ್ರಾರಂಭಿಸಲ್ಪಟ್ಟ ಚಳವಳಿಯು ಯುರೋಪಖಂಡದ ವಿಶೇಷವಾಗಿ ಜರ್ಮನಿಯ ಸಹಕಾರದ ಅಂಶಗಳನ್ನೊಳಗೊಂಡಿದ್ದು ಭಾರತೀಯ ಪರಿಸ್ಥಿತಿಗೆ ಹೊಂದುವಂತೆ ಪ್ರಚುರ ಗೊಳಿಸಲ್ಪಟ್ಟಿತು ಇದಕ್ಕೆ ಮುಖ್ಯ ಕಾರಣವೆಂದರೆ ಭಾರತವು ಹಳ್ಳಿಗಳ ದೇಶವಾಗಿದ್ದು ಹೆಚ್ಚು ಜನರು ಹಳ್ಳಿಗಳಲ್ಲಿಯೇ ವಾಸವಾಗಿದ್ದಾರೆ ಒಕ್ಕಲುತನವೇ ಇಲ್ಲಿಯ ಹಳ್ಳಿಗರ ಮುಖ್ಯ ಉದ್ಯೋಗವಾಗಿದ್ದು, ನೂರಕ್ಕೆ ೭೦ಕ್ಕಿಂತ ಹೆಚ್ಚು ಜನರು ತಮ್ಮ ಉದರನಿರ್ವಾಹಕ್ಕಾಗಿ ಒಕ್ಕಲುತನವನ್ನೇ ಅವಲಂಬಿಸಿದ್ದಾರೆ ಬ್ರಿಟಿಶರ ಆಳಿಕೆಯಲ್ಲಿ ಭಾರತದ ವಾಣಿಜ್ಯ ಹಾಗೂ ಉದ್ದಿಮೆಗಳು ಬೆಳೆದು ಕೊಂಡವಾದರೂ ಬಹುಸಂಖ್ಯಾಕರಾಗಿರುವ ಮತ್ತು ಭಾರತದ ಬೆನ್ನೆಲುಬಿ ನಂತಿರುವ ರೈತರು ತಮ್ಮ ಸುಧಾರಣೆಯ ಕನಸನ್ನೂ ಸಹ ಕಾಣದ ಎಂದಿನಂತೆಯೇ ಸಾಲದ ಬಹು ಭಾರದಲ್ಲಿ ತತ್ತರಿಸುತ್ತಿದ್ದರು ಬಹುಸಂಖ್ಯಾಕರಾದ ರೈತರಲ್ಲಿ ಪಸರಿಸಿರುವ ದಾರುಣವಾದ ದಾರಿದ್ರ್ಯ, ಸಾವಿಗೆಳೆವ ಸಾಲಗುಳಿತನ ಮತ್ತು ಬಹು ಕಾಲದ ಕೊಳೆ, ಇವು ಸರಕಾರದ ಮುಂದೆ ಚಿಂತಾಜನಕ ಸಮಸ್ಯೆಗಳಾಗಿ ನಿಂತವು, ಮಿತಿಮೀರಿದ ಹೊಲೆಬಡ್ಡಿಯು ರೈತರ ಜೀವನವನ್ನು ಹಿಂಡುತ್ತಿದ್ದಿತು ಸಾಲದ ಭಾರದ ಪ್ರಮಾಣವು ತಗ್ಗುವ ಬದಲು ಹಿಗ್ಗುತ್ತಲೇ ನಡೆಯಿತು ಒಕ್ಕಲಿಗರ ಸಾಗುವಳಿ ಪದ್ಧತಿಗಳು ತೀರ ಹಳೆಯಕಾಲದವಿದ್ದವು ಅಲ್ಲದೆ ಅವುಗಳಿಗೆ ಸುಧಾರಣೆಯ ಗಾಳಿ ಸಹ ತಗಲಿರಲಿಲ್ಲ ಒಕ್ಕಲಿಗರು ಅಸಹ್ಯವಾದ ಸಾಲದ ಭಾರದಲ್ಲಿ ನರಳಿ, ಒರಲಿ, ತತ್ತರಿಸುತ್ತಿದ್ದುದರಿಂದ ಒಕ್ಕಲುತನದ ಸುಧಾರಣೆ ಯೆಂದರೆ ಗಾಳಿಗೋಪುರದಂತೆ ಅಶಕ್ಯವಾಗಿದ್ದಿತು ಅವನಲ್ಲಿ ಹಣವಾಗಲೀ

ಪತ್ತಾಗಲೀ ಇರಲಿಲ್ಲ ಅವನ ಸಾಮಾನ್ಯ ಕಾರ್ಯಗಳಿಗಾಗಿಯೂ ಯೋಗ್ಯ ಬಡ್ಡಿಯ ದರದಲ್ಲಿ ಹಣಕಾಸಿನ ಸೌಕರ್ಯಗಳು ದೊರೆಯುವಂತಿರಲಿಲ್ಲ ಹೀಗಾಗಿ ಭಾರತದ ರೈತನು "ಸಾಲದಲ್ಲಿ ಹುಟ್ಟಿ, ಸಾಲದಲ್ಲಿ ಬೆಳೆದು, ಸಾಲದಲ್ಲಿಯೇ ಅಳಿಯುತ್ತಾನೆ" ಎಂಬುದು ನಾಣ್ಣುಡಿಯಾಗಿದೆ ನಿರಕ್ಷರತೆ, ಅಜ್ಞಾನ, ಅಸಹಾಯ ಪರಿಸ್ಥಿತಿಗಳ ಮೂಲಕವಾಗಿ ರೈತನು ಅಂದಿನಂತೆ ಇಂದು ಸಹ ವ್ಯಾಪಾರಸ್ಥ ರೆಂದೆನ್ನಿಸಿಕೊಳ್ಳುವ ಸಾಹುಕಾರರಿಂದ ಅವ್ಯಾಹತವಾಗಿ ಸುಲಿಯಲ್ಪಡುತ್ತಿದ್ದಾನೆ ಹೀಗಾಗಿ ಉಳಿತಾಯಕ್ಕೆ ಯಾವ ಆಸ್ಪದವೂ ದೊರೆಯದೆ ಲೋಕದ ಕಣ್ಣಲ್ಲಿ ಅವನು ದುಂದುಗಾರನಾಗಿದ್ದಾನೆ ಇದರ ಜೊತೆಗೆ ಲಗ್ನ, ಮತ್ತಿತರ ಸಾಮಾಜಿಕ ಸಮಾರಂಭಗಳಲ್ಲಿ ಮರ್ಯಾದೆ ಮೀರಿ ಖರ್ಚು ಮಾಡುವ ಹವ್ಯಾಸವುಳ್ಳವನಾಗಿ ದ್ದಾನೆ ಇಂದಿಗೂ ಅವನಿಗೆ ಇಡೀ ವರ್ಷದಲ್ಲಿ ಲಾಭದಾಯಕ ರೀತಿಯಲ್ಲಿ ಉದ್ಯೋಗ ದೊರೆಯುವಂತಿಲ್ಲ ಅಂದಿನಂತೆ ಇಂದು ಸಹ ಅವನು ಒಕ್ಕಲುತನವನ್ನು ಒಂದು ಲಾಭದಾಯಕ ವ್ಯವಹಾರವೆಂದು ನಡೆಯಿಸಿಕೊಂಡು ಹೋಗದೆ, ಹೇಗೋ ಒಂದು ಉದರನಿರ್ವಾಹದ ಸಾಧನವೆಂದು ಸಾಗಿಸಿಕೊಂಡು ಬಂದಿದ್ದಾನೆ ಅನೇಕ ಪ್ರಸಂಗಗಳಲ್ಲಿ ಅವನ ಭೂಮಿಯು ಸಾಹುಕಾರರ ಕೈವಶವಾದುದುಂಟು ಸಾಲದ ಮೇಲಿನ ಮಿತಿಮೀರಿದ ಬಡ್ಡಿಯ ಜೊತೆಗೆ, ಅಪರಂಪಾರವಾದ ಹೊಲದ ಲಾವಣಿಯನ್ನು ಕೊಡಬೇಕಾಗುತ್ತಿದ್ದಿತು. ಮೇಲಿಂದಮೇಲೆ ಮಳೆಯು ಬಾರದೆ ಬರಗಾಲ ಸಂಭವಿಸಿ ಅವನ ಪರಿಸ್ಥಿತಿಯು ಮತ್ತಷ್ಟು ಹದಗೆಟ್ಟಿತು ಹೀಗೆ ರೈತನು ನಿಸ್ಸಹಾಯಕನೂ, ನಿರಾಶಾವಾದಿಯೂ, ನಿಸ್ಸಂಗನೂ ಆದುದಲ್ಲದೆ ತನ್ನ ದೈವದ ಮೇಲೆ ಭಾರಹಾಕುವ ಪ್ರವೃತ್ತಿಗಿಳಿದನು ಈ ಪರಿಸ್ಥಿತಿಯನ್ನು ಹೋಗಲಾಡಿಸಲು ಸರಕಾರವು ಎಷ್ಟೋ ಕ್ರಮಗಳನ್ನು ಕೈಕೊಂಡಿತು ಆದರೂ ಯಾವ ಯಶವೂ ದೊರೆಯಲಿಲ್ಲ ಹೀಗಾಗಿ ಪರಿಸ್ಥಿತಿಯು ಮತ್ತಿಷ್ಟು ಹದಗೆಟ್ಟಿತು ೧೮೭೮ರಲ್ಲಿ ದಕ್ಷಿಣ (ಭಾರತ) ದಲ್ಲಿಯ ರೈತರ ಬಂಡಾಯಗಳಿಂದ ಈ ಪರಿಸ್ಥಿತಿಯು ಹೆಚ್ಚು ಎದ್ದುಕಾಣತೊಡಗಿತು ಮುಂಬಯಿ ಸರಕಾರವು ೧೮೭೯ರಲ್ಲಿ ಒಕ್ಕಲಿಗರ ಪರಿಹಾರ ಕಾಯದೆಯನ್ನು ಪಾಸು ಮಾಡಿತು ಇದರಿಂದ ಪರಿಸ್ಥಿತಿಯು ಮಾತ್ರ ಸುಧಾರಿಸಲಿಲ್ಲ ಬರಗಾಲ ಸಮಿತಿಯ ಶಿಫಾರಸುಗಳ ಮೇರೆಗೆ ೧೮೮೩ರ ಭೂಸುಧಾರಣಾ ಕಾಯದೆ, ೧೮೮೪ರ ರೈತರ (ತಗಾಯಿ) ಸಾಲ ಕಾಯದೆ ಮೊದಲಾದ ಪ್ರಗತಿಪರ ಕಾಯದೆಗಳನ್ನು ಮಾಡಲಾಯಿತು ಭೂಸುಧಾರಣಾ ಕಾಯದೆಯ ಮೇರೆಗೆ ಹೊಲಗಳಲ್ಲಿ ಸುಧಾರಣೆ ಮಾಡಿಕೊಳ್ಳಲು ಅನುವಾಗುವಂತೆ ದೀರ್ಘಾವಧಿಯ ಸಾಲಗಳನ್ನು ಕೊಡಲಾಗುತ್ತಿತ್ತು ರೈತರ ಸಾಲ ಗಳ ಕಾಯದೆಯನ್ವಯ ಮೊದಲಿನ ಕಾಯದೆಯಲ್ಲಿ ನಮೂದಿಸಲ್ಪಡದಿದ್ದ ಇತರ ಉದ್ದೇಶಗಳ ಸಲುವಾಗಿ ಮತ್ತು ಬೀಜ, ದನ, ಗೊಬ್ಬರ, ಉಪಕರಣ ಮೊದಲಾದ ವುಗಳನ್ನು ಕೊಳ್ಳಲು ಅಲ್ಪಾವಧಿಯ ಸಾಲಗಳನ್ನು ಕೊಡಲಾಗುತ್ತಿತ್ತು ಸಂತ್ರಸ್ತ ಪ್ರಸಂಗಗಳಲ್ಲಿ ಮಾತ್ರ ಈ ಕಾಯದೆಯ ಉಪಯೋಗವಾಗಬೇಕೆಂಬುದಿದ್ದರೂ ರೂಢಿಯಲ್ಲಿ ಮೇಲಿನ ಎಲ್ಲ ಉದ್ದೇಶಗಳಿಗೆ ಸದಾ ಇದನ್ನು ಅನ್ವಯಿಸಲಾಗುತ್ತಿತ್ತು ಈ ಕಾಯಿದೆಗಳನ್ವಯ ಕೊಡಲ್ಪಟ್ಟ ಸಾಲದ ರಕಮು ಹೆಚ್ಚಾಗಿರಲಿಲ್ಲ. ಹೀಗಾಗಿ ಸರಕಾರಕ್ಕೆ ಅದರಿಂದ ಹೆಚ್ಚಿನ ಭಾರವೂ ಆಗಲಿಲ್ಲ. ಸರಕಾರದ ಸಾಲಕೊಡುವ

ಪದ್ಧತಿಯು ವಿಳಂಬಕರವೂ, ಪರಿಸ್ಥಿತಿಗೆ ಹೊಂದಿಕೊಳ್ಳದ್ದೂ ಮತ್ತು ಸಾಲ ವಸೂಲಿಯ ಪದ್ಧತಿಯು ಕಠೋರವೂ ಮತ್ತು ಯಾಂತ್ರಿಕವೂ ಆಗಿರುವದೆಂದು ಬೇಗನೇ ಅನುಭವಕ್ಕೆ ಬಂದಿತು ಸಾಲದ ಅರ್ಜಿಗಳ ವಿಚಾರಣೆಯ ವಿಷಯ ದಲ್ಲಿಯೂ ಅಪರಿಮಿತವಾದ ವಿಳಂಬವಾಗತೊಡಗಿತು ಕೆಳಗಿನ ಅಧಿಕಾರಿಗಳು ರೈತರಿಂದ ಕಾಯದೆಯ ವಿರುದ್ಧವಾಗಿ "ಖುಷಿ" (ಲಂಚ) ಯನ್ನು ಎತ್ತುವರೆಂಬ ದೂರುಗಳು ದಿನದ ಮಾತಾಗಿದ್ದವು ಹೀಗೆ ರೈತರ ಪರಿಸ್ಥಿತಿಯನ್ನು ಸುಧಾರಿಸುವ ದಕ್ಕಾಗಿ ಸರಕಾರವು ಅನೇಕಾನೇಕ ಕ್ರಮಗಳನ್ನು ವಹಿಸಿದರೂ ಅದರಿಂದ ಯಾವ ಸುಧಾರಣೆಯೂ ಕಂಡು ಬರಲಿಲ್ಲ ಮೇಲೆ ವಿವರಿಸಿದಂತೆ, ರೈತನ ನಾಗುವಳಿಯ ವ್ಯವಹಾರಕ್ಕಾಗಿ ಮತ್ತು ಋಣವಿಮೋಚನಗಾಗಿ ಪತ್ತಿನ ಸೌಕರ್ಯವು ತೀರ ಅವಶ್ಯಕ ಮತ್ತು ಮಹತ್ವದ ಸಮಸ್ಯೆಯಾಗಿದ್ದು, ಇದರ ಶೀಘ್ರ ಪರಿಹಾರಕ್ಕಾಗಿ ಸರಕಾರದ ಸಹಾಯವು ಅಗತ್ಯವೆಂದೆನಿಸಿತು ಇದೇ ಪ್ರಸಂಗದಲ್ಲಿ ಜರ್ಮನಿಯಲ್ಲಿ ರೈಫೀಜನ್ ಎಂಬವನು ಹಳ್ಳಿಯಲ್ಲಿ ಇಂಥ ಪರಿಸ್ಥಿತಿ ಯಲ್ಲಿದ್ದ ರೈತರ ಆರ್ಥಿಕ ಸುಧಾರಣೆಗಾಗಿ, ಪ್ರಾರಂಭಿಸಿದ ಬ್ಯಾಂಕುಗಳು ಯಶಸ್ವಿ ಯಾಗಿದ್ದವು ಇಂಥ ಬ್ಯಾಂಕುಗಳತ್ತ ಭಾರತದ ದೃಷ್ಟಿಯು ಹೊರಳಿತು ರೈತರು ಸ್ವ ಹಾಗೂ ಪರಸ್ಪರ ಸಹಾಯ-ಬುದ್ಧಿ, ಉಳಿತಾಯದ ಹವ್ಯಾಸಗಳನ್ನು ಕಲಿಯದೆ ಹೊರತು ಅವರಿಗೆ ಸರಕಾರದಿಂದ ಎಷ್ಟೇ ಸಹಾಯ ದೊರೆತರೂ ಸಮಸ್ಯೆಯ ನಿವಾರಣೆಯಾಗಲಾರದೆಂದು ಸರಕಾರದ ಗಮನಕ್ಕೆ ಬಂದಿತು ಹೀಗೆ ಜರ್ಮನಿಯಲ್ಲಿಯಂತೆ ಇಲ್ಲಿಯೂ ಸಹಕಾರಿ ಪದ್ಧತಿಯು ರೈತರ ಆರ್ಥಿಕ ಮುಗ್ಗಟ್ಟನ್ನು ಹೊಡೆದೋಡಿಸಬಹುದೆಂದು ಆಗಿನ ಸರಕಾರವು ನಿರ್ಧರಿಸಿತು ಹೀಗೆ ಮದ್ರಾಸ ಸರಕಾರವು ಸರ್ ಫ್ರೆಡ್ರಿಕ್ ನಿಕೋಲಸನ್ ಆಯ್ ಸಿ ಎಸ್ ಅವರನ್ನು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯ ಒಕ್ಕಲುತನದ ಮತ್ತಿತರ ಬ್ಯಾಂಕುಗಳ ಅಭ್ಯಾಸಕ್ಕಾಗಿ ಕಳಿಸಿ ಕೊಟ್ಟಿತು ಅವರು ತಮ್ಮ ವರದಿಯನ್ನು ೧೮೯೫ರಲ್ಲಿ ಸಾದರಪಡಿಸಿದರು ಭಾರತ ಸರಕಾರವು ಅದನ್ನು ೧೯೦೦ರಲ್ಲಿ ವಿಚಾರಿಸ ತೊಡಗಿತು ಈ ಪ್ರಸಂಗದಲ್ಲಿ ಸಂಯುಕ್ತಪ್ರಾಂತದಲ್ಲಿ ಶ್ರೀ ಡೂಪರ್ನೆ ಆಯ್ ಸಿ ಎಸ್ ಅವರು ಮತ್ತು ಪಂಜಾಬದಲ್ಲಿ ಮಕ್ಲೆಗಾನ್ ಆಯ್ ಸಿ ಎಸ್ ಅವರು ಹಲಕೆಲವು ಸಂಘಗಳನ್ನು ಸ್ಥಾಪಿಸಿದರು ಸಹಕಾರಿ ಸಂಘಗಳ ಕಾಯದೆ ಯನ್ನು ಜಾರಿ ಮಾಡಬೇಕೆಂಬ ಉದ್ದೇಶದಿಂದ ಭಾರತ ಸರಕಾರವು ೧೯೦೧ರಲ್ಲಿ ಸರ್ ಎಡ್ವರ್ಡ ಲಾ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯಮಿಸಿತು ರೈಫೀಜನ್ ಮಾದರಿಯ ಮೇಲೆ ಸಹಕಾರಿ ಸಂಘಗಳನ್ನು ಸ್ಥಾಪಿಸಬಹುದೆಂದು ಈ ಸಮಿತಿಯು ಶಿಫಾರಸು ಮಾಡಿತು ೧೯೦೧ರ ಬರಗಾಲ ಸಮಿತಿಯು ಸಹಿತ ಪರಸ್ಪರ ಪತ್ತಿನ ಸಂಘಗಳನ್ನು ಸ್ಥಾಪಿಸಬೇಕೆಂದು ವರದಿ ಮಾಡಿತು ತತ್ ಪರಿಣಾಮವಾಗಿ ಸರ್ ಡ್ಯೆಂಜಿಲ್ ಇಬೆಟ್‌ಸನ್ ಅವರು ಸಹಕಾರಿ ಸಂಘಗಳ ಮಸೂದೆಯನ್ನು ಶಾಸನ ಸಭೆಯಲ್ಲಿ ಮಂಡಿಸಿದರು ಅದುವೇ ಭಾರತದ ೧೯೦೪ರ ಸಹಕಾರಿ ಸಂಘಗಳ ಪ್ರಥಮ ಕಾಯದಯಾಯಿತು ೧೯೦೫ರಲ್ಲಿ ಔಪಚಾರಿಕವಾಗಿ ಸಹಕಾರಿ ಚಳವಳಿಯು ಭಾರತದಲ್ಲಿ ಆರಂಭವಾಯಿತು. ಜನತಾ ಬೇಡಿಕೆಯಿಂದ ಈ ಕಾಯದೆಯನ್ನು ಮಾಡಲಾಗಲಿಲ್ಲ ಇದು ರೈತರ,

ಕೆಲಸಗಾರರ, ಮರ್ಯಾದಿತ ಉತ್ಪನ್ನವುಳ್ಳವರ ಆರ್ಥಿಕ ಸುಧಾರಣೆಗಾಗಿ ಸರಕಾರವು ಕೈಕೊಂಡ ಕ್ರಮವಾಗಿದ ಹೀಗೆ ರೈತರಿಗೆ, ಸಣ್ಣ ಸಣ್ಣ ಉದ್ದಿಮೆದಾರರಿಗೆ ಹಣ ದೊರಕಿಸಿ ಕೊಡುವ ಉದ್ದೇಶದಿಂದ ಭಾರತದಲ್ಲಿ ಸಹಕಾರಿ ಆಂದೋಲನವು ಪತ್ತಿನ ಸಂಘಗಳ ಮುಖಾಂತರ ಅಧಿಕೃತವಾಗಿ ಪ್ರಾರಂಭವಾಯಿತು ಭಾರತದಲ್ಲಿ ಸರಕಾರದ ನೌಕರ ವರ್ಗವೇ ಸಹಕಾರದ ಸಸಿಯನ್ನು ನೆಟ್ಟಿತು ಈ ಸಸಿಯು ಶೀಘ್ರ ಬೇರುಬಿಟ್ಟು ಬೆಳೆಯತೊಡಗಿತು ಸಂಘಟಿತ ಉಳಿತಾಯ, ಸ್ವಾವಲಂಬನೆ, ಪರಸ್ಪರ ಸಹಾಯ-ತತ್ವಗಳನ್ನು ಜನತೆಗೆ ತಿಳಿಯಪಡಿಸಬೇಕೆಂಬುದೇ ಸಹಕಾರದ ಪ್ರಾರಂಭದ ಉದ್ದೇಶವಾಗಿದ್ದಿತು ಈ ಕಾಯದೆಯನ್ನು ಸಿದ್ಧಪಡಿಸುವ ಮುನ್ನ ಸರಕಾರವು ಮುಖ್ಯವಾಗಿ ಎರಡು ಉದ್ದೇಶಗಳನ್ನಿಟ್ಟುಕೊಂಡಿದ್ದಿತು ಒಂದನೆಯದು ಕಾಯದೆಯಲ್ಲಿಯ ಸರಳತೆ ಎರಡನೆಯದು ಸ್ಥಿತಿಸ್ಥಾಪಕತೆ ಸದ್ಯಕ್ಕೆ ಪತ್ತಿಗಾಗಿ ಮಾತ್ರ ೧೯೦೪ರ ಕಾಯದೆಯನ್ನು ಪಾಸುಮಾಡಲಾಗಿದ್ದಿತು ಅಂದರೆ ಆಗಿನ ಕಾಲದಲ್ಲಿ ರೈತರಿಗೆ ಬೇಕಾದದ್ದು ಹಣಕಾಸು ಆಗಿದ್ದರಿಂದ ಪತ್ತಿನ ಸಂಘಗಳನ್ನು ಸ್ಥಾಪಿಸಲು ಎಲ್ಲ ಪ್ರಯತ್ನಗಳನ್ನು ಮಾಡಲಾಯಿತು ಆ ಕಾಯದೆಯ ಮೂಲ ತತ್ವಗಳನ್ನು ಕೆಳಕಂಡಂತೆ ಕ್ರೋಢೀಕರಿಸಬಹುದು :—

"ಸಂಘಗಳು ಹಳ್ಳಿಯ ಮತ್ತು ಪಟ್ಟಣ ಸಂಘಗಳೆಂದು ಎರಡು ಪ್ರಕಾರವಾಗಿ ವಿಭಾಗಿಸಲ್ಪಟ್ಟಿದ್ದವು ಹಳ್ಳಿಯ ಸಂಘಗಳು ಅನಿಯಮಿತ ಹೊಣೆಗಾರಿಕೆಯ ಮೇಲೆಯೇ ಸ್ಥಾಪಿತವಾಗಬೇಕೆಂಬ ನಿರ್ಬಂಧವಿದ್ದಿತು. ಪಟ್ಟಣ ಸಂಘಗಳು ತಮ್ಮ ಇಷ್ಟದಂತೆ ಬೇಕಾದ ಹೊಣೆಗಾರಿಕೆಯ ಮೇಲೆ ಅಂದರೆ ಅನಿಯಮಿತ ಅಥವಾ ನಿಯಮಿತ ಹೊಣೆಗಾರಿಕೆಯ ಮೇಲೆ ಸ್ಥಾಪಿತವಾಗಬಹುದಾಗಿದ್ದಿತು ಸಂಘದ ಒಟ್ಟು ಸದಸ್ಯರ ೪/೫ ಜನರು ಒಕ್ಕಲಿಗರಿದ್ದರೆ ಅದು ಹಳ್ಳಿಯ ಸಂಘವೆಂದೂ ೪/೫ ಜನರು ಕೃಷಿಕೇತರರು ಇದ್ದರೆ ಪಟ್ಟಣ ಸಂಘವೆಂದೂ ಎಣಿಸಲ್ಪಡುತ್ತಿದ್ದಿತು ಹಳ್ಳಿಯ ಸಂಘಗಳು ತಮ್ಮ ಲಾಭವನ್ನೆಲ್ಲ ಕಾದಿಟ್ಟ ನಿಧಿಗೆ ವರ್ಗಾಯಿಸಬೇಕೆಂದು ನಿರ್ಧರಿಸಲಾಗಿದ್ದಿತು ಕಾರ್ಯಕ್ಷೇತ್ರವನ್ನು ಪರಿಮಿತಗೊಳಿಸಲಾಗಿದ್ದಂತೆ ಸಾಲಗಳನ್ನು ಸದಸ್ಯರಿಗೇನೇ ವೈಯಕ್ತಿಕ ಜಾಮೀನಿನ ಮೇಲೆ ಅಥವಾ ಮತ್ತಿತರ ಭದ್ರತೆಯ ಮೇಲೆ ಕೊಡಲಾಗುತ್ತಿತ್ತು. ಅಧಿಕೃತ ಲೆಕ್ಕ ತಪಾಸಣೆಯು ಕಡ್ಡಾಯವಾಗಿದ್ದಿತು ಶೇರ ಭಾಂಡವಲದಲ್ಲಿ ಯಾವದೇ ಸದಸ್ಯನ ಹಿತಸಂಬಂಧವು ಮರ್ಯಾದಿತವಾಗಿದ್ದಿತು ಮತ್ತು ಉತ್ಪನ್ನಕರ, ಸ್ಟ್ಯಾಂಪಕರ, ನೋಂದಣೀ ಫೀ ಮೊದಲಾದವುಗಳ ಬಗ್ಗೆ ಸಂಘಗಳಿಗೆ ರಿಯಾಯತಿ ಕೊಡಲಾಗಿದ್ದಿತು ನಿಯಂತ್ರಣ, ಮೇಲ್ವಿಚಾರಣೆಗಳ ವಿಷಯದಲ್ಲಿ, ಸರಕಾರದಿಂದ ನೇಮಿಸಲ್ಪಟ್ಟ ರಜಿಸ್ಟ್ರಾರರಿಗೆ ವಿಶೇಷ ಅಧಿಕಾರಗಳನ್ನು ಕೊಟ್ಟು, ಸಂಘಗಳನ್ನು ಅವರ ವಶಕ್ಕೆ ಒಪ್ಪಿಸಲಾಯಿತು"

ಈ ಸಂಘಗಳು ಮುಖ್ಯವಾಗಿ ಸಣ್ಣ ಹಾಗೂ ಪತ್ತಿನ ಸಂಘಗಳೇ ಇರಬೇಕೆಂದು ವಿಚಾರಿಸಲಾಗಿದ್ದಿತು ಅಲ್ಲದೆ ಪತ್ತನ್ನು ಬೆಳೆಯಿಸುವ ಬಗ್ಗೆ ಶಿಕ್ಷಣ,

ಉಳಿತಾಯ ಮತ್ತು ಸ್ವ–ಸಹಾಯ ಚಟಗಳನ್ನು ರೈತರಿಗೆ ತಿಳಿಯುವಡಿಸ ಬೇಕಾದುದೂ ಈ ಸಂಘಗಳ ಉದ್ದೇಶವಾಗಿದ್ದಿತು ಸಹಕಾರದಲ್ಲಿ ಅಡಕವಾದ ತತ್ವ ಗಳು ಭಾರತೀಯರಿಗೆ ಹಚ್ಚು ಮಾನ್ಯವಾಗಿ ತಮ್ಮ ತಮ್ಮ ಹಳ್ಳಿಗಳಲ್ಲಿ ಅವುಗಳನ್ನು ಜಾರಿಯಲ್ಲಿ ತರಲು ರೈತರು ಮುಂದ ಬರತೊಡಗಿದರು ಸಹಕಾರಿ ಆಂದೋಲನ ವನ್ನು ಭಾರತದಲ್ಲಿ ಜಾರಿ ಮಾಡುವ ಮುನ್ನ, ಸರಕಾರವು ಒಕ್ಕಲುತನದ ಸಮಸ್ಯೆಯು ಇತರ ಸಮಸ್ಯೆಗಳಿಗಿಂತ ತೀಕ್ಷ್ಣವಾಗಿದೆ ಎಂದೂ, ರೈತರಲ್ಲಿ ಪತ್ತಿನ ಸಂಘಗಳನ್ನು ಸ್ಥಾಪಿಸುವ ಬಗ್ಗೆ ಪ್ರಾಶಸ್ತ್ಯ ಕೊಡಬೇಕೆಂದೂ ಎಲ್ಲ ಸ್ಥಾನಿಕ ಸಂಸ್ಥೆಗಳಿಗೆ ಆದೇಶ ಕಳಿಸಿದ್ದಿತು

## ಬೆಳವಣಿಗೆ

ಸರಕಾರವು ಸರಕಾರೇತರರ ಸಹಾಯದಿಂದ ಪ್ರಾರಂಭಿಸಿದ ಸಹಕಾರಿ ಆಂದೋಲನವು ಭಾರತದಲ್ಲಿ ಚೆನ್ನಾಗಿ ಬೆಳೆಯತೊಡಗಿತು ೧೯೧೧ರವರೆಗೆ ಬೆಳೆದ ಸಂಘಗಳ ಅಂಕೆ ಸಂಖ್ಯೆಗಳನ್ನು ಈ ಕಳಗೆ ಕೊಡಲಾಗಿದೆ —

| ವರ್ಷ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ದುಡಿಯುವ ಭಾಂಡವಲು |
|---|---|---|---|
| ೧೯೦೬– ೭ | ೮೩೨ | ೯೦ ೫೮೨ | — |
| ೧೯೦೭– ೮ | ೧,೩೫೦ | ೧,೪೮,೬೯೮ | ೪೧,೭೫,೨೨೧ |
| ೧೮೦೮– ೯ | ೧,೪೯೮ | ೧,೭೯,೧೪೪ | ೭೨,೨೫,೧೧೯ |
| ೧೯೦೯–೧೦ | ೩,೩೯೭ | ೨,೨೦,೬೭೬ | ೧,೦೧,೨೯,೨೩೨ |
| ೧೯೧೦–೧೧ | ೫,೨೬೨ | ೨,೯೯,೩೭೬ | ೧,೫೩,೩೧,೭೦೨ |
| ೧೯೧೧–೧೨ | ೮,೦೫೭ | ೩,೯೧,೯೫೭ | ೨,೩೫,೮೮,೩೫೮ |

ಈ ಕಾಯದೆಯು ಪತ್ತಿನ ವ್ಯವಹಾರಕ್ಕಷ್ಟೇ ಮರ್ಯಾದಿತವಾದುದರಿಂದ ಆಂದೋಲನದ ಬೆಳವಣಿಗೆಗೆ ಹೆಚ್ಚು ಅವಕಾಶವಿರಲಿಲ್ಲ ಪತ್ತಿನ ದೃಷ್ಟಿಯಿಂದಲೂ ಅದು ಹೆಚ್ಚು ಬೆಳವಣಿಗೆ ಹೊಂದಿರಲಿಲ್ಲ ಎಂದು ಹೇಳಬಹುದು ಏಕೆಂದರೆ ಈ ಕಾಯದೆಯನ್ವಯ ಮಧ್ಯವರ್ತಿ ಬ್ಯಾಂಕು ಅಥವಾ ಯುನಿಯನ್ನುಗಳಂತಹ ಕೇಂದ್ರ ಸಂಸ್ಥೆಗಳನ್ನು ನೋಂದಣೀ ಮಾಡಲಿಕ್ಕೆ ಅನುಕೂಲತೆ ಇರಲಿಲ್ಲ ಇಂಥ ಸಂಸ್ಥೆಗಳಿಲ್ಲದೆ ಪತ್ತಿನ ಸಂಘಟನೆ ಪರಿಪೂರ್ಣವಾಗುವಂತಿರಲಿಲ್ಲ ೧೯೧೨ರಲ್ಲಿ ಸಹಕಾರಿ ಸಂಘಗಳ ಹೊಸ ಕಾಯದೆಯನ್ನು ಮಾಡಿ ಆಂದೋಲನದ ಕಾರ್ಯಕ್ಷೇತ್ರವನ್ನು ಬೆಳೆಯಿಸಲಾಯಿತು ಈ ಹಿಂದೆ ಸಂಶಯಾಸ್ಪದವಿದ್ದ ಎಷ್ಟೋ ಕ್ರಮಗಳನ್ನು ಈ ಕಾಯದೆಯು ಸರಿಪಡಿಸಿತಲ್ಲದೆ ಯೋಗ್ಯ ದಕ್ಷತೆ ವಹಿಸಿ, ಆಂದೋಲನದ ಭಾವೀ ವಿಕಾಸಕ್ಕೆ ಅನುಕೂಲತೆಯನ್ನು ಕಲ್ಪಿಸಿಕೊಟ್ಟಿತು. ಈ ಕಾಯಿದೆಯ ಪ್ರಕಾರ ಬಿನ್ ಪತ್ತಿನ ಸಂಘ, ಪ್ರಾಂತಿಕ

ಮತ್ತು ಮಧ್ಯವರ್ತಿ ಬ್ಯಾಂಕು, ಮತ್ತಿತರ ಪ್ರಾಥಮಿಕ ಸಂಯುಕ್ತ ಸಂಘಗಳನ್ನು ಸ್ಥಾಪಿಸಲು ಅನುಕೂಲವಾಯಿತು ಈ ಕಾಯದೆಯ ಮುಖ್ಯ ಮುದ್ದೆಗಳನ್ನು ಕೆಳಗೆ ಕೊಡಲಾಗಿದೆ

೧) ಬಿನ್ ಪತ್ತಿನ ಸಂಘಗಳಿಗೆ ನ್ಯಾಯ-ಬದ್ಧ ಮನ್ನಣೆ ದೊರೆಯಿತು

೨) ಮಧ್ಯವರ್ತಿ ಸಂಘಗಳು ಪ್ರಾಥಮಿಕ ಸಂಘಗಳಿಗಿಂತ ಭಿನ್ನವಂದು ಪರಿಗಣಿಸಲಾಯಿತು

೩) ಈ ಹಿಂದಿನ ನಗರ ಮತ್ತು ಗ್ರಾಮಾಂತರ ಸಂಘಗಳು ಎಂಬ ವಿಭಾಗ ವನ್ನು ರದ್ದುಗೊಳಿಸಿ ನಿಯಮಿತ ಮತ್ತು ಅನಿಯಮಿತ ಹೊಣೆಯ ಸಂಘಗಳು ಎಂಬ ಶಾಸ್ತ್ರೋಕ್ತ ವಿಭಾಗವನ್ನು ಬಳಕೆಯಲ್ಲಿ ತರ ಲಾಯಿತು ಎಲ್ಲ ಮಧ್ಯವರ್ತಿ ಸಂಘಗಳು ನಿಯಮಿತ ಜವಾಬ್ದಾರಿ ಸಂಘಗಳೆಂದೂ ಬಹುಸಂಖ್ಯಾಕ ರೈತರು ಸದಸ್ಯರಾಗಿರುವ ಸಂಘ ಗಳೆಲ್ಲ ಅನಿಯಮಿತ ಜವಾಬ್ದಾರಿ ಸಂಘಗಳೆಂದೂ ಪರಿಗಣಿಸ ಲಾಯಿತು

೪) ನಿಯಮಿತ ಜವಾಬ್ದಾರಿ ಸಂಘಗಳು ಸಹಿತ, ಸ್ಥಾನಿಕ ಸರಕಾರದ ಸಮ್ಮತಿಯ ಮೇರೆಗೆ, ಲಾಭದ ಕೆಲವೊಂದು ಭಾಗವನ್ನು ಕಾದಿಟ್ಟ ನಿಧಿಗೆ ವರ್ಗಾಯಿಸಿ ಡಿವ್ಹಿಡೆಂಡ ಕೊಡಬಹುದೆಂದು ಪ್ರಕಟಿಸ ಲಾಯಿತು ಮತ್ತು

೫) ಒಟ್ಟು ಲಾಭದ ಕೆಲವೊಂದು ಭಾಗವನ್ನು ಶೈಕ್ಷಣಿಕ ಮತ್ತು ಧಾರ್ಮಿಕ ಕಾರ್ಯಗಳಿಗಾಗಿ ತೆಗೆದಿಡಬೇಕೆಂದು ನಿರ್ಧರಿಸಲಾಯಿತು

೧೯೧೨ರ ತರುವಾಯ ಸಂಘಗಳ ಮತ್ತು ಸದಸ್ಯರ ಸಂಖ್ಯೆಯು ಶೀಘ್ರವಾಗಿ ಬೆಳೆಯತೊಡಗಿತು ಯೂನಿಯನ್, ಪ್ರಾಂತಿಕ ಮತ್ತು ಮಧ್ಯವರ್ತಿ ಬ್ಯಾಂಕುಗಳು ಮತ್ತು ಒಕ್ಕಲುತನದ ಬಿನ್ ಪತ್ತಿನ ಸಂಘಗಳೆಲ್ಲ ನೊಂದಾಯಿಸಲ್ಪಡತೊಡಗಿದವು ಬಿನ್ ಪತ್ತಿನ ಆಂದೋಲನವು ಸಹ ಕ್ರಮೇಣ ಬೆಳೆಯತೊಡಗಿತು ಹೊಸ ಕಾಯದೆಯು ಆಂದೋಲನದ ಬೆಳವಣಿಗೆಗೆ ಪ್ರೋತ್ಸಾಹ ಕೊಟ್ಟಿತೆಂಬುದು ಕೆಳಗಿನ ಅಂಕೆ-ಸಂಖ್ಯೆಗಳಿಂದ ಸಿದ್ಧವಾಗುತ್ತದೆ

| ಸಂಘಗಳ ಪ್ರಕಾರ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ |
|---|---|---|
| ಮಧ್ಯವರ್ತಿ ಬ್ಯಾಂಕುಗಳು ( ಸುಪರ ವಾಯಿಜಿಂಗ ಮತ್ತು ಗ್ಯಾರಂಟೀ ಯಿಂಗ ಯೂನಿಯನ್, ಪ್ರಾಂತಿಕ ಮಧ್ಯವರ್ತಿ ಬ್ಯಾಂಕು ಮತ್ತು | | |

| | | |
|---|---|---|
| ಬ್ಯಾಂಕಿಂಗ್ ಯೂನಿಯನ್ ಸಹಿತ ) | ೨೩೧ | ೨೩,೬೭೭ |
| ಒಕ್ಕಲುತನದ ಸಂಘಗಳು ( ದನ, ವಿಮಾ ಮತ್ತು ಜಮೀನ ವತ್ತಿ ಬ್ಯಾಂಕುಗಳು ಸಹಿತ ) | ೧೦,೮೯೧ | ೪,೫೯,೦೯೬ |
| ಬಿನ್ ಶೇತಕಿ ಸಂಘಗಳು ( ಇತರ ವಿಮಾ ಸಂಘಗಳು ಸಹಿತ ) | ೬೬೪ | ೮೯,೧೫೭ |
| ಒಟ್ಟು | ೧೧,೭೮೬ | ೫,೭೧,೯೩೦ |

( ಮೇಲಿನ ಅಂಕ ಸಂಖ್ಯಗಳು ೧೯೧೦–೧೧ ರಿಂದ ೧೯೧೪–೧೫ ಈ ನಾಲು ವರ್ಷಗಳ ಸರಾಸರಿ ಸಂಖ್ಯೆಗಳಾಗಿವೆ )

ಸಂಸ್ಥಾಪಕರ ಕಲ್ಪನೆಯನ್ನು ಮೀರಿ ಬೆಳೆದುಕೊಳ್ಳಲು ಈ ಸಂಘಗಳಿಗೆಹೆಚ್ಚು ಕಾಲ ಬೇಕಾಗಲಿಲ್ಲವೆಂಬುದು ಮೇಲಿನ ಅಂಕೆ–ಸಂಖ್ಯೆಗಳಿಂದ ಕಂಡು ಬರುತ್ತದೆ ಸ್ಥಾನಿಕ ಪರಿಸ್ಥಿತಿಗಳಿಂದಾಗಿ ಬೆಳವಣಿಗೆಯು ಏಕರೂಪವಾಗಿರದಿದ್ದರೂ ೫ ವರ್ಷಗಳೊಳಗಾಗಿ ಭಾರತದಲ್ಲಿ ಸಹಕಾರಿ ಆಂದೋಲನವು ವಿವಿಧ ಸ್ವರೂಪಗಳಲ್ಲಿ ಬೆಳೆಯತೊಡಗಿತು

ಭಾರತದಲ್ಲಿ ಸಹಕಾರಿ ಆಂದೋಲನವು ಉಚ್ಚ ಮಟ್ಟಗಳಲ್ಲಿ ಮತ್ತು ಹಣಕಾಸಿನ ದೃಷ್ಟಿಯಲ್ಲಿ ಚನ್ನಾಗಿ ಬೆಳೆದಿರುವ ಬಗ್ಗೆ ಮತ್ತು ಆ ಉದ್ದೇಶ ಸಾಫಲ್ಯಕ್ಕಾಗಿ ಸಾಧನಗಳನ್ನು ಸೂಚಿಸುವ ಬಗ್ಗೆ ೧೯೧೪ರಲ್ಲಿ ಭಾರತ ಸರಕಾರವು ಸರ್ ಎಡ್ವರ್ಡ ಮೆಕ್ಲೆಗಾನ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯಮಿಸಿತು ಈ ಸಮಿತಿಯ ವರದಿಯು ಸುಪ್ರಸಿದ್ಧವಾಗಿದ್ದು ಅದನ್ನು ೧೯೧೫ರಲ್ಲಿ ಪ್ರಕಟಿಸಲಾಯಿತು ಎಲ್ಲ ರೀತಿಯಲ್ಲಿ ಈ ಸಮಿತಿಯು ಸಹಕಾರ ಆಂದೋಲನವನ್ನು ಪರೀಕ್ಷಿಸಿ, ಆಂದೋಲನದ ಭಾವೀ ಪ್ರಗತಿಯ ದೃಷ್ಟಿಯಿಂದ ಎಷ್ಟೋ ಮಹತ್ತರ ವಿಧಾಯಕ ಸೂಚನೆಗಳನ್ನು ಮಾಡಿತು ಈ ಸಮಿತಿಯ ಶಿಫಾರಸುಗಳಿಂದ ಆಂದೋಲನಕ್ಕೆ ಹೊಸ ಸ್ವರೂಪವೇ ಬಂದಂತಾಯಿತು ಭಾರತಸರಕಾರದ೧೯೧೯ರ ಕಾಯದೆಯನ್ವಯ ಸಹಕಾರವು ಪ್ರಾಂತಿಕ ಸರಕಾರಗಳ ಆಡಳಿತೆಯಲ್ಲಿ ಬಂದಿತು ಸಹಕಾರವು ಪ್ರಾಂತಿಕ ವಿಷಯವಾದ ಮೇಲೆ ಆಂದೋಲನದ ಬೆಳವಣಿಗೆಯ ದೃಷ್ಟಿಯಿಂದ ಎಷ್ಟೋ ಪ್ರಾಂತಿಕ ಸರಕಾರಗಳು ಪರಿಶೀಲನೆಗಾಗಿ ಸಮಿತಿಗಳನ್ನು ನಿಯಮಿಸಿದವು ಆಗ್ರಾ ಅಯೋಧ್ಯೆಗಳ ಸಂಯುಕ್ತ ಪ್ರಾಂತದ ಓಕ್‌ಡೆನ್ ಸಮಿತಿ, ಮಧ್ಯ ಪ್ರದೇಶದ ಕಿಂಗ್ ಸಮಿತಿ,ಮದ್ರಾಸದ ಟೌನ್‌ಸೇನ್ ಸಮಿತಿ,ಬ್ರಹ್ಮದೇಶದ ಕ್ಯಾಲ್ವರ್ಟ ಸಮಿತಿಗಳು ಇವುಗಳಲ್ಲಿ ಮುಖ್ಯವಾಗಿವೆ ರಾಯಲ್ ಅಗ್ರಿಕಲ್ಚರಲ್ ಸಮಿತಿ, ಪ್ರಾಂತಿಕ ಬ್ಯಾಂಕಿಂಗ್ ವಿಚಾರಣಾ ಸಮಿತಿ, ಮತ್ತು ಭಾರತ ಮಧ್ಯವರ್ತಿ ಬ್ಯಾಂಕಿಂಗ್ ವಿಚಾರಣಾ ಸಮಿತಿ ಈ ಮೊದಲಾದವುಗಳು ಈ ಬಗ್ಗೆ ವಿಚಾರಿಸಿ ಆಂದೋಲನದಲ್ಲಿ

ಸಾರ್ವಜನಿಕರ ಆಸಕ್ತಿಯನ್ನು ಹೆಚ್ಚಿಸಿವೆ ಆ ಕಾಲಕ್ಕೆ ಪ್ರತಿ ಪ್ರಾಂತಕ್ಕೆ ಅದರ ವಿಶಿಷ್ಟ ಪರಿಸ್ಥಿತಿಗನುಗುಣವಾಗಿ ಬೇರೆ ಬೇರೆ ಕಾಯುವೆಗಳು ಇರಬೇಕೆಂಬ ಪ್ರವೃತ್ತಿಯು ಬಲವತ್ತರವಾಯಿತು ಮುಂಬಯಿ ಸರಕಾರವು ೧೯೨೫ರಲ್ಲಿ ಸಹಕಾರಿ ಸಂಘಗಳ ಕಾಯಿದೆಯನ್ನು ಪಾಸುಮಾಡಿ ಈ ದಿಶೆಯಲ್ಲ ಧುರೀಣತ್ವವನ್ನು ವಹಿಸಿತೆಂದು ಹೇಳಬಹುದು ಆ ತರುವಾಯ ಇದನ್ನು ಅನುಸರಿಸಿ ಬ್ರಹ್ಮದೇಶ, ಮದ್ರಾಸ, ಬಿಹಾರ ಓರಿಸಾ ಮತ್ತು ಕೊಡಗುಗಳು ತಮ್ಮ ತಮ್ಮ ಕಾಯದೆಗಳನ್ನು ಪಾಸು ಮಾಡಿಕೊಂಡವು ಆಗಿನ ಎಷ್ಟೋ ಹಿಂದೀ ಸಂಸ್ಥಾನಗಳು ಸಹಿತ ಸಹಕಾರದ ಬಗ್ಗೆ ಎಷ್ಟೋ ಚಟುವಟಿಕೆಗಳನ್ನು ಕೈಕೊಂಡವು ಹೀಗೆ ಅನೇಕ ಪ್ರಾಂತಿಕ ಸರಕಾರಗಳು ಸಹಕಾರದಲ್ಲಿ ಹೆಚ್ಚಿನ ಉತ್ಸುಕತೆ ವಹಿಸಿದ್ದರಿಂದ ೧೯೩೦ರ ವರೆಗೆ ಸಹಕಾರವು ಅಭೂತ ಪೂರ್ವರೀತಿಯಲ್ಲಿ ಬೆಳೆಯ ತೊಡಗಿತು. ಇದಕ್ಕೆ ಸಾಕ್ಷಿ ಯಾಗಿ ಕೆಳಗಿನ ಅಂಕೆ–ಸಂಖ್ಯೆಗಳು ನಿಂತಿವೆ

| ಅವಧಿಯಲ್ಲಿಯ ಸರಾಸರಿ | ಸಂಘಗಳ ಸಖ್ಯೆ (ಸಾವಿರದಲ್ಲಿ) | ಸದಸ್ಯರ ಸಂಖ್ಯೆ (ಸಾವಿರದಲ್ಲಿ) | ದುಡಿಯುವ ಭಾಂಡವಲು (ಸಾವಿರದಲ್ಲಿ) |
|---|---|---|---|
| ೧೯೦೫– ೬ ರಿಂದ ೦೯--೧೦ | ೨ | ೧೬೦ | ೬,೮೧೨ |
| ೧೯೧೦ -೧೧ ರಿಂದ ೧೪–೧೫ | ೧೨ | ೫೪೮ | ೫೪ ೮೪೨ |
| ೧೯೧೫-೧೬ ರಿಂದ ೧೯–೨೦ | ೩೦ | ೧,೧೨೯ | ೧,೫೧ ೮೪೬ |
| ೧೯೨೦–೨೧ ರಿಂದ ೨೪–೨೫ | ೬೮ | ೨,೧೫೫ | ೩.೬೩,೬೨೬ |
| ೧೯೨೫–೨೬ ರಿಂದ ೨೯–೩೦ | ೯೪ | ೩,೬೮೯ | ೬,೪೮ ೯೧೩ |

೧೯೧೫ರಿಂದ ೧೯೩೦ ಈ ಹದಿನೈದು ವರ್ಷಗಳ ಅವಧಿಯಲ್ಲಿ ಸಹಕಾರಿ ಆಂದೋಲನವು ರಭಸದಿಂದ ಬೆಳೆಯಿತೆಂದು ಮೇಲಿನ ಅಂಕೆ ಸಂಖ್ಯೆಗಳಿಂದ ತಿಳಿದುಬರುತ್ತದೆ ೧೯೩೦–೩೬ ಈ ಅವಧಿಯಲ್ಲಿ ಮಾತ್ರ ಜಾಗತಿಕ ಆರ್ಥಿಕ ಮುಗ್ಗಟ್ಟಿನಿಂದಾಗಿ ಆಂದೋಲನದ ಪ್ರಗತಿಯು ಕುಂಠಿತವಾಯಿತು ಒಕ್ಕಲುತನದ ಸರಕುಗಳ ಬೆಲೆಗಳು ಭಯಂಕರವಾಗಿ ಕುಗ್ಗಿದ್ದರ ಪರಿಣಾಮವಾಗಿ ರೈತರ ಸಾಲದ ಭಾರವು ಹೆಚ್ಚಾಗತೊಡಗಿತು ಮತ್ತು ಸಹಕಾರಿ ಸಂಘಗಳ ಸಾಲಗಳು ತಡೆದು ನಿಂತವು ಎಷ್ಟೋ ಸಂಘಗಳು ಮುಗ್ಗಿಹೋದವು ಹೀಗಾಗಿ ಈ ಆರ್ಥಿಕ ಮುಗ್ಗಟ್ಟಿನ ಪರಿಣಾಮವು ಬ್ಯಾಂಕುಗಳ ಮೇಲೂ ವಿಪರೀತವಾಗಿ ಆಯಿತು ಕೆಟ್ಟ ಸದಸ್ಯರನ್ನು ತಳ್ಳಿ ಹಾಕಲಾಯಿತು. ಸಂಘಗಳ ಸಾಲಗಳನ್ನು ವಸೂಲು ಮಾಡಲು ಒತ್ತಾಯದ ಕ್ರಮಗಳನ್ನು ಅನುಸರಿಸಲಾಯಿತು ವಸೂಲಿಯು ತ್ವರಿತವಾಗಬೇಕೆಂದು ಸನಲತ್ತಿನ ಯೋಜನೆಗಳು ಜಾರಿಯಲ್ಲಿ ಬಂದವು ಸದಸ್ಯರಿಂದ ಸಂಘಗಳಿಗೆ ಸಲ್ಲತಕ್ಕ ಸಾಲದ ಸಲುವಾಗಿ ಅವರ ಜಮೀನುಗಳನ್ನು ಸಂಘಗಳಿಗೆ ವರ್ಗಾಯಿಸಲಾಯಿತೇನೊ ನಿಜವು, ಆದರೆ ಅವುಗಳನ್ನು ಮಾರಾಟ

ಮಾಡುವದೇ ಸಂಘಗಳಿಗೆ ಒಂದು ಸಮಸ್ಯೆಯಾಯಿತು ಹೀಗೆ ಆರ್ಥಿಕ ಮುಗ್ಗಟ್ಟಿನಿಂದ ಸಾಲ ವಸೂಲಿ, ಕಟ್ಟ ಸದಸ್ಯರನ್ನು ತಳ್ಳಿ ಹಾಕುವದು, ಹೊಲಗಳನ್ನು ಮಾರುವದು, ಅಪ್ರಾಮಾಣಿಕ ಅಧಿಕಾರಿಗಳ ವಿರುದ್ಧ ಕ್ರಮ ತಗೆದು ಕೊಳ್ಳುವದು, ಹಾನಿಯನ್ನು ತುಂಬಿಕೊಳ್ಳುವುದು ಈ ಮೊದಲಾದ ಅನೇಕ ಜಟಿಲ ಸಮಸ್ಯೆಗಳು ತಲೆದೋರಿದವು ನಾಡಿನಲ್ಲೆಲ್ಲ ಪ್ರಾಂತಿಕ ಸರಕಾರಗಳು ಹೊಲಗಳ ಸಂಯೋಜನೆ ಮತ್ತು ಪುನರ್ನಿವೇಶನ ಕ್ರಮಗಳನ್ನು ಅನುಸರಿಸತೊಡಗಿದವು ೧೯೩೭ರಲ್ಲಿ ಜನಪ್ರಿಯ ಮಂತ್ರಿಗಳು ಅಧಿಕಾರಕ್ಕೆ ಬಂದಮೇಲೆ ಈ ಪರಿಸ್ಥಿತಿಯ ಗಂಭೀರತೆಯನ್ನು, ಸಮಸ್ಯೆಯ ಜಟಿಲತೆಯನ್ನು ಮನಗಂಡರು ಅನೇಕ ಪ್ರಾಂತಗಳಲ್ಲಿ ಆಂದೋಲನದ ಪುನರ್ರಚನೆಯಬಗ್ಗೆ ಕ್ರಮಗಳನ್ನು ಸೂಚಿಸಲು ತಜ್ಞರ ಸಮಿತಿಗಳನ್ನು ನಿಯಮಿಸಲಾಯಿತು ಮುಂಬಯಿ ರಾಜ್ಯದಲ್ಲಿ ಶ್ರೀ ವಿ ಎಲ್ ಮೆಹತಾ ಮತ್ತು ಆಗಿನ ರಜಿಸ್ಟ್ರಾರ ಶ್ರೀ ಭನಸಾಲಿ ಅವರನ್ನೊಳ ಗೊಂಡ ಸಮಿತಿಯನ್ನು ಆಂದೋಲನದ ಪುನರ್ಘಟನೆಯ ಬಗ್ಗೆ ಕ್ರಮಗಳನ್ನು ಸೂಚಿಸಲು ಮುಂಬಯಿ ಸರಕಾರವು ನಿಯಮಿಸಿತು ಮಧ್ಯಪ್ರದೇಶ ವರ್ಹಾಡ ಮತ್ತು ಬಿಹಾರಗಳಲ್ಲಿ ಸದಸ್ಯರ ಸಾಲತೀರಿಸುವ ಶಕ್ತಿಗಳಿಗನುಗುಣವಾಗಿ ಸಾಲಗಳನ್ನು ತಗ್ಗಿಸಲಾಯಿತು ಮತ್ತು ಕೊಡತಕ್ಕ ಸಾಲವನ್ನು ಅನೇಕ ವಾರ್ಷಿಕ ಕಂತುಗಳಲ್ಲಿ ವಿಭಾಗಿಸಲಾಯಿತು ಈ ಯೋಜನೆಗಳನ್ನು ಕಾರ್ಯಗತ ಗೊಳಿಸಲು ಪ್ರಾಂತಿಕ ಬ್ಯಾಂಕುಗಳಿಗೆ ಸರಕಾರಗಳು ಧನಸಹಾಯವನ್ನು ಒದಗಿಸಿಕೊಟ್ಟವು

೧೯೩೯ರಲ್ಲಿ ಯುದ್ಧ ಪ್ರಾರಂಭವಾದ ಮೇಲೆ ಒಕ್ಕಲುತನದ ಸರಕುಗಳ ಬೆಲೆಯು ಏರತೊಡಗಿದವು ಹೀಗಾಗಿ ಹೊಲಗಳ ಮತ್ತು ಅವುಗಳ ಹುಟ್ಟುವಳಿಗಳ ಬೆಲೆಗಳು ಏರತೊಡಗಿದವು ಇದರ ಪರಿಣಾಮವಾಗಿ ಒಕ್ಕಲಿಗನ ಸಾಲತೀರಿಸುವ ಶಕ್ತಿಯು ಹೆಚ್ಚಿತು ಒಕ್ಕಲುತನದ ಸಂಘಗಳ ಮುದ್ದತಮೀರಿದ ಸಾಲವು ೧೯೩೯ರಲ್ಲಿ ೧೧ ೧೫ ಕೋಟಿ ರೂ. ಇದ್ದುದು ೧೯೪೧–೪೨ರಲ್ಲಿ ೨೦ ೦೧ ಕೋಟಿ ರೂ. ಗಳಿಗೆ ಇಳಿಯಿತು ಹೊಸ ಹೊಸ ಸಂಘಗಳನ್ನು ಸ್ಥಾಪಿಸುವದಕ್ಕೂ ಇದ್ದ ಸಂಘಗಳನ್ನು ಸುಧಾರಿಸುವದಕ್ಕೂ ಕ್ರಮಗಳನ್ನು ಅನುಸರಿಸಲಾಯಿತು

ಸಂಘಗಳ ಸದಸ್ಯರ ಮತ್ತು ದುಡಿಯುವ ಬಾಂಡವಳಿನ ಪ್ರಗತಿಪರ ಚಿತ್ರವನ್ನು ಕೆಳಗೆ ಕಾಣಬಹುದು

| ಅವಧಿ | ಸಂಘಗಳ ಸಂಖ್ಯೆ (ಸಾವಿರದಲ್ಲಿ) | ಸದಸ್ಯರ ಸಂಖ್ಯೆ (ಲಕ್ಷದಲ್ಲಿ) | ದುಡಿಯುವ ಭಾಂಡವಲು (ಕೋಟಿಯಲ್ಲಿ) |
|---|---|---|---|
| ೧೯೩೭–೪೦ | ೧೧೭ ೯೭ | ೫೦ ೭೭ | ೧೦೪ ೬೮ |
| ೧೯೪೧–೪೫ | ೧೪೯ ೮೯ | ೭೨ ೧೮ | ೧೨೪ ೩೫ |

ವಿ ಸೂ :— ಈ ಅಂಕೆ ಸಂಖ್ಯೆಗಳು ಆ ಅವಧಿಯ ಸರಾಸರಿಗಳು ಮಾತ್ರ.

೧೯೪೧ರ ತರುವಾಯ ಒಕ್ಕಲುತನದ ಉತ್ಪಾದನೆಗಳ ಬೆಲೆಗಳು ಒಂದೇಸವನೆ ಏರತೊಡಗಿದವು. ಎರಡನೆಯ ಜಾಗತಿಕ ಯುದ್ಧವು ಆಂದೋಲನದ ಬೆಳವಣಿಗೆಗೆ ಹೆಚ್ಚು ಸಹಾಯಕಾರಿಯಾಯಿತು ಸಹಕಾರಿ ಸಂಘಗಳು ತಮ್ಮ ಗತಶಕ್ತಿಗಳನ್ನು ಸಂಪಾದಿಸಿಕೊಂಡವಲ್ಲದೆ ತಮ್ಮ ಚಟುವಟಿಕೆಗಳನ್ನು ವೃದ್ಧಿಗೊಳಿಸಿಕೊಂಡವು ಯುದ್ಧ ಪರಿಸ್ಥಿತಿಯಿಂದಾಗಿ ಎಷ್ಟೋ ಗ್ರಾಹಕರ ಸಂಘಗಳು, ಒಕ್ಕಲುತನದ ಪತ್ತಿನ ಸಂಘಗಳು, ವಿವಿಧೋದ್ದೇಶ ಸಂಘಗಳು ಮತ್ತು ಮಾರಾಟ ಸಂಘಗಳು ಅಸ್ತಿತ್ವದಲ್ಲಿ ಬಂದವು ನಿಯಂತ್ರಿತ ಸರಕುಗಳ ವಿತರಣೆಯನ್ನು ಸಹಕಾರಿ ಸಂಘಗಳು ಕೈಕೊಂಡು, ತುಟಾಗ್ರತೆಯ ಸರಕುಗಳನ್ನು ಯೋಗ್ಯ ಬಲೆಗೆ ಹಂಚಿ ಜನತೆಯ ಸೇವ ಮಾಡಿವೆ ಅದರಿಂದ ತಕ್ಕಮಟ್ಟಿಗೆ ಕಸ್ಪೇಟೆಯ ವಿನಾಶಕ್ಕೂ ಕಾರಣವಾಗಿವೆ ಸಹಕಾರಿ ಸಂಘಗಳು ಜನಸಾಮಾನ್ಯರ ಕಲ್ಯಾಣಕ್ಕಾಗಿ ಯಾವ ರೀತಿಯಲ್ಲಿ ಸೇವೆ ಸಲ್ಲಿಸಬಹುದೆಂಬುದನ್ನು ಯುದ್ಧವು ನಿಶ್ಚಿತವಾಗಿ ತೋರಿಸಿಕೊಟ್ಟಿದೆ ಹೀಗಾಗಿ ಯುದ್ಧಕಾಲದಲ್ಲಿ ಆಂದೋಲನವು ಭರದಿಂದ ಬೆಳೆಯತೊಡಗಿತು ಅಂದರೆ ಗುಣಪ್ರಮಾಣಗಳೆರಡರಲ್ಲೂ ವಿವಿಧ ರೂಪವಾಗಿ ಯೋಗ್ಯ ಪ್ರಗತಿಯನ್ನು ಹೊಂದಿತು

ಎರಡನೆಯ ಜಾಗತಿಕ ಯುದ್ಧದ ಕಾಲದಲ್ಲಿಯ ಆಂದೋಲನದ ಪ್ರಗತಿಪರ ಚಿತ್ರವನ್ನು ಇಲ್ಲಿ ಕೊಡಲಾಗಿದ

| ಅವಧಿ | ಸಂಘಗಳ ಸಂಖ್ಯೆ (ಸಾವಿರದಲ್ಲ) | ಸದಸ್ಯರ ಸಂಖ್ಯೆ (ಲಕ್ಷದಲ್ಲಿ) | ದುಡಿಯುವ ಭಾಂಡವಲು (ಕೋಟಿ ರೂ ಗಳಲ್ಲ) |
|---|---|---|---|
| ೧೯೩೮-೩೯ | ೧೨೨ | ೫೩ ೭ | ೧೦೬ ೪೭ |
| ೧೯೩೯-೪೦ | ೧೩೮ | ೬೦ ೮ | ೧೦೭ ೧೦ |
| ೧೯೪೦-೪೧ | ೧೪೩ | ೬೪ ೦ | ೧೦೯ ೨೫ |
| ೧೯೪೧-೪೨ | ೧೪೫ | ೬೭ ೪ | ೧೧೨ ೪೨ |
| ೧೯೪೨-೪೩ | ೧೪೬ | ೬೯ ೧ | ೧೨೧ ೧೪ |
| ೧೯೪೩-೪೪ | ೧೫೬ | ೭೬ ೯ | ೧೩೨ ೨೧ |
| ೧೯೪೪-೪೫ | ೧೬೦ | ೮೩ ೬ | ೧೪೬ ೬೩ |

ಸಂಘಗಳ ಸಂಖ್ಯೆಯು ೧೨೨,೦೦೦ ರಿಂದ ೧೬೦,೦೦೦ ವರೆಗೂ ಸದಸ್ಯರ ಸಂಖ್ಯೆಯು ೫೩೭೦,೦೦೦ ರಿಂದ ೮೩೬೦,೦೦೦ ವರೆಗೂ ದುಡಿಯುವ ಭಾಂಡವಲು ೧೦೬೪೭೦೦೦೦೦ ರೂ ಗಳಿಂದ ೧೪೬೬೩೦೦೦೦೦ ರೂ ಗಳವರಗೂ ಏರಿದವು ೧೯೩೯ ಮತ್ತು ೧೯೪೫ ರಲ್ಲಿಯ ಆಂದೋಲನದ ತುಲನಾತ್ಮಕ ಚಿತ್ರವನ್ನು ಪರಿಶೀಲಿಸಿ ನೋಡಬಹುದು ಆದರೆ ಅದಕ್ಕಿಂತ ಪೂರ್ವದಲ್ಲಿ, ಈ ಪ್ರಗತಿಯ ಕಲ್ಪನೆಯು ಪೂರ್ಣವಾಗಿ ಬರಲೆಂಬ ಉದ್ದೇಶದಿಂದ ನಗರ ಮತ್ತು ಹಳ್ಳಿಗಳ ಸಂಖ್ಯೆ ಮತ್ತು ಜನಸಂಖ್ಯೆ ಇವುಗಳನ್ನು ಇಲ್ಲಿ ಕೊಡಲಾಗಿದೆ

೧೯೧೧ ಮತ್ತು ೧೯೪೧ ರಲ್ಲಿಯ (ಪಾಕಿಸ್ತಾನ ಸೇರಿ) ಅಂಕೆ ಸಂಖ್ಯೆಗಳು

| ವರ್ಷ | ನಗರಗಳು | ಹಳ್ಳಿಗಳು | ಒಟ್ಟು ಜನಸಂಖ್ಯೆ | ನಗರವಾಸಿಗಳು | ಹಳ್ಳಿಯವಾಸಿಗಳು |
|---|---|---|---|---|---|
| ೧೯೧೧ | ೨೦೦೭ | ೬,೮೨,೬೬೪ | ೩೦,೨೯,೯೫,೦೧೪ | ೨,೫೫,೭೪,೦೦೮ | ೨೭,೪೪,೨೦,೯೨೬ |
| ೧೯೪೧ | ೨೭೦೩ | ೭,೫೫,೮೯೨ | ೩೮,೮೯,೯೭,೯೫೫ | ೪,೯೬,೯೬,೦೫೩ | ೩೩,೯೩,೦೧,೯೦೨ |

ಈ ಚಿತ್ರವನ್ನು ಹಿನ್ನೆಲೆಯಾಗಿಟ್ಟುಕೊಂಡು ಕಳೆದ ೩೦ ವರ್ಷಗಳಲ್ಲಿಯ ಆಂದೋಲನದ ಪ್ರಗತಿಯ ಚಿತ್ರವನ್ನು ಇಲ್ಲಿ ಕಾಣಬಹುದು,

## ೧. ಶೇತ್ಕಿ ಸಂಘಗಳು.

| ವರ್ಷ | ಶೇತ್ಕಿ ಪತ್ತು | ಶೇತ್ಕಿ ಇತರ ಸಂಘಗಳು | ಒಟ್ಟು |
|---|---|---|---|
| ೧೯೧೪–೧೫ | ೧೫,೮೬೧ | ೧೫೫ | ೧೬,೦೧೬ |
| ೧೯೪೪–೪೫ | ೧,೧೫,೮೧೦ | ೨೦,೮೩೭ | ೧,೩೬,೬೪೭ |

## ೨. ಬಿನ್ ಶೇತ್ಕಿ ಸಂಘಗಳು.

| ವರ್ಷ | ಪತ್ತು | ಇತರ | ಒಟ್ಟು |
|---|---|---|---|
| ೧೯೧೪–೧೫ | ೭೯೧ | ೧೨೩ | ೯೧೪ |
| ೧೯೪೪–೪೫ | ೭,೪೬೨ | ೧೪,೪೬೯ | ೨೧,೯೪೧ |

## ವಿವಿಧ ಸ್ವರೂಪದ ಸಹಕಾರಿ ಸಂಘಗಳ ಪೃಥಕ್ಕರಣವನ್ನು ಇಲ್ಲಿ ಕೊಡಲಾಗಿದೆ.

| ಸಂಘಗಳ ಪ್ರಕಾರ | ಸಂಘಗಳ ಸಂಖ್ಯೆ |
|---|---|
| ಶೇತ್ಕಿ ಪತ್ತಿನ ಸಂಘಗಳು | ೧,೧೫,೮೧೦ |
| ಖರೀದಿ ವಿಕ್ರಿ ಸಂಘಗಳು | ೧,೦೪೪ |
| ಉತ್ಪಾದಕರ ಸಂಘಗಳು | ೨,೩೩೫ |
| ಉತ್ಪಾದನೆ ಮತ್ತು ಮಾರಾಟ ಸಂಘಗಳು | ೯,೫೦೯ |
| ಇತರ | ೭,೯೪೯ |
| ಒಟ್ಟು | ೧,೩೬,೬೪೭ |

## ಬಿನ್ ಶೇತ್ಕಿ ಸಂಘಗಳ ಪೃಥಕ್ಕರಣವನ್ನು ಇಲ್ಲಿ ಕೊಡಲಾಗಿದೆ

| ಸಂಘಗಳ ಪ್ರಕಾರ | ಸಂಘಗಳ ಸಂಖ್ಯೆ |
|---|---|
| ಪತ್ತಿನ ಸಂಘಗಳು (ಬ್ಯಾಂಕು ಸಹಿತ) | ೭,೪೭೨ |
| ಖರೀದಿ, ಖರೀದಿ-ವಿಕ್ರಿ ಸಂಘಗಳು | ೫,೦೭೩ |
| ಉತ್ಪಾದನೆ ಮತ್ತು ಮಾರಾಟ ಸಂಘಗಳು | ೨,೭೬೫ |
| ಇತರ | ೬,೮೩೧ |
| ಒಟ್ಟು | ೨೧,೯೪೧ |

ಕೆಳಗಿನ ಅಂಕೆ ಸಂಖ್ಯೆಗಳಲ್ಲಿ ೧೯೧೪–೧೫ ಮತ್ತು ೧೯೪೪–೪೫ರಲ್ಲಿಯ ಸಹಕಾರಿ ಸಂಘಗಳ ಮುಖ್ಯ ವೈಶಿಷ್ಟ್ಯಗಳ ಚಿತ್ರವನ್ನು ಕೊಡಲಾಗಿದೆ

| | ವಿವರ | ೧೯೧೪–೧೫ | ೧೯೪೪–೪೫ |
|---|---|---|---|
| ೧ | ವಸೂಲಾದ ಶೇಅರ ಭಾಂಡವಲು | ೧,೪೮,೬೬,೦೦೦ | ೨೦,೩೦,೬೧,೦೦೦ |
| ೨ | ಸದಸ್ಯರಿಂದ ಸಾಲ ಮತ್ತು ರೇವು | ೧,೨೧,೪೬,೦೦೦ | ೧೮,೫೫,೯೭,೦೦೦ |
| ೩ | ಸಂಘಗಳಿಂದ ಸಾಲ ಮತ್ತು ರೇವು | — | ೧೦,೮೨,೨೧,೦೦೦ |
| ೪ | ಪ್ರಾಂತಿಕ ಮತ್ತು ಮಧ್ಯವರ್ತಿ ಬ್ಯಾಂಕುಗಳಿಂದ ಸಾಲ ಮತ್ತು ರೇವುಗಳು | ೩,೧೭,೪೪,೦೦೦ | ೨೩,೩೭,೪೫,೦೦೦ |
| ೫ | ಸರಕಾರದಿಂದ ಸಾಲ ಮತ್ತು ರೇವು | ೧೩,೬೮,೦೦೦ | ೧,೪೨,೪೦,೦೦೦ |
| ೬ | ಸದಸ್ಯೇತರರಿಂದ ಸಾಲ ಮತ್ತು ರೇವು | ೨,೬೩,೪೪,೦೦೦ | ೪೧,೯೧,೦೪,೦೦೦ |
| ೭ | ಭೂ-ಒತ್ತಿ ಸಂಘಗಳಿಂದ ತಂದ ಸಾಲ | | ೬,೯೯,೮೯,೦೦೦ |
| ೮ | ಕಾದಿಟ್ಟ ನಿಧಿ | — | ೧೪,೯೭,೯೯,೦೦೦ |
| ೯ | ಇತರ ನಿಧಿಗಳು | ೫೧,೯೩,೦೦೦ | ೮,೩೭,೮೩,೦೦೦ |
| | ಒಟ್ಟು | ೮,೯೬,೬೧,೦೦೦ | ೧,೪೬,೬೩,೩೭ ೦೦೦ |

ಯುದ್ಧ ಕಾಲದಲ್ಲಿ ಈ ಮೊದಲೇ ಹೇಳಿರುವಂತೆ ಆಂದೋಲನವು ಭರದಿಂದ ಬೆಳೆಯತೊಡಗಿತು ಅಸಂಖ್ಯಾತ ಗ್ರಾಹಕರ ಸಂಘಗಳು ಅಸ್ತಿತ್ವದಲ್ಲಿ ಬಂದವು ಗ್ರಾಮಾಂತರಗಳಲ್ಲಿಯೂ ವಿತರಣಾಕಾರ್ಯಕ್ಕಾಗಿ ಪ್ರಾಥಮಿಕ ಸಂಘಗಳು ಹುಟ್ಟಿ

ಕೊಂಡವು ಒಕ್ಕಲುತನದ ಸರಕುಗಳ ಬೆಲೆಗಳು ಹೆಚ್ಚಾಗತೊಡಗಿದಂತೆ ರೈತರು ತಮ್ಮ ಸಾಲಗಳನ್ನು ತಿರುಗಿ ಕೊಡಲು ಸಮರ್ಥರಾದರು ಶೇತ್ಕಿ ಪತ್ತಿನ ಆಂದೋಲನವು ತನ್ನ ಶಕ್ತಿ ಹಾಗೂ ಚಟುವಟಿಕೆಗಳನ್ನು ಹೆಚ್ಚಿಸಿಕೊಂಡಿತು ಶೇತ್ಕಿ ಬಿನ್ ಪತ್ತಿನ ಆಂದೋಲನವು ಸಹಿತ ಹೆಚ್ಚೆಚ್ಚಾಗಿ ಬೆಳೆಯತೊಡಗಿತು ಭಾರತ ಸರಕಾರದಿಂದ ಶ್ರೀ - ಆರ್ ಜಿ ಸರಯ್ಯಾ ಅವರ ಅಧ್ಯಕ್ಷತೆಯಲ್ಲಿ ನಿಯಮಿಸಲ್ಪಟ್ಟಿದ್ದ ಸಹಕಾರಿ ಯೋಜನಾ ಸಮಿತಿಯು ನಗರ ಮತ್ತು ಹಳ್ಳಿಗಳಲ್ಲೆಲ್ಲ ಎಲ್ಲ ಆರ್ಥಿಕ ಚಟುವಟಿಕೆಗಳಿಗಾಗಿ ಸಹಕಾರಿ ತತ್ವಗಳನ್ನು ಅನ್ವಯಿಸಬೇಕೆಂದು ಶಿಫಾರಸು ಮಾಡಿದೆ ಪ್ರಾಥಮಿಕ ಸಂಘಗಳನ್ನು ವಿವಿಧೋದ್ದೇಶ ಸಂಘಗಳನ್ನಾಗಿ ಪರಿವರ್ತಿಸಬೇಕೆಂದೂ, ೧೦ ವರ್ಷಗಳ ಅವಧಿಯಲ್ಲಿ ಹಳ್ಳಿಗಳಲ್ಲಿ ನೂರಕ್ಕೆ ೫೦ರಷ್ಟು, ಹಳ್ಳಿಯ ಜನತೆಯಲ್ಲಿ ನೂರಕ್ಕೆ ೩೦ರಷ್ಟು ಜನರು ಆಂದೋಲನಕ್ಕೆ ಒಳಪಡುವಂತೆ ಪ್ರಯತ್ನ ಮಾಡಬೇಕೆಂದೂ ಅದೇ ಸಮಿತಿಯು ಶಿಫಾರಸು ಮಾಡಿದೆ

೧೯೭೭ರಲ್ಲಿ ಜನತಾ ಸರಕಾರವು ಅಧಿಕಾರಕ್ಕೆ ಬಂದ ಮೇಲೆ, ಕೇಂದ್ರ ಹಾಗೂ ರಾಜ್ಯ ( ಪ್ರಾಂತಿಕ ) ಸರಕಾರಗಳು ಎಷ್ಟೋ ಆರ್ಥಿಕ ಸಮಸ್ಯೆಗಳನ್ನು ಬಿಡಿಸುವದಕ್ಕಾಗಿ ಸಹಕಾರವನ್ನು ಉಪಯೋಗಿಸತೊಡಗಿದವು ಸಹಕಾರ ಆಂದೋಲನದ ಮತ್ತು ಕಾಂಗ್ರೆಸ್ಸಿನ ಇತಿಹಾಸದಲ್ಲಿ ಮೊದಲ ಬಾರಿಗೆ ಕಾಂಗ್ರೆಸ್ಸಿನ ಕಾರ್ಯಕ್ರಮದಲ್ಲಿ ಸಹಕಾರಕ್ಕೆ ಯೋಗ್ಯ ಸ್ಥಾನವು ದೊರಯಿತು ೧೯೪೫-೪೬ರ ಕಾಂಗ್ರೆಸ್ಸಿನ ಚುನಾವಣಾ ಘೋಷಣಾದಲ್ಲಿ, “ಸ್ವತಂತ್ರ ಭಾರತವು ಸಹಕಾರಿ ಪ್ರಜಾಪ್ರಭುತ್ವದಲ್ಲಿ ವಿಕಸಿತಗೊಳ್ಳಲಿ” ಎಂದು ನಮೂದಿಸಲಾಗಿದ್ದಿತು. ಆ ತರುವಾಯ ರಾಜ್ಯಘಟನೆಯಲ್ಲಿಯೂ ಇದೇ ಆದರ್ಶವನ್ನು ಮಂಡಿಸಲಾಯಿತು ೧೯೪೭ರಲ್ಲಿ ಮುಂಬಯಿಯಲ್ಲಿ ಘೋಷಿಸಲ್ಪಟ್ಟಂತೆ, ‘ ಭಾರತ ಜನತೆಯ ಪ್ರಗತಿ ಸುಸ್ಥಿತಿಗಳೂ, ಮತ್ತು ಅವಕಾಶಗಳ, ರಾಜಕೀಯ, ಆರ್ಥಿಕ ಮತ್ತು ವಿಶೇಷ ಅಧಿಕಾರಗಳ ಸಮತೆಯ ತಳಹದಿಯ ಮೇಲೆ ಶಾಂತಿಯುತ ಕ್ರಮಬದ್ಧ ಸಾಧನಗಳಿಂದ ಜಾಗತಿಕ ಶಾಂತಿ ಸೌಹಾರ್ದಗಳ ಗುರಿಯನ್ನಿಟ್ಟುಕೊಂಡ ಸಹಕಾರಿ ಪ್ರಜಾ ಪ್ರಭುತ್ವ ಸ್ಥಾಪನೆಯೂ ” ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಉದ್ದೇಶವಾಗಿವೆ

ಭಾರತವು ವಿಭಾಗವಾಗುವ ಕಾಲಕ್ಕೆ ಪಾಕಿಸ್ತಾನವನ್ನೊಳಗೊಂಡು ಸಹಕಾರಿ ಆಂದೋಲನದ ಪರಿಸ್ಥಿತಿಯು ಕೆಳಗಿನಂತಿದ್ದಿತು

| ವರ್ಷ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ದುಡಿಯುವ ಭಾಂಡವಲು |
| --- | --- | --- | --- |
| | (ಸಾವಿರದಲ್ಲಿ) | (ಲಕ್ಷದಲ್ಲಿ) | (ಕೋಟಿ ರೂ ಗಳಲ್ಲಿ) |
| ೧೯೪೫-೪೬ | ೧೭೨ ೧೭ | ೯೧ ೬೩ | ೧೬೪ ೦೦ |

ಸ್ವಾತಂತ್ರ್ಯೋದಯದ ತರುವಾಯ ಆರ್ಥಿಕ ಪ್ರಜಾಪ್ರಭುತ್ವ ಸ್ಥಾಪನೆಗಾಗಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಸಹಕಾರಿ ಸಂಘಗಳನ್ನು ಉಪಯೋಗಿಸ ತೊಡಗಿದವು ಅಭಿವೃದ್ಧಿ ಯೋಜನೆಗಳಲ್ಲಿ ಕೇಂದ್ರ ಹಾಗೂ ರಾಜ್ಯ ಸರಕಾರ ಗಳೆರಡೂ ಸಹಕಾರಕ್ಕ ಯೋಗ್ಯ ಸ್ಥಾನವನ್ನು ಕಲ್ಪಿಸಿಕೊಟ್ಟವು ರೈತರ ಉತ್ಪಾದನೆಗಳ ಮಾರಾಟಕ್ಕಾಗಿ, ನಿರಾಶ್ರಿತ ಜನರ ಪುನರ್ನಿವೇಶನಕ್ಕಾಗಿ, ಸಣ್ಣ ಸಣ್ಣ ಉದ್ದಿಮೆಗಳ ಬೆಳವಣಿಗೆಗಾಗಿ, ನೀರಾವರಿ ಬೇಸಾಯ ಸಂಘಗಳ ಮುಖಾಂತರ ಮತ್ತು ಗೊಬ್ಬರ, ಸುಪೀಕತೆಯ ಸಾಧನೆ, ಬೀಜ ಮೊದಲಾದವುಗಳನ್ನು ಪೂರೈಸಿ ಆಹಾರ ಉತ್ಪಾದನೆಯ ಹೆಚ್ಚಳಕ್ಕಾಗಿ, ಔದ್ಯೋಗಿಕ ಕೇಂದ್ರಗಳಲ್ಲಿಯ ಕೆಲಸ ಗಾರರಿಗೆ ವಸತಿ ಸೌಕರ್ಯಕ್ಕಾಗಿ, ಮತ್ತು ಜನತೆಯ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿ ಸುಧಾರಣೆಯ ಅನೇಕ ಉದ್ದೇಶಗಳಿಗಾಗಿ ಸಹಕಾರಿ ಸಂಘಗಳು ಹಣಕಾಸಿನ ಸೌಕರ್ಯಗಳನ್ನು ಪತ್ತುಳ್ಳ ರೈತರಿಗೆ ದೊಡ್ಡ ಪ್ರಮಾಣದಲ್ಲಿ ಒದಗಿಸಿಕೊಡತೊಡಗಿದವು

೧೯೪೬–೫೦ರಲ್ಲಿ ಸಹಕಾರಿ ಆಂದೋಲನದ ಪ್ರಗತಿಯ ಚಿತ್ರವನ್ನು ಕೆಳಗೆ ಕಾಣಬಹುದು

| **ವರ್ಷ** | **ಸಂಘಗಳ ಸಂಖ್ಯೆ** (ಸಾವಿರದಲ್ಲಿ) | **ಸದಸ್ಯರು** (ಲಕ್ಷದಲ್ಲಿ) | **ದುಡಿಯುವ ಭಾಂಡವಲು** (ಕೋಟಿಯಲ್ಲಿ) |
|---|---|---|---|
| ೧೯೪೬–೪೭ | ೧೩೯ ೧೪ | ೯೧ ೦೧ | ೧೫೬ ೦೧ |
| ೧೯೪೭–೪೮ | ೧೪೯ ೭೭ | ೧೦೧ ೧೭ | ೧೭೧ ೦೬ |
| ೧೯೪೮–೪೯ | ೧೬೩ ೮೮ | ೧೨೭ ೦೭ | ೨೧೯ ೪೯ |
| ೧೯೪೯–೫೦ | ೧೭೩ ೦೯ | ೧೨೫.೬೧ | ೨೩೩ ೧೦ |

ದೇಶವು ಇಬ್ಭಾಗವಾದ ಮೇಲೆ ಸಂಖ್ಯೆಗಳ ಪ್ರಮಾಣವು ತುಸು ತಗ್ಗಿದರೂ ಆ ತರುವಾಯದ ಪ್ರಗತಿಯು ಗಮನಾರ್ಹವಾಗಿದೆ ೧೯೪೯–೫೦ರಲ್ಲಿಯ ಅಂಕೆ ಸಂಖ್ಯೆಗಳು ೧೯೪೫–೪೬ರ ಅವಿಭಕ್ತ ಭಾರತದ ಒಟ್ಟು ಅಂಕೆ–ಸಂಖ್ಯೆಗಳನ್ನೂ ಮೀರಿವೆ ಸಂಘಗಳ ಸಂಖ್ಯೆಯ ಹೆಚ್ಚಳದ ಜೊತೆಗೆ ಅವುಗಳ ಚಟುವಟಿಕೆಗಳೂ ವಿವಿಧ ಮುಖವಾಗಿ ಬೆಳದಿವೆ

ಸರಕಾರದವರು ಕೈಕೊಂಡ ಯೋಜನೆಗಳಲ್ಲೆಲ್ಲ ಸಹಕಾರವು ಮಹತ್ವದ ಮತ್ತು ಪರಿಣಾಮಕಾರಿಯಾದ ಪಾತ್ರವನ್ನು ಎಸಗತೊಡಗಿತು ಮುಂಬಯಿ ರಾಜ್ಯದಲ್ಲಿ ೧೯೪೭ರಿಂದ ಸಹಕಾರದ ಬೆಳವಣಿಗೆಗಾಗಿ ನಿರ್ದಿಷ್ಟ ಪಂಚವಾರ್ಷಿಕ ಯೋಜನೆಯನ್ನು ಕಾರ್ಯಗತಗೊಳಿಸಲಾಗಿದೆ ಕಳೆದ ಐದು ವರ್ಷಗಳಲ್ಲಿ ಗ್ರಾಮಾಂತರ ಪತ್ತಿನ ಸುವ್ಯವಸ್ಥೆ, ಗೃಹ ಉದ್ದಿಮೆಯ ಬೆಳವಣಿಗೆ, ಸಹಕಾರಿ

ಬೇಸಾಯ ಮತ್ತು ನೀರಾವರಿಯ ಸಂಘಗಳ ಸ್ಥಾಪನೆಯ ಮೂಲಕ ಆಹಾರ ಉತ್ಪಾದನೆಯ ಹೆಚ್ಚಳ, ನಿರಾಶ್ರಿತ ಪುನರ್ನಿವೇಶನದ ವ್ಯವಸ್ಥೆ, ಅರಣ್ಯಕೂಲಿಕಾರರ ಸಹಕಾರಿ ಸಂಘಗಳ ಸ್ಥಾಪನೆಯ ಮುಖಾಂತರ ಹಿಂದುಳಿದ ಜನರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳ ಸುಧಾರಣೆ, ಮುಂಬಯಿ ಅಹಮ್ಮದಾಬಾದ ಮತ್ತು ಪುಣೆಗಳಂತಹ ದೊಡ್ಡ ದೊಡ್ಡ ಪಟ್ಟಣಗಳಲ್ಲಿಯ ಬಡ ಮತ್ತು ನಿರಾಶ್ರಿತ ಜನರಿಗೆ ವಸತಿ ಸೌಕರ್ಯ ಈ ಮೊದಲಾದ ಮಹತ್ವದ ಕಾರ್ಯಗಳನ್ನು ಕಳೆದ ಐದು ವರ್ಷಗಳಲ್ಲಿ ಮುಂಬಯಿ ರಾಜ್ಯದಲ್ಲಿಯ ಸಹಕಾರಿ ಆಂದೋಲನವು ಮಾಡಿದೆ ಮದ್ರಾಸ, ಮೈಸೂರ ಮತ್ತು ಸಂಯುಕ್ತ ಪ್ರಾಂತಗಳಲ್ಲಿ ಸಹ ಇಂತಹವೇ ಯೋಜನೆಗಳು ಬಳಕೆಯಲ್ಲಿ ಬಂದಿವೆ ಮುಂಬಯಿ, ಮದ್ರಾಸ, ಮೈಸೂರ ಮತ್ತು ಉತ್ತರ ಪ್ರದೇಶಗಳಂತಹ ಮಹತ್ವ ರಾಜ್ಯಗಳಲ್ಲಿಯ ಅನೇಕ ಹಳ್ಳಿಗಳಲ್ಲಿ ವಿವಿಧೋದ್ದೇಶ ಸಂಘಗಳ ಪ್ರಚಾರಕ್ಕೆ ಹೆಚ್ಚು ಚಾಲನೆ ಸಿಕ್ಕಿತು ಹೀಗೆ ಯುದ್ಧೋತ್ತರ ಕಾಲದಲ್ಲಿ ಸಹಕಾರಿ ಆಂದೋಲನವು ಪ್ರಬಲ ಹೊಣೆಗಳನ್ನು ವಹಿಸಿ, ವಿವಿಧ ಸ್ವರೂಪಗಳಲ್ಲಿ ಬೆಳೆಯುತೊಡಗಿದೆ ಎಂದು ಮೇಲ್ಕಂಡ ವಿವರಗಳಿಂದ ವಿದಿತವಾಗುತ್ತದೆ ಇದಲ್ಲದೆ ಈ ಪೂರ್ವದಲ್ಲಿ ಎಂದೂ ಅಡಿಯಿಡದ ಎಷ್ಟೋ ಜೀವನರಂಗಗಳಲ್ಲಿಯೂ ಸಹ ಸಹಕಾರವು ಪ್ರವೇಶಿಸಿದೆ

ಕೆಳಗಿನ ಅಂಕೆಗಳಲ್ಲಿ ಪತ್ತಿನ ಮತ್ತು ಬಿನ್ ಪತ್ತಿನ ಸಂಘಗಳ ಪರಿಸ್ಥಿತಿಯನ್ನು ಕಾಣಬಹುದು.

| | ೧೯೪೮-೪೯ | | ೧೯೪೯-೫೦ | |
|---|---|---|---|---|
| | ಸಂಖ್ಯೆ (ಸಾವಿರದಲ್ಲಿ) | ನೂರಕ್ಕೆ ಪ್ರಮಾಣ | ಸಂಖ್ಯೆ (ಸಾವಿರದಲ್ಲಿ) | ನೂರಕ್ಕೆ ಪ್ರಮಾಣ |
| **ಪತ್ತಿನ ಸಂಘಗಳು** | | | | |
| ೧) ಶೇತ್ಕಿ | ೧೧೨.೩೪ | ೬೮.೯೫ | ೧೧೬.೫೩ | ೬೮.೬೮ |
| ೨) ಬಿನ್ ಶೇತ್ಕಿ | ೭.೦೩ | ೪.೩೨ | ೭.೫೩ | ೪.೪೪ |
| ಒಟ್ಟು | ೧೧೯.೩೭ | ೭೩.೨೭ | ೧೨೪.೦೬ | ೭೩.೧೨ |
| **ಬಿನ್ ಪತ್ತಿನ ಸಂಘಗಳು** | | | | |
| ೧) ಶೇತ್ಕಿ | ೨೨.೭೬ | ೧೩.೯೭ | ೨೫.೮೬ | ೧೫.೨೫ |
| ೨) ಬಿನ್ ಶೇತ್ಕಿ | ೨೦.೭೯ | ೧೨.೭೬ | ೧೯.೭೪ | ೧೧.೬೩ |
| ಒಟ್ಟು | ೪೩.೫೫ | ೨೬.೭೩ | ೪೫.೬೦ | ೨೬.೮೮ |
| ಎಲ್ಲ ಸೇರಿ | ೧೬೨.೯೨ | ೧೦೦.೦೦ | ೧೬೯.೬೬ | ೧೦೦.೦೦ |

೧೯೪೯–೫೦ರಲ್ಲಿ ಒಟ್ಟು ೧೬೯ ೬೬ ಸಾವಿರ ಸಂಘಗಳಲ್ಲಿ ೧೨೪ ೦೬ ಸಾವಿರ ಅಂದರೆ ನೂರಕ್ಕೆ ೭೩.೧೨ರಷ್ಟು ಪತ್ತಿನ ಸಂಘಗಳಿದ್ದವೆಂಬು ಮೇಲಿನ ಅಂಕೆ-ಸಂಖ್ಯೆಗಳಿಂದ ಕಂಡುಬರುತ್ತದೆ ಅವರಲ್ಲೂ ಶೇತ್ಕಿ ಪತ್ತಿನ ಸಂಘಗಳೇ ಹೆಚ್ಚಾಗಿ ಕಂಡು ಬರುತ್ತವೆ ಅವುಗಳ ಒಟ್ಟು ಸಂಖ್ಯೆಯು ೧೧೬ ೫೩ ಸಾವಿರ ಅಂದರೆ ನೂರಕ್ಕೆ ೬೮ ೭ ಪ್ರಮಾಣದಲ್ಲಿರುತ್ತದೆ ಬಿನ್ ಪತ್ತಿನ ಸಂಘಗಳ ಚಟುವಟಿಕೆಗಳ ವಿಕಾಸಕ್ಕೆ ಸಾಕಷ್ಟು ಪ್ರಯತ್ನಗಳು ಮಾಡಲ್ಪಟ್ಟಿದ್ದರೂ, ಈ ದಿಶೆಯಲ್ಲಿಯು ಆಂದೋಲನವು ಇನ್ನೂ ಹಿಂದುಳಿದಿದೆ ಶೇತ್ಕಿ ಪತ್ತಿನ ಸಂಘಗಳೇ ಪ್ರಮಾಣದಲ್ಲಿ ಹೆಚ್ಚಾಗಿರುವದರಿಂದ ಭಾರತದ ಸಹಕಾರಿ ಆಂದೋಲನಕ್ಕೆ ಅವು ಕೇಂದ್ರ ಸ್ತಂಭನಾಗಿವೆ ಆದುದರಿಂದ ಶೇತ್ಕಿ ಪತ್ತಿನ ಆಂದೋಲನವನ್ನು ಅಭ್ಯಸಿಸುವದು ಹೆಚ್ಚು ವಿಹಿತವಾಗಿದೆ

## ೧೯೪೯–೫೦ರಲ್ಲಿಯ ಶೇತ್ಕಿ ಪತ್ತಿನ ಆಂದೋಲನದ ಪರಿಸ್ಥಿತಿ

೧೯೪೯–೫೦ರಲ್ಲಿ ೧,೧೬,೫೩೪ ಸಂಘಗಳು ಇದ್ದು ಅವುಗಳ ಸದಸ್ಯರು ೪೮,೧೭,೫೪೫ ಇದ್ದರು ದುಡಿಯುವ ಭಾಂಡವಲು ಒಟ್ಟು ೩,೫೨೧ ೭೫ ಲಕ್ಷ ರೂ. ಮತ್ತು ಸ್ವಂತ ಭಾಂಡವಲು ೧,೫೨೯·೩೩ ಲಕ್ಷ ರೂ. ಇದ್ದು ಅವುಗಳ ಪ್ರಮಾಣವು ೪೩.೪ರಷ್ಟಿದ್ದಿತು ಅದೇ ವರ್ಷದಲ್ಲಿ ೧,೭೯೮ ೬೯ ಲಕ್ಷ ರೂ ಗಳ ಸಾಲವನ್ನು ಸಂಘಗಳು ಸದಸ್ಯರಿಗೆ ಕೊಟ್ಟಿವೆ ವರ್ಷದ ಅಂತ್ಯಕ್ಕೆ ೨,೪೯೬ ೦೭ ಲಕ್ಷ ರೂ.ಗಳ ಸಾಲಬಾಕಿ ಇದ್ದಿತು ಇದರಲ್ಲಿ ಮುದ್ದತು ಮೀರಿದ ಸಾಲವು ೫೩೫·೭೨ ಲಕ್ಷ ರೂ. ಅಂದರೆ ನೂರಕ್ಕೆ ೨೧ ೫ರಷ್ಟು ಇದ್ದಿತು ಶೇತ್ಕಿ ಪತ್ತಿನ ಆಂದೋಲನವು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಯಾಗಿದೆ ಎಂದು ಮೇಲಿನ ಅಂಕೆ-ಸಂಖ್ಯೆಗಳಿಂದ ತಿಳಿದುಬರುತ್ತದೆ. ಸಾಲ ವಸೂಲಿ ಕೆಲಸವೂ ತೃಪ್ತಿಕರವಾಗಿದೆ ಮುದ್ದತು ಮೀರಿದ ಸಾಲದ ಪರಿಸ್ಥಿತಿಯ ಬಗ್ಗೆ ಚಿಂತೆಪಡುವ ಕಾರಣವು ಏನೂ ಇಲ್ಲ

೧೯೪೯–೫೦ರಲ್ಲಿ ಮುಖ್ಯ ಮುಖ್ಯ ಸಂಘಗಳ ವರ್ಗಗಳ ಪರಿಸ್ಥಿತಿಯನ್ನು ಕೆಳಗೆ ಕೊಡಲಾಗಿದೆ —

| ಪ್ರಕಾರ | ಸಂಖ್ಯೆ | ಸದಸ್ಯರು | ದುಡಿಯುವ ಭಾಂಡವಲು (ಲಕ್ಷದಲ್ಲಿ) | ಮಾರಾಟ (ಲಕ್ಷದಲ್ಲಿ) |
|---|---|---|---|---|
| ಪ್ರಾಂತಿಕ ಬ್ಯಾಂಕುಗಳು | ೧೪ | ೧೮,೬೧೮ | ೩,೦೪೫ ೪೨ | |
| ಮಧ್ಯವರ್ತಿ ಬ್ಯಾಂಕುಗಳು | ೪೯೮ | ೧,೮೯,೭೨೨ | ೪,೯೮೭ ೩೪ | |
| ಶೇತ್ಕಿ ಪತ್ತಿನ ಸಂಘಗಳು | ೧,೧೬,೫೩೪ | ೪೮,೧೭,೫೪೫ | ೩,೫೨೧ ೭೫ | |

| | | | | |
|---|---|---|---|---|
| ಬನ್ ಶೇತ್ಕಿ ಪತ್ತಿನ ಸಂಘಗಳು | ೭,೫೩೪ | ೨೦,೬೫,೯೯೦ | ೫,೧೬೦ ೨೪ | |
| ವಿವಿಧೋದ್ದೇಶ ಸಂಘಗಳು | ೨೯,೫೨೫ | ೧೫,೦೭,೮೦೧ | ೭೫೫ ೪೮ | |
| ಮಧ್ಯವರ್ತಿ ಭೂ-ಒತ್ತಿ ಬ್ಯಾಂಕುಗಳು | ೫ | ೮,೮೭೧ | ೬೮೬ ೯೪ | |
| ಪ್ರಾಥಮಿಕ ಭೂ-ಒತ್ತಿ ಸಂಘಗಳು | ೨೮೩ | ೧,೮೬,೩೩೦ | ೫೮೬ ೦೯ | |
| **ಸ್ಟೋಅರುಗಳು** | | | | |
| ರೋಕ | ೮೫ | ೨೦,೯೯೮ | — | ೨,೭೫೦ ೫೨ |
| ಪ್ರಾಧಮಿಕ | ೮,೯೪೯ | ೨೧,೫೫,೪೭೦ | — | ೭,೦೪೫ ೪೧ |
| **ಔದ್ಯೋಗಿಕ ಸಂಘಗಳು.** | | | | |
| ನೇಕಾರ | ೪,೨೧೪ | ೪,೫೨,೭೨೪ | ೪೦೪ ೦೧ | ೮೨೫ ೪೧ |
| ಇತರ | ೧,೭೨೦ | ೧,೦೦,೯೦೦ | ೧೯೪ ೩೨ | ೧೯೨ ೮೨ |
| **ಹಾಲಿನ ಸಂಘ ಮತ್ತು ಯೂನಿಯನ್** | | | | |
| ಸಂಘಗಳು | ೧೫೮ | ೭೪.೭೩೭ | — | ೧೪೨ ೭೫ |
| ಯೂನಿಯನ್ | ೪[illegible] | ೪,೪೯೨ | — | ೧೧೭ ೧೩ |
| **ಮಾರ್ಕೆಟಿಂಗ ಸಂಘಗಳು** | | | | |
| ಪ್ರಾಧಮಿಕ | ೬,೯೦೭ | ೧೩,೨೭,೯೩೯ | — | ೨ ೫೦೭ ೬೪ |
| ಫೆಡರೇಶನ್ | ೧,೮೦೫ | ೧೨,೭೮,೯೬೧ | — | ೨,೩೬೨ ೨೧ |
| ಪ್ರಾಂತಿಕ | ೧೦ | ೩,೦೭೯ | — | ೧೧೫ ೨೦ |

ಸಹಕಾರ ಆಂದೋಲನವು ಎಲ್ಲವಿಧಗಳಲ್ಲಿ ಪ್ರಗತಿಹೊಂದುತ್ತಲಿದೆ ಎಂದು ಮೇಲಿನ ಅಂಕೆ-ಸಂಖ್ಯೆಗಳು ತೋರಿಸುತ್ತವೆ ಸ್ವಾತಂತ್ರ್ಯ ಸಂಪಾದನೆಯು ನಂತರ ನಮ್ಮ ಜನಾಂಗವು ಸಹಕಾರಿ ಪ್ರಜಾಪ್ರಭುತ್ವವನ್ನು ನಿರ್ಮಿಸುವಲ್ಲಿ ತತ್ಪರವಾಗಿರುವದರಿಂದ, ಇತ್ತೀಚಿನ ಸಹಕಾರಿ ಆಂದೋಲನಕ್ಕೆ ಒಂದು ವಿಶಿಷ್ಟಾರ್ಥವಿದೆ ಈ ಧೋರಣೆಗೆ ಸರಿಹೊಂದುವಂತೆ ನವರಾಷ್ಟ್ರನಿರ್ಮಾಣದ ಅನೇಕ ಬಗೆಯ ಚಟುವಟಿಕೆಗಳಲ್ಲಿ ಎಲ್ಲ ರಾಜ್ಯಗಳು ಈ ಸಹಕಾರದ ಉಪಯೋಗವನ್ನು

ಮಾಡಿಕೊಳ್ಳತೊಡಗಿವೆ ರಿಝರ್ವ್ ಬ್ಯಾಂಕಿನ ಪತ್ರಿನ ಖಾತೆಯು ೧೯೪೪-೫೦ರ ಹಿಂದು ಸ್ಥಾನದ ಸಹಕಾರ ಚಳವಳಿಯ ಸಿಂಹಾವಲೋಕನೆಮಾಡಿ ಅದನ್ನು ಪರಾಮರ್ಶಿಸುವಾಗ "ದೇಶದ ಭವಿಷ್ಯವನ್ನು ಬಲಗೊಳಿಸುವಲ್ಲಿ ತಾನು ವಹಿಸ ಬಹುದಾದ ಉಪಯುಕ್ತ ಪಾತ್ರದ ಕಡೆಗೆ ಮತ್ತು ತನ್ನ ಆಂದೋಲನದ ಪರಿಣಾಮದ ಹೆಚ್ಚಳದ ಕಡೆಗೆ, ಸಹಕಾರವು ದೂರದೃಷ್ಟಿಯನ್ನು ಚಾಚುವದು ಪ್ರತಿಯೊಂದು ರೀತಿಯಿಂದಲೂ ನ್ಯಾಯವಾದುದೆಂದು" ಅಭಿಪ್ರಾಯಪಟ್ಟಿರುವದು ಸತ್ಯಪೂರ್ಣ ವಾಗಿದೆ, ಸತ್ವಪೂರ್ಣವಾಗಿದೆ ಅದರಂತೆಯೇ ಯೋಜನಾಸಮಿತಿಯೂ ಒಕ್ಕಲುತನದ ಉತ್ಪಾದನೆ-ಮಾರಾಟ, ಗೃಹೋದ್ಯೋಗ-ಗ್ರಾಮೋದ್ಯೋಗ ವಿಕಾಸ ಮತ್ತು ಇಂತಹ ಇತರ ಸಮಸ್ಯೆಗಳ ನಿವಾರಣೆ, ಈ ಮೊದಲಾದ ಉದ್ದೇಶಗಳಿಗಾಗಿ ಸಹಕಾರಿ ಸಂಘಗಳನ್ನು ಸ್ಥಾಪಿಸಬೇಕೆಂದು ಅಭಿಪ್ರಾಯ ಪಟ್ಟಿದ್ದವದನ್ನು ಮೊದಲನೆಯ ಅಧ್ಯಾಯದಲ್ಲಿ ವಿವರಿಸಿರುವುದನ್ನು ವಾಚಕರು ಲಕ್ಷಿಸಬೇಕು.

## ಪಂಚವಾರ್ಷಿಕ ಯೋಜನೆಯಲ್ಲಿ ಸಹಕಾರದ ಪಾತ್ರ.

ಯೋಜನಾಸಮಿತಿಯು ಇತ್ತೀಚಿಗೆ ಪ್ರಕಟಪಡಿಸಿದ ತನ್ನ ಕಡೆಯ ವರದಿ ಯಲ್ಲಿ ಸಹಕಾರಕ್ಕೆ ಒಂದು ನಿಶ್ಚಿತ ಸ್ಥಾನವನ್ನು ಕೊಟ್ಟಿರುವದು ವೈಯಕ್ತಿಕ ಅರ್ಥ ರಚನೆಯನ್ನು ಸಹಕಾರದ ತಳಹದಿಯ ಮೇಲೆ ಪರಿವರ್ತಿಸುವದೇ ಪ್ರಥಮ ಪಂಚವಾರ್ಷಿಕ ಯೋಜನೆಯ ಉದ್ದೇಶವಾಗಿದೆ ರಾಷ್ಟ್ರೀಯ ವಿಕಾಸ ಯೋಜ ನೆಯ ಎಲ್ಲ ಅಂಶಗಳಲ್ಲಿ, ರಾಜ್ಯ ಸರಕಾರದವರೊಡನೆ, ಭಾರತ ಸಹಕಾರಿ ಪರಿಷತ್ತಿನೊಡನೆ, ರಿಝರ್ವ್ ಬ್ಯಾಂಕಿನೊಡನೆ ಯೋಜನಾ ಸಮಿತಿಯವರು ವಿಚಾರ ವಿನಿಮಯ ಮಾಡಿ ಸಹಕಾರಿ ಸಂಘಟನೆಯು ಯೋಗ್ಯವೆಂದು ತೋರುವ ಎಲ್ಲ ಅಂಶಗಳಲ್ಲಿ, ವಿಷಯಗಳಲ್ಲಿ ಸಹಕಾರಿ ಆಂದೋಲನದ ವಿಕಾಸಕ್ಕಾಗಿ ವಿಶಿಷ್ಟ ಕಾರ್ಯಕ್ರಮಗಳನ್ನು ಏರ್ಪಡಿಸಬೇಕೆಂದು ನಿರ್ಧರಿಸಿರುವದು ಸಹಕಾರಿ ಸಂಘಗಳು ಕೈಕೊಳ್ಳಬೇಕೆಂದು ಯೋಜನಾ ಸಮಿತಿಯವರು ನಿರೀಕ್ಷಿಸಬಹುದಾದ ಚಟುವಟಿಕೆಗಳು ಕೆಳಗಿನಂತಿವೆ

(೧) ಪ್ರಾಥಮಿಕ ಉತ್ಪಾದನೆ
(೨) ಗೃಹೋದ್ಯೋಗ ಮತ್ತು ಚಿಕ್ಕಪುಟ್ಟ ಉದ್ದಿಮೆಗಳು
(೩) ಒಕ್ಕಲುತನದ ಹುಟ್ಟುವಳಿಯ ಮಾರಾಟದ ವ್ಯವಸ್ಥೆ.
(೪) ವಸತಿ ಸೌಕರ್ಯ
(೫) ರೋಕ ಅಂದರೆ ಗುತ್ತಿಗೆಯ ಮತ್ತು ಕಿರಕುಳ ವ್ಯಾಪಾರ.

ಒಂದು ಹೊಸ ಸಮಾಜ ಸಂಸ್ಥೆಯನ್ನು ನಿರ್ಮಿಸುವಲ್ಲಿ ಕೆಳಗಿನ ಪ್ರಕಾರದ ಸಂಘಗಳು ವಿಶೇಷವಾಗಿ ಮಹತ್ವದ ಪಾತ್ರವನ್ನು ವಹಿಸುತ್ತವೆ

## ವಿವಿಧೋದ್ದೇಶದ ಮತ್ತು ಪತ್ತಿನ ಸಂಘಗಳು

ವಿವಿಧೋದ್ದೇಶ ಸಂಘದ ಮುಖಾಂತರ ಗ್ರಾಮಜೀವನದ ಸಂಘಟನೆಯನ್ನು ಈ ಯೋಜನೆಯು ನಿರೀಕ್ಷಿಸುತ್ತಿದೆ ಗ್ರಾಮಾಂತರ ಅರ್ಥರಚನೆಯಲ್ಲಿ ಈ ವಿವಿಧೋದ್ದೇಶ ಸಂಘಗಳು ಒಂದು ಜೀವ ಜೀವಾಳದ ಪಾತ್ರವನ್ನು ವಹಿಸುತ್ತವೆ. ಹಳ್ಳಿಗಳ ವಿವಿಧ ಉದ್ದೇಶಗಳನ್ನು ಇವು ಪೂರೈಸುತ್ತವೆ ಹಣಕಾಸಿನ ಪೂರೈಕೆ, ಪ್ರಪಂಚಕ್ಕೂ ಒಕ್ಕಲುತನಕ್ಕೂ ಅಗತ್ಯವಿರುವ ವಸ್ತುಗಳ ಪೂರೈಕೆಯನ್ನು ಮಾಡಿ ಒಕ್ಕಲಿಗರ ಹುಟ್ಟುವಳಿಯನ್ನು ಹೆಚ್ಚಿಸುವಲ್ಲಿ, ಮಾರುವಲ್ಲಿ, ಗ್ರಾಮೋದ್ಯೋಗ, ಗೃಹೋದ್ಯೋಗ, ಉಪೋದ್ಯೋಗಗಳನ್ನು ಕೈಕೊಳ್ಳುವಲ್ಲಿ, ಸಾಮಾಜಿಕ ಸುಧಾರಣೆಯ ಚಟುವಟಿಕೆಗಳನ್ನು ಕೈಕೊಳ್ಳುವಲ್ಲಿ ಅಂದರೆ ಔಷಧಗಳ ಪೂರೈಕೆ, ಗೃಹನಿರ್ಮಾಣ, ಸಾಮಾಜಿಕ ದೋಷಗಳ ನಿವಾರಣೆಗಾಗಿ ಪ್ರಚಾರ ಕಾರ್ಯಗಳನ್ನು ಮಾಡುವಲ್ಲಿ ಇವು ವಹಿಸತಕ್ಕ ಪಾತ್ರವು ಘನವಾದುದು

## ಖರೀದಿ ವಿಕ್ರೀ ಸಂಘಗಳು

ಒಕ್ಕಲಿಗರು ಸದ್ಯಕ್ಕೆ ತಮಗೆ ಅಗತ್ಯವಿರುವ ವಸ್ತುಗಳನ್ನು ಕೊಳ್ಳುವ ಅದರಂತೆಯೇ ತಮ್ಮ ಹೊಲದ ಹುಟ್ಟುವಳಿಯನ್ನು ಮಾರುವ ಎರಡೂ ವ್ಯವಹಾರದಲ್ಲಿ ಯೋಗ್ಯ ನ್ಯಾಯ ಮತ್ತು ಪ್ರತಿಫಲವನ್ನು ಪಡೆಯದಿರುವದರಿಂದ, ಈ ಖರೀದಿ ವಿಕ್ರಿಯ ಎಲ್ಲ ವ್ಯವಹಾರವನ್ನು ಸಹಕಾರ ತತ್ವದ ಮೇಲೆ ನಡೆಯಿಸಬೇಕಾಗಿದೆ

## ಸಹಕಾರಿ ಬೇಸಾಯ

ಹೊಲದೊಡೆಯನ ಒಡೆತನಕ್ಕೆ ಯಾವ ರೀತಿಯಿಂದಲೂ ಧಕ್ಕೆ ತರದಂತೆ, ಅದನ್ನು ನಿಕೃಷ್ಟಸ್ಥಿತಿಗಿಳಿಸದಂತೆ, ಮಿತವ್ಯಯದ ಸಾಗುವಳಿಯ ಭರವಸೆಯನ್ನು ನೀಡಿ, ಉತ್ತಿ ಬಿತ್ತುವ ನೇಗಿಲಯೋಗಿಗೆ ಚೇತನೆಯನ್ನು ಕೊಡುವ ದೃಷ್ಟಿಯಿಂದ ಮತ್ತು ದೊಡ್ಡಪ್ರಮಾಣದ ಬೇಸಾಯದ ಸೌಲಭ್ಯಗಳನ್ನು ಪಡೆಯುವ ದೃಷ್ಟಿಯಿಂದ, ನಾಗಿಸುವ ಬೇಸಾಯದ ವಿಧಾನಗಳಲ್ಲಿ ಸಹಕಾರಿ ಬೇಸಾಯವು ಉತ್ತಮವೆಂದು ಗಣ್ಯವಾಗಿದೆ ಸಹಕಾರಿ ಬೇಸಾಯದ ವಿಧಾನದಲ್ಲಿ ಅನೇಕ ವ್ಯಕ್ತಿಗಳ ಸಂಘಟನೆಯೂ, ಸಹಕಾರದ ಸದ್ಗುಣಗಳೂ ಎದ್ದುಕಾಣುತ್ತವೆ ಅದರಂತೆಯೇ ಈ ಬಗೆಯ ಸಂಘಗಳ ದಿನದಿನದ ಆಢಳಿತೆಯ ಮತ್ತು ಲಾಭ ಹಂಚುವ ವಿಷಯದಲ್ಲಿ ಅನೇಕ ತೊಡಕಿನ ಸಮಸ್ಯೆಗಳು ಮುಂದನಿಲ್ಲುತ್ತವೆ. ಪತ್ತು, ಮಾರಾಟಗಳಂತಹ ಸರಳ ವ್ಯವಹಾರದಲ್ಲಿ ಜನರು ಸಂಘಟನೆಯ, ಸಹಕಾರದ ಅಭ್ಯಾಸವನ್ನು ಮಾಡದಿದ್ದರೆ, ಸಹಕಾರಿ ಉತ್ಪಾದನೆಯ ವಿಷಯದಲ್ಲಿ ಅವರು ಸಂಘಟಿತರಾಗುವದು ಅಥವಾ ಸಮ್ಮತಿಯನ್ನು ವ್ಯಕ್ತಪಡಿಸುವದು ಕಷ್ಟಸಾಧ್ಯವು ಆದುದರಿಂದ, ಯೋಗ್ಯ ಕ್ಷೇತ್ರಗಳಲ್ಲಿ ಕೆಲವೊಂದು ಸಹಕಾರಿ ಬೇಸಾಯದ ಸಂಘಗಳನ್ನು ಸ್ಥಾಪಿಸುವ ಪ್ರಯತ್ನಮಾಡಿ, ಅವುಗಳ ಮೂಲಕ, ಮುಂದಿನ

ಮಾರ್ಗದರ್ಶನಕ್ಕಾಗಿ ಅನುಭವ ಪಡೆಯಲು ಹೆಣಗಬೇಕೆಂದು ಸದರ ಯೋಜನಾ ಸಮಿತಿಯು ಶಿಫಾರಸು ಮಾಡುತ್ತದೆ ಈಗಾಗಲೇ ನಮ್ಮ ಕರ್ನಾಟಕದಲ್ಲಿ ಯೋಗ್ಯ ಪ್ರಗತಿಯನ್ನು, ಫಲವನ್ನು ಪಡೆದ ಕೆಲವೊಂದು ಸಹಕಾರಿ ಬೇಸಾಯ ಸಂಘಗಳಿವೆ ದಕ್ಷತೆಯಿಂದ ಸಹಕಾರಿ ಆಂದೋಲನದ ಈ ಶಾಖೆಯನ್ನು ಬೆಳೆಯಿಸಬೇಕಾಗಿದೆ ಇದ್ದ ಸಂಘಗಳ ಪರಿಸ್ಥಿತಿಯನ್ನು ಭದ್ರಗೊಳಿಸಬೇಕಾಗಿದೆ

## ಸಹಕಾರ ಮತ್ತು ವಿಕಾಸ ಯೋಜನೆ

ಹಳ್ಳಿಗಳ ತೀವ್ರ ಮತ್ತು ಸರ್ವಾಂಗೀಣ ಪ್ರಗತಿಯ ದೃಷ್ಟಿಯಿಂದ ಕಳೆದ ವರುಷ, ಇದೇ ಹುಕ್ಕೇರಿ ತಾಲೂಕ ಮತ್ತು ಗೋಕಾಕ ತಾಲೂಕಿನ ಕೆಲ ಭಾಗದಲ್ಲಿ ವಿಕಾಸ ಯೋಜನೆಯು ಬಳಕೆಯಲ್ಲಿ ಬಂದಿದೆ ಆ ಕಾರ್ಯಕ್ಷೇತ್ರದಲ್ಲಿ ಸಹಕಾರಿ ಸಂಸ್ಥೆಗಳು ಕೈಕೊಂಡಿರುವ ಚಟುವಟಿಕೆಗಳು ಕೆಳಗಿನಂತಿವೆ —

(೧) ಉತ್ಪಾದನೆಯ ಉದ್ದೇಶಗಳಿಗಾಗಿ ಹಣಕಾಸಿನ ಪೂರೈಕೆ

(೨) ಬೀಜ, ಗೊಬ್ಬರ, ಸ ಪೀಕರಕ್ಷಣೆ ಸಾಧನೆ, ಸಾಮುಗ್ರಿ ಉಪಕರಣಗಳಂತಹ ಒಕ್ಕಲುತನಕ್ಕೆ ಅಗತ್ಯವಿರುವ ವಸ್ತುಗಳ ಪೂರೈಕೆ

(೩) ಯೋಗ್ಯ ಸ್ಥಳದಲ್ಲಿ ಪ್ರಪಂಚೋಪಯೋಗಿ ವಸ್ತುಗಳ ಪೂರೈಕೆ

(೪) ಒಕ್ಕಲುತನದ ಮತ್ತು ಹೈನದ ಹುಟ್ಟುವಳಿಯನ್ನು ಮಾರುವ ಮತ್ತು ರೂಪಾಂತರಿಸುವ ವ್ಯವಸ್ಥೆ

(೫) ಒಕ್ಕಲುತನದ ಸುಧಾರಿಸಿದ ಮತ್ತು ಉತ್ತಮ ಪದ್ಧತಿಗಳಿಂದ, ಸಾಮೂಹಿಕ, ಸಾಮುದಾಯಿಕ, ಅಥವಾ ಸಂಯುಕ್ತ ಬೇಸಾಯದ ಪದ್ಧತಿಗಳಿಂದ, ಒಡ್ಡು ಹಾಕುವ, ಭೂಸತ್ವವನ್ನು ರಕ್ಷಿಸುವ, ಸಹಕಾರ ತತ್ವಗಳ ಮೇಲೆ ತುಂಡು ಜಮೀನುಗಳನ್ನು ಸಂಯೋಜಿಸುವ ಅಥವಾ ಒಂದುಗೂಡಿಸುವ ವಿಧಾನಗಳಿಂದ ಮತ್ತು ಯೋಗ್ಯ ಸಹಕಾರಿ ಸಂಘಗಳ ಸ್ಥಾಪನೆಯಿಂದ ಒಕ್ಕಲುತನದ ವಿಕಾಸ

(೬) ಯಾತದ ನೀರಾವರಿ (ಲಿಫ್ಟ ಇರಿಗೇಶನ್) ಮತ್ತು ಕಾಲುವೆ ನೀರಾವರಿ (ಫ್ಲೋ ಇರಿಗೇಶನ್) ಸಂಘಗಳ ಮುಖಾಂತರ ನೀರಾವರಿ ಚಟುವಟಿಕೆಗಳನ್ನು ಕೈಕೊಳ್ಳುವದು

(೭) ಸಹಕಾರದ ತಳಹದಿಯ ಮೇಲೆ ಗೃಹೋದ್ಯೋಗ, ಗ್ರಾಮೋದ್ಯೋಗಗಳ ವಿಕಾಸ

(೮) ಹಿಂದುಳಿದ ವರ್ಗದ ಜನರ ಸಲುವಾಗಿ ಗೃಹನಿರ್ಮಾಣ

(೯) ಸಹಕಾರಿ ಕೂಲಿಕಾರರ ಸಂಘಗಳ ಮುಖಾಂತರ ಗೃಹ ರಚನೆ ಮತ್ತು ದುರಸ್ತಿಗಳಂತಹ ರಚನಾಕಾರ್ಯವನ್ನು ಕೈಕೊಳ್ಳುವದು

(೧೦) ಸುಧಾರಿಸಿದ ಬೀಜ, ಗೊಬ್ಬರ ಮೊದಲಾದವುಗಳ ಉಪಯೋಗ ದಿಂದ ಒಕ್ಕಲುತನದ ಸುಧಾರಿಸಿದ ಪದ್ಧತಿಗಳ ಪ್ರಚಾರಕಾರ್ಯ ಮತ್ತು ತಾಲೂಕ ಡೆವ್ಹಲಪ್‌ಮೆಂಟ ಬೋರ್ಡುಗಳ ಮುಖಾಂತರ ಒಕ್ಕಲಿಗರಲ್ಲಿ ಒಕ್ಕಲುತನದ ಸಂಶೋಧನೆಯ ಪರಿಣಾಮುಗಳ ಪ್ರತ್ಯಕ್ಷಿಕೆ

(೧೧) ಹೈನದ ವ್ಯವಸಾಯ ವಿಕಾಸ

(೧೨) ಗ್ರೇನ ಬ್ಯಾಂಕುಗಳು ಅಂದರೆ ಕಾಳುಕಡಿಗಳ ಸಂಘಗಳ ಚಟು ವ. ಕೆಗಳು

## ಔದ್ಯೋಗಿಕ ಸಹಕಾರಿ ಸಂಘಗಳು

ಹಳ್ಳಿಗಳಲ್ಲಿ ನಿರುದ್ಯೋಗವು ಒಂದು ಸಮಸ್ಯೆಯಾಗಿದೆ. ಇಡೀ ವರ್ಷದಲ್ಲೆಲ್ಲ ಉದ್ಯೋಗಿಗಳಾಗಿರುವ ಜನರು ಅತಿ ವಿರಳ ! ಭೂಭಾರವು ಇನ್ನೂ ತಗ್ಗಿಲ್ಲ ! ಗೃಹೋದ್ಯೋಗಗಳ ಪ್ರಗತಿಯೂ ವಿಕಾಸವೂ ಈ ಸಮಸ್ಯೆಯನ್ನು ಕೆಲಮಟ್ಟಿಗೆ ಪರಿಹರಿಸಬಹುದು ಸಹಕಾರ ತತ್ವದ ಮೇಲೆ ಸಾಧಿಸಬಹುದಾದ ಗೃಹೋದ್ಯೋಗ ಗ್ರಾಮೋದ್ಯೋಗಗಳ ವಿಕಾಸವು ಈ ನಿರುದ್ಯೋಗ ಸಮಸ್ಯೆಗೆ ರಾಮಬಾಣ ಉಪಾಯವೆಂದು ಅನುಭವದಿಂದ ಹೇಳಬಹುದು ಈ ಮುಂಬೈ ರಾಜ್ಯದಲ್ಲಿಯ ಔದ್ಯೋಗಿಕ ಸಹಕಾರಿ ಸಂಘಗಳ ಕಾರ್ಯಕಲಾಪಗಳು, ಅಢಳತೆಯ ಅನುಭವವು ಇದಕ್ಕ ಸಾಕ್ಷಿಯಾಗಿ ನಿಂತಿವೆ

## ರೂಪಾಂತರ ಸಂಘಗಳು ( Processing Societie )

ಒಕ್ಕಲಿಗರಿಗೆ ಯೋಗ್ಯ ಬೆಲೆಯ ಅವಕಾಶವನ್ನು ಕಲ್ಪಿಸಿಕೊಡುವ ದೃಷ್ಟಿ ಯಿಂದ ಸಹಕಾರದ ತಳಹದಿಯ ಮೇಲೆ ರೂಪಾಂತರದ ಚಟುವಟಿಕೆಗಳನ್ನು ಕೈಕೊಳ್ಳಲಾಗಿದೆ ಸಹಕಾರಿ ಸಂಘಗಳ ಮುಖಾಂತರ ಚಿಲ್ಲರೆ ಮತ್ತು ರೋಕ ವ್ಯಾಪಾರವೆರಡೂ ಸಾಗಬೇಕೆಂಬ ಉದ್ದೇಶದಿಂದ ನಗರಗಳಲ್ಲಿಯ ಗ್ರಾಹಕ ಸಂಘ ಗಳಿಗೂ ವಿಶೇಷ ಮಹತ್ವವನ್ನು ಕೊಡಲಾಗಿದೆ ಪಟ್ಟಣಗಳಲ್ಲಿಯ ಜನತೆಗೆ ಸಹಕಾರಿ ತತ್ವಗಳ ಮೇಲೆ ವಸತಿಯ ಸೌಕರ್ಯವನ್ನು ಒದಗಿಸಿಕೊಡುವ ಪ್ರಶ್ನೆಯನ್ನು ಬಿಡಿಸಬೇಕಾಗಿದೆ

ಸಹಾಯಧನ ಮತ್ತು ಸಾಲಗಳ ರೂಪದಲ್ಲಿ ಸಹಕಾರಿ ಸಂಘಗಳ ಮುಖಾಂತರ ಜನತೆಗೆ ಸಹಕಾರವು ಸಹಾಯವನ್ನು ನೀಡಬೇಕೆಂದು ಉದ್ದೇಶಿಸಿದೆ

ಒಂದು ಹೊಸ ಸಮಾಜವನ್ನು ನಿರ್ಮಿಸುವಲ್ಲಿ ಯೋಜನಾಸಮಿತಿಯು ಸಹಕಾರಿ ಆಂದೋಲನದ ಮೇಲೆ ಹಾಕಿದ ಹೊಣೆಯನ್ನು, ಸಹಕಾರಿ ಕ್ಷೇತ್ರದಲ್ಲಿ ದುಡಿಯುವ ಸರಕಾರೀ ಮತ್ತು ಸರಕಾರೇತರ ಕಾರ್ಯಕರ್ತರು ನಿರ್ವಹಿಸುವ ಸರತಿಯು ಇದೀಗ ಬಂದಿದೆ. ಮುಂಬೈರಾಜ್ಯ ಮತ್ತು ಕರ್ನಾಟಕದಲ್ಲಿಯ ಸಹಕಾರಿ ಆಂದೋಲನವು ಶಾಂತಿಯ ಅದರಂತೆಯೇ ಯುದ್ಧದ ಕಾಲದಲ್ಲಿ, ಸಮೃದ್ಧಿಯ ಅದರಂತೆಯೇ ಮುಗ್ಗಟ್ಟಿನ ಅವಧಿಯಲ್ಲಿ, ತನ್ನ ನಿಧಿಗಳನ್ನು ಕಲೆಹಾಕಿ, ಶಕ್ತಿ ಸಾಮರ್ಥ್ಯ ಉಪಯುಕ್ತತೆಗಳನ್ನು ಸಿದ್ಧಗೊಳಿಸುವಲ್ಲಿ ಸಾಕಷ್ಟು ಪರಾಕ್ರಮ ಪೌರುಷಗಳನ್ನು ತೋರಿಸಿದೆ ಎಂಬ ಮಾತು ನಿಜವು; ಪತ್ತಿನ ಪೂರೈಕೆಯಂತಹ ಸಣ್ಣ ಸಮಸ್ಯೆಯನ್ನು ಮೊದಲುಮಾಡಿ,ಉತ್ಪಾದನೆಯ ಮತ್ತು ಮಾರಾಟದ ಜಟಿಲ ಸಮಸ್ಯೆಗಳವರೆಗೂ, ಯಾವದೇ ಆರ್ಥಿಕ ಸಮಸ್ಯೆಯನ್ನು ಬಿಡಿಸುವಲ್ಲಿ ತನ್ನ ಕೆಚ್ಚನ್ನು ಒರೆಗೆ ಹಚ್ಚಿದೆ ಎಂಬ ಮಾತೂ ಅಷ್ಟೇ ನಿಜವು. ಆದರೆ ಕೆಲವೊಂದು ಅಂಶಗಳಲ್ಲಿ ಈ ಆಂದೋಲನೆಯನ್ನು ಇನ್ನೂ ಸಂಘಟಿಸಬೇಕಾಗಿದೆ, ಸಂಯೋಜಿಸಬೇಕಾಗಿದೆ ಮತ್ತು ಸಮಾಜದ ಎಲ್ಲ ಜನರಿಗೂ ಸೇವೆ ಸಲ್ಲಿಸಬೇಕಾಗಿದೆ. ಅಲ್ಲದೆ ಪ್ರಥಮ ಅಧ್ಯಾಯದಲ್ಲಿ ಈ ಮೊದಲೇ ವಿವರಿಸಿದಂತೆ, ಈ ಆಂದೋಲನಕ್ಕೆ ಕೆಲವೊಂದು ಪರಿಮಿತಿಗಳು, ಸ್ವಾಭಾವಿಕ ದೋಷಗಳು ಇರುವವೆಂಬ ಮಾತನ್ನು ಅಲ್ಲಗಳೆಯಲಿಕ್ಕೆ ಬಾರದು. ಸಹಕಾರಿ ಪ್ರಜಾಪ್ರಭುತ್ವ ನಿರ್ಮಾಣದಂತಹ ಮಹತ್ತರವಾದ ಹೊಣೆಯನ್ನು ನಿರ್ವಹಿಸುವಂತೆ, ಯೋಗ್ಯ ತಳಹದಿಯ ಮೇಲೆ ಶಕ್ಯವಿದ್ದ ವಿಧವಿಧಾನಗಳಲ್ಲಿ ಈ ಆಂದೋಲನದ ವಿಕಾಸಕ್ಕೆ ಕೇಂದ್ರೀಕೃತ ಪ್ರಯತ್ನಗಳನ್ನು ಮಾಡಬೇಕಾಗಿದೆ.

---

## ೪ನೆಯ ಅಧ್ಯಾಯ

# ಮುಂಬಯಿ ರಾಜ್ಯದಲ್ಲಿ ಸಹಕಾರಿ ಆಂದೋಲನ

### (೧) ಆಂದೋಲನದ ಇತಿಹಾಸ

**(ಅ) ಉಗಮ —** ೧೯೦೪ರ ಸಹಕಾರಿ ಪತ್ತಿನ ಸಂಘಗಳ ಕಾಯದೆಯು ಮೊದಲಬಾರಿ ಜಾರಿಯಲ್ಲಿ ಬಂದನಂತರ, ದೇಶದ ಉಳಿದ ಭಾಗಗಳಲ್ಲಿಯಂತೆ ಈ ಮುಂಬಯಿ ರಾಜ್ಯದಲ್ಲಿಯೂ ೧೯೦೫ನೆಯ ಮೇ ಎಂಟನೆಯ ತಾರೀಖಿಗೆ ರೈಫೀಜನ್ ಮಾದರಿಯ ಮೇಲೆ ಮೊಟ್ಟ ಮೊದಲನೆಯ ಸಹಕಾರಿ ಪತ್ತಿನ ಸಂಘವು ಸ್ಥಾಪಿತವಾಯಿತು ಸರಕಾರದವರು ಈ ಆಂದೋಲನವನ್ನು ಪ್ರಸಾರಗೊಳಿಸಿದ ಪರಿಸ್ಥಿತಿ, ಕಾರಣಗಳ ಬಗೆಗೆ ಈ ಮೊದಲೇ ಮೂರನೆಯ ಅಧ್ಯಾಯದಲ್ಲಿ ವಿವೇಚಿಸ ಲಾಗಿದೆ ೧೪೧೯ ಜನ ಸದಸ್ಯರು, ೫೫೯೮ ರೂಪಾಯಿಗಳ ಶೇಅರ ( ಪಾಲು ) ಭಾಂಡವಲು, ೩೪,೦೨೦ ರೂಪಾಯಿಗಳ ದುಡಿಯುವ ಭಾಂಡವಲವುಳ್ಳ ಮೂವತ್ತೊಂದು ಸಂಘಗಳಿಂದ ಈ ಆಂದೋಲನವು ಆರಂಭವಾಯಿತು

(ಬ) ಮುಂಬಯಿ ರಾಜ್ಯದಲ್ಲಿಯ ಸಹಕಾರಿ ಆಂದೋಲನದ ಅವಧಿಯನ್ನು ಸ್ಥೂಲವಾಗಿ ಆರು ಭಾಗಗಳಾಗಿ ಕೆಳಗಿನಂತೆ ವಿಂಗಡಿಸಬಹುದು —

( ೧ ) ೧೯೦೫ ರಿಂದ ೧೯೧೦–೧೧
( ೨ ) ೧೯೧೧–೧೨ ರಿಂದ ೧೯೧೮–೧೯
( ೩ ) ೧೯೧೯–೨೦ ರಿಂದ ೧೯೨೯–೩೦
( ೪ ) ೧೯೩೦–೩೧ ರಿಂದ ೧೯೩೭–೩೮
( ೫ ) ೧೯೩೮–೩೯ ರಿಂದ ೧೯೪೫–೪೬
( ೬ ) ೧೯೪೬–೪೭ ರಿಂದ ೧೯೫೦–೫೧

### ಅವಧಿಯ ಮೊದಲನೆಯ ಭಾಗ ( ೧೯೦೫ ರಿಂದ ೧೯೧೦–೧೧ )

ಕೆಳಗಿನ ಪತ್ರಿಕೆಯು ಮುಂಬಯಿ ರಾಜ್ಯದಲ್ಲಿ ಈ ಅವಧಿಯಲ್ಲಿ ಸಹಕಾರ ಚಳವಳಿಯು ಪಡೆದ ಪ್ರಗತಿಯನ್ನು ಎತ್ತಿ ತೋರಿಸುತ್ತದೆ —

| ವರ್ಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಪಾಲು (ಶೇಅರ) ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|
| ೧೯೦೫–೦೬ | ೩೧ | ೧,೪೧೯ | ೫,೫೯೮ | — | ೩೪,೦೨೦ |
| ೧೯೦೬–೦೭ | ೭೦ | ೪,೮೧೫ | ೩೨,೮೨೦ | ೧ ೦೪೦ | ೧,೫೨,೧೯೬ |
| ೧೯೦೭–೦೮ | ೧೪೫ | ೮,೪೭೭ | ೭೮,೪೦೧ | ೭,೯೩೬ | ೩,೬೩,೦೨೬ |
| ೧೯೦೮–೦೯ | ೧೬೯ | ೧೧,೪೨೩ | ೧,೨೫,೪೪೨ | ೧೯,೨೦೫ | ೫,೮೫,೨೫೬ |
| ೧೯೦೯–೧೦ | ೨೦೮ | ೧೫,೫೧೯ | ೧,೯೭,೦೫೧ | ೨೫,೭೫೮ | ೮,೨೮,೮೧೬ |
| ೧೯೧೦–೧೧ | ೨೫೩ | ೧೯,೭೯೮ | ೨,೮೪,೫೮೯ | ೫೧,೩೪೪ | ೧೩,೪೭,೪೧೬ |

ಚಳವಳಿಯು ಅಷ್ಟೊಂದು ತೀವ್ರ ಗತಿಯಿಂದ ಮುಂದುವರಿಯಲಿಲ್ಲ ಇದಕ್ಕೆ ಮುಖ್ಯ ಕಾರಣಗಳು ಇವು — ಒಂದನೆಯದಾಗಿ ಈ ಆಂದೋಲನವು ಜನತೆಯ

ಸ್ವಯಂ ಪ್ರೇರಣೆಯಿಂದ ಉದಿಸಲಿಲ್ಲ. ಇದರ ಕಾಯಿದೆಯು ಜನತೆಯ ಬೇಡಿಕೆಯ ಒತ್ತಾಯದ ಫಲವಾಗಿ ರಚಿಸಲ್ಪಡಲಿಲ್ಲ. ಆದರೆ ಈ ಮೊದಲೇ ಹಿಂದೆ ವಿವರಿಸಿದಂತೆ ಸರಕಾರವೇ ಈ ಆಂದೋಲನವನ್ನೂ ಇದಕ್ಕೆ ಅಗತ್ಯವಾಗಿರುವ ಕಾಯಿದೆಯನ್ನೂ ಒತ್ತಾಯದಿಂದ ಜನತೆಯ ಮೇಲೆ ಹೇರಿತ. ಎಂಡಿನಯದಾಗಿ ಕಾಯದೆಯ ಅಪಕಾರವು ನಿರ್ಬಂಧಿತವಾಗಿದ್ದಿತು. ಚಳವಳಿಯು ಉದಯವಾದಂದಿನಿಂದ ಜನತೆಯ ಬೆಂಬಲವನ್ನು, ಸಹಾಯವನ್ನು ಸಾಕಷ್ಟಾಗಿ ಪಡೆಯಿತು. ಆಗಿನ ರಜಿಸ್ಟ್ರಾರರವರು ಚಳವಳಿಯಲ್ಲಿ ಆಸಕ್ತಿ, ಅಭಿರುಚಿಯುಳ್ಳ ನಿಸ್ಸ್ವಾರ್ಥ ಭಾವನೆಯ ಅನೇಕ ಕಾರ್ಯಕರ್ತರ ಮಹಾನ ಭೂತಿಯನ್ನು ಪಡೆದರು. ಸರ್ ಲಲ್ಲುಭಾಯಿ ಶ್ಯಾಮಲದಾಸ, ಸರ್ ವಿಠ್ಠಲದಾಸ ಠ್ಯಾಕರ್ಸೆ, ಮುಂತಾದ ಗಣ್ಯ ಸರಕಾರೇತರರು ಮುಂಬಯಿಯಲ್ಲಿ ನಗರ ಪತ್ತಿನ ಚಳವಳಿಗೆ ಚಾಲನೆಯನ್ನಿತ್ತರು. ಸಂಘಗಳಿಗೆ ಸಾಲ ಪೂರೈಸುವ ದೃಷ್ಟಿಯಿಂದ ೧೯೦೬ರಲ್ಲಿ ಮುಂಬಯಿಯಲ್ಲಿ ನಗರ ಪತ್ತಿನ ಸಹಕಾರಿ ಸಂಘವು ನೋಂದಿಸಲ್ಪಟ್ಟಿತು. ೧೯೧೧ ಡಿಸೆಂಬರದಲ್ಲಿ ಕೇಂದ್ರ ಸಹಕಾರಿ ಬ್ಯಾಂಕೂ ಸಂಘಗಳಿಗೆ ಹಣಕಾಸನ್ನೊದಗಿಸುವ ಉದ್ದೇಶದಿಂದ ಸ್ಥಾಪಿತವಾಯಿತು. ಮೊದಲನೆಯ ಸಂಘವು ಸ್ಥಾಪಿತವಾದ ಆರು ವರ್ಷಗಳ ಕೊನೆಗೆ ಮುಂಬಯಿ ರಾಜ್ಯದಲ್ಲಿ ಒಟ್ಟಿಗೆ ೨೫೨ ಸಂಘಗಳಿದ್ದವು. ಅವುಗಳ ಸದಸ್ಯರು ೧೯,೭೮೮ ಇದ್ದರಲ್ಲದೆ ದುಡಿಯುವ ಬಂಡವಾಳವು ರೂ ೧೩.೪೭ ಲಕ್ಷವಿದ್ದಿತು.

## ಎರಡನೆಯ ಭಾಗ (೧೯೧೧–೧೨ ರಿಂದ ೧೯೧೮–೧೯)

ಅವಧಿಯ ಎರಡನೆಯ ಭಾಗದಲ್ಲಿ ಸಹಕಾರ ಚಳವಳಿಯಲ್ಲಿ ಆದ ಪ್ರಗತಿಯನ್ನು ಕೆಳಗಿನ ಪತ್ರಿಕೆಯಿಂದ ಕಂಡುಕೊಳ್ಳಬಹುದು.

| ವರ್ಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಪಾಲು (ಶೇರು) ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|
| ೧೯೧೧-೧೨ | ೩೬೮ | ೨೯,೪೧೯ | ೪,೮೬,೦೭೬ | ೮೬,೭೬೨ | ೩೨,೦೫,೯೧೧ |
| ೧೯೧೨-೧೩ | ೫೭೫ | ೪೬,೫೩೭ | ೫,೬೩,೩೦೧ | ೧,೪೦,೧೦೨ | ೪೯,೩೭,೯೪೨ |
| ೧೯೧೩-೧೪ | ೬೯೭ | ೬೬,೭೦೪ | ೧೧,೨೮,೪೮೭ | ೨,೧೩,೦೦೦ | ೭೬,೧೩,೧೧೫ |
| ೧೯೧೪-೧೫ | ೮೧೭ | ೮೪,೬೦೦ | ೧೩,೨೫,೯೯೬ | ೩,೨೬,೨೫೦ | ೮೧,೧೨,೩೧೯ |
| ೧೯೧೫-೧೬ | ೯೬೩ | ೧,೦೪,೯೨೪ | ೧೬,೨೨,೦೦೬ | ೪,೫೮,೪೧೧ | ೯೭,೮೦,೦೦೭ |
| ೧೯೧೬-೧೭ | ೧,೩೦೭ | ೧,೩೦,೯೦೩ | ೨೧,೧೭,೯೫೮ | ೫,೨೯,೬೩೧ | ೧,೨೩,೬೧,೦೦೦ |
| ೧೯೧೭-೧೮ | ೧,೬೫೦ | ೧,೫೬,೮೦೫ | ೨೪,೨೬,೭೧೧ | ೭,೨೬,೭೫೮ | ೧,೭೨,೮೮,೦೦೦ |
| ೧೯೧೮-೧೯ | ೨,೦೮೩ | ೧,೮೮,೩೮೯ | ೨೫,೧೪,೬೬೧ | ೧೦,೯೧,೮೭೩ | ೧,೯[illegible],೦೦೦ |

೧೯೧೨ರಲ್ಲಿ ಹೊಸ ಕಾಯದೆಯು ಜಾರಿಯಲ್ಲಿ ಬಂದಿತು. ಸರಳತೆ, ಸ್ಥಿತಿಸ್ಥಾಪಕತೆಗಳನ್ನೊಳಗೊಂಡ ಈ ಕಾಯದೆಯು ಮೊದಲಿನ ಕಾಯದೆಯಲ್ಲಿಯ ದೋಷಗಳನ್ನು ಹೊಡೆದೋಡಿಸಿತು. ಈ ಕಾಯದೆಯು ಜಾರಿಯಲ್ಲಿ ಬರಲು, ಆಂದೋಲನದಲ್ಲಿ ನವೀನ ಜೀವನವೂ ನೂತನ ಚೇತನೆಯೂ ಚಿಮ್ಮತೊಡಗಿದವು. ಸಂಘಗಳ, ಸಭಾಸದರ, ದುಡಿಯುವ ಬಂಡವಾಳದ ಪ್ರಮಾಣವು ವರ್ಧಿಸಿತು.

ಚಳವಳಿಯ ಪರಿಸ್ಥಿತಿಯ ಸಮೀಕ್ಷೆಯನ್ನು ಮಾಡುವ ದೃಷ್ಟಿಯಿಂದ ಸರ್ ಎಡ್ವರ್ಡ ಮ್ಯಾಕ್ಲೆಗಾನ್ ಅವರ ಅಧ್ಯಕ್ಷತೆಯಲ್ಲಿ ಸರಕಾರವು ಒಂದು ಸಮಿತಿಯನ್ನು ನಿಯಮಿಸಿತು. ಭಾರತದಲ್ಲಿಯ ಸಹಕಾರ ಚಳವಳಿಯನ್ನು ಕುರಿತು ಈ ಸಮಿತಿಯು ಸಾದರ ಪಡಿಸಿದ ವರದಿಯಲ್ಲಿ ಅನೇಕ ವಿಧಾಯಕ ಸೂಚನೆಗಳು ಮಾಡಲ್ಪಟ್ಟಿವೆ. ಇವು, ಚಳವಳಿಯ, ವಿಶೇಷತಃ ಪತ್ತಿನ ಚಳವಳಿಯ ವಿಕಾಸ-ಸಂಯೋಜನೆಗಳ ವಿಷಯದಲ್ಲಿ ಬಹು ದೂರದೃಷ್ಟಿಯುಳ್ಳವಿವೆ! ಈ ದೇಶದಲ್ಲಿಯ ಸಹಕಾರ ಸಾಹಿತ್ಯದಲ್ಲಿ ಈ ವರದಿಗೆ ಒಂದು ಅಗ್ರಪಟ್ಟವಿದೆ. ಅದರಲ್ಲಿ ಮಾಡಲ್ಪಟ್ಟ ಅಂದಿನ ವಿಚಾರಸರಣಿಗಳು ಇಂದಿನ ಪರಿಸ್ಥಿತಿಗೂ ದೊಡ್ಡ ಪ್ರಮಾಣದಲ್ಲಿ ಅನ್ವಯಿಸುವಂತಿವೆ. "ಬಾಹ್ಯದಲ್ಲಿ ಚಳವಳಿಯ ಗತಿಯು ಅನುಚಿತ ರೀತಿಯಲ್ಲಿ ತೀವ್ರವಾಗದಂತೆ ನೋಡಿಕೊಳ್ಳಬೇಕೆಂ"ದು ಈ ಸಮಿತಿಯು, ಹೊಸ ಸಂಘಗಳ ರಚನೆಯ ವಿಷಯದಲ್ಲಿ ಕೊಟ್ಟ ಎಚ್ಚರಿಕೆಯ ಸೂಚನೆಯು ನಿಜವಾಗಿಯೂ ಸ್ತುತ್ಯವಾಗಿದೆ. ಸತ್ಯವಾಗದ ಶಕ್ಯವಿದ್ದಷ್ಟೂ ಜನತೆಯ ಸ್ವಯಂಸ್ಫೂರ್ತಿ ಪ್ರೇರಣೆಗಳಲ್ಲಿ ಸಹಕಾರವು ಮೂಡಿ ಬರಬೇಕೆಂಬ ಮಾತನ್ನು ಈ ಸಮಿತಿಯು ಒತ್ತಿ ಹೇಳಿತಲ್ಲದೆ, ಕೈಗೆ ಬಂದಂತೆ ಸಾಲ ಕೊಡುವದರಿಂದುಂಟಾಗುವ ಸಂಕಟಗಳಿಂದ ಸಂರಕ್ಷಿತವಾಗುವ ಅವಶ್ಯಕತೆಯನ್ನೂ ಎತ್ತಿ ತೋರಿಸಿತು. ಕೆಟ್ಟ ಆಢಳಿತಗೆ ತಡೆ ಹಾಕಿ, ತಗಲು ವ್ಯವಹಾರವನ್ನು ತೊಡೆದು ಹಾಕಿ ಚಳವಳಿಯಲ್ಲಿ ಪ್ರವೇಶಿಸುವ ಸರ್ವ ಜನತೆಯಲ್ಲ ಚೇತನವನ್ನು ತುಂಬುವ ದೃಷ್ಟಿಯಿಂದ, ನಿರ್ದೋಷ ಪರಿಪೂರ್ಣ ಲೆಕ್ಕ ಪರಿಶೋಧನೆಯ, ನಿಷ್ಪಕ್ಷಪಾತ ಮೇಲ್ವಿಚಾರಣೆಯ ಅಗತ್ಯವನ್ನೂ ಇದು ಮುಂದೆ ಮಾಡಿತು. ಅಲ್ಲದೆ ಪ್ರಾಂತಿಕ ಮತ್ತು ಮಧ್ಯವರ್ತಿ ಬ್ಯಾಂಕುಗಳ ಸ್ಥಾಪನೆಯ ವಿಷಯದ ಮಾರ್ಗವನ್ನು ಇದು ಮನಗಾಣಿಸಿ ಕೊಟ್ಟಿತು. ಈ ಅವಧಿಯೆಂದರೆ ವಿವಿಧ ಪ್ರಕಾರದ ಸಂಘಗಳ ಸ್ಥಾಪನೆಯ ಆರಂಭವೆಂದು ಹೇಳಬಹುದು. ಮಧ್ಯವರ್ತಿ ಪತ್ತಿನ ಬ್ಯಾಂಕುಗಳು, ಮಾರಾಟದ ಸಂಘಗಳು, ಇತರ ಬಿನ್ ಪತ್ತಿನ ಸಂಘಗಳು, ಗ್ರಾಹಕ ಸಂಘಗಳು, ಗ್ಯಾರಂಟಿಂಗ ಯುನಿಯನ್ನುಗಳು, ಮನೆಕಟ್ಟುವ ಸಂಘಗಳು, ಸಹಕಾರಿ ಸಂಸ್ಥೆ ಈ ಮೊದಲಾದವುಗಳು ಸ್ಥಾಪಿತವಾದುದಕ್ಕೆ ಕೆಳಗಿನ ಪತ್ರಿಕೆಯೇ ಸಾಕ್ಷಿ!

| ಸಂಘಗಳ ಪ್ರಕಾರ | ಸಂಘಗಳ ಸಂಖ್ಯೆ | | ಸಭಾಸದರು | | ದುಡಿಯುವ ಭಾಂಡವಲು (ಲಕ್ಷದಲ್ಲಿ) | |
|---|---|---|---|---|---|---|
| | ೧೯೧೨ | ೧೯೧೬ | ೧೯೧೨ | ೧೯೧೬ | ೧೯೧೨ | ೧೯೧೬ |
| ಮಧ್ಯವರ್ತಿ ಬ್ಯಾಂಕುಗಳು | ೮ | ೧೦ | ೩,೯೮೭ | ೭,೬೭೭ | ೬೭,೧೭ | ೫೨,೪೯ |
| ಪತ್ತಿನ ಸಂಘಗಳು | ೧೦೯೧ | ೧೩೯೦ | ೮೦,೭೭೭ | ೧,೦೧,೩೩೩ | ೫೨,೧೪ | ೭೧,೯೯ |
| ಬಿನ್ ಪತ್ತಿನ ಸಂಘಗಳು | ೧೮೨ | ೨೧೫ | ೪೭,೭೯೫ | ೨೦,೭೯೭ | ೪೩,೯೦ | ೪೮,೮೦ |

ಯುನಿಯನ್ನು
ಗಳು ೨೨ ೩೧
ವಿಮಾ ಸಂಘ
ಗಳು ೪ ೪

ಒಟ್ಟು ೧೩೦೭ ೧೬೫೦ ೧,೩೦೯೦೮ ೧,೫೬,೮೦೫ ೧೨೩ ೨೧ ೧೬೨೮೮

**ಅವಧಿಯ ಮೂರನೆಯ ಭಾಗ (೧೯೧೯–೨೦ ರಿಂದ ೧೯೨೯–೩೦)**

ಈ ಅವಧಿಯಲ್ಲಿ ಸ್ಥಾಪಿತವಾದ ಸಂಘಗಳ ಪರಿಸ್ಥಿತಿಯ ಪ್ರತಿಬಿಂಬವೆಂದರೆ ಕೆಳಗಿನ ಪತ್ರಿಕೆಯೇ ಸರಿ,

| ವರ್ಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಪಾಲು (ಶೇಅರ) ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|
| ೧೯೧೯–೨೦ | ೨೫೭೧ | ೨,೩೭,೯೫೪ | ೩೭,೨೯,೫೪೪ | ೧೩,೬೯,೮೮೩ | ೨,೬೦,೫೫,೩೫೪ |
| ೧೯೨೦–೨೧ | ೨೯೫೬ | ೨,೭೧,೯೫೮ | ೪೬,೧೭,೬೩೪ | ೧೭,೭೬,೯೦೨ | ೩,೩೪,೫೭,೨೦೨ |
| ೧೯೨೧–೨೨ | ೩೪೧೧ | ೩,೨೭,೮೩೧ | ೫೯,೦೯,೯೮೯ | ೨೧,೬೦,೧೨೦ | ೪,೩೫,೩೦,೪೫೦ |
| ೧೯೨೨–೨೩ | ೩೫೫೩ | ೩,೩೫,೮೩೪ | ೬೮,೭೪,೨೦೮ | ೨೬,೭೦,೩೩೪ | ೫,೩೩,೧೬,೦೬೬ |
| ೧೯೨೩–೨೪ | ೩೭೪೩ | ೩,೫೭,೨೯೮ | ೭೬,೯೫,೭೭೬ | ೩೨,೨೮,೮೬೫ | ೬,೧೯,೬೬,೭೧೬ |
| ೧೯೨೪–೨೫ | ೪೧೨೬ | ೩,೯೨,೧೬೩ | ೮೮,೬೫,೮೧೯ | ೪೧,೧೯,೭೭೪ | ೭,೧೧,೬೬,೭೧೧ |
| ೧೯೨೫–೨೬ | ೪೬೫೬ | ೪,೪೭,೮೦೮ | ೧,೦೩,೦೬,೨೪೪ | ೫೦,೬೦,೫೪೬ | ೮ ೭೮,೬೭,೮೪೯ |
| ೧೯೨೬–೨೭ | ೫೦೯೧ | ೪,೮೨,೭೩೦ | ೧,೧೮,೦೦,೪೧೯ | ೬೦,೮೬,೦೯೭ | ೧೦ ೨೬,೫೬,೮೧೭ |
| ೧೯೨೭–೨೮ | ೫೩೩೦ | ೫,೩೯,೪೭೦ | ೧,೩೫,೨೦,೦೧೯ | ೭೦,೫೨,೯೪೫ | ೧೧,೧೯,೧೫,೯೫೫ |
| ೧೯೨೮–೨೯ | ೫೪೭೨ | ೫,೪೮,೬೩೪ | ೧,೪೯,೫೫,೯೦೬ | ೮೦,೫೫,೦೯೨ | ೧೧,೯೧,೭೯,೯೧೦ |
| ೧೯೨೯–೩೦ | ೫೭೩೪ | ೫,೭೫,೬೧೬ | ೧,೬೫,೩೨,೩೮೨ | ೯೩,೮೦,೧೫೧ | ೧೨,೮೧,೩೮,೫೯೨ |

ಈ ಅವಧಿಯಲ್ಲಿ ಸಹಕಾರಿ ಕಾಯದೆ, ವಿವಿಧ ಪ್ರಕಾರದ ಸಂಘಗಳ ಸ್ಥಾಪನೆ ಈ ಮೊದಲಾದವುಗಳ ವಿಷಯದಲ್ಲಿ ಸು-ದೂರ ದೃಷ್ಟಿಯ ಮಹತ್ವಪೂರ್ಣ ಅನೇಕ ವಿಕಾಸಗಳೂ ಪರಿವರ್ತನೆಗಳೂ ಘಟಿಸಿದವು. ಅವುಗಳಲ್ಲಿ ಕೆಲವೊಂದನ್ನು ಇಲ್ಲಿ ಸಂಕ್ಷೇಪವಾಗಿ ನಿರೂಪಿಸಲಾಗಿದೆ

## (೧) ಸ್ವತಂತ್ರ ಕಾಯದೆಯ ರಚನೆ.

೧೯೧೯ರ ಭಾರತದ ಕಾಯದೆಯು ಜಾರಿಯಲ್ಲಿ ಬರಲು, ಸಹಕಾರವು ಒಂದು ವರ್ಗಾಯಿಸಲ್ಪಟ್ಟ ವಿಷಯವಾಯಿತು ೧೯೧೨ರ ಕಾಯದೆಯು ಚಳವಳಿಯ ಬಹು ಮುಖ ವಿಕಾಸಕ್ಕೆ ಅನುಕೂಲವಾಗಿಲ್ಲವೆಂಬ ಸಂಗತಿಯು ಅನುಭವಕ್ಕೆ ಬಂದಿತು ಅಲ್ಲದೆ ಈ ಮುಂಬಯಿ ರಾಜ್ಯದ ಆವಶ್ಯಕತೆಗಳನ್ನೊಳಗೊಂಡ ಒಂದು ಸ್ವತಂತ್ರ ಕಾಯದೆಯ ರಚನೆಗಾಗಿ ಕಾಲವು ಪರಿಪಕ್ವವಾಗಿದ್ದಿತು ೧೯೨೫ರ ಮುಂಬಯಿ ಸಹಕಾರಿ ಕಾಯದೆಯೆಂಬ ಕಾಯದೆಯು ೧೯೨೫ರಲ್ಲಿ ಪಾಸಾಯಿತು ಒಕ್ಕಲಿಗರಲ್ಲಿ, ಕಾರಾಗೀರರಲ್ಲಿ, ಮತ್ತು ಪರಿಮಿತ ಉತ್ಪನ್ನವುಳ್ಳ ಜನರಲ್ಲಿ, ಮಿತವ್ಯಯ-ಸ್ವಾವಲಂಬನೆಯ ತತ್ವಗಳನ್ನು ಬೆಳೆಯಿಸುವ ದೃಷ್ಟಿಯಿಂದ ೧೯೧೨ರ ಕಾಯದೆಯಿದ್ದರೆ, ಒಂದೇ ಬಗೆಯ ಆರ್ಥಿಕ ಅಡಚಣಿಗಳುಳ್ಳ ಒಕ್ಕಲಿಗರಲ್ಲಿ, ನಿಯಮಿತ ಉತ್ಪನ್ನವುಳ್ಳ ಜನರಲ್ಲಿ, ಅವರ ಉತ್ಪನ್ನದ ಸಾಧನೆಗಳು ನಿಯಮಿತವಿರಲಿ, ಅಥವಾ ಇಲ್ಲದಿರಲಿ, ಅಂಥ ಎಲ್ಲ ಜನರಲ್ಲಿ ಸಹಕಾರಕ್ಕನುಗುಣವಾಗಿ ಮಿತವ್ಯಯ, ಸ್ವಾವಲಂಬನ, ಪರಸ್ಪರ ಸಹಾಯಗಳ ತತ್ವಗಳನ್ನು ಹರಡಿ ಹಬ್ಬಿಸುವ ಉದ್ದೇಶದಿಂದ ೧೯೨೫ರ ಕಾಯದೆಯು ಇರುವದೆಂಬ ಸಂಗತಿಯು ಅದರ ಪೀಠಿಕೆಯಿಂದ ಸ್ಪಷ್ಟವಾಗುತ್ತದೆ ಉತ್ತಮ ಬೇಸಾಯ, ಉತ್ತಮ ವ್ಯವಹಾರ ಮತ್ತು ಉತ್ತಮ ಜೀವನಗಳು ಸಹಕಾರ ಚಳವಳಿಯ ಗುರಿಗಳೆಂಬ ಸಂಗತಿಯನ್ನು ಈ ಕಾಯದೆಯ ಪೀಠಿಕೆಯು ಸ್ಪಷ್ಟಗೊಳಿಸುತ್ತದೆ ಆಯರ್ಲಂಡಿನಲ್ಲಿ ಬಡ ಒಕ್ಕಲಿಗರ ಕಲ್ಯಾಣಕ್ಕಾಗಿ ಒಕ್ಕಲುತನದ ಸಹಕಾರವನ್ನು ಬಳಕೆಯಲ್ಲಿ ತಂದ ಸರ್ ಹೊರೇಸ್ ಪ್ಲಂಕಟ್‌ರವರ ವಚನಮುದ್ರಿಕೆಯಾಗಿವೆ, ಈ ಮೇಲ್ಕಂಡ ಉದ್ದೇಶಗಳು! ಅವಕಾಶವನ್ನು ವಿಸ್ತೃತಗೊಳಿಸುವದರ ಜೊತೆಗೆ, ೧೯೨೫ರ ಮುಂಬಯಿ ಸಹಕಾರಿ ಕಾಯದೆಯು ಅನೇಕ ವಿಷಯಗಳಲ್ಲಿ, ೧೯೧೨ರ ಭಾರತದ ಹಳೆಯ ಕಾಯದೆಯ ಸುಧಾರಣೆಯೂ ಆಗಿದೆ ಈ ಕಾಯದೆಯಲ್ಲಿಯ ಮಹತ್ವದ ಸುಧಾರಣೆಗಳಲ್ಲಿ ಕೆಳಗಿನವು ಒಡೆದು ತೋರುವ ವೈಶಿಷ್ಟ್ಯಗಳು —

(ಅ) ಸಭಾಸದರು ಸಂಘ–ಸ್ಥಾಪನೆಗೆ ಸಂಘಟಿತರಾಗುವ ಉದ್ದೇಶಕ್ಕನುಗುಣವಾಗಿಯೇ ಸಂಘಗಳ ಶಾಸ್ತ್ರೋಕ್ತ ವರ್ಗೀಕರಣ

(ಬ) ಸಂಘವನ್ನು ಬಂದು ಮಾಡುವ (ಮುಚ್ಚಿ ಬಿಡುವ) ಸ್ಪಷ್ಟ ಪದ್ಧತಿಯ ಪ್ರಾರಂಭ

(ಕ) 'ಪಂಚಾಯತಿ' ವಿಧಾನಕ್ಕೆ ಹೆಳಿಯ ಕಾಯದೆಯ ಕಾನೂನುಗಳಲ್ಲಿ ಅವಕಾಶ ಇಲ್ಲದ್ದನ್ನು ಈ ಹೊಸ ಕಾಯದೆಯು ಕಲ್ಪಿಸಿಕೊಟ್ಟಿರು ವದು ಭೂಕಂದಾಯದ ಬಾಕಿ ವಸೂಲಿಯಂತೆ, ಸಹಕಾರಿ ಸಂಘಗಳ ಸಾಲ ಬಾಕಿ ವಸೂಲಿಗೆ ಅನುಕೂಲತೆಯನ್ನು ಕಲ್ಪಿಸಿ ಕೊಟ್ಟಿದೆ, ಈ ಹೊಸ ಕಾಯದೆಯು! ಸಹಕಾರಿ ಸಂಘಗಳ ನಿರಂತರ ಬಯಕೆಯೂ, ಬೇಡಿಕೆಯೂ ಈ ಏರ್ಪಾಡೇ ಆಗಿದ್ದಿತು.

(ಡ) 'ಒಬ್ಬ ಸಭಾಸದನಿಗೆ ಒಂದು ಮತ'ವೆಂಬ ತತ್ವಕ್ಕೆ ಸಹಕಾರಿ ಕಾಯದೆಯಲ್ಲಿ ಒಂದು ಸ್ಥಾನ ದೊರೆಯಿತು

(ಇ) ೧೯೧೨ರ ಕಾಯದೆಯ ಪ್ರಕಾರ ಕೆಲವೊಂದು 'ಬಾಕಿ'ಗಳ ವಿಷಯದಲ್ಲಿ ಸಂಘಗಳಿಗಿರುವ ಮುಂಚಿತ ಹಕ್ಕು (Prior claim) ಈ ಹೊಸ ಕಾಯದೆಯ ಪ್ರಕಾರ ಮೊಟ್ಟ ಮೊದಲನೆಯ ಬೇಡಿಕೆಯಾಗಿ (First charge) ಪರಿವರ್ತಿತವಾಯಿತು

(ಫ) ಬೆಳೆಯ ಸಂರಕ್ಷಣೆಗಾಗಿರುವ ಸಹಕಾರಿ ಯೋಜನೆಗಳನ್ನು ವಿರೋಧಿಸಿ, ಅಂಥ ಯೋಜನೆಗಳಿಗೆ ತಗಲಬಹುದಾದ ವೆಚ್ಚವನ್ನು ಪ್ರಮಾಣಕ್ಕನುಗುಣವಾಗಿ ವರ್ಗಣೀ ರೂಪದಿಂದ ಕೊಡಲು ನಿರಾಕರಿಸುವ ಅಲ್ಪ ಸಂಖ್ಯಾಕರನ್ನು ಈ ವಿಷಯದಲ್ಲಿ ಒತ್ತಾಯ ಪಡಿಸಲಿಕ್ಕೂ ಪ್ರತ್ಯಕ್ಷವಾಗಿ ತಗಲಿದ ವೆಚ್ಚವನ್ನು ವಸೂಲ ಮಾಡಲಿಕ್ಕೂ ಹೊಸ ಕಾಯದೆಯಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ

(ಗ) ಪರಿಮಿತ ಹೊಣೆಗಾರಿಕೆಯ ಸಂಘಗಳಲ್ಲಿ ಅ-ವತಿ ಮನೆ ಕಟ್ಟುವ ಸಂಘ, ಮತ್ತಿತರ ಸಂಘಗಳಲ್ಲಿ ವ್ಯಕ್ತಿಗಳು ಧಾರಣ ಮಾಡಬಹುದಾದ ಪಾಲು ಬಂಡವಾಳದ ಪರಮಾವಧಿಯ ಮರ್ಯಾದೆಯು ಅನುಕ್ರಮ ವಾಗಿ ೧೦,೦೦೦ ಮತ್ತು ೩,೦೦೦ ರೂಪಾಯಿಗಳ ವರಗೆ ಹೆಚ್ಚಿಸಲ್ಪಟ್ಟಿದೆ

(ಹ) ಕೆಲವೊಂದು ಕರಾರುಗಳು ಪೂರ್ತಿಯಾದ ಮೇಲೆ, ಎರಡು ಸಂಘಗಳ ಸಂಯೋಜನೆಯ ವ್ಯವಸ್ಥೆಯನ್ನು ಮಾಡಲಾಗಿದೆ

**(೨) ಮೇಲ್ವಿಚಾರಣೆಯ ಸಂಯುಕ್ತ ಸಂಸ್ಥೆಗಳ (ಸುಪರವಾಯಿ ಜಿಂಗ ಯುನಿಯನ್ನುಗಳ) ರಚನೆ**

೧೯೨೨ರಲ್ಲಿ ಕೂಡಿದ ಪ್ರಾಂತಿಕ ಸಹಕಾರಿ ಪರಿಷತ್ತು, ಗ್ಯಾರಂಟಿಂಗ ಯುನಿಯನ್ನುಗಳು ಸರಿಯಾಗಿ ಕಾರ್ಯನಿರ್ವಹಣೆ ಮಾಡಲಾರದ್ದರಿಂದ,

ಅವುಗಳನ್ನು ಅಳಿಸಿಬಿಡಬೇಕೆಂಬ ನಿರ್ಧಾರಕ್ಕೆ ಬಂದಿತು ೧೯೩೪ರಲ್ಲಿ ನಿಯೋಜಿತವಾದ ಒಂದು ವಿಶೇಷ ಸಮಿತಿಯು ಗ್ಯಾರಂಟಿಂಗ ಯುನಿಯನ್ನುಗಳ ಪ್ರಶ್ನೆಯನ್ನು ಮತ್ತೆ ಪರಾಮರ್ಶಿಸಿತು ಒಂದೇ ಒಂದು ಎಜನ್ಸಿಯಲ್ಲಿ (ಘಟಕದಲ್ಲಿ) ಮೇಲ್ವಿಚಾರಣೆ,ತಪಾಸಣೆಗಳೆರಡನ್ನೂ ಕೂಡಿಸಬಾರದೆಂದು ಈ ಸಮಿತಿಯು ವರದಿ ಮಾಡಿತು ಅಲ್ಲದೆ ಗ್ಯಾರಂಟಿಂಗ ಯುನಿಯನ್ನುಗಳು ತಮ್ಮ ಕಾರ್ಯ ನಿರ್ವಹಣೆಯ ವಿಷಯದಲ್ಲಿ ತಪ್ಪಿದ್ದರಿಂದ ಅವುಗಳನ್ನು ಕೂಡಲೇ ನಿಲ್ಲಿಸ (ರದ್ದುಗೊಳಿಸ) ಬೇಕೆಂದೂ ತಮ್ಮ ಅಸ್ತಿತ್ವವನ್ನು ಮುಂದುವರಿಸಬೇಕೆಂದೆನ್ನುವ ಯುನಿಯನ್ನುಗಳು ಹೊಸ ಪ್ರೋಟನಿಯಮಗಳನ್ನು ಸ್ವೀಕರಿಸಬೇಕೆಂದೂ ಅಭಿಪ್ರಾಯ ಪಟ್ಟಿತು ಮತ್ತು ಮೇಲ್ವಿಚಾರಣಾ ಸಂಯುಕ್ತ ಸಂಸ್ಥೆಗಳ (ಸುಪರವಾಯಿಜಿಂಗ ಯುನಿಯನ್ನುಗಳ) ಸಂಸ್ಥಾಪನೆಗೆ ಶಿಫಾರಸನ್ನು ಮಾಡಿತು ಈ ಮೇರೆಗೆ ಈ ಅವಧಿಯಲ್ಲಿ ಇದ್ದ ಗ್ಯಾರಂಟಿಂಗ ಯುನಿಯನ್ನುಗಳು ಸುಪರವಾಯಿಜಿಂಗ ಯುನಿಯನ್ನುಗಳಿಗೆ ಮಾರ್ಪಾಡು ಹೊಂದಿದವು ಮತ್ತು ಹೊಸ ಸುಪರವಾಯಿಜಿಂಗ ಯುನಿಯನ್ನುಗಳು ಸ್ಥಾಪಿಸಲ್ಪಟ್ಟವು

**(೩) ಲ್ಯಾಂಡ ಮಾರ್ಗೇಜ ಬ್ಯಾಂಕುಗಳ ಅಂದರೆ ಜಮೀನ-ಒತ್ತೆಯ ಬ್ಯಾಂಕುಗಳ ಉಗಮ**

೧೯೩೩ರಲ್ಲಿ ಕೂಡಿದ ಗುಜರಾಥವಿಭಾಗ ಸಹಕಾರಿ ಪರಿಷತ್ತು, ಮುಂಬಯಿ ರಾಜ್ಯದಲ್ಲಿ ಜಮೀನ-ಒತ್ತೆ ಅಥವಾ ಅಡಮಾನ ಬ್ಯಾಂಕುಗಳ ಸ್ಥಾಪನೆಯ ವಿಷಯವನ್ನು ವಿಚಾರಿಸಿತು ೧೯೩೬ರಲ್ಲಿ, ಆ ಕಾಲದ ಸಹಕಾರಿ ಸಂಘಗಳ ರಜಿಸ್ಟ್ರಾರರಾಗಿದ್ದ ಶ್ರೀ ಜೆ ಎ ಮದನರವರು ಲ್ಯಾಂಡ ಮಾರ್ಗೇಜ ಬ್ಯಾಂಕುಗಳ ಸಂಸ್ಥಾಪನೆಯ ಯೋಜನೆಯೊಂದನ್ನು ಸರಕಾರಕ್ಕೆ ಸಾದರಪಡಿಸಿದರು ಪ್ರಯೋಗವೆಂದು ಸರಕಾರದವರು ಮೂರು ಬ್ಯಾಂಕುಗಳನ್ನು ಸ್ಥಾಪಿಸುವ ಬಗ್ಗೆ ಸಮ್ಮತಿಯನ್ನು ವ್ಯಕ್ತಪಡಿಸಿದರು ಆ ಮೇರೆಗೆ ಧಾರವಾಡ, ಬರೋಡಾ ಮತ್ತು ಪಾಚೋರಾ ನಗರಗಳಲ್ಲಿ ೧೯೩೯ರಲ್ಲಿ ಮೂರು ಬ್ಯಾಂಕುಗಳು ಜನ್ಮವೆತ್ತಿದವು

**(೪) ಇನ್‌ಸ್ಟಿಟ್ಯೂಟಿನ ಶಾಖೆಗಳ ಸ್ಥಾಪನೆ**

ಮೂರು ಭಾಷಾವಾರ ಪ್ರದೇಶಗಳಿಗೆ ಅಂದರೆ ಕರ್ನಾಟಕಕ್ಕಾಗಿ ಧಾರವಾಡದಲ್ಲಿ, ಮಹಾರಾಷ್ಟ್ರಕ್ಕಾಗಿ ಪುಣೆಯಲ್ಲಿ, ಗುಜರಾಥಕ್ಕಾಗಿ ಸುರತದಲ್ಲಿ, ಸಹಕಾರಿ ಸಂಘಗಳ ಸಭಾಸದರ, ಅಧಿಕಾರಿಗಳ, ಅಮಲದಾರರ ತರಬೇತಿ ಶಿಕ್ಷಣಗಳ ದಿನದಿನಕ್ಕೂ ಬೆಳೆಯುತ್ತಿರುವ ಬೇಡಿಕೆಯನ್ನು ಪೂರೈಸಲಿಕ್ಕೆ ಇನ್‌ಸ್ಟಿಟ್ಯೂಟು ಮೂರು ಸಹಕಾರಿ ಶಾಲೆಗಳನ್ನು ಸ್ಥಾಪಿಸಿತು

(೫) ಒಕ್ಕಲುತನದ ಪತ್ತಿನ ಸಂಘಗಳ ಪೋಟನಿಯಮಗಳು ಸುಧಾರಿಸ ಲ್ಪಟ್ಟವು ಮತ್ತು ಪಾಲು (ಶೇಅರು) ಬಂಡವಾಳದ ಪದ್ಧತಿಯು ಪ್ರಾರಂಭವಾಯಿತು.

(೬) ೧೯೩೦ರಲ್ಲಿ ಮುಂಬಯಿ ಸಹಕಾರಿ ವಿಮಾ ಸಂಸ್ಥೆಯು ಸ್ಥಾಪಿಸಿತ ವಾಯಿತು

(೭) ಸಹಕಾರಿ ಸಂಘಗಳಿಂದ ಲೆಕ್ಕ ಪರಿಶೋಧನೆಯ ಫೀಯನ್ನು ಎತ್ತ ಬೇಕೆಂದು ೧೯೩೦ರಲ್ಲಿ ಮೊದಲ ಬಾರಿ ನಿರ್ಧರಿಸಲ್ಪಟ್ಟಿತು

(೮) ಆಗಿನ ಕಾಲದ ರಜಿಸ್ಟ್ರಾರರಾಗಿದ್ದ ಶ್ರೀ ಓಟೋ ರಾಥ್‌ಫೀಲ್ಡರವರು ಫ್ರಾನ್ಸದೇಶದಲ್ಲಿಯ ಉತ್ಪಾದಕರ ಆಂದೋಲನವನ್ನು ಅಭ್ಯಸಿಸಿ ಉತ್ಪಾದಕರ ಸಂಘಗಳನ್ನು ಸ್ಥಾಪಿಸಲಿಕ್ಕೆ ವಿಶೇಷ ಪ್ರಯತ್ನಗಳನ್ನು ಮಾಡಿದರು ಈ ಅವಧಿಯ ಆರಂಭದಲ್ಲಿ ಉತ್ಪಾದಕ ಸಂಘಗಳು ತೀವ್ರ ಪ್ರಗತಿಯನ್ನು ತೋರಿದವು

(೯) ಈ ಅವಧಿಯ ಕೊನೆಗೆ ಚಳವಳಿಯ ಸಂಯೋಜನೆಯ ಪ್ರಶ್ನೆಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಯಿತು.

(೧೦) ೧೯೨೫ರ ಮುಂಬಯಿ ಸಹಕಾರಿ ಕಾಯದೆಯ ೭೧ನೆಯ ಕಲಮಿ ಗನುಗುಣವಾಗಿ, ಸಂಘಗಳ ಆಢಳತೆಯನ್ನು ಸರಿಯಾದ ರೀತಿಯಲ್ಲಿ ನಿಯಮನ ಗೊಳಿಸುವ ದೃಷ್ಟಿಯಿಂದ ಕಾಯದೆಯ ಉದ್ದೇಶವನ್ನು ಸಫಲಗೊಳಿಸುವ ಉದ್ದೇಶದಿಂದ, ಸರಕಾರದವರು ವಿವರವಾದ ಕಾನೂನುಗಳನ್ನು ರಚಿಸಿದರು ೧೯೨೭ರಲ್ಲಿ ಈ ಕಾನೂನುಗಳು ಶಾಸನಬದ್ಧವಂದು ಪರಿಗಣಿತವಾದವು. ಈ ಮೇರೆಗೆ ಮುಂಬಯಿ ರಾಜ್ಯದಲ್ಲಿಯ ಆವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ಬಹುಗ್ರಾಹಿಯಾದ ಸಹಕಾರಿ ಶಾಸನವು ( ಕಾಯದೆ ಕಾನೂನುಗಳು ) ಜಾರಿಯಲ್ಲಿ ಬಂದಿತು

ಅವಧಿಯ ಎರಡನೆಯ ಭಾಗದಲ್ಲಿ ಕಂಡು ಬಂದ ವಿಕಾಸದ ಗತಿಯೇ ಈ ಅವಧಿಯಲ್ಲಿಯೂ ಉಳಿಯಿತು ೧೯೨೦ರಲ್ಲಿ ಇದ್ದ ೨೫೭೧ ಸಂಘಗಳ, ೨೩೭೯೫೪ ಸಭಾಸದರ, ರೂ ೩೭,೨೯,೫೪೪ ಪಾಲು ಬಂಡವಾಳದ, ರೂ ೧೩,೬೯,೮೮೩ ಕಾಯ್ದಿಟ್ಟ ಮತ್ತು ಇತರ ನಿಧಿಗಳ ಮತ್ತು ರೂ ೨,೬೦,೫೫,೩೫೪ ದುಡಿಯುವ ಬಂಡವಾಳದ ಪ್ರಮಾಣವು ೧೯೨೯–೩೦ರಲ್ಲಿ ಅನುಕ್ರಮವಾಗಿ ೫೭೩೪, ೫,೭೫ ೬೧೬, ರೂ ೧,೬೫,೩೨,೩೮೨, ರೂ ೯೩,೮೦,೧೫೧, ಮತ್ತು ರೂ ೧೨,೮೧,೩೮,೫೯೨ ಗಳಿಗೆ ಏರಿತು ಅನುಕೂಲ ವಾತಾವರಣದ ಪರಿಣಾಮವಾಗಿ ಆಂದೋಲನವು ಸಾಕಷ್ಟು ವಿಕಾಸಗೊಂಡಿತು ಅಲ್ಲದೆ ೧೯೨೮ರಲ್ಲಿ ಒಕ್ಕಲುತನದ ಸಮೀಕ್ಷಣೆಗಾಗಿ ನಿಯೋಜಿತವಾದ ರಾಯಲ್ ಕಮೀಶನ್ನಿನ ಆಶೀರ್ವಾದವನ್ನೂ ಪಡೆಯಿತು ಸಹಕಾರ ಚಳವಳಿಯನ್ನು ಇನ್ನೂ ಮುಂದುವರಿಸುವ ಆವಶ್ಯಕತೆಯನ್ನು ಈ ಕಮೀಶನ್ನು ಒತ್ತಿ ಹೇಳಿತು ಈ ಅವಧಿಯಲ್ಲಿ ಚಳವಳಿಯ ವಿಕಾಸವಾದುದಲ್ಲದ ಬೆಳವಣಿಗೆಯು ಬಹುಮುಖವಾಯಿತು! ವೈವಿಧ್ಯಪೂರ್ಣವಾಯಿತು !!

**ಅವಧಿಯ ನಾಲ್ಕನೆಯ ಭಾಗ** ( ೧೯೩೦–೩೧ರಿಂದ ೧೯೩೭–೩೮ )

೧೯೩೦–೩೧ರಿಂದ ೧೯೩೭–೩೮ರ ವರೆಗೆ ಆದ ಚಳವಳಿಯ ಪ್ರಗತಿಗೆ ಕೆಳಗಿನ ಪತ್ರಿಕೆಯೇ ಪ್ರಮಾಣವು.

| ವರ್ಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಹಾಲು (ಶೇಅರ) ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|
| ೧೯೩೦–೩೧ | ೫೮೭೬ | ೫,೮೫,೮೬೯ | ೧,೭೭,೭೩,೩೦೦ | ೧,೦೪,೯೧,೩೯೩ | ೧೩,೯೦,೯೯,೫೩೦ |
| ೧೯೩೧–೩೨ | ೫೮೭೮ | ೫,[illegible]೨,೬೦೯ | ೧,೮೬,೫೧,೮೫೬ | ೧,೦೧,೭೩,೭೩೦ | ೧೪,೮೨,೧೦,೮೯೧ |
| ೧೯೩೨–೩೩ | ೫೮೮೦ | ೫,೯೫,೬೫೫ | ೧,೯೬,೨೭,೩೨೪ | ೧,೨೧,೫೭,೨೦೩ | ೧೫,೮೦,೯೧,೮೭೫ |
| ೧೯೩೩–೩೪ | ೫[illegible]೧೬ | ೬,೦೭,೯೬೭ | ೨,೦೩,೯೮,೫೮೯ | ೧,೪೫,೯೮,೪೪೫ | ೧೬,೧೬,೭೫,೧೨೯ |
| ೧೯೩೪–೩೫ | ೫೭೭೦ | ೬,೩೨,೪೩೯ | ೨,೨೨,೧೫,೩೩೯ | ೧,೭೪,೫೫,೧೮೬ | ೧೬,೮೨,೦೧,೪೬೧ |
| ೧೯೩೫–೩೬ | ೪೮೪೭ | ೫,೫೧,೧೧೩ | ೧,೯೬,೪೫,೩೮೯ | ೧,೯೯,೪೫,೮೬೮ | ೧೪,೮೭ ೨೧,೯೮೮ |
| ೧೯೩೬–೩೭ | ೫೦೭೦ | ೫,೮೬,೭೦೩ | ೨,೧೩,೨೬,೨೩೪ | ೨,೦೫,೬೮,೭೯೪ | ೧೫,೨೮,೧೦,೫೪೦ |
| ೧೯೩೭–೩೮ | ೫೦೯೩ | ೬,೦೭,೮೩೭ | ೨,೨೭,೭೫,೩೧೩ | ೨,೧೯,೦೭,೬೫೧ | ೧೫,೫೯,೩೫,೮೯೯ |

ಈ ಅವಧಿಯೆಂದರೆ ಸಹಕಾರ ಚಳವಳಿಯು ತಿಣುಕಿ, ತೇಕಿ, ತೆವಳಿ, ತತ್ತರಿಸುವ ಕಾಲವು! ಅನಿರೀಕ್ಷಿತವಾದ ಜಾಗತಿಕ ಆರ್ಥಿಕ ಮುಗ್ಗಟ್ಟು ತಲೆ ಹಾಕಿದುದರ ಪರಿಣಾಮವಾಗಿ, ಕಾಳುಕಡಿ, ದವಸ-ಧಾನ್ಯಗಳ ಬೆಲೆಗಳು ಒಮ್ಮೆಲೇ ಕೆಳಗಿಳಿದವು ಇದರ ಪರಿಣಾಮವು ವಿಶೇಷವಾಗಿ ಒಕ್ಕಲುತನದ ಪತ್ತಿನ ಸಂಘಗಳ

ಸಭಾಸದರ ಸಾಲ ತೀರಿಸುವ ಶಕ್ತಿಯು ಮೇಲೆ ಪ್ರತಿಬಿಂಬಿತವಾಯಿತು ಹಣಕಾಸಿನ ಪೇಟಿಯು ಬಿಗಿಯಾಯಿತು! ಪತ್ತು ಕುಗ್ಗಿಹೋಯಿತು, ಸಹಕಾರಿ ಸಂಘಗಳ ಆಢಳಿತೆಯಲ್ಲಿಯ ಎಲ್ಲ ದೌರ್ಬಲ್ಯ ದೋಷಗಳು ಎದ್ದು ಕಾಣತೊಡಗಿದವು ಸಂಘಗಳಿಗೆ ನಲ್ಲತಕ್ಕ ಸಾಲಗಳು ಹಿಮದಂತೆ ಹೆಪ್ಪುಗಟ್ಟಿ 'ಖಟ್ಟಿಬಾಕಿ'ಯಾದವು ಅನೇಕ ಸಂಘಗಳು 'ದಿವಾಳಿ' ತೆಗೆದವು ಕಟ್ಟೆ ಸಭಾಸದರನ್ನು ತೆಗೆದುಹಾಕುವ, ಸಾಲವನ್ನು ಉತ್ತಮ ಸಾಲವೆಂದೂ, 'ಖಟ್ಟಿಬಾಕಿ' ಸಾಲವೆಂದೂ, ಸಂಶಯಾತ್ಮಕ ಸಾಲವೆಂದೂ, ಮುಳುಗುವ ಸಾಲವೆಂದೂ ವರ್ಗೀಕರಿಸುವ, ಸವಲತ್ತಿನ ಯೋಜನೆಯನ್ನು ಬಳಕೆಯಲ್ಲಿ ತರುವ, ಕೆಟ್ಟ ಸಂಘಗಳ ಪುನರ್ಘಟನೆಯು ಸಲುವಾಗಿ ವಿಶಿಷ್ಟ ಯೋಜನೆಗಳನ್ನು ಕೈಕೊಳ್ಳುವ ಅನೇಕ ಕ್ರಮಗಳೂ ವಿಧಾನಗಳೂ ಚಳವಳಿಯ ಪುನರ್ಘಟನೆಗಾಗಿ ಮುಂದೆ ಬಂದವು ಹೊಸ ಸಂಘಗಳ ಸ್ಥಾಪನೆಯು ಮಾತಂತೂ ನಿಂತು ಹೋಯಿತು ಚಳವಳಿಯು ಪೊಳ್ಳು ವಿಕಾಸಕ್ಕಾಗಿ ಹಾತೊರೆಯುವದಕ್ಕಿಂತ, ಅದರ ಭದ್ರವಾದ ಸಂಯೋಜನೆ, ಸುಧಾರಣೆಗಳನ್ನು ಸಾಧಿಸಿ, ಅದನ್ನು ಮರಳಿ ಮೊದಲಿನ ಸ್ಥಾನಮಾನಗಳಿಗೆ ತರಲು ಮಾಡಲ್ಪಟ್ಟ ಹೆಣಗಾಟ ಹೋರಾಟಗಳೇ ಈ ಅವಧಿಯ ವೈಶಿಷ್ಟ್ಯಗಳು! ಚಳವಳಿಯ ಪ್ರತಿಷ್ಠಾಪನೆಗಾಗಿ ಪುನರ್ನಿರ್ಮಾಣಕ್ಕಾಗಿ ಸರಕಾರೀ ಅಧಿಕಾರಿಗಳೂ ಸರಕಾರೇತರರೂ ಕೂಡಿಯೇ ಸಮಯೋಚಿತವಾದ ಉತ್ಸಾಹಪೂರ್ಣ ಕ್ರಮಗಳನ್ನು ಕೈಕೊಂಡರು ಈ ಅವಧಿಯಲ್ಲಿ ಸಂಘಗಳ ಸಂಖ್ಯೆ ಕಡಿಮೆಯಾದರೂ ಪಾಲು-ಬಂಡವಾಳ, ಕಾಯ್ದಿಟ್ಟ ಮತ್ತಿತರ ನಿಧಿಗಳ ರೂಪದಲ್ಲಿ, ಆಂದೋಲನವು ತನ್ನ ಸ್ವಂತ ನಿಧಿಯನ್ನು ಶೇಖರಿಸಿಕೊಂಡು, ನಿರ್ಮಿಸಿಕೊಂಡು, ಯಾವದೇ ಪ್ರಮಾಣದಲ್ಲಿ ಬಂದೆರಗುವ ಸಂಕಷ್ಟಗಳ ದಾಳಿಯನ್ನು ತಡೆಯುವ ತನ್ನ ಆಂತರಿಕ ಶಕ್ತಿಯನ್ನು ವ್ಯಕ್ತಗೊಳಿಸಿತು ಕಾಯರಾ ಮಧ್ಯವರ್ತಿ ಬ್ಯಾಂಕು, ನಾಶಿಕ ಕೇಂದ್ರ ಬ್ಯಾಂಕುಗಳಂತಹ ಮಹತ್ವದ ಸಂಸ್ಥೆಗಳು, ಕೆಲವೊಂದು ಮಾರಾಟದ ಸಂಘಗಳು ದಿವಾಳಿ ತೆಗೆದರೂ ಒಟ್ಟಿನ ಮೇಲೆ ಚಳವಳಿಯು ವಿಶೇಷತಃ ಬಿನ್ ಶೇತ್ಕಿ ಪತ್ತಿನ ಚಳವಳಿಯು ಯಶಸ್ವಿಯಾಗಿ, ಪಾರುಗಂಡಿತು! ಪ್ರಾಂತಿಕ ಬ್ಯಾಂಕೂ ಮತ್ತಿತರ ಕೇಂದ್ರ ಬ್ಯಾಂಕುಗಳೂ ಈ ವಿಷಮ ಸಮಯದ ಒರೆಗೆ ಹತ್ತಿ ತೀರಗಂಡವು!

ಈ ಅವಧಿಯ ಕೆಲವೊಂದು ವೈಶಿಷ್ಟ್ಯಗಳು ಕೆಳಗಿನಂತಿವೆ.

**(೧) ಮೇಲ್ವಿಚಾರಣಾ ಯೋಜನೆಯ ಪುನರ್ಘಟನೆ :—**

ಈ ಅವಧಿಯಲ್ಲಿ ಆಗಿನ ರಜಿಸ್ಟ್ರಾರರಾಗಿದ್ದ ಶ್ರೀ ಕೇ ಎಲ್ ಪಂಜಾಬಿಯವರ ಆಧ್ಯಕ್ಷತೆಯಲ್ಲಿ ಮೇಲ್ವಿಚಾರಣಾ ಸಮಿತಿಯ ವರದಿಯು ಪ್ರಕಟವಾಯಿತು ಮೇಲ್ವಿಚಾರಣೆಯ ವಿಷಯದಲ್ಲಿ ಈ ಸಮಿತಿಯು ಮಾಡಿದ ಮಹತ್ವದ ಸೂಚನೆ, ಶಿಫಾರಸುಗಳು ಕೆಳಗಿನಂತಿವೆ —

(ಅ) ಲೆಕ್ಕ ಪರಿಶೋಧನೆಯೂ, ಮೇಲ್ವಿಚಾರಣೆಯೂ ಪ್ರತ್ಯೇಕವಾಗಿರತಕ್ಕದ್ದು, ಬೇರೆ ಬೇರೆಯಾಗಿರತಕ್ಕದ್ದು.

(ಬ) ಕೇಂದ್ರ ಬ್ಯಾಂಕುಗಳ ಪರವಾಗಿ ನಡೆದ ತಪಾಸಣೆಯೂ ಮೇಲ್ವಿಚಾರಣೆಯೂ ಭಿನ್ನ ಭಿನ್ನವಾಗಿರತಕ್ಕದ್ದು

(ಕ) ಕೇಂದ್ರ ಬ್ಯಾಂಕುಗಳು, ಮೇಲ್ವಿಚಾರಣೆಗಾಗಿ ತಗಲುವ ವೆಚ್ಚದ ಕೆಲವೊಂದು ಭಾಗವನ್ನು ಕೊಡತಕ್ಕದ್ದು.

(ಡ) ತಾಲೂಕಾ ಡೆವ್ಹಲಪ್‌ಮೆಂಟ ಅಸೋಸಿಏಶನ್ನುಗಳು ಮೇಲ್ವಿಚಾರಣೆಯ ಕಾರ್ಯ ಭಾರದಿಂದ ಬಿಡುಗಡೆಯಾಗತಕ್ಕದ್ದು

(ಇ) ಸಂಯುಕ್ತ ಸಂಸ್ಥೆಗಳ (ಯುನಿಯನ್ನುಗಳ) ನಿಧಿ (ಫಂಡು) ಗಳೆಲ್ಲ ಜಿಲ್ಹೆಯ ಒಂದು ಸ್ಥಳದಲ್ಲಿ ಕಲೆಹಾಕಲ್ಪಟ್ಟು, ಜಿಲ್ಹಾ ಬೋರ್ಡಿನ ನಿಯಂತ್ರಣಕ್ಕೊಳಪಡಬೇಕು

(ಪ) ಮೇಲ್ವಿಚಾರಣಾ ಸಂಯುಕ್ತ ಸಂಸ್ಥೆಗಳ (ಸುಪರವಾಯಜಿಂಗ ಯುನಿಯನ್ನುಗಳ) ಸದಸ್ಯತ್ವವನ್ನು ವಹಿಸಲು ಬಿನ್ ಪತ್ತಿನ ಮತ್ತು ಬಿನ್ ಶೇತ್ಕಿ ಸಂಘಗಳಿಗೆ ಅವಕಾಶವಿರಬೇಕು

(ಗ) ಸಮಾವೇಶವಾದ ಸಂಘಗಳು ಮೇಲ್ವಿಚಾರಣೆಯ ಖರ್ಚಿಗಾಗಿ ಕೆಲವೊಂದು ವರ್ಗಣಿಯನ್ನು ಸಲ್ಲಿಸಬೇಕು

(ಹ) ಒಂದು ನಿರ್ದಿಷ್ಟ ಘಟನೆಗೊಳಪಟ್ಟು ಜಿಲ್ಹಾ ಬೋರ್ಡುಗಳು ಸ್ಥಾಪಿತವಾಗ, ಶಿಕ್ಷಣ, ಸಮ್ಮೇಲನ, ಪರಿಷತ್ತು, ಪ್ರಚಾರ ಕಾರ್ಯಗಳನ್ನು ಕೈಕೊಳ್ಳಬೇಕು

(ಐ) ಸುಪರವಾಯಜರರು (ಮೇಲ್ವಿಚಾರಣಾಧಿಕಾರಿಗಳು) ಯೋಗ್ಯ ಶಿಕ್ಷಣ ಪಡೆದವರಿದ್ದು, ಜಿಲ್ಹಾ ಬೋರ್ಡುಗಳಿಂದ 'ಭರ್ತಿ' ಮಾಡಲ್ಪಡಬೇಕು, ಅಂದರೆ ನೇಮಿಸಲ್ಪಡಬೇಕು.

ಈ ಶಿಫಾರಸುಗಳಿಗೆ ಅನುಗುಣವಾಗಿ ಜಿಲ್ಹಾ ಬೋರ್ಡುಗಳು ರಚಿತವಾದವು ಅವಕ್ಕೆ ಅಸಿಸ್ಟಂಟ ರಜಿಸ್ಟ್ರಾರನು ಅಧಿಕಾರದಿಂದ ಚೇಅರಮನ್ನ (Ex-officio Chairman) ನಾದನು ಮೇಲಿನ ಶಿಫಾರಸುಗಳಿಗನುಸರಿಸಿ ಮೇಲ್ವಿಚಾರಣಾ ಯೋಜನೆಯು ಬಳಕೆಯಲ್ಲಿ ಬರತೊಡಗಿತು

(೨) **ಜಮೀನ ಅಡಮಾನ ಬ್ಯಾಂಕು (ಲ್ಯಾಂಡ ಮಾರ್ಗೇಜ ಬ್ಯಾಂಕು) ಗಳ ಅಭಿವೃದ್ಧಿ ಯೋಜನೆ:—** ಶ್ರೀ ಕೇ ಎಲ್. ಪಂಜಾಬಿಯವರ ಅಧ್ಯಕ್ಷತೆಯಲ್ಲಿ ಲ್ಯಾಂಡಮಾರ್ಗೇಜ ಕಮೀಟಿ (ಜಮೀನ ಒತ್ತೆಯ ಸಮಿತಿ) ಯೆಂಬ ಇನ್ನೊಂದು ಸಮಿತಿಯು ಲ್ಯಾಂಡ ಮಾರ್ಗೇಜ ಬ್ಯಾಂಕುಗಳ ಪ್ರಗತಿ ಪರೀಕ್ಷೆಗಾಗಿ ನಿಯಮಿಸಲ್ಪಟ್ಟಿತು ಈ ಸಮಿತಿಯು ಕೇಂದ್ರ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಸಂಸ್ಥಾಪನೆಯ ಅವಶ್ಯಕತೆಯನ್ನು ಒತ್ತಿ ಹೇಳಿದುದಲ್ಲದೆ ಈ ಬ್ಯಾಂಕುಗಳ ಆಂದೋಲನವನ್ನು ಸುವ್ಯವಸ್ಥಿತ ಕ್ರಮ ರೀತಿಗಳಲ್ಲಿ ವಿಕಾಸಗೊಳಿಸುವ ಬಗೆಗೂ ಶಿಫಾರಸುಗಳನ್ನು ಮಾಡಿತು ೧೯೩೫–೩೬ರಲ್ಲಿ ಹತ್ತು ಪ್ರಾಥಮಿಕ ಬ್ಯಾಂಕುಗಳ ಸ್ಥಾಪನೆಗೆ ಸರಕಾರವು ಅನುಮತಿಯನ್ನಿತ್ತಿತು ಇವುಗಳಲ್ಲಿ ಮೂರು ಕರ್ನಾಟಕದಲ್ಲಿ,

ಮೂರು ಮಹಾರಾಷ್ಟ್ರದಲ್ಲಿ, ಎರಡು ಖಾನದೇಶ ಪ್ರದೇಶದಲ್ಲಿ, ಮತ್ತೆರಡು ಗುಜರಾಥ ವಿಭಾಗದಲ್ಲಿದ್ದವು ಕ್ಷಾಮಡಾಮರಗಳಿಂದ, ಕೊರತೆಯ ಪೀಡೆಯಿಂದ ಬಾಧಿಸಲ್ಪಡದೇ ಇದ್ದ ಪ್ರದೇಶಗಳನ್ನೇ ವಾಡಿಕಯಾಗಿ ಹೊಸ ಪ್ರಾಥಮಿಕ ಬ್ಯಾಂಕುಗಳ ಸ್ಥಾಪನೆಗಾಗಿ ಆರಿಸಲಾಗುತ್ತಿದ್ದಿತು ೧೯೩೫ರಲ್ಲಿ ಸರಕಾರವೂ ಮುಂಬಯಿ ಪ್ರಾಂತಿಕ ಸಹಕಾರಿ ಭೂ-ಒತ್ತೆಯ ಬ್ಯಾಂಕಿನ ಸ್ಥಾಪನೆಗೆ ಅಪ್ಪಣೆಯನ್ನಿತ್ತಿತು

(೩) **ಕೈಮಗ್ಗದ ಉದ್ಯೋಗದ ಅಭಿವೃದ್ಧಿ** — ೧೯೩೫ರಲ್ಲಿ ಭಾರತ ಸರಕಾರವು ನೇಯ್ಕಾರಿಕಯ ಉದ್ಯೋಗದ ಅಭಿವೃದ್ಧಿಗಾಗಿ, ಪ್ರಾಂತಿಕ ಸರಕಾರದ ವಶಕ್ಕೆ ಕೆಲವೊಂದು ಧನಸಹಾಯವನ್ನು (ಗ್ರ್ಯಾಂಟು) ಕೊಟ್ಟಿತು ಈ ಧನದ(ಗ್ರ್ಯಾಂಟು) ನೆರವಿನಿಂದ ಪುಣೆ, ಧಾರವಾಡ, ಬೆಳಗಾಂವ, ಯೆವೋಲಾ, ಸೊಲ್ಲಾಪೂರ, ಮಳೇಗಾಂವ, ಧುಳಿಯಾ, ನಗರ ಮೊದಲಾದ ನೇಯ್ಕಾರಿಕೆಯ ಮಹತ್ವದ ಕೇಂದ್ರಗಳಲ್ಲಿ ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳು (ಡಿಸ್ಟ್ರಿಕ್ಟ ಇಂಡಸ್ಟ್ರಿಯಲ್ ಕೋ-ಆಪರೇಟಿವ್ಹ ಅಸೋಸಿಯೇಶನ್ನುಗಳು) ಸ್ಥಾಪಿಸಲ್ಪಟ್ಟವು

(೪) **ಸಹಕಾರಿ ಶಿಕ್ಷಣ ಯೋಜನೆ** — ಭಾರತ ಸರಕಾರದ ಧನಸಹಾಯದ ಬಲದಿಂದ, ಸರಕಾರಿ ಅಧಿಕಾರಿಗಳನ್ನು, ಸರಕಾರೇತರ ಜನರನ್ನು ತರಬೇತು ಗೊಳಿಸಿ ಸುಶಿಕ್ಷಿತರನ್ನಾಗಿ ಮಾಡುವ ಯೋಜನೆಯೊಂದು ಮಂಡಿಸಲ್ಪಟ್ಟಿತು ಇದಕ್ಕನುಗುಣವಾಗಿ ೧೯೩೭ರಲ್ಲಿ ಸರಕಾರಿ ಅಧಿಕಾರಿಗಳ, ಮತ್ತಿತರರ ಸಲುವಾಗಿ ಒಂದು ತರಬೇತೀ ವರ್ಗವು ಪುಣೆಯಲ್ಲಿ ತೆರೆಯಲ್ಪಟ್ಟಿತು

(೫) **ಭನ್ಸಾಲಿ ಮೆಹಥಾ ವರದಿ**:— ೧೯೩೭ರಲ್ಲಿ ಕಾಂಗ್ರೆಸ್ ಸರಕಾರವು ಅಧಿಕಾರಾರೂಢವಾದ ಮೇಲೆ, ಸಹಕಾರವು ಒಂದು ರೀತಿಯಿಂದ ಗ್ರಾಮಾಂತರ ಅರ್ಥರಚನೆಯಲ್ಲಿ ಲೋಕ ಕಲ್ಯಾಣವನ್ನು ಸಾಧಿಸುವಂತೆ, ಇನ್ನೊಂದು ರೀತಿಯಿಂದ ನಗರ ಪಟ್ಟಣಗಳಲ್ಲಿಯ ಕೂಲಿಕಾರ ವರ್ಗದ-ನೌಕರ ವರ್ಗದ ವೈಯಕ್ತಿಕ ಸುಖಸಾಧನೆಯನ್ನು ಪುರೋವೃದ್ಧಿಯನ್ನು ಒದಗಿಸಿಕೊಡುವಂತೆ, ಸರಕಾರವು ಸಹಕಾರದ ಪುನರ್ಘಟನೆಯ ಮತ್ತು ಪ್ರಗತಿ ವಿಕಾಸಗಳ ಪ್ರಶ್ನೆಯನ್ನು ಬಿಡಿಸಲು ಯತ್ನಿಸತೊಡಗಿತು ಈ ಧೋರಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು, ಸಹಕಾರಿ ಸಂಘಗಳ ಆಗಿನ ರಜಿಸ್ಟ್ರಾರರಾಗಿದ್ದ ಶ್ರೀ ಎಂ ಡೀ ಭನ್ಸಾಲಿ ಮತ್ತು ಶ್ರೀ ವ್ಹಿ ಎಲ್ ಮೆಹಥಾರವರನ್ನೊಳಗೊಂಡ ಒಂದ ಸಮಿತಿಯನ್ನು ಮುಂಬಯಿ ರಾಜ್ಯದಲ್ಲಿಯ ಸರಕಾರವು ನೇಮಿಸಿ, ಮುಂಬಯಿ ರಾಜ್ಯದಲ್ಲಿಯ ಸಹಕಾರಿ ಆಂದೋಲನದ ತತ್ಕಾಲದ ಪರಿಸ್ಥಿತಿಯನ್ನು ಪರಿಶೀಲಿಸಿ, ಪರೀಕ್ಷಿಸಿ, ಅದರ ಭಾವೀ ವಿಕಾಸದ ರೂಪರೇಖೆಗಳ ವಿಷಯದಲ್ಲಿ ವಿಶೇಷ ಶಿಫಾರಸುಗಳನ್ನು ಮಾಡಬೇಕೆಂದು ಸೂಚಿಸಿತು ಈ ಸಮಿತಿಯು ೧೯೩೭ರಲ್ಲಿ ತನ್ನ ವರದಿಯನ್ನು ಸಾದರಪಡಿಸಿತು ಈ ವರದಿಯ ಸೂಚನೆಗಳನ್ನು ಜಾರಿಯಲ್ಲಿ ತರಲು ಸರಕಾರವು ಯೋಗ್ಯ ಕ್ರಮಗಳನ್ನು ಕೈಕೊಂಡಿತು

**ಅವಧಿಯ ಐದನೆಯ ಭಾಗ ( ೧೯೩೮–೩೯ರಿಂದ ೧೯೪೫–೪೬ )**

ಈ ಅವಧಿಯಲ್ಲಿಯ ಚಳವಳಿಯ ಬೆಳವಣಿಗೆಗೆ ಕೆಳಗಿನ ಪತ್ರಿಕೆಯು ಒಂದು ಕೈಗನ್ನಡಿಯು!

| ವರ್ಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಪಾಲು (ಶೇಅರ) ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|
| ೧೯೩೮–೩೯ | ೫೧೨೭ | ೭,೧೦,೩೮೬ | ೨,೩೯ ೩೨,೧೯೮ | ೨,೩೯,೪೨,೦೭೩ | ೧೬,೨೬,೯೭,೮೩೨ |
| ೧೯೩೯–೪೦ | ೫೨೮೯ | ೬,೩೧,೩೪೬ | ೨,೫೨,೨೯,೭೨೨ | ೨,೪೮,೧೧,೭೫೪ | ೧೬,೧೩,೧೫,೨೫೫ |
| ೧೯೪೦–೪೧ | ೫೨೯೮ | ೬,೪೭,೨೬೮ | ೨,೬೪,೦೪,೩೦೫ | ೨,೬೫,೪೨,೩೦೯ | ೧೭,೦೬,೭೬,೭೭೮ |
| ೧೯೪೧–೪೨ | ೫೪೧೨ | ೬,೭೭,೯೫೬ | ೨,೭೪,೭೭,೨೭೭ | ೨,೮೬,೯೮,೪೬೧ | ೧೮,೪೧,೭೫ ೪೫೮ |
| ೧೯೪೨–೪೩ | ೫೬೦೩ | ೭,೪೨,೩೦೧ | ೨,೯೬,೦೮,೧೯೭ | ೩,೦೩,೮೦,೪೪೯ | ೨೨,೧೪,೯೫,೭೪೪ |
| ೧೯೪೩–೪೪ | ೬೧೩೩ | ೮,೧೨,೪೪೩ | ೩,೫೫,೨೩,೮೬೦ | ೩,೪೫,೮೭,೮೦೩ | ೨೫,೬೭,೨೧,೨೪೮ |
| ೧೯೪೪–೪೫ | ೬೬೫೩ | ೧೧,೯೧,೭೯೧ | ೪,೧೫,೩೦,೨೧೩ | ೩,೮೯,೦೬,೬೭೮ | ೨೯,೮೯,೪೬,೬೬೪ |
| ೧೯೪೫–೪೬ | ೭೩೬೫ | ೧೨,೨೦,೩೬೧ | ೪,೮೫,೫೭,೦೦೦ | ೪,೪೦,೫೫ ೦೦೦ | ೩೬,೦೦,೬೨,೦೦೦ |

ಎರಡನೆಯ ಜಾಗತಿಕ ಮಹಾಯುದ್ಧವು ಆರಂಭವಾದೊಡನೆಯೇ ಆರ್ಥಿಕ ಪರಿಸ್ಥಿತಿಯು ಪಲ್ಲಟಿಸಿತು ೧೯೪೦ರಿಂದ ಇತ್ತೀಚೆಗೆ, ಯುದ್ಧದ ಆಘಾತಗಳು ಸಹಕಾರದ ಮೇಲೂ ಪರಿಣಾಮವನ್ನುಂಟು ಮಾಡಿದವು ಒಕ್ಕಲುತನದ ಹುಟ್ಟುವಳಿಯ ಏರಿಕಯ ಬೆಲೆಗಳಿಂದ ರೈತರು ತಮ್ಮ ಸಾಲವನ್ನು ತೀರಿಸಲು

ಸಮರ್ಥರಾದರು. ೧೯೪೨ರ ನಂತರ ಆಹಾರ ಧಾನ್ಯಗಳ ಮತ್ತು ಜೀವನಾವಶ್ಯಕ ಪದಾರ್ಥಗಳ ಬೆಲೆಗಳು ಮಿತಿಮೀರಿ ಏರತೊಡಗಿದವು. ಸಿಂಗಾಪುರದ ಸೋಲಿನಿಂದ ಪರಿಸ್ಥಿತಿಯು ಮತ್ತೂ ತೀಕ್ಷ್ಣವಾಯಿತು. ಜನತೆಗೆ ಯೋಗ್ಯ ದರದಿಂದ ಜೀವನಾವಶ್ಯಕ ಪದಾರ್ಥಗಳನ್ನು ಸರಿಯಾಗಿ, ಯೋಗ್ಯವಾಗಿ ಹಂಚುವ ದೃಷ್ಟಿಯಿಂದ ನಿಯಂತ್ರಣ–ಸೀದಾ ಪದ್ಧತಿಗಳು ಅಮಲಿನಲ್ಲಿ ಬಂದವು. ಕಳ್ಳಪೇಟೆ, ಲಾಭಬಡಕತನ ಮತ್ತಿತರ ಸಾಮಾಜಿಕ ಕೇಡು, ಕಡಕು, ಪಾಪಗಳು ದೃಗ್ಗೋಚರವಾಗತೊಡಗಿದವು. ಆಹಾರ ಧಾನ್ಯಗಳ ಮತ್ತಿತರ ನಿಯಂತ್ರಿತ ವಸ್ತುಗಳ ವಿತರಣೆಯ ಕಾರ್ಯವನ್ನು ಸರಕಾರವು ಸಹಕಾರಿ ಸಂಘಗಳಿಗೆ ಒಪ್ಪಿಸಿತು. ಮುಂಬಯಿ ಒಕ್ಕಲಿಗರ ಸಾಲ ಪರಿಹಾರ ಕಾಯದೆಯು ಜಾರಿಯಲ್ಲಿ ಬರಲು, ಈ ಕಾಯದೆಗನುಗುಣವಾಗಿ, ಕೋರ್ಟಿನ ನ್ಯಾಯ ವ್ಯವಹಾರದಲ್ಲಿ ಪಕ್ಷಕಾರರಾದ ಒಕ್ಕಲಿಗರಿಗೆ ಬೆಳೆಯ ಸಾಲವನ್ನು ಪೂರೈಸಲಿಕ್ಕೆ ಸಹಕಾರಿ ಸಂಘ ಸಂಸ್ಥೆಗಳು 'ಏಜನ್ಸಿ'ಗಳೆಂದು ಸರಕಾರದವರು ಗಣಿಸಿದರು. ಸುವ್ಯವಸ್ಥಿತವಾದ ಆಢಳಿತೆಯುಳ್ಳ ಸಹಕಾರಿ ಸಂಘಗಳ ಚಟುವಟಿಕೆಗಳನ್ನು ವಿಸ್ತೃತಗೊಳಿಸಲಿಕ್ಕೆ, ಇಂಥ ಸಂಘಗಳನ್ನು ವಿವಿಧೋದ್ದೇಶ ಸಂಘಗಳನ್ನಾಗಿ ಮಾರ್ಪಡಿಸಲಿಕ್ಕೆ, ಮತ್ತು ಹೊಸ ಹೊಸ ವಿವಿಧೋದ್ದೇಶ ಸಂಘಗಳನ್ನು, ಖರೀದಿ–ವಿಕ್ರಿ ಸಂಸ್ಥೆಗಳನ್ನು ಯೋಗ್ಯ ಕೇಂದ್ರಗಳಲ್ಲಿ ಸ್ಥಾಪಿಸಲಿಕ್ಕೆ ಕ್ರಮಗಳನ್ನು ಕೈಕೊಳ್ಳಲಾಯಿತು. ಯುದ್ಧದಿಂದ ಪುಟಗೊಂಡ, ಸ್ಫುಟಗೊಂಡ ಈ ಚಳವಳಿಯು ಸಾಕಷ್ಟು ಶೀಘ್ರವಾಗಿ ತೃಪ್ತಿಕರವಾಗಿ ವಿಕಾಸಗೊಂಡಿತು. ಗ್ರಾಮ–ನಗರಗಳೆರಡೂ ಬದಿಗಳಲ್ಲಿ, ಗುಣ ಪ್ರಮಾಣಗಳೆರಡೂ ರೀತಿಗಳಲ್ಲಿ ಚಳವಳಿಯು ಘನ ಪ್ರಗತಿಯನ್ನು ಹೊಂದಿತು. ಸಂಘಗಳ ಸಂಖ್ಯೆ, ಸಭಾಸದರ ಸಂಖ್ಯೆ, ಪಾಲು ಬಂಡವಾಳದ ಪ್ರಮಾಣ, ಕಾಯ್ದಿಟ್ಟ ಮತ್ತಿತರ ನಿಧಿಗಳ ಪರಿಮಾಣ ಮತ್ತು ದುಡಿಯುವ ಬಂಡವಾಳದ ಪ್ರಮಾಣಗಳೆಲ್ಲ ಚಮತ್ಕಾರಿಕವಾಗಿ ಏರತೊಡಗಿದುದಕ್ಕೆ ಕೆಳಗಿನ ಪತ್ರಿಕೆಯೇ ದೃಷ್ಟಾಂತವು.

| ವರ್ಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಪಾಲು (ಶೇಅರ) ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|
| ೧೯೩೮–೩೯ | ೫೧೨೬ | ೬,೧೦,೩೮೩ | ೨,೩೯,೩೨,೧೧೮ | ೨,೩೯,೪೨,೦೭೩ | ೧೬,೨೬,೯೭,೮೩೨ |
| ೧೯೪೫–೪೬ | ೭೩೬೫ | ೧೨,೫೦,೩೬೧ | ೪,೫೮,೫೭,೦೦೦ | ೪,೪೦,೫೮,೦೦೦ | ೩೬,೦೦,೬೨,೦೦೦ |

**ಈ ಅವಧಿಯಲ್ಲಿ ಒಕ್ಕಲುತನದ ಪತ್ತಿನ ಚಳವಳಿಯು ಕಲ್ಪನಾತೀತವಾಗಿ ಬೆಳೆಯಿತಲ್ಲದೆ, ವಿವಿಧ ಉದ್ದೇಶಗಳ ಸಂಘ, ಮಾರಾಟದ ಸಂಘ, ಗ್ರಾಹಕರ ಸಂಘ,**

ಉತ್ಪಾದಕರ ಸಂಘ, ಮನೆಕಟ್ಟುವ ಸಂಘ ಈ ಮೊದಲಾದ ಅನೇಕ ರೂಪಗಳನ್ನು ಸಹಕಾರವು ಧಾರಣಮಾಡಿತು ೧೯೩೯-೪೦ರಲ್ಲಿ ಮತ್ತು ೧೯೪೫-೪೬ರಲ್ಲಿ ಸಹಕಾರ ಚಳವಳಿಯು ಧಾರಣ ಮಾಡಿದ ವಿವಿಧ ರೂಪಗಳ ತುಲನಾತ್ಮಕ ಚಿತ್ರವನ್ನು ಕಂಡುಕೊಳ್ಳಬೇಕಾದರೆ ಇದೋ ಇಲ್ಲಿ ಕೆಳಗೆ ದೃಷ್ಟಿಕ್ಷೇಪ ಮಾಡಿರಿ!

**ವಿವಿಧೋದ್ದೇಶ ಸಂಘಗಳನ್ನೊಳಗೊಂಡ ಒಕ್ಕಲುತನದ ಪತ್ತಿನ ಸಂಘಗಳು.**

| ವರ್ಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಪಾಲು (ಶೇಅರ) ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|
| ೧೯೩೯-೪೦ | ೩೭೯೬ | ೧,೯೩,೨೮೨ | ೩೩,೩೦,೮೭೦ | ೮೪,೨೪,೮೦೭ | ೨,೭೯,೫೮,೦೯೭ |
| ೧೯೪೫-೪೬ | ೪೭೯೬ | ೨,೩೨,೨೮೨ | ೫೧,೪೪,೬೧೦ | ೧,೧೧,೯೫,೭೦೫ | ೩,೦೬,೮೨,೪೦೯ |

**ಸಾಲ ಪೂರೈಕೆಯ ಮತ್ತು ಸಾಲ ವಸೂಲಿಯ ಪತ್ರಿಕೆಯು**

| ವರ್ಷ | ಆರಂಭದಲ್ಲಿದ್ದ ಸಾಲಬಾಕಿ | ಹೊಸದಾಗಿ ಕೊಡಲ್ಪಟ್ಟ ಸಾಲ | ಸಾಲ ವಸೂಲಿ | ವರ್ಷಾಂತ್ಯಕ್ಕಿದ್ದ ಸಾಲಬಾಕಿ | ಮುದ್ದತು ಮೀರಿದ ಬಾಕಿ |
|---|---|---|---|---|---|
| ೧೯೩೯-೪೦ | ೨,೪೪,೮೧,೨೭೬ | ೬೦,೬೮,೮೩೭ | ೭೫,೪೧,೫೨೨ | ೨,೨೯,೪೪,೯೨೦ | ೧,೩೨,೫೧,೮೦೮ |
| ೧೯೪೫-೪೬ | ೧,೮೯,೫೯,೫೪೩ | ೧,೨೮,೯೭,೨೮೨ | ೧,೦೪,೮೬,೧೧೭ | ೨,೧೨,೪೭,೬೭೪ | ೭೫,೩೧,೫೬೧ |

**ವಿವಿಧೋದ್ದೇಶ ಸಂಘಗಳ ಸಹಿತವಾಗಿ ಒಕ್ಕಲುತನದ ಪತ್ತಿನ ಸಂಘಗಳ ಲೆಕ್ಕ ಪರಿಶೋಧನೆಯ (ಆಡಿಟ) ವರ್ಗೀಕರಣವನ್ನು ತೋರಿಸುವ ಪತ್ರಿಕೆ.**

| ವರ್ಷ | ಅ | ಬ | ಕ | ಡ | ನಿರ್ವರ್ಗೀಕರಣ | ಒಟ್ಟು |
|---|---|---|---|---|---|---|
| ೧೯೩೯-೪೦ | ೨೫೭ | ೮೮೦ | ೯೩೨ | ೧೬೬೭ | ೭೭ | ೩೮೧೩ |
| ೧೯೪೫-೪೬ | ೬೩೨ | ೧೭೨೧ | ೧೧೫೫ | ೭೩೬ | ೫೫೨ | ೪೭೯೬ |

ಟೀಪು — ೧೯೩೯-೪೦ರ ಅಂಕೆಗಳಲ್ಲಿ ೧೭ ಜಮೀನ ಒತ್ತೆ ಬ್ಯಾಂಕುಗಳು ಸಮಾವೇಶವಾಗಿವೆ,

ಈ ಅವಧಿಯಲ್ಲಿ ವಿವಿಧೋದ್ದೇಶ ಸಂಘಗಳ ಸಹಿತವಾಗಿ ಒಕ್ಕಲುತನದ ಪತ್ತಿನ ಸಂಘಗಳ ಸರ್ವಾಂಗೀಣ ಪ್ರಗತಿಯಾಗಿದೆಯೆಂಬುದಕ್ಕೆ ಮೇಲಿನ ಅಂಕಿ ಸಂಖ್ಯೆಗಳೇ ಸಾಕ್ಷಿ! ವಸೂಲಿಯ ಕೆಲಸವು ತೃಪ್ತಿಕರವಾಗಿದೆ ೧೯೪೫-೪೬ರಲ್ಲಿ ಪೂರೈಸಲ್ಪಟ್ಟ ಸಾಲದ ಪ್ರಮಾಣವು ಸಾಕಷ್ಟು ದೊಡ್ಡದಿದೆ ಪಾಲು ಬಂಡವಾಳ, ಕಾಯ್ದಿಟ್ಟ ಮತ್ತಿತರ ನಿಧಿಗಳ ರೂಪದಲ್ಲಿ ಸಂಘಗಳು ತಮ್ಮ ಸ್ವಂತ ಬಂಡವಾಳವನ್ನು ನಿರ್ಮಿಸಿಕೊಂಡಿವೆ ಲೆಕ್ಕ ಪರಿಶೋಧನೆಯ (ಆಡಿಟ್ಟಿನ) ವರ್ಗೀಕರಣವೂ ಮೇಲ್ಮಟ್ಟಕ್ಕೇರಿದೆ ಸಂಘಗಳು ವಿತರಣಾಕಾರ್ಯವನ್ನು ಕೈಕೊಂಡಿವೆ

**ವಿವಿಧೋದ್ದೇಶ ಸಂಘಗಳು**:— ೧೯೩೯-೪೦ರಲ್ಲಿ ವಿವಿಧೋದ್ದೇಶ ಸಂಘಗಳ ಸಂಖ್ಯೆ ೬೫ ಅವುಗಳ ಸಭಾಸದರು ೨೭೪೧, ಪಾಲು ಬಂಡವಾಳವು ರೂ ೪೨೫೩೦, ಮತ್ತು ದುಡಿಯುವ ಬಂಡವಾಳವು ರೂ ೧,೨೭,೮೫೮ ಇದ್ದಿತು ಸಂಘಗಳು ೩೯,೦೧೭ ರೂಪಾಯಿ ಬೆಲೆಯ ಪ್ರಾಪಂಚಿಕ ಮತ್ತು ಒಕ್ಕಲುತನದ ಆವಶ್ಯಕತೆಗಳನ್ನು ಪೂರೈಸಿದವು ೨೬,೮೩೮ ರೂಪಾಯಿಗಳ ಒಕ್ಕಲುತನದ ಹುಟ್ಟುವಳಿಯನ್ನು ಮಾರಿದವು ೧೯೪೫-೪೬ರಲ್ಲಿ ಈ ಸಂಘಗಳ ಸಂಖ್ಯೆ ೨೬೮, ಇವುಗಳ ಸಭಾಸದರು ೨೦,೯೨೫, ಪಾಲು ಬಂಡವಾಳವು ರೂ ೬,೦೩,೨೬೦ ಮತ್ತು ದುಡಿಯುವ ಬಂಡವಾಳವು ರೂ ೨೪,೬೦,೯೩೧ ಇದ್ದಿತು ಈ ಸಂಘಗಳಿಂದ ಪೂರೈಸಲ್ಪಟ್ಟ ಪ್ರಪಂಚಕ್ಕೂ ಒಕ್ಕಲುತನಕ್ಕೂ ಬೇಕಾಗುವ ಸಾಮಾನುಗಳ ಬೆಲೆ ರೂ ೬೪,೪೮,೯೭೫, ಸಂಘಗಳು ಮಾರಿದ ಒಕ್ಕಲುತನದ ಹುಟ್ಟುವಳಿಯ ಬೆಲೆ ರೂ ೧೧,೩೪,೩೨೦ ಇದ್ದಿತು

**ಗ್ರಾಹಕರ ಸಂಘಗಳು**:— ೧೯೩೮-೩೯ರಲ್ಲಿ ಒಟ್ಟು ೨೫ ಗ್ರಾಹಕರ ಸಹಕಾರಿ ಸಂಘಗಳಿದ್ದವು. ಅವುಗಳ ಸದಸ್ಯರ ಸಂಖ್ಯೆ ೭೧೨೮ ಇದ್ದು ದುಡಿಯುವ ಭಾಂಡವಲು ೨೦೯,೧೯೦ ರೂಪಾಯಿಗಳಷ್ಟಿದ್ದಿತು ಮಾರಾಟವು ೫೯೯,೪೮೩ ರೂಪಾಯಿಗಳಷ್ಟು ಮತ್ತು ಖರೀದಿಯು ೫,೩೪,೮೭೬ ರೂಪಾಯಿಗಳಷ್ಟು ಇದ್ದಿತು ಈ ಸಂಘಗಳಿಗೆ ಒಟ್ಟು ೧೩,೫೪೪ ರೂಪಾಯಿಗಳ ನಿಕ್ಕೀ ಲಾಭವಾಗಿತ್ತು ಆದರೆ ಅದೇ ೧೯೪೫-೪೬ರಲ್ಲಿ ೪೬೫ ಗ್ರಾಹಕರ ಸಂಘಗಳಿದ್ದವು. ಅವುಗಳ ಸದಸ್ಯರ ಸಂಖ್ಯೆ ೧,೩೨,೫೯೦ ಇದ್ದು ದುಡಿಯುವ ಭಾಂಡವಲು ೫,೫೧೧,೦೭೨ ರೂಪಾಯಿಗಳಷ್ಟಿದ್ದಿತು ಮಾರಾಟವು ೫೪,೨೦೭,೪೨೫ ರೂಪಾಯಿಗಳಷ್ಟು, ಖರೀದಿಯು ೫೨,೫೦೨,೧೧೩ ರೂಪಾಯಿಗಳಷ್ಟಿದ್ದಿತು ಸಂಘಗಳು ಒಟ್ಟು ೮,೪೧,೫೪೩ ರೂಪಾಯಿಗಳಷ್ಟು ಲಾಭವನ್ನು ಪಡೆದಿದ್ದವು. ಸಾಮಾನ್ಯವಾಗಿ ಈ ಎಲ್ಲ ಗ್ರಾಹಕರ ಸಂಘಗಳು ನಿಯಂತ್ರಿತ ಮತ್ತು ಸೀದಾ ಸರಕುಗಳನ್ನು ಮಾರಾಟ ಮಾಡುತ್ತಿದ್ದವು ಆ ಬಗ್ಗೆ ಈ ಸಂಘಗಳು ಲಾಯಸನ್ಸ ಪಡೆದು

ಕೊಂಡಿದ್ದವು ನಿಯಂತ್ರಿತ ಸರಕುಗಳ ವಿತರಣಾ ಕಾರ್ಯದಲ್ಲಿ ಸಹಕಾರಿ ಸಂಘಗಳಿಗೆ ಪ್ರಾಶಸ್ತ್ಯ ಕೊಡಬೇಕೆಂದು ಸರಕಾರದ ಧೋರಣೆಯಿದ್ದುದರಿಂದಲೂ, ಅಸಮಾನ್ಯ ಪರಿಸ್ಥಿತಿಯಿಂದ ವ್ಯವಹಾರವು ಹೆಚ್ಚಾಗತೊಡಗಿದ್ದರಿಂದಲೂ ಹೆಚ್ಚು ಹೆಚ್ಚು ಗ್ರಾಹಕರ ಸಂಘಗಳು ಅಸ್ತಿತ್ವದಲ್ಲಿ ಬಂದವು

**ಮನೆಕಟ್ಟುವ ಸಂಘಗಳು** — ೧೯೩೮-೩೯ರಲ್ಲಿ ಮನೆಕಟ್ಟುವ ಸಹಕಾರಿ ಸಂಘಗಳ ಸಂಖ್ಯೆಯು ಒಟ್ಟು ೧೮ ಇದ್ದು ಅವುಗಳ ಸದಸ್ಯರ ಸಂಖ್ಯೆಯು ೬೬೧೭ ಇದ್ದಿತು ಶೇಅರ ಭಾಂಡವಲು ರೂ ೨೩,೪೨,೧೯೦, ಸರಕಾರದ ಸಾಲ ರೂ ೨೨,೨೧,೭೬೬ ಮತ್ತು ದುಡಿಯುವ ಭಾಂಡವಲು ರೂ ೧೦,೯೯೧,೪೬೬ ಇದ್ದವು ೧೯೪೫-೪೬ರಲ್ಲಿ ಮನೆ ಕಟ್ಟುವ ಸಂಘಗಳ ಸಂಖ್ಯೆ ೧೩೬ ಇದ್ದು ಸದಸ್ಯರ ಸಂಖ್ಯೆಯು ೮,೫೯೭ರಷ್ಟಾಗಿದ್ದಿತು ಶೇರ ಭಾಂಡವಲು, ಸರಕಾರದ ಸಾಲ ಮತ್ತು ದುಡಿಯುವ ಭಾಂಡವಲುಗಳು ಅನುಕ್ರಮವಾಗಿ ರೂ ೩೧,೮೦,೬೪೧, ರೂ ೫,೭೮,೦೯೪, ಮತ್ತು ರೂ ೧,೨೮,೨೪,೬೦೦ ಇದ್ದವು. ಈ ಸಂಘಗಳು ಇದೇ ಅವಧಿಯಲ್ಲಿ ಸರಕಾರದ ಸಾಲವನ್ನು ಬಹುಮಟ್ಟಿಗೆ ತಿರುಗಿ ಕೊಟ್ಟವು

**ಉತ್ಪಾದಕರ ಸಂಘಗಳು** .— ೧೯೩೮-೩೯ರಲ್ಲಿ ಕೇವಲ ೧೪ ಉತ್ಪಾದಕರ ಸಂಘಗಳು ಇದ್ದವು ಅವುಗಳ ಸದಸ್ಯರ ಸಂಖ್ಯೆಯು ೧೦೪೫ ಇದ್ದಿತು. ಶೇರ ಭಾಂಡವಲು ರೂ ೩೧,೫೩೫ ಇದ್ದು, ದುಡಿಯುವ ಭಾಂಡವಲು ರೂ ೧,೫೧,೭೨೪ ಇದ್ದಿತು ಆದರೆ ಅದೇ ೧೯೪೫-೪೬ರಲ್ಲಿ ೭೯ ಉತ್ಪಾದಕರ ಸಂಘಗಳಿದ್ದವು ಮತ್ತು ಅವುಗಳ ಸದಸ್ಯರ ಸಂಖ್ಯೆಯು ೧೭೭೩ ಇದ್ದಿತು ದುಡಿಯುವ ಭಾಂಡವಲು ೧೧,೧೨,೮೮೬ ರೂ ಗಳಷ್ಟಿದ್ದಿತು ೧೯೩೮-೩೯ರಲ್ಲಿ ನೇಕಾರರ ಸಂಘಗಳ ಸಂಖ್ಯೆಯು ಕೇವಲ ೪೦ ಇದ್ದದ್ದು, ೧೯೪೫-೪೬ರಲ್ಲಿ ೧೩೦ಕ್ಕೆ ಮುಟ್ಟಿತು ಅದರಂತೆ ೧೯೩೮-೩೯ರಲ್ಲಿ ೨,೩೨,೬೭೨ ರೂ. ಗಳಷ್ಟಿದ್ದ ದುಡಿಯುವ ಭಾಂಡವಲು ೧೯೪೫-೪೬ರಲ್ಲಿ ೨೪,೩೧,೭೫೫ ರೂ ಗಳಿಗೆ ಮುಟ್ಟಿತು. ನೂಲು ಹಂಚುವ ಕಾರ್ಯವನ್ನು ಇದೇ ಸಂಘಗಳಿಗೆ ವಹಿಸಿಕೊಟ್ಟಿದ್ದರಿಂದ ನೇಕಾರರ ಸಂಘಗಳ ಸಂಖ್ಯೆಯು ಭರದಿಂದ ಬೆಳೆಯುತೊಡಗಿತು ಈ ನೇಕಾರರ ಸಂಘಗಳು ೧೯೩೮-೩೯ರಲ್ಲಿ ಕೇವಲ ೨೫೭೧ ರೂ ಲಾಭ ಪಡೆದಿದ್ದರೆ ೧೯೪೫-೪೬ರಲ್ಲಿ ೩,೪೬,೬೬೪ ರೂ ಗಳ ಲಾಭವನ್ನು ಪಡೆದವು

ಶೇತ್ಕಿ ಬಿನ್ ಪತ್ತಿನ ಸಂಘ, ಬಿನ್ ಶೇತ್ಕಿ ಪತ್ತಿನ ಸಂಘ, ಮಧ್ಯವರ್ತಿ ಮತ್ತು ಪ್ರಾಂತಿಕ ಬ್ಯಾಂಕುಗಳು ಈ ಅವಧಿಯಲ್ಲಿ ತಮ್ಮ ಚಟುವಟಿಕೆಗಳಲ್ಲಿ ಬೆಳವಣಿಗೆಯನ್ನು ತೋರಿಸಿದವು.

**ಅವಧಿಯ ಆರನೆಯ ಭಾಗ ( ೧೯೪೬–೪೭ ರಿಂದ ೧೯೫೦–೫೧ )**

ಈ ಅವಧಿಯಲ್ಲಿ ಸಾಧಿಸಿದ ಪ್ರಗತಿಯ ಚಿತ್ರವನ್ನು ಕೆಳಗಿನ ಅಂಕ-ಸಂಖ್ಯೆ ಗಳಲ್ಲಿ ಕಾಣಬಹುದು.

| ವರ್ಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಪಾಲು (ಶೇಅರ) ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|
| | | | ( ರೂಪಾಯಿಗಳು ಸಾವಿರದಲ್ಲಿ ) | | |
| ೧೯೪೬–೪೭ | ೮೦೧೮ | ೧೨,೨೦,೩೬೧ | ೫೬,೦೪೦ | ೪೮,೬೩೭ | ೩,೮೭,೭೨೦ |
| ೧೯೪೭–೪೮ | ೮೯೯೦ | ೧೪,೨೦,೩೫೨ | ೬೪,೫೦೮ | ೫೫,೯೪೨ | ೪,೪೯,೫೬೮ |
| ೧೯೪೮–೪೯ | ೧೩೩೧೭ | ೧೮,೬೦,೮೪೯ | ೯೨,೧೨೬ | ೭೦,೬೦೯ | ೬,೬೬,೧೮೫ |
| ೧೯೪೯–೫೦ | ೧೪೮೧೫ | ೨೦,೭೯,೧೭೪ | ೧,೨೬,೦೪೯ | ೮೨,೩೭೦ | ೬,೮೭,೬೪೬ |
| ೧೯೫೦–೫೧ | ೧೬೧೧೫ | ೨೩,೪೪,೩೫೦ | ೧,೩೭,೦೫೭ | ೮೨,೭೦೬ | ೮,೨೯,೬೧೦ |

ಮುಂಬಯಿ ರಾಜ್ಯದ ಸಹಕಾರಿ ಆಂದೋಲನೆಯ ಇತಿಹಾಸದಲ್ಲಿ ಈ ಅವಧಿಯು ಹೆಚ್ಚು ಮಹತ್ವಪೂರ್ಣದ್ದಾಗಿದೆ ಅದಕ್ಕೆ ಕೆಳಗಿನ ಮುಖ್ಯ ಕಾರಣ ಗಳನ್ನು ಕೊಡಬಹುದು.

೧. ಕಾಂಗ್ರೆಸ್ ಸರಕಾರವು ಅಧಿಕಾರಕ್ಕೆ ಬಂದ ಮೇಲೆ ತನ್ನ ಅನೇಕ ಯೋಜನೆಗಳನ್ನು ಕಾರ್ಯಗತಗೊಳಿಸಲು ಸಹಕಾರಿ ಆಂದೋಲನ ವನ್ನು ಉಪಯೋಗ ಮಾಡತೊಡಗಿತು. ಸಹಕಾರಿ ಆಂದೋಲನವು ತನ್ನ ವಿವಿಧ ರೂಪಗಳಲ್ಲಿ ಬೆಳೆಯುವಂತೆ ಪ್ರೋತ್ಸಾಹ, ಪೋಷಣ ಗಳನ್ನೀಯುವ ಧೋರಣೆಯನ್ನು ಸರಕಾರವು ಅನುಸರಿಸಿತು.

೨ ಶ್ರೀ ಆರ್ ಜಿ ಸರಯ್ಯಾ ಅವರ ಅಧ್ಯಕ್ಷತೆಯಲ್ಲಿ ಭಾರತ ಸರಕಾರದವರಿಂದ ನಿಯೋಜಿಸಲ್ಪಟ್ಟ ಸಹಕಾರಿ ಯೋಜನಾ ಸಮಿತಿಯ ವರದಿಯು, ನಗರ, ಗ್ರಾಮಾಂತರ ಆರ್ಥರಚನೆಯ ವಿವಿಧ ಶಾಖೆಗಳಲ್ಲಿ ಸಹಕಾರಿ ಪ್ರಯತ್ನಗಳು ತೀವ್ರ ಗತಿಯಿಂದ ಸಾಗುವ ಬಗೆಗೆ ಮಾಡಲ್ಪಟ್ಟ ಅತಿ ಮಹತ್ವದ ಶಿಫಾರಸುಗಳನ್ನೊಳ ಗೊಂಡಿದ್ದು ೧೯೪೭ರಲ್ಲಿ ಪ್ರಕಟವಾಯಿತು

೩. ರೈತರಿಗೆ ಬೆಳೆ ಮತ್ತು ಭೂಸುಧಾರಣೆಗಾಗಿ ಅನುಕ್ರಮವಾಗಿ ೭ ಮತ್ತು ೪ ಬಡ್ಡಿ ದರದಂತೆ ಹಣಕಾಸಿನ ಪೂರೈಕೆಯ ಕಾರ್ಯವನ್ನು ಸಹಕಾರಿ ಹಣಕಾಸಿನ ಸಂಸ್ಥೆಗಳು ಮಾಡಬೇಕೋ ಅಥವಾ ಗಾಡಗೀಳ ಸಮಿತಿಯು ಶಿಫಾರಸು ಮಾಡಿದಂತೆ ಬೇರೊಂದು ಶೇತ್ಕಿ ಪತ್ತಿನ ಸಂಘಟನೆಯು ಮಾಡಬೇಕೋ ಎಂಬ ಸಮಸ್ಯೆಯನ್ನು ವಿಚಾರಿಸುವದಕ್ಕಾಗಿ ಸರ್ ಮಣಿಲಾಲ ನಾನಾವತಿ ಅವರ ಅಧ್ಯಕ್ಷತೆಯಲ್ಲಿ ನೇಮಿಸಲ್ಪಟ್ಟ ಶೇತ್ಕಿ ಪತ್ತಿನ ಸಂಘಟನಾ ಸಮಿತಿಯು ಇದೇ ಅವಧಿಯಲ್ಲಿ ತನ್ನ ವರದಿಯನ್ನು ಸಾದರಪಡಿಸಿತು. ಈ ಸಮಿತಿಯು ಸಾದರಪಡಿಸಿದ ವರದಿಯ ಶಿಫಾರಸುಗಳಮೇಲೆ ಸರಕಾರವು ಆಜ್ಞೆಗಳನ್ನು ಹೊರಡಿಸಿತು

೪ ಗೃಹ ಮತ್ತು ಚಿಕ್ಕಪುಟ್ಟ ಉದ್ದಿಮೆಗಳ ಪುನರ್ನಿವೇಶನಕ್ಕಾಗಿ ವಿಶಾಲವಾದ ಯೋಜನೆಯನ್ನು ಕಾರ್ಯಗತಗೊಳಿಸಲು ಅವ್ಯಾಹತ ಚಟುವಟಿಕೆಗಳು ನಡೆದವು ಸರಕಾರವು ಸಹಕಾರಿ ಖಾತೆಯಲ್ಲಿ ಔದ್ಯೋಗಿಕ ಸಹಕಾರಿ ಸಂಘಗಳ ಮತ್ತು ಗ್ರಾಮಾಂತರ ಉದ್ದಿಮೆ ಗಳ ಜಾಯಿಂಟ ರಜಿಸ್ಟ್ರಾರ ಎಂಬ ಹೊಸ ಜಾಗೆಯನ್ನು ನಿರ್ಮಿಸಿತು. ಗ್ರಾಮಾಂತರ ಮತ್ತು ಚಿಕ್ಕ ಪುಟ್ಟ ಉದ್ದಿಮೆಗಳನ್ನು ಸಹಕಾರಿ ತತ್ವಗಳ ಮೇಲೆ ಬೆಳೆಯಿಸುವ ಹೊಣೆಯನ್ನು ಸಹಕಾರಿ ಖಾತೆಗೆ ಒಪ್ಪಿಸಲಾಯಿತು

೫ ಅಗಸ್ಟ ೧೯೪೭ರಲ್ಲಿ ದೊರೆತ ಸ್ವಾತಂತ್ರ್ಯೋದಯದ ತರುವಾಯ ರಾಜಕೀಯ ಸ್ವಾತಂತ್ರ್ಯವು ಜನರ ಆರ್ಥಿಕ ಸ್ವಾತಂತ್ರ್ಯದ ಪೂರ್ವ ಪೀಠಿಕೆಯಾಯಿತು

೬. ಸಹಕಾರಿ ಪ್ರಜಾಪ್ರಭುತ್ವವು ಭಾರತದ ಮುಖ್ಯ ಗುರಿಯೆಂದು ಸ್ವೀಕೃತವಾದಂದಿನಿಂದ ಸಹಕಾರಿ ಆಂದೋಲನಕ್ಕೆ ಹೊಸ ಸ್ವರೂಪವೇ ಬಂದಂತಾಗಿದೆ ಈ ಧ್ಯೇಯ ಸಾಧನೆಗಾಗಿ, ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ನ್ಯಾಯ ತತ್ವಗಳು ರಾಷ್ಟ್ರೀಯ ಜೀವನದ ಎಲ್ಲ ರಂಗಗಳಿಗೂ ಅನ್ವಯಿಸುವಂತೆ, ಇವನ್ನು ನಾಡಿನ ಘಟನೆಯ ನಿರ್ದೇಶಕ ತತ್ವಗಳಲ್ಲಿ ನೇರಿಸಲಾಗಿದೆ.

೭. ಸಹಕಾರಿ ಆಂದೋಲನದ ಇತಿಹಾಸದಲ್ಲಿ ಮೊದಲ ಬಾರಿಗೆ ಸರಯ್ಯಾ ಸಮಿತಿಯ ವರದಿಯ ಮೇರೆಗೆ, ಆಂದೋಲನದ ವಿವಿಧ ಸ್ವರೂಪದ ಬೆಳವಣಿಗೆಗಾಗಿ ಒಂದು ಯೋಜನೆಯನ್ನು ಸಿದ್ಧಪಡಿಸಲಾಯಿತು ಈ ಯೋಜನೆಗೆ " ಮುಂಬಯಿ ರಾಜ್ಯದ ಸಹಕಾರಿ ಯೋಜನೆ " ಎಂದು ಕರೆಯಲಾಗಿದೆ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಅನೇಕ ಕ್ರಮಗಳನ್ನು ಅನುಸರಿಸಲಾಯಿತು ಗ್ರಾಮಾಂತರ ಪ್ರಜಾಪ್ರಭುತ್ವಕ್ಕೆ ಸಹಕಾರವೇ ಭದ್ರ ತಳಹದಿಯೆಂದು ಬಗೆಯಲಾಗಿದೆ

೮ ಸಂಸ್ಥಾನಗಳ ವಿಲೀನೀಕರಣದಿಂದ ಕೆಲವೊಂದು ವಿಷಯಗಳಲ್ಲಿ ಆಂದೋಲನವು ವೃದ್ಧಿಯಾಯಿತು.

೯ ಮುಂಬಯಿ ರೈತರ ಋಣ ವಿಮೋಚನೆ ಕಾಯದೆಯನ್ನು ರಾಜ್ಯದ ಇತರ ಪ್ರದೇಶಗಳಿಗೆ ಅನ್ವಯಿಸಿದ್ದರಿಂದಲೂ ಮತ್ತು ಸಾಹುಕಾರಿ ಕಾಯದೆಯನ್ನು ಜಾರಿ ಮಾಡಿದ್ದರಿಂದಲೂ ಶೇತ್ಕಿ ಪತ್ತಿನ ಆಂದೋಲನವು ಬೆಳೆಯಲು ಅನುವಾಯಿತು.

ಈ ಅವಧಿಯಲ್ಲಿಯ ಎದ್ದು ಕಾಣುವ ವೈಶಿಷ್ಟ್ಯಗಳು ಕೆಳಗಿನಂತಿವೆ

೧ ಸಹಕಾರದ ಕಕ್ಷೆಯಲ್ಲಿ ೧೯೫೨-೫೩ರ ಸುಮಾರಿಗೆ ಒಟ್ಟು ಹಳ್ಳಿಗಳಲ್ಲಿ ೧೦೦ಕ್ಕೆ ೫೦ರಷ್ಟು ಮತ್ತು ಹಳ್ಳಿಯ ಜನತೆಯಲ್ಲಿ ೧೦೦ಕ್ಕೆ ೩೦ರಷ್ಟು ಬರುವ ಹಾಗೆ ಪತ್ತಿನ ಚಳವಳಿಯ ವಿಕಾಸ.

೨ ಪತ್ತುಳ್ಳ ರೈತರಿಗೆ ಬೆಳೆಯನ್ನು ಬೆಳೆದುಕೊಳ್ಳುವದಕ್ಕಾಗಿ ಒಡ್ಡಿಯ ದರವು ೧೦೦ಕ್ಕೆ ೬-೪-೦ಗೆ ಮಿಕ್ಕದಂತೆ ( ಈಗ ರೂ ೭-೧೩-೦ ) ಸಾಲಕೊಡುವದು

೩ ಗೃಹ ಮತ್ತು ಗ್ರಾಮೋದ್ಯೋಗಗಳ ವಿಕಾಸ ಮತ್ತು ಅಭಿವೃದ್ಧಿ.

೪ ಕೂಪಗಳ ಕೆಲಸಕ್ಕಾಗಿ, ಗುತ್ತಿಗೆದಾರರನ್ನು ಹೊರಹಾಕುವದಕ್ಕಾಗಿ ಮತ್ತು ಆದಿವಾಸಿಗಳ ಕಲ್ಯಾಣಕ್ಕಾಗಿ ಅರಣ್ಯ ಕೂಲಿಕಾರರ ಸಂಘಗಳ ಸ್ಥಾಪನೆ

೫. ಹಿಂದುಳಿದ ವರ್ಗದ ಜನರಿಗಾಗಿ ಮನೆಗಳನ್ನು ಕಟ್ಟುವದು.

೬ ಉತ್ಪಾದನೆಯನ್ನು ಹೆಚ್ಚಿಸುವದಕ್ಕಾಗಿ ಸಹಕಾರಿ ಬೇಸಾಯದ ಸಂಘಗಳ ಸ್ಥಾಪನೆ.

೭ ಯಾತದ ನೀರಾವರಿ ( ಲಿಫ್ಟ್ ಇರಿಗೇಶನ್ ) ಸಂಘಗಳ ಸ್ಥಾಪನೆ

೮ ಪತ್ತಿಗೂ ಪೇಟೆಗೂ ತಳಕು ಹಾಕುವಂತೆ ಸಹಕಾರಿ ಮಾರಾಟ ಪದ್ಧತಿಯನ್ನು ರಚಿಸುವದು ಬೆಳೆಸಾಲಕ್ಕೂ ಮತ್ತು ಒಕ್ಕಲುತನದ ಹುಟ್ಟುವಳಿಯ ಮಾರಾಟಕ್ಕೂ ಸಂಬಂಧ ಬೆಳೆಯಿಸುವ ಉದ್ದೇಶದಿಂದ ಸಹಕಾರಿ ಮಾರಾಟ ಸಂಘಗಳ ಬೆಳವಣಿಗೆಗಾಗಿ ಪ್ರಯತ್ನಗಳನ್ನು ಮಾಡಿತು. ಪ್ರತಿಯೊಂದು ಜಿಲ್ಲೆಗೆ ಖರೀದಿ ಮತ್ತು ವಿಕ್ರಿ ಸಂಸ್ಥೆಗಳಿರುವಂತೆ ಅಥವಾ ಚನ್ನಾಗಿ ಪ್ರಗತಿಹೊಂದಿದ ತಾಲೂಕಗಳ ಬೇಡಿಕೆಗಳನ್ನು ಪೂರೈಸುವ ಒಂದು ಅಥವಾ ಎರಡು ಪ್ರಾದೇಶಿಕ ಸಂಘಟನೆಗಳಿರುವಂತೆ, ಮಾರಾಟ ಪದ್ಧತಿಯ ಬೆಳವಣಿಗೆಗಾಗಿ ಯೋಜನೆಗಳನ್ನು ಸಿದ್ಧಪಡಿಸಲಾಯಿತು. ಈ ಅವಧಿಯಲ್ಲಿ ಮಾರಾಟ ಆಂದೋಲನವು ಬೆಳವಣಿಗೆ ಹೊಂದಿದ ಪ್ರದೇಶಗಳಲ್ಲಿ, ವಿಶೇಷವಾಗಿ ಮಾರಾಟ ಸಂಘ ಮತ್ತು ಖರೀದಿ ವಿಕ್ರೀ ಸಂಘಗಳ ಸಂಯುಕ್ತ ಸಂಸ್ಥೆಗಳ ಸಂಘಟನೆಯು ಪರಿಪೂರ್ಣತೆಗೆ ಸಂದಿತು. ಮತ್ತು ಪ್ರಾಂತಿಕ ಮಾರಾಟ ಸಂಘದ ಬೆಳವಣಿಗೆಯೂ ಆಯಿತು.

೯. ಔದ್ಯೋಗಿಕ ನಗರ ಮತ್ತು ಪಟ್ಟಣಗಳಲ್ಲಿಯ ಜನರಿಗೆ ವಸತಿ ಸೌಕರ್ಯವನ್ನು ಒದಗಿಸುವದಕ್ಕಾಗಿ ಮನೆಕಟ್ಟುವ ಸಂಘಗಳ ಸ್ಥಾಪನೆ.

೧೦ ಗ್ರಾಮಾಂತರ ಪ್ರದೇಶಗಳಲ್ಲಿ ಸಂಘಗಳ ಮುಖಾಂತರ ವಿತರಣಾ ಚಟುವಟಿಕೆಗಳನ್ನು ಕೈಕೊಳ್ಳುವದು.

೧೧ ಗ್ರಾಹಕರ ಆಂದೋಲನದ ಬೆಳವಣಿಗೆ.

೧೨ ಉಳಿತಾಯ ಯೋಜನೆಯನ್ನು ಕಾರ್ಯಗತಗೊಳಿಸುವದು

೧೩ ಸಹಕಾರಿ ಶಾಸನ ಸಭೆಯ ( Council ) ಸಂಸ್ಥಾಪನೆ

೧೪. ಸಹಕಾರಿ ಕಾಲೇಜ, ಪ್ರಾದೇಶಿಕ ಶಾಲೆ ಮತ್ತು ಪ್ರಾದೇಶಿಕ ಬೋರ್ಡು ಗಳ ಸ್ಥಾಪನೆಯಿಂದ ಪ್ರಾಂತಿಕ ಸಹಕಾರಿ ಸಂಸ್ಥೆಯ ಚಟುವಟಿಕೆ ಗಳ ವಿಕಾಸ.

೧೫ ಪಾಕಿಸ್ತಾನದಿಂದ ಬಂದ ನಿರಾಶ್ರಿತರ ಪುನರ್ನಿವೇಶನ

೧೬ ಸರ್ವೋದಯ ಯೋಜನೆಯನ್ನು ಕಾರ್ಯಗತಗೊಳಿಸುವದು

೧೭ ಮನೋರಂಜನೆಯ ಕೇಂದ್ರಗಳನ್ನು ಸ್ಥಾಪಿಸಿ ಮದ್ಯಪಾನ ಪ್ರತಿ ಬಂಧ ವಿಷಯದಲ್ಲಿ ಸರಕಾರಕ್ಕೆ ನೆರವಾಗುವದು

ಹೀಗೆ ಈ ಅವಧಿಯ ಸಹಕಾರಿ ಆಂದೋಲನದ ಪ್ರಜ್ವಲಿಸುವ ಅಂಶಗಳೆಂದರೆ -- (೧) ಪತ್ತುಳ್ಳ ರೈತರಿಗೆ ಶೇತ್ಕಿ ಉದ್ದೇಶಗಳಿಗಾಗಿ ಸೋವಿ ಬಡ್ಡಿದರದಲ್ಲಿ ಹಣ ಪೂರೈಸುವ ಸಮೀಕೃತ ಗ್ರಾಮಾಂತರ ಪತ್ತಿನ ರಚನೆ. (೨) ಸಹಕಾರಿ ಮಾರಾಟ ಪದ್ಧತಿಯ ಬೆಳವಣಿಗೆ (೩) ಆಹಾರ ಸಮಸ್ಯೆಯ ನಿವಾರಣೆಗಾಗಿ ಹೆಚ್ಚು ಹೆಚ್ಚು ಸಹಕಾರಿ ಸಂಘಟನೆಗಳ ಉಪಯೋಗ. (೪) ಒಕ್ಕಲುತನದ ಉತ್ಪಾದನೆ ಹೆಚ್ಚಿಸುವದಕ್ಕಾಗಿ ಬೇಸಾಯ ಮತ್ತು ನೀರಾವರಿ ಸಂಘಗಳ ಸಂಘಟನೆ (೫) ಗೃಹ ಮತ್ತು ಗ್ರಾಮೋದ್ಯೋಗಗಳ ಪ್ರಗತಿಗಾಗಿ ಔದ್ಯೋಗಿಕ ಸಂಘಗಳ ಸ್ಥಾಪನೆ (೬) ವಿತರಣಾ ವ್ಯವಹಾರದಲ್ಲಿ ಸಹಕಾರಿ ಪದ್ಧತಿಗಳ ಉಪಯೋಗದ ಹೆಚ್ಚಳ (೭) ಪಟ್ಟಣಗಳಲ್ಲಿಯ ವ್ಯಾಪಾರೀ ಜನರಿಗೆ ಬ್ಯಾಂಕಿನ ಸೌಕರ್ಯವನ್ನು ಒದಗಿಸುವಿಕೆ

ಈ ಅವಧಿಯಲ್ಲಿ ಸಹಕಾರಿ ಶಾಸನಗಳ ತಿದ್ದುಪಡೆಯೂ ಆಯಿತು ಸಹಕಾರಿ ಆಂದೋಲನವು ಉತ್ತಮ ರೀತಿಯಲ್ಲಿ ಬೆಳವಣಿಗೆ ಹೊಂದುವ ದೃಷ್ಟಿಯಿಂದ ಸಹಕಾರಿ ಸಂಘಗಳ ಕಾಯದೆಯಲ್ಲಿ ಯೋಗ್ಯ ಬದಲಾವಣೆಯಾಗಬೇಕೆಂದು ಯೋಜನಾ ಸಮಿತಿಯು ಅಭಿಪ್ರಾಯ ಪಟ್ಟಿತು ಅಧಿಕಾರೇತರ ಜನರು ಸಹಿತ ಕಾಯದೆಯ ಕೆಲವೊಂದು ಕಲಮುಗಳ ತಿದ್ದುಪಡೆಯಾಗಬೇಕೆಂದು ಹಲವಾರು ಸೂಚನೆಗಳನ್ನು ಮಾಡಿದರು. ಯೋಜನಾ ಸಮಿತಿಯ ಶಿಫಾರಸುಗಳನ್ನು ಮತ್ತು ಅಧಿಕಾರೇತರರ ಸೂಚನೆಗಳನ್ನು ಪೂರ್ತಿಯಾಗಿ ಗಮನಿಸಲಾಯಿತು ಆ ಮೇರೆಗೆ ೧೯೪೭-೪೮ ರಲ್ಲಿ ಕಾಯದೆಯಲ್ಲಿ ಸವಿಸ್ತರವಾಗಿ ತಿದ್ದುಪಡಿ ಮಾಡುವ ಕಾರ್ಯವನ್ನು ಸರಕಾರವು ಕೈಕೊಂಡಿತು ಈ ತಿದ್ದುಪಡೆ ಹೊಂದಿದ ಕಾಯದೆಯು ೧-೪-೧೯೪೮ ರಿಂದ ಜಾರಿಯಲ್ಲಿ ಬಂದಿತು ಹೊಸ ಕಾಯದೆಯ ಗಮನಾರ್ಹವಾದ ವೈಶಿಷ್ಟ್ಯಗಳನ್ನು ಕೆಳಗೆ ಕೊಡಲಾಗಿದೆ.

(೧) ಪ್ರಾಥಮಿಕ ಸಂಘಗಳ ಸಂಯುಕ್ತ ಸಂಸ್ಥೆಗಳ ಮುಖಾಂತರ ಆಂದೋಲನವನ್ನು ಹೆಚ್ಚೆಚ್ಚಾಗಿ ಪ್ರಜಾಪ್ರಭುತ್ವ ರೀತಿಯಲ್ಲಿ ನಿಯಂತ್ರಿಸುವದು (೨) ಶೇತ್ಕಿ ಪತ್ತಿನ ಸಂಘಗಳಲ್ಲಿ ಅನಿಯಮಿತ ಹೊಣೆಯನ್ನು ಐಚ್ಛಿಕವನ್ನಾಗಿ ಮಾಡುವದು (೩) ಒಂದು ಸಂಘವನ್ನು ಅವಶ್ಯವಿದ್ದಲ್ಲಿ ಎರಡು ಅಥವಾ ಹೆಚ್ಚಿನ ಘಟಕಗಳಲ್ಲಿ ಪರಿವರ್ತಿಸುವದು (೪) ಮುಂಬಯಿ ಸಹಕಾರಿ ಸಂಘಗಳ ಕಾಯದೆಯ XI ಭಾಗದಲ್ಲಿ ನಮೂದಿಸಲಾಗಿರುವಂತೆ ಬೇಸಾಯುದ ಸಂಘಗಳಿಗೆ ಒತ್ತಾಯದ ತತ್ವವನ್ನು ಅನುಸರಿಸುವದು (೫) ಸಹಕಾರಿ ತಂಟೆಗಳ ವರದಿಗಳ ಪುನರ್ವಿಮರ್ಶೆ ಮತ್ತು ಅಪೀಲುಗಳ ವಿಚಾರಣೆಗಾಗಿ ಸಹಕಾರಿ ನ್ಯಾಯಾಲಯ ವನ್ನು ಸ್ಥಾಪಿಸುವದು (೬) ಮುಂಬಯಿ ಟೆನನ್ಸಿ ಮತ್ತು ಒಕ್ಕಲುತನದ ಭೂ ಕಾಯದೆಯ ಮೇರೆಗೆ ಸಹಕಾರಿ ಬೇಸಾಯದ ಸಂಘಗಳ ಸಂಸ್ಥಾಪನೆಗೆ ವಿಶೇಷ ಸವಲತ್ತುಗಳನ್ನು ಒದಗಿಸುವದು

ಸಂಚಿತ ಶೇರು ಭಾಂಡವಲು ಮತ್ತು ರಿಝರ್ವ ಫಂಡಿನಿಂದ, ಕೂಡಿಬಿದ್ದ ಹಾನಿ ಯನ್ನು ವಜಾ ಮಾಡಿ ಉಳಿಯಬಹುದಾದ ರಕಮಿನ ಎಂಟು ಪಟ್ಟಕ್ಕೆ ಮಿಕ್ಕುವ ಸಾಲವನ್ನು ರಜಿಸ್ಟ್ರಾರರ ಪೂರ್ವ ಸಮ್ಮತಿಯಿಂದ ಪಡೆದುಕೊಳ್ಳಲು ಅನುಕೂಲ ವಾಗುವಂತೆ ೧೯೨೫ರ ಸಹಕಾರಿ ಸಂಘಗಳ ಕಾಯದೆಯ ೮ನೆಯ ನಿಯಮ ವನ್ನು ( ರೂಲ ) ತಿದ್ದುಪಡೆ ಮಾಡಲಾಯಿತು

೧೯೪೮–೪೯ ಮತ್ತು ೧೯೪೯–೫೦ರಲ್ಲಿ ಕೆಳಗಿನ ನಿಯಮ ಮತ್ತು ಕಲಮು ಗಳಲ್ಲಿ ತಿದ್ದುಪಡೆ ಮಾಡಲಾಯಿತು

ಕಲಮುಗಳು (ಸೆಕ್ಸೆನ್ಸ್) ೩, ೨೪AA ೪೮A ೪೧ ೫೬ ೬೪B. ೬೪F ೬೪G ೧೫A, ೨೬ ೫೪A, ೫೫, ೫೬, ೬೪ (೧) (A), ೫೯, ೬೩A ೬೪R ನಿಯಮಗಳು ( ರೂಲ್ಸ ) ೮, ೨೬A, ೨೯, ೩೧, ೪೫A, ೪೭A, ೨೪, ೬ (B), ೩೯, ೫೧

ಸಹಕಾರಿ ಸಂಘಗಳಿಂದ ಸಾಲ ಪಡೆದ ಸದಸ್ಯನಿಂದ ನಿವೇದನೆಯನ್ನು ತೆಗೆದು ಕೊಳ್ಳುವದಕ್ಕೆ ಮತ್ತು ಅವನ ಮಾಲ್ಕಿಯ ಭೂಮಿಯ ಮೇಲೆ ಅಧಿಕಾರ ಪಡೆಯಲು ಕಲಮು ೨೪AA ದರಲ್ಲಿ ಅವಕಾಶ ಕಲ್ಪಿಸಿಕೊಟ್ಟದೆ.

ಒಂದು ಸಂಘವು ಮುಳುಗಿ ಹೋದರೆ, ಅದರ ಸಾಲಗಳು ಮುಟ್ಟುವ ವರೆಗೆ ಸಂಘವು ಮುಳುಗಿ ಹೋದ ದಿನಾಂಕಕ್ಕೆ ಇದ್ದ ಹಿಂದಿನ ಸದಸ್ಯರೆಲ್ಲರ ಹೊಣೆಯು ಮುಂದುವರೆಯುವಂತೆ ಮತ್ತು ಸತ್ತ ಸದಸ್ಯರ ಆಸ್ತಿಯು ಹೊಣೆಯಾಗುವಂತೆ ಹೊಸ ಕಲಮು ೪೮A ದರಲ್ಲಿ ಹೇಳಲಾಗಿದೆ

೫೦A ಕಲಮಿನ ಮೇರೆಗೆ, ಸಂಘವು ಅಸ್ತಿತ್ವದಲ್ಲಿದ್ದಾಗ ಸಂಸ್ಥಾಪಕರಾಗಲೀ ಅಧಿಕಾರಿ ವರ್ಗದವರಾಗಲೀ ಹಣವನ್ನು ಬಳಸಿಕೊಂಡರೆ, ದುರುಪಯೋಗ ಅಥವಾ ದುಂದುಗಾರಿಕೆ ಮಾಡಿದರೆ, ಅವರಿಂದ ನಷ್ಟವಾದ ಹಣವನ್ನು ವಸೂಲ ಮಾಡಲು ರಜಿಸ್ಟ್ರಾರರಿಗೆ ಅಧಿಕಾರವಿದೆ

ಹೀಗೆ ಈ ಅವಧಿಯಲ್ಲಿ ಕೈಕೊಂಡಿಸಿದ ಅಭಿವೃದ್ಧಿ ಯೋಜನೆಗಳಲ್ಲಿ ಅಭೂತ ಪೂರ್ವ ಪ್ರಗತಿಯನ್ನು ಸಾಧಿಸಲಾಯಿತು

(೧) ಗ್ರಾಮಾಂತರ ಪತ್ತಿನ ಬೆಳವಣಿಗೆ. (೨) ಮಾರ್ಕೆಟುಗಳ ನಿಯಮಾವಳಿ ಮತ್ತು ಸಹಕಾರಿ ಮಾರಾಟದ ಬೆಳವಣಿಗೆ (೩) ಸಹಕಾರಿ ಬೇಸಾಯದ ಬೆಳವಣಿಗೆ (೪) ಗ್ರಾಮೋದ್ಯೋಗ ಗೃಹೋದ್ಯೋಗಗಳ ಪುನರ್ನಿವೇಶನ ಮತ್ತು ಬೆಳವಣಿಗೆ (೫) ಸಹಕಾರಿ ವಸತಿ ಸೌಕರ್ಯ (೬) ಯಾತದ ನೀರಾವರಿ ಯೋಜನೆಗಳನ್ನು ಕಾರ್ಯಗತ ಮಾಡುವದು (೭) ನಿರಾಶ್ರಿತ ಜನರ ಪುನರ್ನಿವೇಶನ ಮತ್ತು (೮) ಸಹಕಾರದ ತತ್ವ ಮತ್ತು ಕಾರ್ಯಾಚರಣೆಗಳಲ್ಲಿ ಶಿಕ್ಷಣ ಹಾಗೂ ತರಬೇತಿ ಸೌಕರ್ಯಗಳು ೧೯೪೭–೪೮ರಲ್ಲಿ ಸರಕಾರವು ವಿಶೇಷತಃ ಹಿಂದುಳಿದ ವರ್ಗದ ಮತ್ತು ಪ್ರದೇಶಗಳ ಜನರ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ವಿಷಯಗಳಲ್ಲಿ ಸರ್ವಾಂಗೀಣ ಪ್ರಗತಿಗಾಗಿ ಸರ್ವೋದಯ ಯೋಜನೆಗಳನ್ನು ಜಾರಿ ಮಾಡಿತು ಈ ಯೋಜನೆಗಳನ್ನು ಕಾರ್ಯಗತಗೊಳಿಸುವದಕ್ಕಾಗಿ ಸಹಕಾರಿ ತತ್ವಗಳನ್ನು ಹೆಚ್ಚಾಗಿ ಅಳವಡಿಸಿಕೊಳ್ಳಲಾಯಿತು ಅನೇಕ ಯೋಜನೆಗಳನ್ನು ಸುಗಮವಾಗಿ ಸಾಗಿಸಬೇಕೆಂಬ ದೃಷ್ಟಿಯಿಂದ ಮುಂಬಯಿ ಸಹಕಾರಿ ಸಂಘಗಳ ಕಾಯಿದೆಯ ಕಲಮು ಮತ್ತು ನಿಯಮಗಳಲ್ಲಿ ಯೋಗ್ಯ ತಿದ್ದುಪಡಿಯನ್ನು ಮಾಡಿಕೊಳ್ಳಲಾಯಿತು

## (೨) ೩೦-೬-೧೯೫೧ಕ್ಕೆ ಮುಂಬಯಿ ರಾಜ್ಯದಲ್ಲಿಯ ಆಂದೋಲನದ ಪ್ರಗತಿ

(ಅ) **ಸಾಮಾನ್ಯ ಪ್ರಗತಿ:**—ಈ ರಾಜ್ಯದಲ್ಲಿ ೧೬,೧೧೫ ಸಂಘಗಳು ಮತ್ತು ೨೩,೪೪,೩೫೦ ಸದಸ್ಯರು ಇದ್ದರು ಆಂದೋಲನದ ಒಟ್ಟು ಸ್ವಂತ ಭಾಂಡವಲು ಅಥವಾ ಸಾಧನ ಸಂಪತ್ತಿಯು ೨,೧೯೭ ಲಕ್ಷ ರೂ ಗಳಷ್ಟು ಇದ್ದಿತು. ೮,೬೯೭ ಲಕ್ಷ ರೂ. ಗಳಷ್ಟು ದುಡಿಯುವ ಭಾಂಡವಲು ಇದ್ದಿತು ದುಡಿಯುವ ಭಾಂಡವಲಿಗೆ ಸ್ವಂತ ಭಾಂಡವಲಿನ ಪ್ರಮಾಣವು ೨೬.೪% ರಷ್ಟಿದ್ದಿತು ೧೯೫೧ನೆಯ ಜನಗಣತಿಯ ಮೇರೆಗೆ ಎಲ್ಲ ತರದ ಸಹಕಾರಿ ಸಂಘಗಳು ೧೦೦ಕ್ಕೆ ೩೨ ೪ ರಷ್ಟು ಜನತೆಯನ್ನು ಆವರಿಸಿಕೊಂಡಿದ್ದವು ಒಟ್ಟು ಜನಸಂಖ್ಯೆಯಲ್ಲಿ ದುಡಿಯುವ ಭಾಂಡವಲಿನ ಸರಾಸರಿಯು ಪ್ರತಿಯೊಬ್ಬ ಮನುಷ್ಯನಿಗೆ ೨೩ ರೂಪಾಯಿ ಆಗುತ್ತಿದ್ದಿತು.

೩೦-೬-೧೯೫೧ಕ್ಕೆ ಇದ್ದ ಸಹಕಾರಿ ಆಂದೋಲನದ ಸಾಮಾನ್ಯ ಪ್ರಗತಿಯ ಅಂಕೆ-ಸಂಖ್ಯೆಗಳನ್ನು ಕೆಳಗೆ ಕೊಡಲಾಗಿದೆ

| ಅ ನಂ. | ಸಂಘಗಳ ಪ್ರಕಾರ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ಶೇರು ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|---|
| ೧ | ೨ | ೩ | ೪ | ೫ | ೬ | ೭ |
| | | | | ರೂ. | ರೂ. | ರೂ |
| ೧ | ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕು, ಮಧ್ಯವರ್ತಿ ಬ್ಯಾಂಕು ಮತ್ತು ಬ್ಯಾಂಕಿಂಗ್ ಯೂನಿಯನ್ | ೩೯ | ೫೨೭೧೩ | ೧,೩೮,೯೫,೮೬೦ | ೧,೨೦ ೧೬,೯೯೦ | ೨೪,೭೧,೭೪,೫೫೩ |
| ೨ | ಮುಂಬಯಿ ಪ್ರಾಂತಿಕ ಸಹಕಾರಿ ಭೂ-ಒತ್ತೆ ಬ್ಯಾಂಕು | ೧ | ೭೬೪ | ೬,೨೭,೭೭೦ | ೨,೩೬,೦೭೫ | ೮೭,೬೮,೩೦೫ |
| ೩ | ಪ್ರಾಂತಿಕ ಮತ್ತು ಮಧ್ಯವರ್ತಿ ಬಿನ್ ಪತ್ತಿನ ಸಂಘಗಳು | ೬೯ | ೩೮೧೪೨ | ೨೬,೬೯,೪೫೨ | ೪೪,೩೭,೬೬೧ | ೩,೨೦,೭೩,೯೪೭ |
| ೪. | ಪ್ರಾಥಮಿಕ ಭೂ-ಒತ್ತೆ ಬ್ಯಾಂಕುಗಳು | ೧೯ | ೨೦೦೦೯ | ೭,೬೭,೧೨೮ | ೩,೩೮,೪೧೧ | ೬೫,೮೧,೯೫೬ |
| ೫ | ಶೇತ್ಕಿ ಪತ್ತಿನ ಸಂಘಗಳು. | ೯೭೦೨ | ೭೨೭೨೭೬ | ೨,೨೯,೮೫,೭೩೭ | ೨,೦೯,೫೪,೮೭೮ | ೧೦,೭೩,೫೧,೩೭೦ |
| ೬ | ಶೇತ್ಕಿ ಬಿನ್ ಪತ್ತಿನ ಸಂಘಗಳು. | ೧೩೩೪ | ೨೯೭೬೭೨ | ೯೧,೮೦,೯೫೩ | ೧,೧೦,೩೧,೦೪೮ | ೪,೮೧,೬೯,೬೬೬ |

| | | | | | | |
|---|---|---|---|---|---|---|
| ೭ | ಬಿನ್ ಶೇತ್ಕಿ ಪತ್ತಿನ ಸಂಘಗಳು | ೧೫೩೯ | ೭೭೩೩೪೫ | ೫,೬೦,೧೯,೨೭೬ | ೨,೮೮ ೦೭,೨೪೯ | ೨೪,೯೮,೮೧,೪೯೦ |
| ೮ | ಬಿನ್ ಶೇತ್ಕಿ ಬಿನ್ ಪತ್ತಿನ ಸಂಘಗಳು | ೩೧೮೧ | ೬೯೦೧೭ | ೩,೦೫,೬೬ ೭೨೪<br>೨೪,೫೦೧ | ೧,೧೮,೨೫,೦೩೯<br>೧,೧೭,೫೫೮ | ೧೧,೫೬,೯೫,೪೬೯<br>೫,೫೨.೫೧೨ |
| ೯ | ಮುಂಬಯಿ ಪ್ರಾಂತಿಕ ಸಹಕಾರಿ ಇನ್‌ಸ್ಟಿಟ್ಯೂಟ | ೧ | ೧೦೬೭ | — | — | — |
| ೧೦. | ಸುಪರವಾಜಿಂಗ್ ಯೂನಿಯನ್ ಮತ್ತು ಫೆಡರೇಶನ್ನುಗಳು | ೨೩೧ | ೮೧೦೭ | — | — | — |
| ೧೧ | ಜೀವ ವಿಮಾ ಸಂಘಗಳು | ೫ | ೩೪೯೫೭ | — | ೯,೧೫,೭೫೪ | ೧,೩೦,೧೭,೮೮೨ |
| ೧೨ | ಅಖಿಲ ಭಾರತ ಬೆಂಕಿ ಮತ್ತು ಸಾಮಾನ್ಯ ವಿಮಾ ಸಂಘ | ೧ | ೧೪೨ | ೩,೧೬,೧೦೦ | — | ೩,೧೬,೧೦೦ |
| ೧೩ | ಮೋಟಾರ ವಿಮಾ ಸಂಘ | ೧ | ೩೯ | ೩,೬೮೦ | ೨೩,೮೩೨ | ೧,೨೫,೫೩೪ |
| | ೧೯೫೦–೫೧ಕ್ಕೆ ಒಟ್ಟು | ೧೬೧೧೫ | ೨೩೪೪೩೫೦ | ೧೩,೭೦,೫೬,೧೭೭ | ೮,೨೭,೦೪,೪೮೭ | ೮೨,೯೭,೦೮,೭೮೪ |

ಈ ರಾಜ್ಯಕ್ಕ ಅಖಿಲ ಭಾರತ ಸಹಕಾರಿ ಯೋಜನಾ ಸಮಿತಿಯು ನಿರ್ದಿಷ್ಟ ಪಡಿಸಿದ ಗುರಿಯನ್ನು ಆಂದೋಲನವು ಬಹುತರವಾಗಿ ಗ್ರಾಮಾಂತರ ಪ್ರದೇಶ ಗಳಲ್ಲಿಯೇ ಸಾಧಿಸಿತು ಇಂದಿಗೂ ಆವರಿಸಿದ ಹಳ್ಳಿಗಳ ಸಂಖ್ಯೆ, ಮತ್ತು ಜನ ಸಂಖ್ಯೆಯ ಪ್ರಮಾಣ ಇವುಗಳ ದೃಷ್ಟಿಯಲ್ಲಿ ಒಕ್ಕಲುತನದ ಸಂಘಗಳೇ ಪ್ರಾಧಾನ್ಯ ವಾಗಿವೆ ರೈತನ ಮುಖ್ಯ ಬೇಡಿಕೆಯು, ಹಣಕಾಸು ಇರುವದರಿಂದಲೂ ಮತ್ತು ಒಕ್ಕಲುತನದ ಚಟುವಟಿಕೆಗಳು ಸುಗಮವಾಗಿ ಸಾಗುವ ದೃಷ್ಟಿಯಿಂದ ವೇಳೆಗೆ ಸರಿಯಾಗಿ ಹಣ ಪೂರೈಸುವದು ಮಹತ್ವದ್ದಾಗಿರುವದರಿಂದಲೂ ಒಕ್ಕಲುತನದ ಸಂಘಗಳಲ್ಲಿ ಪತ್ತಿನ ಸಂಘಗಳೇ ಹೆಚ್ಚಾಗಿವೆ ಒಟ್ಟು ೧೬,೧೧೫ ಸಂಘಗಳಲ್ಲಿ ೯೭೦೨ ಹಳ್ಳಿಯ ಪತ್ತಿನ ಸಂಘಗಳೇ ಇವೆ ವಿವಿಧೋದ್ದೇಶ ಸಂಘಗಳನ್ನೊಳಗೊಂಡ ಒಕ್ಕಲು ತನದ ಪತ್ತಿನ ಸಂಘಗಳು ರೈತರಿಗೆ, ಬೆಳೆ ಬೆಳೆದುಕೊಳ್ಳುವದಕ್ಕೆ, ಮತ್ತಿತರ ಶೇತ್ಕೀ ಕಾರ್ಯಗಳಿಗಾಗಿ,೭೮೯ ಲಕ್ಷ ರೂಪಾಯಿಗಳ ಸಾಲವನ್ನು ಕೊಟ್ಟವು. ಒಕ್ಕಲುತನದ ಉತ್ಪಾದನೆಯ ಕ್ಷೇತ್ರದಲ್ಲಿ ಸಹಕಾರಿ ಬೇಸಾಯದ ಮತ್ತು ಯಾತದ ನೀರಾವರಿ ( Lift irrigation ) ಸಂಘಗಳು ಹೆಚ್ಚು ಉಪಯುಕ್ತ ಕಾರ್ಯಗಳನ್ನು ಮಾಡಿದವು ಸಹಕಾರಿ ಸಂಘಗಳು ನಿಯಂತ್ರಿತ ಸರಕುಗಳ ವಿತರಣಾ ಕಾರ್ಯ ವನ್ನು ಮುಂದುವರಿಸಿದವು ಸುರತ, ನಾಸಿಕ, ಪಂಚಮಹಾಲ, ಪಶ್ಚಿಮ ಖಾನದೇಶ, ಠಾಣಾ ಮತ್ತು ನಗರ ಜಿಲ್ಹೆಗಳಲ್ಲಿ ಹಿಂದುಳಿದ ವರ್ಗದ ಜನರ ಕಲ್ಯಾಣಕ್ಕಾಗಿ ಸಿದ್ಧಪಡಿಸಲಾಗಿದ್ದ ಅಭಿವೃದ್ಧಿಯೋಜನೆಗಳನ್ನೂ ಕಾರ್ಯಗತ ಗೊಳಿಸಲಾಯಿತು ಇನ್ನುಳಿದ ಪ್ರದೇಶಗಳಲ್ಲಿಯ ಹಿಂದುಳಿದ ವರ್ಗದ ಜನರ ವಸತಿ ಸೌಕರ್ಯದ ಯೋಜನೆಗಳನ್ನೂ ಕಾರ್ಯಗತಗೊಳಿಸಲಾಯಿತು ಪಟ್ಟಣಗಳಲ್ಲಿಯೂ ಸಹಕಾರಿ ಆಂದೋಲನವು ಪಟ್ಟಣದ ಜನರಿಗೆ ಹಣಕಾಸು, ವಸತಿ ಸೌಕರ್ಯ, ಗ್ರಾಹಕರ ವಸ್ತುಗಳನ್ನು ಪೂರೈಸುವ ಕಾರ್ಯವನ್ನು ಮುಂದು ವರಿಸಿತು ಸಹಕಾರಿ ಸಂಘಗಳು ಪ ್ಟಣದ ಜನರಿಗೆ ೨೪.೨೧ ಕೋಟಿ ರೂಪಾಯಿ ಗಳಷ್ಟು ಸಾಲವನ್ನು ಕೊಟ್ಟವು. ಗ್ರಾಹಕರ ಸಂಘಗಳ ಸಂಖ್ಯೆಯೂ ೧೧೫೪ಕ್ಕೆ ಏರಿತು ಈ ಸಂಘಗಳು ಲಾಭಬಡಕತನವನ್ನು ತಡೆಹಿಡಿದವು ಬೆಲೆಗಳ ಏರಿಳಿತಗಳನ್ನು ಸಮತೋಲನಗೊಳಿಸಿದವು. ಮತ್ತು ನಿತ್ಯಾವಶ್ಯಕ ಸರಕುಗಳನ್ನು ಯೋಗ್ಯ ರೀತಿಯಲ್ಲಿ ಹಂಚುವ ಕಾರ್ಯವನ್ನು ಮಾಡಿದವು ವಸತಿ ಸೌಕರ್ಯದ ಕ್ಷೇತ್ರದಲ್ಲಿಯೂ ಆಂದೋಲನವು ಮನೆಗಳ ಕೊರತೆಯನ್ನು ಎಷ್ಟೋ ಮಟ್ಟಿಗೆ ಕಡಿಮೆ ಮಾಡಿತು. ಮನೆ ಕಟ್ಟುವ ಸಹಕಾರಿ ಸಂಘಗಳ ಸಂಖ್ಯೆಯು ೮೫೭ಕ್ಕೆ ಏರಿತು ಒಕ್ಕಲುತನದ ಹುಟ್ಟುವಳಿ, ಮಾರಾಟಕ್ಷೇತ್ರ ದಲ್ಲಿಯೂ ಗೃಹ ಉದ್ದಿಮೆಯ ಬೆಳವಣಿಗೆಯಲ್ಲಿಯೂ ಆಂದೋಲನವು ಹೆಚ್ಚಿನ ಪ್ರಗತಿಯನ್ನು ಸಾಧಿಸಿತು.

(ಬ) ಸಹಕಾರಿ ಪತ್ತು

## (೧) ಮುಂಬಯಿ ರಾಜ್ಯದ ಸಹಕಾರಿ ಬ್ಯಾಂಕು

**ಪೂರ್ವ ಇತಿಹಾಸ.**

೧೯೦೪ರಲ್ಲಿ ಸಹಕಾರಿ ಪತ್ತಿನ ಸಂಘಗಳ ಕಾಯದೆಯು ಪಾಸಾದನಂತರ ಸಹಕಾರಿ ಆಂದೋಲನವು ವಿಶೇಷವಾಗಿ ಒಕ್ಕಲುತನದ ಪತ್ತಿನ ಸಂಘಗಳ ಸ್ವರೂಪದಲ್ಲಿ ಭರದಿಂದ ಬೆಳೆಯುತೊಡಗಿತು ಆದರೆ ಹಣಕಾಸಿನ ಪೂರೈಕೆಯ ಸಂಸ್ಥೆಗಳ ಸಂಘಟನೆಯ ಬಗ್ಗೆ ಈ ಕಾಯದೆಯಲ್ಲಿ ಅವಕಾಶವಿರಲಿಲ್ಲ ಕಾರಣವೆಂದರೆ, ಸ್ಥಾನಿಕ ಇಡುಗಂಟಿನ ಹಣ ಮತ್ತು ಹಂಚಿದ ಭಾಂಡವಲಿನ ಪ್ರಮಾಣದಷ್ಟು ಅಥವಾ ಸದಸ್ಯರ ಇಡುಗಂಟಿನ ಪ್ರಮಾಣದಷ್ಟು ಸರಕಾರದ ಸಾಲದ ಹಣ ಇವು ಪ್ರಾರಂಭವಲ್ಲಿ ಸದಸ್ಯರ ಅವಶ್ಯಕತೆಗಳನ್ನು ಪೂರೈಸಬಹುದೆಂದು ತಿಳಿಯಲಾಗಿತ್ತು ಅಲ್ಲದೆ ಪಟ್ಟಣಗಳ ಸಂಘಗಳು ತಮ್ಮ ಸದಸ್ಯರಿಗೆ ಪೂರೈಸಿ ಉಳಿವ ಹಣವನ್ನು ಹಳ್ಳಿಗಳ ಸಂಘಗಳಿಗೆ ಪೂರೈಸಬಹುದೆಂದೂ ನಿರೀಕ್ಷಿಸಲಾಗಿತ್ತು ಆದರೆ ಸಂಘಗಳು ಹೆಚ್ಚೆಚ್ಚು ಬೆಳೆಯುತೊಡಗಿದುದರಿಂದ ಈ ಎಲ್ಲ ನಿರೀಕ್ಷಣೆಗಳು ಸಾಲದಾದವು ಹಳ್ಳಿಗಳ ಸಂಘಗಳು ತಮ್ಮ ನಿತ್ಯದ ಕಾರ್ಯಕಲಾಪಗಳಿಗೆ ಬೇಕಾಗುವ ಹಣವನ್ನು ಸಹಿತ ದೊರಕಿಸಿಕೊಳ್ಳಲು ಅಸಮರ್ಥವಾಗಿ ಪ್ರಾರಂಭದಲ್ಲಿಯೇ ಸರಕಾರದ ಸಾಲಕ್ಕಾಗಿ ಬಾಯಿ ತೆರೆಯಬೇಕಾಯಿತು ೨೦೦೦ ರೂ ಗಳಿಗೆ ಮಿಕ್ಕದ ಸರಕಾರಿ ಸಾಲದಿಂದ ಸಂಘದ ಸದಸ್ಯರ ಬೇಡಿಕೆಗಳನ್ನು ಪೂರೈಸಲು ಸಾಧ್ಯವಾಗದೇ ಹೋಯಿತು. ಹಳ್ಳಿಗಳ ಸಂಘಗಳ ಹಣಕಾಸಿನ ಪೂರೈಕೆಯ ಸಲುವಾಗಿ ಪಟ್ಟಣಗಳಲ್ಲಿ ಸಹಕಾರಿ ಸಂಘಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ ಸಹಕಾರಿ ಸಂಘಗಳ ರಜಿಸ್ಟ್ರಾರರು ಅಧಿಕಾರೇತರ ಜನರಿಗೆ ಪ್ರೋತ್ಸಾಹಿಸತೊಡಗಿದರು ಆ ಮೇರೆಗೆ ೧೯೦೬ರಲ್ಲಿ ಬಾಂಬೆ ಅರ್ಬನ್ ಕೋ-ಆಪರೇಟಿವ್ ಸೊಸಾಯಿಟಿ ಎಂಬ ಹೆಸರಿನಲ್ಲಿ ಒಂದು ವಿಶೇಷ ನಗರ ಬ್ಯಾಂಕನ್ನು ಸ್ಥಾಪಿಸಲಾಯಿತು ಆದರೆ ಸಹಕಾರಿ ಸಂಘಗಳ ಹಣಕಾಸಿನ ಪೂರೈಕೆಗಾಗಿ ಹೊರಗಿನ ಹಣವನ್ನು ಕೂಡಿಸುವದರ ಸಲುವಾಗಿ ಕೇಂದ್ರ ಸಂಸ್ಥೆಯೊಂದು ಇರದ ಹೊರತು ಈ ಆಂದೋಲನವು ಬೆಳೆಯಲು ಸಾಧ್ಯವಿಲ್ಲವೆಂದು ಭಾವಿಸಲಾಯಿತು ಅಂತೆಯೇ ಹಣಕಾಸಿನ ಪೂರೈಕೆಯ ಸಂಸ್ಥೆಯನ್ನು ಸ್ಥಾಪಿಸುವದು ಅತ್ಯವಶ್ಯವೆಂದು ಅನಿಸಿತು ಹೀಗೆ ದಿವಂಗತ ಸರ್ ವಿಠ್ಠಲದಾಸ ಡಿ ಥ್ಯಾಕರ್ಸೆ ಮತ್ತು ದಿವಂಗತ ಸರ್ ಲಲ್ಲುಭಾಯಿ ಶಾಮಲದಾಸ ಇವರೀರ್ವರು ಮಧ್ಯವರ್ತಿ ಬ್ಯಾಂಕನ್ನು ಸ್ಥಾಪಿಸುವದಕ್ಕೆ ಯೋಜನೆಯೊಂದನ್ನು ಸಿದ್ಧಪಡಿಸಿದರು ಮುಂಬಯಿ ಸರಕಾರದ, ಕೇಂದ್ರ ಸರಕಾರದ ಮತ್ತು ರಾಜ್ಯದ ಸೆಕ್ರೆಟರಿ ಇವರ ನಡುವೆ ಅವ್ಯಾಹತವಾಗಿ ನಡೆದ ಪತ್ರವ್ಯವಹಾರ ಮತ್ತು ಚರ್ಚೆಯ ಪರಿಣಾಮವಾಗಿ ಕೊನೆಗೆ ಸರಕಾರ ಮತ್ತು ಸಂಸ್ಥಾಪಕರ ನಡುವೆ ಒಡಂಬಡಿಕೆಯಾಯಿತು ಆ ಮೇರೆಗೆ ೧೯೦೪ರ ಕಾಯದೆ Xರನ್ವಯ ೧೯೧೧ ಅಕ್ಟೋಬರ ೧೧ಕ್ಕೆ ಸ್ಥಾನಿಕ ಸರಕಾರದ ಗೊತ್ತುವಳಿಯ ತರುವಾಯ ಮುಂಬಯಿ ಮಧ್ಯವರ್ತಿ ಸಹಕಾರಿ ಬ್ಯಾಂಕು ಸ್ಥಾಪಿಸಲ್ಪಟ್ಟಿತು ಆದರೆ ಈ ಬ್ಯಾಂಕು ಕೆಲವೊಂದು ವಿಶಿಷ್ಟ ಪ್ರಸಂಗಗಳನ್ನು ಬಿಟ್ಟು ರಜಿಸ್ಟ್ರಾರರ ಶಿಫಾರಸಿನ ಮೇರೆಗೆ ಮಾತ್ರ ಸಾಲವನ್ನು ಕೊಡಬೇಕೆಂದು ಸಂಸ್ಥೆಯ ಸಂಸ್ಥಾಪಕ

ಕರು ಒಪ್ಪಿಕೊಂಡಿದ್ದರು. ಬ್ಯಾಂಕು ತನ್ನ ಮೇಲಿರುವ ಎಲ್ಲ ಬೇಡಿಕೆಗಳನ್ನು ಪೂರೈಸುವಷ್ಟು ಹಣವನ್ನು ಇಟ್ಟುಕೊಳ್ಳಬೇಕೆಂತಲೂ ಮತ್ತು ಉಳಿದ ಹಣವನ್ನು ಸರಕಾರಿ ಸೆಕ್ಯುರಿಟಿಗಳಲ್ಲಾಗಲೀ ಅಥವಾ ಸರಕಾರದ ಮನ್ನಣೆ ಪಡೆದ ಇತರ ಬ್ಯಾಂಕುಗಳಲ್ಲಾಗಲೀ ತೊಡಗಿಸಬೇಕೆಂಬ ನಿಯಮಕ್ಕೂ ಈ ಹೊಸ ಬ್ಯಾಂಕು ಒಪ್ಪಿಕೊಂಡಿತು. ಈ ಬ್ಯಾಂಕು ೨೦ ಲಕ್ಷ ರೂ. ಗಳಿಗೆ ಮಿಕ್ಕದಂತೆ ತನ್ನ ಸಂಚಿತ ಶೇರ ಭಾಂಡವಲಿನ ಮೂರರಷ್ಟು ಹಣವನ್ನು ನೂರಕ್ಕೆ ನಾಲ್ಕು ಬಡ್ಡೀ ದರದಂತೆ ಡಿಬೆಂಚರುಗಳ ಮುಖಾಂತರ ತನ್ನ ಸಾಮಾನ್ಯ ಸೊತ್ತುಗಳ ಭದ್ರತೆಯ ಮೇಲೆ ಸಂಪಾದಿಸಿಕೊಳ್ಳಬಹುದೆಂದು ಸರಕಾರವು ಬ್ಯಾಂಕಿಗೆ ಅಧಿಕಾರ ಕೊಟ್ಟಿತು. ಮತ್ತು ಡಿಬೆಂಚರಿನ ಸಾಲವನ್ನು ತಿರುಗಿ ಕೊಡುವವರೆಗೆ ಬಡ್ಡೀ ಹಣಕ್ಕೆ ಜವಾಬ್ದಾರ ನಾಗಲು ಸರಕಾರವು ಆಶ್ವಾಸನ ಕೊಟ್ಟಿತು. ಈ ಮೊದಲು ಮುಂಬಯಿ ಅರ್ಬನ್ ಕೋ-ಆಪರೇಟಿವ್ಹ ಸೊಸಾಯಟಿಯಿಂದ ಮತ್ತು ಸರಕಾರದಿಂದ ತಗಾಯಿ ಸಾಲ ಗಳನ್ನು ಪಡೆಯುತ್ತಿದ್ದ ಸಹಕಾರಿ ಸಂಘಗಳಿಗೆ ಹಣ ಪೂರೈಸುವ ಕಾರ್ಯವನ್ನು ತನ್ನಕಡೆಗೆ ತೆಗೆದುಕೊಂಡ ಬ್ಯಾಂಕು ತನ್ನ ಕಾರ್ಯವನ್ನು ಪ್ರಾರಂಭಿಸಿತು. ಈ ಬ್ಯಾಂಕಿನ ಹೆಸರನ್ನು ೧೯೨೩ರಲ್ಲಿ ಬಾಂಬೆ ಪ್ರಾವ್ಹಿನ್ಸಿಯಲ್ ಕೋ-ಆಪರೇಟಿವ್ಹ ಬ್ಯಾಂಕ ಎಂದೂ ಆನಂತರ ೧೯೫೩ರಲ್ಲಿ ಬಾಂಬೆ ಸ್ಟೇಟ ಕೋ-ಆಪರೇಟಿವ್ಹ ಬ್ಯಾಂಕ ಎಂದೂ ಬದಲಾಯಿಸಲಾಯಿತು.

**ಉದ್ದೇಶ ಮತ್ತು ಗುರಿಗಳು.**

ಹಣಕಾಸಿನ ಪೇಟೆಯಿಂದ ಹಣವನ್ನು ಸಂಪಾದಿಸಿ ಆ ಹಣವನ್ನು ಮುಂಬಯಿ ರಾಜ್ಯದಲ್ಲಿ ನೋಂದಾಯಿಸಲ್ಪಟ್ಟ ಸಹಕಾರಿ ಸಂಘಗಳಿಗೆ ಪೂರೈಸುವದೇ ಈ ಬ್ಯಾಂಕಿನ ಮುಖ್ಯ ಉದ್ದೇಶವಾಗಿದೆ. ಸಹಕಾರಿ ಸಂಘಗಳಿಗೆ ಹಣ ಪೂರೈಸುವದ ಲ್ಲದೆ ಆ ಸಂಘಗಳ ಹೆಚ್ಚಿನ ಅಥವಾ ಉಳಿತಾಯದ ಹಣ ಸಂಚಯಕ್ಕೂ, ಆ ಸಂಘಗಳ ಆಂದೋಲನದಲ್ಲಿಯ ಹಣವನ್ನು ಸರಕಾರಿ, ಮತ್ತಿತರ ಸೆಕ್ಯುರಿಟಿ ಗಳಲ್ಲಿ ಮತ್ತು ಮನ್ನಣೆ ಪಡೆದ ಇತರ ಬ್ಯಾಂಕುಗಳಲ್ಲಿ ತೊಡಗಿಸುವ ಕಾರ್ಯ ದಲ್ಲಿಯೂ ಈ ಬ್ಯಾಂಕು ಹೆಚ್ಚು ಸಹಾಯಕಾರಿಯಾಗತೊಡಗಿತು. ಈ ಬ್ಯಾಂಕು ರಾಜ್ಯದಲ್ಲಿಯ ಸಹಕಾರಿ ಆಂದೋಲನದ ಸಮತೋಲಿನ ಕೇಂದ್ರವಾಗಿಯೂ ಮತ್ತು ಆಂದೋಲನವನ್ನು ಮತ್ತು ಹಣಕಾಸಿನ ಪೇಟೆಯನ್ನು ಒಂದುಗೂಡಿಸುವ ಸಾಧನವಾಗಿಯೂ ಪರಿಣಮಿಸಿತು. ಪತ್ತಿನ ಪುನರ್ಘಟಿತ ರಚನೆಯನ್ವಯ ಈ ಬ್ಯಾಂಕು ರಾಜ್ಯದಲ್ಲಿಯ ಇತರ ಮಧ್ಯವರ್ತಿ ಬ್ಯಾಂಕುಗಳ ಮೇಲ್ವಿಚಾರಣೆ ಮತ್ತು ಸಲಹಾ ಕೇಂದ್ರವಾಗಿಯೂ ಕೆಲಸಮಾಡುತ್ತದೆ. ಒಟ್ಟಿನಲ್ಲಿ ಈ ಬ್ಯಾಂಕು ಸಹಕಾರಿ ಆಂದೋಲನದ ಪತ್ತಿನ ಕ್ಷೇತ್ರದ ಮಧ್ಯಬಿಂದುವಾಗಿ ಕಾರ್ಯ ಮಾಡುತ್ತದೆ.

**ಘಟನೆ :—** ಪ್ರಾರಂಭಕ್ಕೆ ನಗರ ಮಧ್ಯವರ್ತಿ ಸಹಕಾರಿ ಬ್ಯಾಂಕೊಂದನ್ನು ಬಿಟ್ಟು, ಬ್ಯಾಂಕಿನ ಸದಸ್ಯರೆಲ್ಲರೂ ವೈಯಕ್ತಿಕ ಜನರೇ ಇದ್ದರು. ಆದರೆ ೧೯೨೫ರ ತರುವಾಯ, ಸಾಲ ಪಡೆದುಕೊಳ್ಳುವ ಸಂಘಗಳೆಲ್ಲವೂ ಬ್ಯಾಂಕಿನ ಸದಸ್ಯರಿರಬೇಕೆಂದು ನಿರ್ಬಂಧಿಸಲಾಗಿದೆ. ಈ ಸಂಘಗಳಿಗೆ 'ಅ' ವರ್ಗದ ಸದಸ್ಯ ರೆಂದೂ ಕರೆಯಲಾಗಿದೆ. 'ಬ' ವರ್ಗದ ಸದಸ್ಯರಿಗೆ ನಿಮಿತ್ ಸದಸ್ಯರೆಂದೂ ಕರೆಯಲಾಗುವದು. ಅಂದರೆ ಇವರಿಗೆ ಸಂಘದ ಚಾಲನೆಯಲ್ಲಿ ಅಥವಾ ಮತದಾನ

ಹಾಗೂ ಲಾಭ ಹಂಚುವದನ್ನು ನಿರ್ಣಯಿಸುವದರಲ್ಲಾಗಲೀ ಯಾವ ಅಧಿಕಾರವೂ ಇರುವದಿಲ್ಲ ಇಂಥ ಸದಸ್ಯರಾಗಲು (೧) ಬ್ಯಾಂಕಿನ ಸದಸ್ಯ-ಸಂಘದ ಸದಸ್ಯನಿರುವ ವ್ಯಕ್ತಿಯು ೨ ರೂ. ಪ್ರವೇಶ ಫೀಯನ್ನು ಕೊಟ್ಟಿರಬೇಕು ಅಥವಾ (೨) ಮುಂಬಯಿ ಒಕ್ಕಲಿಗರ ಸಾಲ ಪರಿಹಾರ ಕಾಯದೆಯನ್ವಯ ವರದಿ ಅಥವಾ ನಿರ್ಣಯಗಳಿಗೆ ಒಳಪಟ್ಟಿರಬೇಕು. ಮತ್ತು (೩) ಸಹಕಾರಿ ಸಂಘಗಳ ಸದಸ್ಯನಲ್ಲದ ಪತ್ತುಳ್ಳ ರೈತನಾಗಿರಬೇಕು ೩೫ ಸದಸ್ಯರುಳ್ಳ ಡಾಯರೆಕ್ಟರ ಬೋರ್ಡು ಈ ಬ್ಯಾಂಕಿನ ಆಡಳಿತೆಯನ್ನು ಸಾಗಿಸಿಕೊಂಡು ಹೋಗುತ್ತದೆ ರೇವ್ಹಿನ್ಯೂ ಖಾತೆಯ ನಂ. ೨೧೪೮/೪೫ ದಿ ೨೫-೬-೧೯೪೭ರ ಸರಕಾರದ ಗೊತ್ತುವಳಿಯ ಮೇರೆಗೆ ಬೋರ್ಡನ್ನು ಸಂಯುಕ್ತ ಪದ್ಧತಿಯ ಮೇಲೆ ಪುನರ್ಘಟಿಸಲಾಗಿದೆ. ಪುನರ್ಘಟಿತ ರಚನೆಯ ಮೇರೆಗೆ ಈ ಬೋರ್ಡಿನಲ್ಲಿ ಪ್ರತಿ ಜಿಲ್ಹಾ ಮಧ್ಯವರ್ತಿ ಸಹಕಾರಿ ಬ್ಯಾಂಕಿನ ಪ್ರತಿನಿಧಿ, ಈ ಬ್ಯಾಂಕು ಜಿಲ್ಹಾ ಮಧ್ಯವರ್ತಿ ಸಹಕಾರಿ ಬ್ಯಾಂಕಿನಂತೆ ಕೆಲಸ ಮಾಡುತ್ತಿರುವ ಏಳು ಜಿಲ್ಹೆಗಳ ಪ್ರಾಥಮಿಕ ಸಂಘಗಳ ಒಬ್ಬ ಪ್ರತಿನಿಧಿ, ಬ್ಯಾಂಕಿಂಗ್ ಯುನಿಯನ್ನುಗಳ ಇಬ್ಬರು ಪ್ರತಿನಿಧಿಗಳು, ಬಾಂಬೆ ಪ್ರಾವ್ಹಿನ್ಸಿಯಲ್ ಕೋ-ಆಪರೇಟಿವ್ಹ ಮಾರ್ಕೆಟಿಂಗ ಸಂಘದ ಒಬ್ಬ ಪ್ರತಿನಿಧಿ, ರಾಜ್ಯದಲ್ಲಿಯ ಅರ್ಬನ್ ಬ್ಯಾಂಕುಗಳ ನಾಲ್ಕು ಪ್ರತಿನಿಧಿಗಳು, ಮತ್ತು ವೈಯಕ್ತಿಕ ಸದಸ್ಯರ ಐದು ಪ್ರತಿನಿಧಿಗಳು ಸಮಾವೇಶವಾಗುತ್ತಾರೆ ಈ ಪ್ರತಿನಿಧಿಗಳನ್ನು ಸಾಮಾನ್ಯ ಸಭೆಯು ಆರಿಸುತ್ತದೆ. ಅಲ್ಲದೆ ರಾಜ್ಯ ಸರಕಾರದಿಂದ ನಿಯಮಿಸಲ್ಪಟ್ಟ ಮೂರು ಜನರು ಈ ಬೋರ್ಡಿನಲ್ಲಿರುತ್ತಾರೆ. ಈ ಮೂವರಲ್ಲಿ ಬೋರ್ಡಿನ ಚೇರಮನ್ನರ ಸಲಹೆಯ ಮೇರೆಗೆ ಸರಕಾರದಿಂದ ನಿಯಮಿಸಲ್ಪಟ್ಟ ಒಬ್ಬ ಬ್ಯಾಂಕಿಂಗ್ ಮತ್ತು ಹಣಕಾಸಿನ ತಜ್ಞನೂ ಇರುತ್ತಾನ. ಬೋರ್ಡಿನಿಂದ ಆರಿಸಲ್ಪಡುವ ಮ್ಯಾನೇಜಿಂಗ್ ಡಾಯರೆಕ್ಟರನು ಎಕ್ಸ ಆಫೀಸಿಯೊ ಡಾಯರೆಕ್ಟರ ಅಂತಾ ಇರುವನು ಆಡಳಿತೆಯ ಮಹತ್ವದ ಮತ್ತು ಬ್ಯಾಂಕಿನ ಧೋರಣೆಯ ನಿರ್ಣಯ ಮೊದಲಾದವುಗಳನ್ನು ಈ ಡಾಯರೆಕ್ಟರರ ಬೋರ್ಡು ಚರ್ಚಿಸುತ್ತದೆ. ಇದಲ್ಲದೆ ಒಂದು ಕಾರ್ಯಕಾರಿ ಮಂಡಲವೂ ಇರುತ್ತದೆ ಇದರಲ್ಲಿ ಚೇರಮನ್, ಮ್ಯಾನೇಜಿಂಗ ಡಾಯರೆಕ್ಟರ ಮತ್ತು ೧೨ ಜನ ಡಾಯರೆಕ್ಟರರು ಇರುತ್ತಾರೆ. ಈ ೧೨ ಜನ ಡಾಯರೆಕ್ಟರರಲ್ಲಿ ಮೂವರು ಮಧ್ಯವರ್ತಿ ಸಹಕಾರಿ ಬ್ಯಾಂಕುಗಳಿಂದ ನಿಯಮಿಸಲ್ಪಟ್ಟವರೂ ಮತ್ತು ಸರಕಾರದಿಂದ ನಿಯಮಿಸಲ್ಪಟ್ಟ ಒಬ್ಬನೂ ಇರುತ್ತಾರೆ ಈ ಕಾರ್ಯಕಾರಿ ಮಂಡಲವು ಬ್ಯಾಂಕಿನ ನಿತ್ಯದ ಆಡಳಿತೆಯನ್ನು ಸಾಗಿಸಿಕೊಂಡು ಹೋಗುತ್ತದೆ ಮತ್ತು ಪ್ರತಿ ತಿಂಗಳೂ ಇದರ ಸಭೆ ಸೇರುತ್ತದೆ ಕಾರ್ಯಕಾರಿ ಮಂಡಲದ ಒಂದು ಉಪಸಮಿತಿಯೂ ಇರುತ್ತದೆ. ಇದರಲ್ಲಿ ಮ್ಯಾನೇಜಿಂಗ್ ಡಾಯರೆಕ್ಟರ, ಮತ್ತಿತರ ಮೂರು ಜನ ಡಾಯರೆಕ್ಟರರು ಇರುತ್ತಾರೆ ಈ ಉಪಸಮಿತಿಯನ್ನು ಕಾರ್ಯಕಾರಿ ಮಂಡಲವು ಪ್ರತಿ ಮೂರು ತಿಂಗಳಿಗೆ ನಿಯಮಿಸುತ್ತದೆ ಈ ಉಪಸಮಿತಿಯು ಪ್ರತಿ ವಾರವೂ ಕೂಡುತ್ತದೆ ಈ ಉಪಸಮಿತಿಗೆ ಕೆಲವೊಂದು ಅಧಿಕಾರಗಳನ್ನು ಕೊಡಲಾಗಿದೆ ಇವುಗಳಲ್ಲದೆ ಮತ್ತೆರಡು ವಿಶೇಷ ಉಪಸಮಿತಿಗಳಿದ್ದು, ಒಂದು ಶೇತ್ಕಿ ಪತ್ತಿನ ವೈಯಕ್ತಿಕ ಅರ್ಜಿಗಳನ್ನೂ ಮತ್ತೊಂದು ಕಾಯದೆಯ ವಿಷಯಗಳನ್ನೂ ನೋಡಿಕೊಳ್ಳುತ್ತವೆ.

**ಬ್ಯಾಂಕಿನ ಹಣಕಾಸಿನ ಪರಿಸ್ಥಿತಿ:**—ಕಳೆದ ಐದು ವರ್ಷಗಳಲ್ಲಿ ಬ್ಯಾಂಕು ಸಾಧಿಸಿರುವ ಪ್ರಗತಿಯನ್ನು ಕೆಳಗಿನ ಅಂಕೆ-ಸಂಖ್ಯೆಗಳಿಂದ ಕಂಡುಕೊಳ್ಳಬಹುದು.

| ಕ್ರ. ಸಂ. | ವಿವರ | ೧೯೪೬-೪೭ | ೧೯೪೭-೪೮ | ೧೯೪೮-೪೯ | ೧೯೪೯-೫೦ | ೧೯೫೦-೫೧ |
|---|---|---|---|---|---|---|
| ೧. | ಸದಸ್ಯರ ಸಂಖ್ಯೆ | | | | | |
| | i) ವ್ಯಕ್ತಿಗಳು | ೨,೫೩೮ | ೨,೬೭೪ | ೨,೬೯೪ | ೩,೩೧೪ | ೩,೬೨೩ |
| | ii) ಸಂಘಗಳು | ೨,೯೨೪ | ೩,೨೧೯ | ೩,೬೮೪ | ೪,೧೪೬ | ೪,೮೫೫ |
| | | ೫,೪೬೨ | ೫ ೮೯೩ | ೬,೩೭೮ | ೭,೪೬೦ | ೮,೪೭೮ |
| ೨. | ಸಂಚಿತ ಶೇರ ಭಾಂಡವಲು | ೨೦,೨೪,೬೦೦ | ೨೦,೩೯,೨೦೦ | ೨೦,೬೨,೨೫೦ | ೪೮,೨೬,೨೦೦ | ೪೮,೬೯,೭೫೦ |
| ೩. | ಕಾಯ್ದಿಟ್ಟ ಮತ್ತಿತರ ನಿಧಿಗಳು | ೨೫,೬೫,೨೪೫ | ೨೭ ೨೧,೨೬೧ | ೨೮,೭೮,೧೫೮ | ೩೩,೪೧,೪೭೯ | ೩೭,೧೬,೨೨೦ |
| ೪ | ಡಿಬೆಂಚರ್ಸ | — | — | — | ೬,೫೦,೦೦೦ | ೬,೫೦,೦೦೦ |
| ೫ | ಠೇವುಗಳು | | | | | |
| | (ಅ) ಮುದ್ದತಿ (ಫಿಕ್ಸ್ಡ) ಠೇವು | | | | | |
| | i) ಸಂಘಗಳು | ೧,೦೫,೫೯,೨೪೩ | ೧,೪೧,೭೬,೯೩೨ | ೬೪,೬೦,೩೪೫ | ೯೪,೮೩,೩೭೦ | ೧,೨೨,೫೫,೩೬೬ |
| | ii) ವ್ಯಕ್ತಿಗಳು | ೬೯,೮೦,೩೦೯ | ೮೫,೬೧,೦೧೯ | ೧,೧೫,೨೯,೬೫೪ | ೧,೧೭,೩೭,೦೩೪ | ೮೮,೬೨,೬೦೦ |

| | | | | | | |
|---|---|---|---|---|---|---|
| ೮ | ಮಧ್ಯವರ್ತಿ ಹಣಕಾಸಿನ ಸಂಸ್ಥೆಗಳ ಶೇರ ಭಾಂಡವಲದಲ್ಲಿ ಸರಕಾರದ ಪಾಲು | — | — | — | — | ೩,೦೦,೦೦೦ |
| ೯ | ದುಡಿಯುವ ಭಾಂಡವಲು | ೬,೫೦,೯೯,೨೬೬ | ೮,೪೩,೮೪,೫೪೩ | ೧೦,೦೮,೦೦,೩೨೭ | ೯,೯೪,೧೫,೪೨೦ | ೧೦,೩೮,೩೫,[illegible] |
| ೧೦ | ಕೊಟ್ಟ ಸಾಲ | | | | | |
| | (ಅ) ವ್ಯಕ್ತಿಗಳಿಗೆ | ೨,೯೪,೫೧,೭೫೧ | ೨,೪೨,೭೩,೧೧೦ | ೨,೦೨,೫೯,೨೪೦ | ೧,೪೬,೧೮,೪೪೭ | ೧,೮೬,೮೭,೨೮೯ |
| | (ಬ) ಸಂಘಗಳಿಗೆ | ೭,೭೭,೩೫,೦೨೪ | ೯,೦೮,೨೦,೩೬೧ | ೧೯,೬೮,೯೯,೯೭೨ | ೧೧,೮೮,೩೭,೨೧೪ | ೧೩,೬೪,೦೫,೨೨೦ |
| | | ೧೦,೭೧,೮೬,೭೭೫ | ೧೧,೫೦,೯೩,೪೭೧ | ೨೧,೭೧,೫೯,೨೧೨ | ೧೩,೩೪,೫೪,೬೬೧ | ೧೫,೫೦,೯೧,೫೦೧ |
| ೧೧ | ಬರತಕ್ಕ ಸಾಲ | | | | | |
| | (ಅ) ವ್ಯಕ್ತಿಗಳು | ೬೮,೧೯,೫೬೯ | ೯೮,೨೩,೮೯೪ | ೫೬,೭೦,೫೧೦ | ೭೯,೭೪,೭೪೮ | ೮೪,೬೨,೦೩೩ |
| | (ಬ) ಸಂಘಗಳು | ೧,೫೯,೭೧,೦೨೯ | ೧,೩೭,೮೨,೭೯೮ | ೪,೩೬,೯೫,೮೬೬ | ೨,೮೨,೯೫,೦೩೨ | ೪,೩೮,೧೩,೭೯೭ |
| | | ೨,೨೭,೯೦,೫೯೮ | ೨,೦೬,೦೬,೬೯೨ | ೪,೯೩,೬೬,೩೭೬ | ೩,೫೨,೬೯,೭೮೦ | ೫,೨೨,೪೫,೭೫೦ |
| ೧೨ | ಮುದ್ದತು ಮೀರಿದ ಸಾಲ | ೮,೧೪,೬೦೦ | ೮,೧೮,೯೨೬ | ೧೫,೯೨,೨೨೦ | ೨೪,೪೮,೩೧೬ | ೩೨,೦೯,೧೦೧ |
| ೧೩ | ಆಡಳಿತೆಯ ವೆಚ್ಚ | ೯,೨೫,೭೯೯ | ೧೦,೬೮,೪೦೧ | ೧೨,೪೯,೦೫೭ | ೧೪,೧೩,೧೭೫ | ೧೬,೦೪,೫[illegible] |
| ೧೪ | ಲಾಭ | ೨,೯೮,೪೫೫ | ೩,೮೯,೩೩೭ | ೪,೨೮,೩೨೩ | ೪,೫೫,೫೬೮ | ೫,೪೭,೮೨೨ |

ಬ್ಯಾಂಕು ವರುವರುಷಕ್ಕೂ ಉತ್ತಮ ಪ್ರಗತಿಯನ್ನು ಸಾಧಿಸುತ್ತಲಿದೆ ಎಂದು ಮೇಲಿನ ಅಂಕೆ-ಸಂಖ್ಯೆಗಳಿಂದ ವಿದಿತವಾಗುತ್ತದೆ ಒಟ್ಟು ೪೯ ೬೯ ಲಕ್ಷ ರೂ ಗಳ ಶೇರಭಾಂಡವಲದಲ್ಲಿ ಸರಕಾರದ ಅಂಶವು ೧೬ ಲಕ್ಷ ರೂ ಇರುತ್ತದೆ ಬ್ಯಾಂಕಿನ ಸ್ವಂತ ಭಾಂಡವಲು ೮೫ ೮೫ ಲಕ್ಷ ರೂ ಗಳಿಗೆ ಮುಟ್ಟಿದ್ದು ದುಡಿಯುವ ಭಾಂಡವಲಕ್ಕೆ ಅದರ ಪ್ರಮಾಣವು ನೂರಕ್ಕೆ ೮ ೨ ರಷ್ಟಿದೆ ಬ್ಯಾಂಕಿನ ಠೇವುಗಳು ದಿನೇ ದಿನೇ ವೃದ್ಧಿಯಾಗುತ್ತ ನಡೆದಿವೆ ಅಂದರೆ ೩೦-೬-೧೯೪೭ಕ್ಕೆ ೫ ೯೮ ಕೋಟಿ ರೂ ಗಳಷ್ಟು ಇದ್ದ ಠೇವುಗಳು ೫೦-೫೧ರ ಸಾಲಿನಲ್ಲಿ ೯ ೦೯ ಕೋಟಿ ರೂ ಗಳಿಗೆ ಏರಿವೆ ರಿಝರ್ವ ಬ್ಯಾಂಕ್ ಆಫ್ ಇಂಡಿಯಾ ಕಾಯದೆಯ ೧೭ನೇ ಕಲಮಿನನ್ವಯ ರಿಝರ್ವ ಬ್ಯಾಂಕಿನಿಂದ ೧೩೩ ಲಕ್ಷ ರೂ ಗಳ ಧನಸಹಾಯ ಪಡದಿದ ಮಧ್ಯವರ್ತಿ ಪತ್ತಿನ ಸಂಸ್ಥೆಗಳ ಶೇರಭಾಂಡವಲಕ್ಕೆ ಕೊಡಬೇಕೆಂಬ ಉದ್ದೇಶದಿಂದ ರಾಜ್ಯ ಸರಕಾರವು ೩ ಲಕ್ಷ ರೂ ಗಳನ್ನು ಸಾಲವೆಂದು ಬ್ಯಾಂಕಿಗೆ ಕೊಟ್ಟಿತು ಶೇತ್ಕಿ ಪತ್ತಿನ ಸಂಘಟನಾ ಸಮಿತಿಯ ಶಿಫಾರಸು ಮತ್ತು ಅವುಗಳ ಮೇಲೆ ಹೊರಟ ಸರಕಾರೀ ಆಜ್ಞೆಗಳನ್ವಯ ಈ ಬ್ಯಾಂಕು ತಾ ೧-೧-೧೯೪೯ ರಿಂದ ಸಹಕಾರಿ ಸಂಘಗಳಿಗೆ ಕೊಡುವ ಶೇತ್ಕೀ ಸಾಲದ ಬಡ್ಡಿಯ ದರವನ್ನು, ಸಂಘಗಳಿಗೆ, ತಮ್ಮ ಸದಸ್ಯರಿಗೆ ೬ ೧/೪ ದರದಂತೆ ಸಾಲಕೊಡಲು ಅನುವಾಗುವಂತೆ ಳಕ್ಕೆ ಇಳಿಸಿತು ಶೇತ್ಕಿ ಪತ್ತಿನ ಸಂಘಟನಾ ಸಮಿತಿಯ ( Agricultural Credit organization Committee ) ಶಿಫಾರಸಿನನ್ವಯ ಬ್ಯಾಂಕಿನ ಘಟನೆಯನ್ನು ಪುನರ್ನಿರ್ಮಿಸಲಾಯಿತು ಇದರಿಂದ ರಾಜ್ಯದಲ್ಲಿಯ ಪತ್ತು ಪಡೆಯಲು ಅರ್ಹತೆಯುಳ್ಳ ರೈತರಿಗೆ ಹಣಪೂರೈಸುವದನ್ನು ಸಂಘಟಿಸುವದಕ್ಕೂ ಪತ್ತುಳ್ಳ ರೈತನಿಗೆ ಶೇತ್ಕಿ ಮತ್ತು ಮಾರಾಟಕ್ಕಾಗಿ ಹಣ ಪೂರೈಸುವ **ಸಮೀಕೃತ ರಾಜ್ಯಸಂಸ್ಥೆಯಂತೆ** ವರ್ತಿಸಲಿಕ್ಕೂ. ಮಧ್ಯವರ್ತಿ ಬ್ಯಾಂಕು, ಬ್ಯಾಂಕಿಂಗ್ ಯುನಿಯನ್, ಮತ್ತಿತರ ಸಹಕಾರಿ ಸಂಘಗಳು ಪತ್ತಿನ ಕಾರ್ಯಗಳನ್ನು ಹೆಚ್ಚು ದಕ್ಷತೆ ಮತ್ತು ಕಾರ್ಯಕ್ಷಮ ರೀತಿಯಲ್ಲಿ ಸಾಗಿಸಿಕೊಂಡು ಹೋಗಲು ಅನುಕೂಲವಾಯಿತು

ಬ್ಯಾಂಕು ವ್ಯಕ್ತಿ ಸದಸ್ಯರಿಗಿಂತ ಸಂಘ ಸದಸ್ಯರಿಗೆ ಹೆಚ್ಚು ಸಾಲ ಕೊಟ್ಟಿರುವದೆಂದೂ, ಒಟ್ಟು ಬರತಕ್ಕ ಸಾಲಗಳ ಪ್ರಮಾಣವು ಠೇವುಗಳಿಗೆ ನೂರಕ್ಕ ೫೯ರಷ್ಟು ಮತ್ತು ದುಡಿಯುವ ಭಾಂಡವಲಕ್ಕ ೪೮.೩ ರಷ್ಟಿದ ಎಂದೂ ಮೇಲಿನ ಅಂಕ-ಸಂಖ್ಯೆಗಳಿಂದ ಕಂಡುಬರುತ್ತದ ಕೈಯಲ್ಲಿ ಮತ್ತು ಬ್ಯಾಂಕಿನಲ್ಲಿ ಇರುವ ರೋಖ ಹಣದ ಪ್ರಮಾಣವು ಒಟ್ಟು ಠೇವುಗಳಿಗೆ ನೂರಕ್ಕೆ ೯ ೭ರಷ್ಟು ಮತ್ತು ಸರಕಾರಿ ಮತ್ತು ಇತರ ಮನ್ನಣೆ ಪಡೆದ ಸಕ್ಯೂರಿಟಿಗಳಲ್ಲಿ ತೊಡಗಿಸಿದ ಹಣದ ಪ್ರಮಾಣವು ಒಟ್ಟು ಠೇವುಗಳಿಗೆ ನೂರಕ್ಕೆ ೪೫ ೪ರಷ್ಟಿದೆ. ಹೀಗೆ ರಿಝರ್ವ ಬ್ಯಾಂಕು ಶಿಫಾರಸು ಮಾಡಿದ ಮೇರೆಗೆ ಬ್ಯಾಂಕು ವಿವಿಧ ಪ್ರಮಾಣಗಳನ್ನು ಇಟ್ಟುಕೊಂಡಿದ ಎಂಬುದು ಕಂಡುಬರುತ್ತದೆ ಒಟ್ಟು ಸಾಲಗಳಲ್ಲಿ ಮುದ್ದತು ಮೀರಿದ ಸಾಲಗಳ ಪ್ರಮಾಣವು ಕೇವಲ ನೂರಕ್ಕೆ ೫ ೧ರಷ್ಟು ಮತ್ತು ಆಡಳಿತದ ವೆಚ್ಚದ ಪ್ರಮಾಣವು ದುಡಿಯುವ ಭಾಂಡವಲದ ೧ ೬ ರಷ್ಟಿದೆ

ರಾಜ್ಯದ ೧೫ ಜಿಲ್ಲೆಗಳಲ್ಲಿ ಬ್ಯಾಂಕಿನ ೬೧ ಶಾಖೆಗಳುಇದ್ದು ರಾಜ್ಯದ ಸಹಕಾರಿ ಸಂಘಟನೆಯಲ್ಲಿ ಇದು ಪ್ರಮುಖ ಸ್ಥಾನವನ್ನು ಪಡೆದಿದೆ ಈ ರಾಜ್ಯದಲ್ಲಿಯೇ ಈ ಬ್ಯಾಂಕು ಅತಿ ಹಳೆಯದಾಗಿದ್ದು ನಾಡಿನ ಮುಖ್ಯ ಮತ್ತು ಔದ್ಯೋಗಿಕ ನಗರದಲ್ಲಿ ಸ್ಥಾಪಿಸಲ್ಪಟ್ಟಿದೆ ಈ ಎಲ್ಲ ದೃಷ್ಟಿಯಿಂದ, ವ್ಯವಹಾರ ಮತ್ತು ವಾಣಿಜ್ಯ ತಜ್ಞರ ಲಾಭವನ್ನು ತನ್ನ ಬೋರ್ಡಿನಲ್ಲಿ, ನೌಕರ ವರ್ಗದಲ್ಲಿ ಪಡೆಯಲು ಅನುಕೂಲವಾಗಿದೆ. ಬ್ಯಾಂಕಿನ ಉತ್ತಮ ಆಡಳಿತೆ ಮತ್ತು ಸಂಬಂಧಗಳಿಂದ ಬ್ಯಾಂಕು ಉತ್ತಮ ಪತ್ತು ಮತ್ತು ಅನಿಯಮಿತ ಸಾಧನ-ಸಂಪತ್ತುಗಳನ್ನು ಪಡೆಯಲು ಅರ್ಹವಿದೆ ರಾಜ್ಯದ ಸಹಕಾರಿ ಸಂಘಟನೆಯಲ್ಲಿ ಬ್ಯಾಂಕು ಉತ್ತಮ ಸೇವೆ ಸಲ್ಲಿಸುತ್ತದೆ, ರಾಜ್ಯದಲ್ಲಿಯ ಸದಸ್ಯ ಬ್ಯಾಂಕುಗಳ 'ಕ್ಲಿಯರಿಂಗ್ ಹೌಸ' ದಂತೆ ವರ್ತಿಸುತ್ತದ, ಮತ್ತು ಸಹಕಾರಿ ಬ್ಯಾಂಕುಗಳ ಮೇಲಿನ ಚೆಕ್ಕುಗಳನ್ನು ಕಲೆಹಾಕುವ ಮತ್ತು ಹಣಕೊಡುವ ಬಗ್ಗೆ ಯೋಗ್ಯ ವ್ಯವಸ್ಥೆ ಮಾಡಲಾಗಿದೆ ಸಹಕಾರಿ ಪತ್ತು ಮತ್ತು ಬ್ಯಾಂಕಿಂಗ್ ವಿಷಯಗಳಲ್ಲಿ ಈ ಬ್ಯಾಂಕು ಅಮೂಲ್ಯ ಸಲಹಾ ಸಂಸ್ಥೆಯಾಗಿದೆ. ಮತ್ತು ರಾಜ್ಯದ ಸಹಕಾರಿ ಬ್ಯಾಂಕುಗಳ ವಿವಿಧ ಚಟುವಟಿಕೆಗಳಲ್ಲಿ ಸ್ಫೂರ್ತಿ ಸೆಲೆಯಾಗಿ ನಿಂತಿದೆ

## ೨ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು

**ಪೂರ್ವ ಇತಿಹಾಸ.**

ಮೇಲ್ವಿಚಾರಣೆ ಮತ್ತು ಹಣಕಾಸಿನ ವ್ಯವಸ್ಥೆಗಾಗಿ ಮಧ್ಯವರ್ತಿ ಸಂಸ್ಥೆಗಳ ಸ್ಥಾಪನೆಗೆ ೧೯೦೪ರ ಸಹಕಾರಿ ಪತ್ತಿನ ಸಂಘಗಳ ಕಾಯದೆಯಲ್ಲಿ ಅವಕಾಶವಿರಲಿಲ್ಲ. ಆಂದೋಲನದ ಸಂಸ್ಥಾಪಕರು ಮಧ್ಯವರ್ತಿ ಸಂಸ್ಥೆಗಳ ಸ್ಥಾಪನೆಯ ಬಗ್ಗೆ ವಿಚಾರಿಸಿರಲಿಲ್ಲ ಅಥವಾ ಆಂದೋಲನವು ಭರದಿಂದ ಬೆಳೆಯಬಹುದೆಂದಾಗಲೀ ಅದರಿಂದ ಹಣಕಾಸಿನ ವ್ಯವಸ್ಥೆ ಮತ್ತು ಮೇಲ್ವಿಚಾರಣೆಯ ಸಾಧನಗಳನ್ನು ಏರ್ಪಡಿಸುವ ಅವಶ್ಯಕತೆ ಬೀಳಬಹುದೆಂದಾಗಲೀ ಅವರು ತರ್ಕಿಸಿರಲಿಲ್ಲ. ಪಟ್ಟಣಗಳಲ್ಲಿಯ ಪತ್ತಿನ ಸಂಘಗಳೇ ತಮಗೂ ಮತ್ತು ಹಳ್ಳಿಯ ಸಂಘಗಳಿಗೂ ಬೇಕಾಗುವ ಹಣವನ್ನು ಕೂಡಿಸಬಹುದೆಂದು ಭಾವಿಸಲಾಗಿದ್ದಿತು ಅಲ್ಲದೆ ಸ್ಥಾನಿಕ ಠೇವುಗಳ ಮುಖಾಂತರ ಹಳ್ಳಿಗಳ ಸಂಘಗಳು ತಮ್ಮ ಸದಸ್ಯರಿಗೆ ಬೇಕಾಗುವ ಹಣವನ್ನು ಕೂಡಿಸಬಹುದೆಂದೂ ನಿರೀಕ್ಷಿಸಲಾಗಿತ್ತು ಸ್ಥಾನಿಕ ಠೇವುಗಳನ್ನಲ್ಲದೆ ಕೆಲವು ರಾಜ್ಯಗಳಲ್ಲಿಯ ರಜಿಸ್ಟ್ರಾರರು ಸ್ಥಾನಿಕ ಸಂಸ್ಥೆಗಳಿಂದಲೂ ಮತ್ತು ಸಹಾನುಭೂತಿಯುಳ್ಳ ವೈಯಕ್ತಿಕ ಜನರಿಂದಲೂ ಧನಸಹಾಯವನ್ನು ಪಡೆಯುತ್ತಿದ್ದರು ಆದರೆ ಈ ಪದ್ಧತಿಯು ಭಾವಿಸಿಕೊಂಡಂತೆ ತೃಪ್ತಿಕರವಾಗಿ ಸಾಗಲಿಲ್ಲ

೧೯೧೨ ರ ಕಾಯದೆಯು ಪಾಸಾಗುವದಕ್ಕಿಂತ ಮುನ್ನ ಸಹಕಾರಿ ಸಂಘಗಳಿಗೆ ಹಣ ಪೂರೈಸುತ್ತಿದ್ದ ಪಟ್ಟಣ ಸಂಘಗಳನ್ನು (ಅರ್ಬನ್ ಸೊಸಾಯಿಟಿ) ಮಧ್ಯವರ್ತಿ ಸಂಘಗಳೆಂದು ಪರಿವರ್ತಿಸಲಾಗಿದ್ದಿತು, ೧೯೦೯-೧೯೧೦ ರಲ್ಲಿ ಇಂಥ ಏಳು ಸಂಘಗಳಿದ್ದವು ಈ ಸಂಘಗಳ ದುಡಿಯುವ ಭಾಂಡವಲು ಕೇವಲ ೧೮೨ ಲಕ

ರೂ ಯಷ್ಟಿದ್ದಿತು. ೧೯೦೯-೧೯೧೦ ನೆಯ ವರ್ಷದಲ್ಲಿ ಈ ಸಂಘಗಳು ಒಟ್ಟು ರೂ ೨೧,೫೫೦ ಗಳವರೆಗೆ ಸಾಲವನ್ನು ಸಹಕಾರಿ ಸಂಘಗಳಿಗೆ ಕೊಟ್ಟಿದ್ದವು ವರ್ಷದ ಅಂತ್ಯಕ್ಕೆ ರೂ. ೪೮,೧೦೦ ಗಳ ಸಾಲ ಬಾಕಿ ಇದ್ದಿತು ೧೯೧೧-೧೨ನೇ ವರ್ಷದಲ್ಲಿ ಮಧ್ಯವರ್ತಿ ಸಂಘಗಳ ಸಂಖ್ಯೆಯು ೯ಕ್ಕೆ ಮುಟ್ಟಿತು ಮತ್ತು ದುಡಿಯುವ ಭಾಂಡವಲು ೧.೯ ಲಕ್ಷ ರೂ ಇದ್ದಿತು ಈ ಸಂಘಗಳು ಅದೇ ವರ್ಷದಲ್ಲಿ ೭.೫೪ ಲಕ್ಷ ರೂ ಗಳ ಸಾಲವನ್ನು ಸಹಕಾರಿ ಸಂಘಗಳಿಗೆ ಕೊಟ್ಟಿದ್ದು ವರ್ಷದ ಅತ್ಯಂಕ್ಕೆ ಬರಬೇಕಾದ ಸಾಲವು ೬.೭೭ ಲಕ್ಷ ರೂ ಯಷ್ಟು ಇದ್ದಿತು ಆದರೆ ಇಂಥ ತಾತ್ಪೂರ್ತಿಕ ಮತ್ತು ಸಡಿಲಾದ ವ್ಯವಸ್ಥೆಯು ಬಹಳ ದಿನ ಸಾಗಲಾರದೆಂದು ಅನುಭವದಿಂದ ಕಂಡು ಬಂದಿತು

"ಭಾರತದಲ್ಲಿಯ ಸಹಕಾರಿ ಆಂದೋಲನದ ಬಗ್ಗೆ **ಮ್ಯಾಕ್ಲೇಗೊನ್ ಸಮಿತಿಯ**" ವರದಿಯು ಪ್ರಕಟವಾದ ಮೇಲೆ ರಾಜ್ಯದಲ್ಲಿ ಜಿಲ್ಲಾ ಮಧ್ಯವರ್ತಿ ಬ್ಯಾಂಕನ್ನು ಸ್ಥಾಪಿಸುವ ಬಗ್ಗೆ ಮೊದಲನೆಯ ಗಂಭೀರ ಪ್ರಯತ್ನವು ನಡೆಯಿತು ಈ ಸಮಿತಿಯು ಜಿಲ್ಲಾ ಸಹಕಾರಿ ಮಧ್ಯವರ್ತಿ ಬ್ಯಾಂಕುಗಳನ್ನು 'ಭಾಂಡವಲ', 'ಪರಿಶುದ್ಧ' ಮತ್ತು 'ಸಮ್ಮಿಶ್ರ' ಎಂಬ ಮೂರು ಭಾಗಗಳಲ್ಲಿ ವರ್ಗೀಕರಣ ಮಾಡಿತು. ಭಾಂಡವಲ ಬ್ಯಾಂಕುಗಳಲ್ಲಿ ಸಹಕಾರಿ ಸಂಘಗಳು ಸದಸ್ಯರಾಗಲು ಬರುವಂತಿರಲಿಲ್ಲ ಪರಿಶುದ್ಧ ನಮೂನೆಯ ಸಂಸ್ಥೆಯಲ್ಲಿ ಸಹಕಾರಿ ಸಂಘಗಳಿಗಷ್ಟೇ ಸದಸ್ಯತ್ವವಿರುತ್ತದೆ. ಸಮ್ಮಿಶ್ರ ಪದ್ಧತಿಯ ಬ್ಯಾಂಕುಗಳಲ್ಲಿ ವ್ಯಕ್ತಿಗಳೂ ಮತ್ತು ಸಂಘಗಳೂ ಸಹಿತ ಸದಸ್ಯರಾಗಬಹುದು ಆದರೆ ಈಗ ಮೊದಲನೆಯ ನಮೂನೆಯ ಬ್ಯಾಂಕುಗಳು ಸಾಮಾನ್ಯವಾಗಿ ಅಸ್ತಿತ್ವದಲ್ಲಿಲ್ಲ ಎರಡನೆಯ ನಮೂನೆಯ ಬ್ಯಾಂಕು ಒಂದೇ ಒಂದು ಇದ್ದು ಇನ್ನುಳಿದ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಸಮ್ಮಿಶ್ರ ಪದ್ಧತಿಯ ಬ್ಯಾಂಕುಗಳಾಗಿವೆ ಎರಡನೆಯ ಅಂದರೆ ಪರಿಶುದ್ಧ ಪದ್ಧತಿಯ ಬ್ಯಾಂಕುಗಳು ಅತ್ಯುತ್ತಮವಾಗಿದ್ದು ಆರ್ಥಿಕ ಸಂಘಟನೆಯ ಧ್ಯೇಯಕ್ಕನುಗುಣವಾಗಿ ಸ್ವಯಂ-ನಿಯಂತ್ರಣ ತತ್ವವು ಅವರಲ್ಲಿ ಅಡಕವಾಗಿದೆ ಆದರೆ ಸದ್ಯದ ಪರಿಸ್ಥಿತಿಯಲ್ಲಿ ಶೈಕ್ಷಣಿಕ ಮತ್ತು ಆರ್ಥಿಕ ಪರಿಸ್ಥಿತಿಗಳಲ್ಲಿ ಇಂಥ ಬ್ಯಾಂಕುಗಳಿರುವದು ಕಷ್ಟ-ಸಾಧ್ಯವು

**ಸಹಕಾರಿ** ಆಂದೋಲನ ಸಮಿತಿಯ ವರದಿಯು ಪ್ರಕಟವಾದ ಮೇಲೆ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ನೋಂದಾಯಿಸಲ್ಪಡತೊಡಗಿದವು ಹೀಗ ನೋಂದಾಯಿಸಲ್ಪಟ್ಟ ಬ್ಯಾಂಕುಗಳಲ್ಲಿ ಪೂರ್ವಖಾನದೇಶದಲ್ಲಿಯ ಜಳಗಾಂವದ ಮಧ್ಯವರ್ತಿ ಬ್ಯಾಂಕು ಮೊದಲನೆಯದಾಗಿದೆ ಆ ತರುವಾಯ ಧಾರವಾಡ ಮತ್ತು ಪುಣೆಗಳಲ್ಲಿ ಮತ್ತಿತರ ಜಿಲ್ಲೆಗಳಲ್ಲಿ ಇಂಥ ಬ್ಯಾಂಕುಗಳು ಸ್ಥಾಪಿತವಾದವು ೧೯೩೦ ರ ಸುಮಾರಿಗೆ ಮಧ್ಯವರ್ತಿ ಬ್ಯಾಂಕುಗಳ ಸಂಖ್ಯೆ ೧೩ ಕ್ಕೆ ಮುಟ್ಟಿ ದುಡಿಯುವ **ಭಾಂಡವಲು ೫೩.೫೪** ಲಕ್ಷ ರೂ ಗೆ ಮುಟ್ಟಿತು. ಮತ್ತು ಸಂಘಗಳಿಂದ ಬರತಕ್ಕ ಬಾಕಿ ಹಣವು ೩೮.೩೯ ಲಕ್ಷ ರೂ ಯಷ್ಟಿದ್ದಿತು ಆದರೆ ೧೯೧೫-೨೦ರ ಈ ಅವಧಿಯಲ್ಲಿ ಮಧ್ಯವರ್ತಿ

ಬ್ಯಾಂಕುಗಳ ಬೆಳವಣಿಗೆಯು ಸುವ್ಯವಸ್ಥಿತವಾಗಿರಲಿಲ್ಲ. ಗ್ಯಾರಂಟೀಂಗ್ ಯೂನಿಯನ್‌ಗಳಿಂದ ಉದ್ಭೂತವಾದ ಸಂಘರ್ಷಕ ಅಂಶಗಳೇ ಇದಕ್ಕೆ ಮುಖ್ಯ ಕಾರಣವಾಗಿದ್ದವು ಸಹಕಾರಿ ಸಮಿತಿಯ ಶಿಫಾರಸಿನ ಮೇರೆಗೆ ನೋಂದಾಯಿಸಲ್ಪಟ್ಟಿದ್ದ ಈ ಯೂನಿಯನ್ನುಗಳು ಮುಂಬಯಿಯಲ್ಲಿಯ ಮಧ್ಯವರ್ತಿ ಬ್ಯಾಂಕು ಮತ್ತು ಇದರಿಂದ ಹಣಪಡೆಯುತ್ತಿದ್ದ ಪ್ರಾಥಮಿಕ ಸಂಘಗಳ ನಡುವೆ ಸಂಬಂಧ ಬೆಳೆಯಿಸುವ ಸಂಸ್ಥೆಗಳೆಂದು ತಿಳಿಯಲಾಗಿತ್ತು ಕಾರ್ಯಕ್ಷೇತ್ರದ ಐದು ಮೈಲಿನೊಳಗಿರುವ ೫ ರಿಂದ ೨೦ ಸಂಘಗಳ ಗುಂಪುಗಳಿಂದ ಈ ಯೂನಿಯನ್ನುಗಳು ತಮ್ಮ ಸದಸ್ಯರನ್ನು ಪಡೆಯುತ್ತಿದ್ದವು ಯುನಿಯನ್ನದಲ್ಲಿಯ ಪ್ರತಿ ಒಂದು ಸದಸ್ಯ ಸಂಘವು ಇತರ ಸದಸ್ಯ ಸಂಘಗಳು ಮಾಡಿದ ಸಾಲದ ಹಣವನ್ನು ಕೊಡಲು ಹೊಣೆಯುಳ್ಳದ್ದಾಗಿದ್ದಿತು ಹೀಗೆ ಗ್ಯಾರಂಟೀಂಗ್ ಯುನಿಯನ್ನುಗಳ ಮುಖಾಂತರ ಹಣ ಪೂರೈಸುವ ಮುಂಬಯಿ ಮಧ್ಯವರ್ತಿ ಬ್ಯಾಂಕು ಮತ್ತು ಕೆಲವೊಂದು ಜಿಲ್ಲೆಗಳಲ್ಲಿ ಸಂಘಟಿಸಲ್ಪಟ್ಟ ಜಿಲ್ಲಾ ಮಧ್ಯವರ್ತಿ ಬ್ಯಾಂಕು ಹೀಗೆ ಜಿಲ್ಲೆಗಳಲ್ಲಿ ಎರಡು ರೀತಿಯ ಹಣಪೂರೈಕೆಯ ಸಂಸ್ಥೆಗಳಿದ್ದವು

ಯಾವದೇ ಒಂದು ನಿರ್ದಿಷ್ಟ ಕ್ಷೇತ್ರದಲ್ಲಿ ಒಂದೇ ಒಂದು ಸಂಘಗಳ ಹಣ ಪೂರೈಕೆಯ ಸಂಸ್ಥೆಯು ಇರಬೇಕೆಂದು ೧೯೨೦ರಲ್ಲಿ ಪ್ರಾಂತಿಕ ಸಹಕಾರಿ ಪರಿಷತ್ತು ಒತ್ತಾಯಪಡಿಸಿತು ಸಹಕಾರಿ ಆಂದೋಲನದ ಹಣಕಾಸಿನ ಧೋರಣೆಯನ್ನು ಈ ರೀತಿಯಾಗಿ ಸ್ಪಷ್ಟಪಡಿಸಿದಂದಿನಿಂದ ಬೇರೆ ಬೇರೆ ಜಿಲ್ಲೆಗಳಲ್ಲಿಯ ಸ್ಥಾನಮಾನವನ್ನು ಹೆಚ್ಚು ಕೂಲಂಕಷವಾಗಿ ವಿವೇಚಿಸಲಾಯಿತು ಮೊದಲನೆಯದಾಗಿ ಮುಂಬಯಿ ಮಧ್ಯವರ್ತಿ ಬ್ಯಾಂಕನ್ನು ಪ್ರಾಂತಿಕ ಬ್ಯಾಂಕೆಂದು ಪರಿವರ್ತಿಸಲಾಯಿತು ಮತ್ತು ಈ ಬ್ಯಾಂಕು, ಸ್ಥಾನಿಕ ಬ್ಯಾಂಕುಗಳು ಅಸ್ತಿತ್ವದಲ್ಲಿದ್ದ ಜಿಲ್ಲೆಗಳಲ್ಲಿಯ ತನ್ನ ವ್ಯವಹಾರದ ಬಗ್ಗೆ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳೊಡನೆ ಪರ್ಯಾಯಾಲೋಚಿಸಬೇಕೆಂದು ನಿರ್ದೇಶಿಸಲಾಯಿತು ಮತ್ತು ಎಲ್ಲಿ ಸ್ಥಾನಿಕ ಬ್ಯಾಂಕುಗಳು ಇಲ್ಲವೋ ಅಲ್ಲಿ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳನ್ನು ಸ್ಥಾಪಿಸುವ ಬಗ್ಗೆಯೂ ಚರ್ಚಿಸಿ ಮುಂದಿನ ಕಾರ್ಯಕ್ರಮದ ವಿವರಗಳನ್ನೂ ಸಿದ್ಧಪಡಿಸಲಾಯಿತು ಹೀಗೆ ಈ ಧೋರಣೆಯನ್ವಯ ಹಲವಾರು ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಸ್ಥಾಪಿಸಲ್ಪಟ್ಟು, ಜಿಲ್ಲಾ ಬ್ಯಾಂಕುಗಳ ಕಾರ್ಯಕ್ಷೇತ್ರದಲ್ಲಿಯ ಸಂಘಗಳಿಗೆ ಹಣಪೂರೈಸುವ ಕಾರ್ಯವನ್ನು ಪ್ರಾಂತಿಕ ಬ್ಯಾಂಕು ಜಿಲ್ಲಾ ಬ್ಯಾಂಕುಗಳಿಗೆ ಕ್ರಮೇಣವಾಗಿ ವರ್ಗಾಯಿಸಿತು ಸಂಸ್ಥಾನಗಳ ವಿಲೀನೀಕರಣದ ಮುನ್ನ ಮುಂಬಯಿ ರಾಜ್ಯದಲ್ಲಿಯ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳ ಸಂಖ್ಯೆಯು ೧೭ ಇದ್ದಿತು ಆದರೂ ಎಲ್ಲಿ ಜಿಲ್ಲಾ ಮಧ್ಯವರ್ತಿ ಬ್ಯಾಂಕು ಇದ್ದಿಲ್ಲವೋ, ಅಲ್ಲಿಯ ಸಂಘಗಳಿಗೆ ಪ್ರಾಂತಿಕ ಸಹಕಾರಿ ಬ್ಯಾಂಕೇ ಹಣಪೂರೈಸ ತೊಡಗಿತು ೩೦-೬-೧೯೫೧ಕ್ಕೆ ೧೯ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳಿದ್ದವು ಆದರೂ ರತ್ನಾಗಿರಿ, ಕುಲಾಬಾ, ನಾಸಿಕ, ಪಶ್ಚಿಮ ಖಾನದೇಶ, ಸಬರಕಂಠಾ, ಬನಸಕಂಠಾ, ಅಹಮ್ಮದನಗರ ಮೊದಲಾದ ಕಡೆಗಳಲ್ಲಿ ಜಿಲ್ಲಾ ಮಧ್ಯವರ್ತಿ ಬ್ಯಾಂಕುಗಳು ಇಲ್ಲ ಈ ಜಿಲ್ಲೆಗಳಲ್ಲಿಯ ಸಂಘಗಳಿಗೆ ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕು ಹಣಪೂರೈಸುತ್ತಿದೆ.

**ಘಟನೆ —** ೧೯೧೭ರಲ್ಲಿ ತಯಾರಿಸಿದ ಮಾದರಿ ಪೋಟನಿಯಮಗಳ ಮೇರೆಗೆ ಮಧ್ಯವರ್ತಿ ಬ್ಯಾಂಕುಗಳ ಘಟನೆಯು ಉಚಿತವಾಗಿರುವದಾದರೂ ಕಾರ್ಯಾಚರಣೆಯಲ್ಲಿ ಮತ್ತು ಘಟನೆಗಳಲ್ಲಿ ಏಕರೂಪತೆಯು ಕಂಡುಬರುವದಿಲ್ಲ. ಹೀಗಾಗಿ ಬ್ಯಾಂಕುಗಳು ಒಂದಕ್ಕೊಂದು ಸರಿಹೋಲುವದಿಲ್ಲೆಂದು ತಿಳಿಯುವದು ತಪ್ಪಲ್ಲ. ಸ್ಥಿತಿಸ್ಥಾಪಕತೆಯು ಈ ಪದ್ಧತಿಯು ಮುಖ್ಯ ವೈಶಿಷ್ಟ್ಯವಾಗಿದೆ. ಮೇಲೆ ಹೇಳಿರುವಂತೆ ಸಂಘಗಳೂ ಮತ್ತು ವ್ಯಕ್ತಿಗಳೂ ಮಧ್ಯವರ್ತಿ ಬ್ಯಾಂಕಿನ ಸದಸ್ಯರಾಗಬಹುದು. ಆರ್ಥಿಕ ಮುಗ್ಗಟ್ಟಿನಿಂದ ಪಾರಾಗಲು ಅನುಕೂಲವಾಗುವ ದೃಷ್ಟಿಯಿಂದ ವ್ಯಕ್ತಿಗಳನ್ನು ಬ್ಯಾಂಕಿನ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುತ್ತದೆ. ನಿಮಿತ್ತ ಸದಸ್ಯತ್ವವು ಸಹಿತ ಮಾನ್ಯವದೆ. ಈ ಬ್ಯಾಂಕುಗಳ ನಿಮಿತ್ತ ಸದಸ್ಯರಲ್ಲಿ ಕೆಳಗಿನಂತೆ ಮೂರು ಪ್ರಕಾರಗಳಿವೆ.

(ಅ) ಬ್ಯಾಂಕಿಗೆ ಸಮಾವೇಶವಾಗಿರುವ ಅರ್ಬನ್ ಬ್ಯಾಂಕ ಮತ್ತು ಮಾರಾಟ ಸಂಘಗಳನ್ನು ಬಿಟ್ಟು, ಒಕ್ಕಲುತನದ ಹುಟ್ಟುವಳಿ ಮತ್ತು ಬೆಲೆಯುಳ್ಳ ಸಾಮಾನುಗಳನ್ನು ಅಡವಾಗಿಟ್ಟು ಸಾಲಪಡೆಯಲಿಚ್ಛಿಸುವ ಪ್ರಾಥಮಿಕ ಸಂಘಗಳ ಸದಸ್ಯರು

(ಬ) ಹಣಪೂರೈಸುವ ಯಾವುದೇ ಸಂಘದ ಸದಸ್ಯರಲ್ಲದ ಪ್ರತ್ಯೇಕ ರೈತರು

(ಕ) ಇತರ ಪತ್ತಿನ ಸಂಘಗಳ ಸದಸ್ಯರಲ್ಲದೆ ಆದರೆ ೧೯೪೭ರ ಬಿ ಎ. ಡಿ ಆರ್ ಕಾಯದೆಯ ಪರದಿ ಅಥವಾ ಅವಾರ್ಡುಗಳಿಗೆ ಸಂಬಂಧಿಸಿದೆ, ಹಣಪಡೆಯ ಲಿಚ್ಛಿಸುವ ಜನರು

ಬ್ಯಾಂಕಿನ ಆಡಳಿತೆಯು ಪ್ರತಿವರ್ಷ ಆರಿಸಲ್ಪಡುವ ಬೋರ್ಡ ಆಫ್ ಡಾಯರೆಕ್ಟರ್ಸ ಎಂಬ ಸಮಿತಿಗೆ ಒಳಪಟ್ಟಿರುತ್ತದೆ. ಅದ್ದರೆ ಈಗ ಸರತಿಯ ಮೇರೆಗೆ ೧/೩ ದಷ್ಟು ಡಾಯರೆಕ್ಟರರನ್ನು ಪ್ರತಿವರ್ಷ ಚುನಾಯಿಸಲಾಗುತ್ತದೆ. ಚುನಾವಣೆಗಳನ್ನು ಗುಪ್ತಮತದಾನ ಪದ್ಧತಿಯ ಮೇರೆಗೆ ಸಾಗಿಸಲಾಗುತ್ತದೆ. ಅಲ್ಲದೆ ಈಗ ಸರಕಾರಿ ಗೊತ್ತುವಳಿ ರೆವ್ಹಿನ್ಯೂ ಡಿಪಾರ್ಟಮೆಂಟ ನಂ ೨೧೪೮/೪೫ ದಿ ೨೫-೬-೧೯೪೮ ರಲ್ಲಿ, ಬೋರ್ಡಿನ ಕನಿಷ್ಟ ಅರ್ಧದಷ್ಟು ಸದಸ್ಯರು ಬ್ಯಾಂಕಿಗೆ ಸಮಾವೇಶವಾಗಿರುವ ಸಹಕಾರಿ ಸಂಘಗಳ ಪ್ರತಿನಿಧಿಗಳಾಗಿರಬೇಕೆಂದು ಹೇಳಲಾಗಿದೆ. ಪ್ರಾರಂಭಕ್ಕೆ ಗೌರವ ಕಾರ್ಯದರ್ಶಿಗಳಿರುತ್ತಿದ್ದರು. ಅವರ ಬದಲು ಈಗ ಪೂರ್ಣಾವಧಿ ಕೆಲಸಮಾಡುವ ಮ್ಯಾನೇಜರರು ಇರುತ್ತಾರೆ. ಕೆಲವೊಂದು ಬ್ಯಾಂಕುಗಳಲ್ಲಿ ಮ್ಯಾನೇಜಿಂಗ ಡಾಯರೆಕ್ಟರರು ಇರುತ್ತಾರೆ. ಅಲ್ಲದೆ ಮತ್ತೆ ಕೆಲವು ಬ್ಯಾಂಕುಗಳಲ್ಲಿ ಮ್ಯಾನೇಜರರ ಹೊರ್ತು ಎಡ್ಮಿನಿಸ್ಟ್ರೇಟಿವ್ಹ ಆಫೀಸರರೂ ಇರುತ್ತಾರೆ. ಲೆಕ್ಕ ತಪಾಸಣೆಯ ಕೆಲಸವು ಎಡ್ಮಿನಿಸ್ಟ್ರೇಟಿವ್ಹ ಆಫೀಸರರ ಕಡೆಗಿರುತ್ತದೆ.

**ಸದ್ಯದ ಪರಿಸ್ಥಿತಿ:—** ಕಳೆದ ನಾಲ್ಕು ವರ್ಷಗಳಲ್ಲಿ ಈ ಬ್ಯಾಂಕುಗಳು ಸಾಧಿಸಿದ ಪ್ರಗತಿಯನ್ನು ಕೆಳಗಿನ ತುಲನಾತ್ಮಕ ಅಂಕೆ-ಸಂಖ್ಯೆಗಳು ತೋರಿಸುತ್ತವೆ

| | ವಿವರ | ೧೯೪೭-೪೮ | ೧೯೪೮-೪೯ | ೧೯೪೯-೫೦ | ೧೯೫೦-೫೧ |
|---|---|---|---|---|---|
| ೧ | ಬ್ಯಾಂಕುಗಳ ಸಂಖ್ಯೆ | ೧೧ | ೧೨ | ೧೮ | ೧೮ |
| ೨ | ಸದಸ್ಯರ ಸಂಖ್ಯೆ | | | | |
| | i) ವ್ಯಕ್ತಿಗಳು | ೧೪,೪೪೭ | ೧೫,೯೩೮ | ೨೦,೧೨೦ | ೨೮,೨೬೧ |
| | ii) ಸಂಘಗಳು | ೪,೧೯೩ | ೪,೭೩೦ | ೬,೨೦೪ | ೭,೫೪೮ |
| | | ೧೮,೬೪೦ | ೨೦,೬೬೮ | ೨೬,೩೨೪ | ೩೫,೮೦೯ |
| ೩ | ಸಂಚಿತ ಶೇರ್ರ ಭಾಂಡವಲು | ೪೦,೬೮,೪೫೦ | ೪೬,೨೧,೬೮೦ | ೬೦,೪೫,೩೭೩ | ೭೭,೪೫,೨೫೮ |
| ೪ | ಕಾಯ್ದಿಟ್ಟ ಮತ್ತಿತರ ನಿಧಿಗಳು | ೪೫,೭೧,೯೪೨ | ೪೬,೦೨,೧೩೯ | ೬೬,೪೫,೦೧೨ | ೭೫,೫೦,೧೧೪ |
| | ಸ್ವಂತ ಭಾಂಡವಲು | ೮೬,೪೦,೩೯೨ | ೯೨,೨೩,೮೧೯ | ೧,೨೬,೯೦,೩೮೫ | ೧,೫೨,೯೫,೩೭೨ |
| ೫ | ಠೇವುಗಳು | | | | |
| | i) ವ್ಯಕ್ತಿಗಳು | ೫,೮೬,೮೭,೯೨೬ | ೬,೩೧,೩೨,೩೧೨ | ೬,೯೫,೫೫,೧೮೦ | ೮,೨೦,೫೨,೯೦೧ |
| | ii) ಸಂಘಗಳು | ೧,೩೭,೬೮,೪೪೨ | ೧,೫೨,೨೬,೪೯೧ | ೨,೨೪,೪೩,೦೮೩ | ೨,೮೯,೭೮,೪೪೮ |
| | | ೭,೨೪,೫೬,೩೬೮ | ೭,೮೩,೫೮,೮೦೩ | ೯,೧೯,೯೮,೨೬೩ | ೧೧,೧೦,೩೧,೩೪೯ |
| ೬ | ಸಾಲಗಳು | | | | |
| | i) ಪ್ರಾಂತಿಕ ಬ್ಯಾಂಕಿನಿಂದ | ೧೯,೯೩,೨೭೩ | ೭೬,೪೩,೪೩೦ | ೧೩,೧೭,೪೫೨ | ೩೧,೧೭,೭೭೬ |
| | ii) ರಿಝರ್ವ ಬ್ಯಾಂಕಿನಿಂದ | — | — | ೨೦,೦೦,೦೦೦ | ೩೫,೦೦,೦೦೦ |
| | iii) ವ್ಯಾಪಾರಿ ಬ್ಯಾಂಕುಗಳಿಂದ | — | — | ೩,೪೭,೪೭೩ | ೫,೯೪,೯೬೬ |
| | iv) ಸರಕಾರದಿಂದ | — | — | ೬,೦೦,೦೦೦ | ೬,೦೦,೦೦೦ |
| | | ೧೯,೯೩,೨೭೩ | ೭೬,೪೩,೪೩೦ | ೪೨,೬೪,೯೨೫ | ೭೮,೧೨,೭೪೨ |

| | | | | | |
|---|---|---|---|---|---|
| ೭ | ಡಿಬೆಂಚರ್ಸ್ | — | — | ೯೭,೫೦೦ | ೯೭,೫೦೦ |
| ೮ | ದುಡಿಯುವ ಭಾಂಡವಲು | ೮,೩೦,೯೦,೦೪೩ | ೯,೫೨,೨೬,೦೫೨ | ೧೦,೮೪,೫೧,೦೮೩ | ೧೩,೪೨,೩೬,೯೬೩ |
| ೯ | ಕೊಟ್ಟ ಸಾಲ | | | | |
| | i) ವ್ಯಕ್ತಿಗಳಿಗೆ | ೨,೧೯,೫೯,೧೩೮ | ೪,೯೪,೯೯,೬೬೬ | ೪,೨೮,೦೩,೩೬೮ | ೨,೯೭,೪೪,೨೭೬ |
| | ii) ಸಂಘಗಳಿಗೆ | ೧೩,೭೪,೬೩,೭೭೦ | ೨೩,೩೬,-೭,೨೧೦ | ೯,೩೩,೭೭,೭೪೪ | ೧೪,೫೮,೩೬,೮೯೮ |
| ೧೦ | ಬರತಕ್ಕ ಸಾಲ | | | | |
| | i) ವ್ಯಕ್ತಿಗಳಿಂದ | ೯೩ ೮೬,೯೪೯ | ೧,೦೫,೭೯,೯೭೯ | ೧,೩೨,೧೬,೦೬೧ | ೧,೫೧,೩೦,೭೪೭ |
| | ii) ಸಂಘಗಳಿಂದ | ೧,೫೦,೮೧,೯೦೩ | ೩,೮೨,೬೬,೯೩೮ | ೩,೨೦,೭೯,೧೧೭ | ೪,೯೭,೪೩,೮೦೯ |
| | | ೨,೪೪,೬೮,೮೫೨ | ೪,೮೮,೪೬,೯೧೭ | ೪,೫೨,೯೫,೧೭೮ | ೬,೪೮,೭೪,೫೫೬ |
| ೧೧ | ದುಡಿಯುವ ಭಾಂಡವಲಕ್ಕೆ ಬರತಕ್ಕ ಸಾಲದ ಪ್ರಮಾಣ | ೨೯·೪% | ೫೧·೨% | ೩೯ ೬% | ೪೮ ೩% |
| ೧೨ | ರೇವುಗಳಿಗೆ ಬರತಕ್ಕ ಸಾಲಗಳ ಪ್ರಮಾಣ | ೩೩ ೭% | ೬೨ ೩% | ೪೬ ೬% | ೫೯ % |
| ೧೩ | ಮುದ್ದತು ಮೀರಿದ ಸಾಲಗಳು | ೩೩,೦೬,೧೫೬ | ೨೨,೨೨,೧೨೧ | ೩೭,೮೧,೯೦೫ | ೩೩,೩೨,೨೮೭ |
| ೧೪ | ಬರತಕ್ಕ ಸಾಲಗಳಿಗೆ ಮುದ್ದತು ಮೀರಿದ ಸಾಲಗಳ ಪ್ರಮಾಣ | ೧೩ ೫% | ೪·೫% | ೮ ೩% | ೫·೧% |
| ೧೫ | ದುಡಿಯುವ ಭಾಂಡವಲಕ್ಕೆ ಆಡಳಿತೆಯ ವೆಚ್ಚದ ಪ್ರಮಾಣ | ೧·೩% | ೧ ೩% | ೧ ೬% | ೧ ೬% |
| ೧೬ | ಲಾಭ | ೫,೯೪,೮೧೪ | ೭,೩೩,೧೭೪ | ೮,೭೬,೭೪೩ | ೮,೮೯,೯೬೮ |

ಈ ರಾಜ್ಯದಲ್ಲಿ ಮಧ್ಯವರ್ತಿ ಬ್ಯಾಂಕುಗಳು ವರುಷವರ್ಷಕ್ಕೆ ಭರದಿಂದ ಪ್ರಗತಿ ಹೊಂದುತ್ತಲಿವೆ ಎಂದು ಮೇಲಿನ ಅಂಕ-ಸಂಖ್ಯೆಗಳು ಸೂಚಿಸುತ್ತವೆ ಬ್ಯಾಂಕುಗಳ ೧೩·೭ ೩೬ ಲಕ್ಷ ರೂಪಾಯಿ ದುಡಿಯುವ ಭಾಂಡವಲದಲ್ಲಿ ಸ್ವಂತ ಭಾಂಡವಲು ೧೫·೭ ೯೫ ಲಕ್ಷ ರೂಪಾಯಿಯಷ್ಟಿದ್ದಿತು ಮತ್ತು ಅದರ ಪ್ರಮಾಣವು ದುಡಿಯುವ ಭಾಂಡವಲಕ್ಕೆ ೧೧ ೩ ಇದ್ದಿತೆಂಬುದು ಮೇಲಿನ ಅಂಕೆ-ಸಂಖ್ಯೆಗಳಿಂದ ವಿದಿತವಾಗುತ್ತದೆ

ಈ ಬ್ಯಾಂಕುಗಳು ೧೧೧೦.೩೧ ಲಕ್ಷ ರೂಪಾಯಿ.ಗಳಷ್ಟು ಠೇವನ್ನು ಕೂಡಿಸಲು ಸಮರ್ಥವಾದವು ಠೇವುಗಳು ವರುವರ್ಷಕ್ಕೆ ಹೆಚ್ಚಾಗು ತ್ತಿರುವದು ಬ್ಯಾಂಕಿನ ಉತ್ತಮ ಆರ್ಥಿಕ ಸ್ಥಿತಿಯ ಒಗ್ಗೆ ಸಾರ್ವಜನಿಕರಿಗಿರುವ ನಂಬಿಗೆಯನ್ನು ವ್ಯಕ್ತಪಡಿಸುತ್ತವೆ ಅಲ್ಲದೆ ಬ್ಯಾಂಕುಗಳು ಪಡೆದುಕೊಂಡ ಸಾಲದ ಪ್ರಮಾಣವು ಪ್ರತಿವರುಷವೂ ಹೆಚ್ಚಾಗುತ್ತಲಿದೆ ಎಂದು ಮೇಲಿನ ಪತ್ರಿಕೆಯಿಂದ ಕಂಡುಬರುತ್ತದೆ. ಅದಕ್ಕೆ ಮುಖ್ಯವಾಗಿ ಕೆಳಗಿನ ಕಾರಣಗಳನ್ನು ಕೊಡಬಹುದು

(೧) ಈಗ ಈ ಬ್ಯಾಂಕುಗಳು ಸಮೀಕೃತ ಗ್ರಾಮಾಂತರ ಪತ್ತಿನ ಯೋಜನೆ ಯನ್ವಯ ಪತ್ತು ಪಡೆಯಲು ಅರ್ಹತೆಯುಳ್ಳ ರೈತರಿಗೆಲ್ಲ ಹಣ ಪೂರೈಸುವ ಹೊಣೆಯನ್ನು ಹೊತ್ತುಕೊಂಡಿವೆ ಹೀಗಾಗಿ ಬ್ಯಾಂಕುಗಳಿಂದ ಹೆಚ್ಚು ಹೆಚ್ಚು ಸಂಘಗಳು ಹೆಚ್ಚು ಹೆಚ್ಚು ಹಣವನ್ನು ಬೇಡತೊಡಗಿವೆ

(೨) ಮುಂಬಯಿ ಒಕ್ಕಲಿಗರ ಸಾಲಪರಿಹಾರ ಕಾಯದೆ, ಸಾಹುಕಾರೀ ಕಾಯದೆ ಮೊದಲಾದ ಶಾಸನ ಕ್ರಮಗಳಿಂದಾಗಿ ಪ್ರಾಥಮಿಕ ಉತ್ಪಾದಕರಿಗೆ ಹಣ ದೊರೆಯಬಹುದಾದ ಸಾಧನಗಳು ಪೂರ್ತಿಯಾಗಿ ಇಲ್ಲದಿದ್ದರೂ ಎಷ್ಟೋ ಮಟ್ಟಿಗೆ ಕಡಿಮೆಯಾಗಿವ ಹೀಗಾಗಿ ಅವರೆಲ್ಲರೂ ತಮಗೆ ಬೇಕಾಗುವ ಹಣದ ಸಲುವಾಗಿ ಸಹಕಾರಿ ಸಂಘಗಳನ್ನೇ ಅವಲಂಬಿಸಬೇಕಾಗಿದೆ

(೩) ಸಂಘಗಳು ಸರಕುಗಳ ಪೂರೈಕೆಯ ಕಾರ್ಯವನ್ನು ಕೈಕೊಂಡಿವೆ

(೪) ಸಹಕಾರಿ ಸಂಘಗಳ ಸದಸ್ಯರ ಸಂಖ್ಯೆಯು ವರುವರ್ಷಕ್ಕೆ ಹೆಚ್ಚಾಗುತ್ತಲಿದ

(೫) ಪ್ರತಿ ವರುಷವೂ ಹೆಚ್ಚು ಹೆಚ್ಚು ಸಂಘಗಳು ನೋಂದಾಯಿಸಲ್ಪಡ ತೊಡಗಿವೆ

ಈ ಎಲ್ಲ ಕಾರಣಗಳಿಂದಾಗಿ ಮಧ್ಯವರ್ತಿ ಬ್ಯಾಂಕುಗಳಿಗೆ ಹಣ ಪೂರೈಕೆಯ ಬೇಡಿಕೆಯು ಅತಿ ಹೆಚ್ಚಾಗತೊಡಗಿದೆ ಈ ರೀತಿಯಾಗಿ ಹೆಚ್ಚಾದ ಬೇಡಿಕೆಯ ಹಣ ವನ್ನು ಪೂರೈಸಲು ಹಣ ಪೂರೈಕೆಯ ಸಂಸ್ಥೆಗಳು ಅಸಮರ್ಥವಾದವು ಅಲ್ಲದೆ ಸಂಘ ಗಳ ಹಣಪೂರೈಕಯ ಬೇಡಿಕೆಯು ಹೆಚ್ಚಾದ ಪ್ರಮಾಣದಲ್ಲಿಯೇ ಮಧ್ಯವರ್ತಿ ಸಹ ಕಾರಿ ಬ್ಯಾಂಕುಗಳ ಠೇವುಗಳ ಪ್ರಮಾಣ ಮಾತ್ರ ಹೆಚ್ಚಾಗಲಿಲ್ಲ ಹೀಗಾಗಿ ಮಧ್ಯವರ್ತಿ ಹಣಕಾಸಿನ ಸಂಸ್ಥೆಗಳು ಭಾರತದ ರಿಝರ್ವ ಬ್ಯಾಂಕಿನಿಂದ ಧನಸಹಾಯ ಪಡೆದು ತಮ್ಮ ದುಡಿಯುವ ಭಾಂಡವಲನ್ನು ಹೆಚ್ಚಿಸಿಕೊಳ್ಳುವದು ಅತ್ಯವಶ್ಯವಾಯಿತು ಕಾಲಹರಣವಾಗದಂತೆ ನೋಡಿಕೊಳ್ಳುವದರ ಸಲುವಾಗಿ ಮತ್ತು ರಿಝರ್ವ ಬ್ಯಾಂಕಿನಿಂದ ಮಂಜೂರಾದ ಮರ್ಯಾದೆಗಳ ಸದುಪಯೋಗವಾಗಬೇಕೆಂದು ರಿಝರ್ವ ಬ್ಯಾಂಕಿಗೆ ಸಾದರ ಪಡಿಸಲಾಗುವ ಅರ್ಜಿಗಳನ್ನು ಏಕರೂಪವಾಗಿಯೂ ಸರಳವಾಗಿಯೂ ಮಾಡಲಾಗಿದೆ ಸುಗ್ಗಿಯ ಕಾಲದ ಶೇತ್ಕಿ ಕೆಲಸಗಳಿಗೆ ಮತ್ತು ಹುಟ್ಟುವಳಿಯ ಮಾರಾಟಕ್ಕಾಗಿ 'ಅ' ಮತ್ತು 'ಬ' ವರ್ಗದ ಪ್ರಾಥಮಿಕ ಶೇತ್ಕಿ ಮತ್ತು ಮಾರಾಟ ಸಂಘಗಳು ರಿಯಾಯತಿ ಬಡ್ಡಿ ದರದಲ್ಲಿ ಅಂದರೆ ಬ್ಯಾಂಕರೇಟಗಿಂತ

ನೂರಕ್ಕೆ ೧ ೧/೨ ದಷ್ಟು ಕಡಿಮೆ ದರದಲ್ಲಿ ರಿಝರ್ವ್ ಬ್ಯಾಂಕಿನಿಂದ ಸಾಲ ಪಡೆಯಬಹುದು. ಮಾರ್ಚ ೧೯೫೨ ರಲ್ಲಿ ಬ್ಯಾಂಕ ರೇಟನ್ನು ೩ ೧/೨ ರೂ ಗೆ ಏರಿಸಿದರೂ ಇಂಥ ಸಾಲಗಳನ್ನು ಬ್ಯಾಂಕರೇಟಿಗಿಂತ ನೂರಕ್ಕೆ ೨ ರಷ್ಟು ಕಡಿಮೆ ಬಡ್ಡಿ ದರದಲ್ಲಿ ಕೊಡಲಾಗುವದು ಎಂದು ರಿಝರ್ವ ಬ್ಯಾಂಕಿನ ಗವ್ಹರ್ನರರು ಪ್ರಕಟಿಸಿದರು. ಕಳೆದ ಮೂರು ವರ್ಷಗಳಲ್ಲಿ ರಾಜ್ಯ ಸಹಕಾರಿ ಬ್ಯಾಂಕು ಮತ್ತು ಮಧ್ಯವರ್ತಿ ಬ್ಯಾಂಕುಗಳು ಪಡೆದ ಸಾಲಗಳ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ.

(ಲಕ್ಷ ರೂಪಾಯಿಗಳಲ್ಲಿ)

| | ಮಂಜೂರಾದ ಮರ್ಯಾದೆ | ಪಡೆದ ಪರಮಾವಧಿ ಹಣವು | ವರ್ಷದ ಅಂತ್ಯಕ್ಕೆ ಕೊಡಬೇಕಾಗಿದ್ದ ಹಣ | | |
|---|---|---|---|---|---|
| | | | ೧೯೫೧-೫೨ | ೧೯೫೦-೫೧ | ೧೯೪೯-೫೦ |
| **ರಾಜ್ಯ ಸಹಕಾರಿ ಬ್ಯಾಂಕು** | | | | | |
| ಕಲಮು ೧೭ (೪) (ಅ) ದನ್ವಯ ಸರಕಾರಿ ಸೆಕ್ಯುರಿಟಿಯ ಮೇಲೆ | ೨೫೦ ೦೦ | ೨೦೦ ೦೦ | ೯೫ ೦೦ | ೯೭.೦೦ | ೧೦ ೦೦ |
| ಕಲಮು ೧೭ (೪) (ಕ) ದನ್ವಯ ಕೋ-ಆಪರೇಟಿವ್ಹ ಪೇಪರುಗಳ ಮೇಲೆ | ೮೫ ೦೦ | ೮೫ ೦೦ | ೨೫ ೦೦ | — | — |
| **ಮಧ್ಯವರ್ತಿ ಹಣಕಾಸಿನ ಸಂಸ್ಥೆಗಳು** | | | | | |
| ಕಲಮು ೧೭ (೪) (ಅ) | ೧೭ ೦೦ | ೧೩ ೦೦ | ೩ ೦೦ | — | — |
| ಕಲಮು ೧೭ (೪) (ಕ) | ೧೦ ೦೦ | ೧೦ ೦೦ | ೫ ೦೦ | — | — |
| ಕಲಮು ೧೭ (೨) (ಬ) | ೧೯೩ ೫೦ | ೧೯೨ ೫೦ | ೧೬೦ ೩೧ | ೩೬ ೦೦ | ೨೧, ೦೦ |
| ಒಟ್ಟು | ೫೫೫ ೫೦ | ೫೦೦ ೫೦ | ೨೮೮ ೩೧ | ೧೩೩ ೦೦ | ೩೧ ೦೦ |

ರಿಝರ್ವ್ ಬ್ಯಾಂಕಿನಿಂದ ವೇಳೆಗೆ ಸರಿಯಾಗಿ ದೊರೆಯುತ್ತಿರುವ ಈ ಹಣ ಕಾಸಿನ ಸಹಾಯದಿಂದ ಮಧ್ಯವರ್ತಿ ಬ್ಯಾಂಕುಗಳು ಪ್ರಾಥಮಿಕ ಸಂಘಗಳ ಹಣದ ಬೇಡಿಕೆಯನ್ನು ತೃಪ್ತಿಕರವಾಗಿ ಪೂರೈಸಲು ಸಮರ್ಥವಾಗಿವೆ ಕೆಲ ಹಳೆಯ ಜಿಲ್ಲಾ ಬ್ಯಾಂಕುಗಳು ತಮ್ಮ ಸ್ವಂತ ಬಾಂಡವಲನ್ನು ಹೆಚ್ಚಿಸಿಕೊಂಡಿದ್ದು ಅದ ರಿಂದ ಸಮಾವೇಶವಾದ ಸದಸ್ಯ ಸಂಘಗಳಿಗೆ ಶೇತ್ಕಿ ಮತ್ತಿತರ ಕಾರ್ಯಗಳಿಗೆ ಹಣ ಪೂರೈಸತೊಡಗಿವೆ

ಕಳೆದ ನಾಲ್ಕು ವರ್ಷಗಳಲ್ಲಿ ಮಧ್ಯವರ್ತಿ ಹಣ ಪೂರೈಕೆಯ ಸಂಸ್ಥೆಗಳು ಕೊಡು ತ್ತಿರುವ ಸಾಲಗಳು ಕ್ರಮೇಣವಾಗಿ ವೃದ್ಧಿಯಾಗುತ್ತ ನಡೆದಿವೆ ಈ ಸಂಸ್ಥೆಗಳು ಕೊಟ್ಟ ಸಾಲದ ಹಣವು ೩೦-೬-೫೧ಕ್ಕೆ ೬ ೪೮ ಕೋಟಿ ರೂಪಾಯಿಗಳಷ್ಟಿದ್ದಿತು ಇದರಲ್ಲಿ ೧ ೫೧ ಕೋಟಿ ರೂ ವ್ಯಕ್ತಿಗಳಿಂದಲೂ ೪ ೯೭ ಕೋಟಿ ರೂ ಸಂಘ ಗಳಿಂದಲೂ ಬರಬೇಕಾಗಿದ್ದಿತು ಈ ಸಂಸ್ಥೆಗಳು ಕೊಡುತ್ತಿರುವ ಸಾಲದ ಪ್ರಮಾಣವು ಹೆಚ್ಚಾದರೂ ಅವು ತಮ್ಮ ವ್ಯವಹಾರವನ್ನು ಮರ್ಯಾದೆ ಮೀರಿ ಬೆಳೆಯಿಸಿಕೊಂಡಿಲ್ಲ ವೆಂಬುದು, ಸಾಲದ ಹಣ, ದುಡಿಯುವ ಭಾಂಡವಲು ಮತ್ತು ಠೇವುಗಳ ನಡುವೆ ಅವು ಇಟ್ಟುಕೊಂಡಿರುವ ಪ್ರಮಾಣದಿಂದ ವಿದಿತವಾಗುತ್ತದೆ ಕೆಲವೊಂದು ಬ್ಯಾಂಕು ಗಳು ತಮ್ಮ ವ್ಯವಹಾರವನ್ನು ತಮ್ಮ ಶಕ್ತಿಯನ್ನು ಮೀರಿ ಹೆಚ್ಚಿಸಿಕೊಂಡಿವೆಯಾದರೂ ದುಡಿಯುವ ಭಾಂಡವಲು ಮತ್ತು ಠೇವುಗಳಿಗೆ ಕೊಟ್ಟ ಸಾಲದ ಹಣದ ಪ್ರಮಾಣವು ಅನುಕ್ರಮವಾಗಿ ೪೮ ೩ ಮತ್ತು ೫೯ ಇರುತ್ತದೆ ಅಲ್ಲದೆ ಮುದ್ದತು ಮೀರಿದ ಸಾಲ ಗಳ ಪ್ರಮಾಣವು ಸಹಿತ ಅಷ್ಟೊಂದು ಹೆಚ್ಚಾಗಿಲ್ಲ ಅಂದರೆ ಬರಬೇಕಾಗಿದ್ದ ಒಟ್ಟು ಸಾಲ ೬೪೮ ೭೪ ಲಕ್ಷ ರೂಪಾಯಿಗಳಲ್ಲಿ ಮುದ್ದತು ಮೀರಿದ ಸಾಲದ ಹಣವು ೩೩ ೩೨ ಲಕ್ಷ ರೂ ಅಂದರೆ ೧೦೦ಕ್ಕೆ ೫ ೧ ರಷ್ಟು ಮಾತ್ರ ಇದ್ದಿತು

## ೩. ಬ್ಯಾಂಕಿಂಗ್ ಯೂನಿಯನ್ನುಗಳು

ಇಂಥ ಬ್ಯಾಂಕಿಂಗ್ ಯೂನಿಯನ್ನುಗಳ ಸಂಘಟನೆಯನ್ನು ಸಂಯುಕ್ತ ವರದಿಯೆಂದು ಕರೆಯಲಾಗುವ ಭನ್ಸಾಲೀ ಮೆಹತಾ ಸಮಿತಿಯ ವರದಿಯು ಮೊದಲ ಬಾರಿಗೆ! ಸೂಚಿಸಿತು ಆ ವರದಿಯಲ್ಲಿ ಮಾಡಿದ ಸೂಚನೆಗಳು ಕೆಳಗಿನಂತಿರುತ್ತವೆ

"ಪ್ರಾಥಮಿಕ ಸಂಘಗಳಿಗೆ ಹಣಕಾಸನ್ನು ಪೂರೈಸುವದಕ್ಕಾಗಿ ಸ್ಥಾನಿಕ ಠೇವು ಗಳನ್ನು ಪಡೆಯಲು ಸಮರ್ಥವಿದ್ದ ಹಾಗೂ ಒಂದೇ ತಾಲೂಕು ಕಾರ್ಯಕ್ಷೇತ್ರ ವಾಗಿರುವ ಬ್ಯಾಂಕಿಂಗ್ ಯೂನಿಯನ್ನನ್ನು ಆ ಪ್ರದೇಶವು ಯೋಗ್ಯವಿದ್ದರೆ ಮತ್ತು ಅಲ್ಲಿ ಹಳ್ಳಿಯ ಮಿತವ್ಯಯ, ಪತ್ತಿನ ಹಾಗೂ ವಿವಿಧ ಉದ್ದೇಶಗಳ ಸಂಘಗಳು ಸಾಕಷ್ಟಿದ್ದರೆ ಸ್ಥಾಪಿಸಬಹುದು ಅದಕ್ಕೆ ಬದಲಾಗಿ ಆ ಪ್ರದೇಶದಲ್ಲಿ ಸಾಕಷ್ಟು ಪ್ರಾಥಮಿಕ ಸಂಘಗಳು ಸದಸ್ಯರಾಗಿದ್ದುಕೊಂಡ ಸುಪರವಾಯಜಿಂಗ ಯೂನಿಯನ್ನು ತೃಪ್ತಿಕರವಾಗಿ ಕಾರ್ಯಮಾಡುತ್ತಿದ್ದರೆ ಅದನ್ನೇ ಬ್ಯಾಂಕಿಂಗ್ ಯೂನಿಯನ್

ಎಂದು ಪರಿವರ್ತಿಸಬಹುದು ಪ್ರಾಥಮಿಕ ಸಂಘಗಳ ಪರಿಸ್ಥಿತಿಯು ಸಮಾಧಾನಕರವಾಗಿರುವ ಪ್ರದೇಶದಲ್ಲಿ ಸುಪರವಾಯಿಜಿಂಗ್ ಯೂನಿಯನ್ ಅಸ್ತಿತ್ವದಲ್ಲಿರದಿದ್ದರೆ ಅಥವಾ ಹೊಸದಾಗಿ ಪ್ರಾರಂಭಿಸಲ್ಪಟ್ಟಿದ್ದರೆ, ಸುಪರವಾಯಿಜಿಂಗ್ ಯೂನಿಯನ್ನದ ಬದಲು ಬ್ಯಾಂಕಿಂಗ್ ಯೂನಿಯನ್ನುಗಳು ಕಾರ್ಯಮಾಡುತ್ತವೆ"

ಸಮಿತಿಯು ಮೇಲ್ಕಂಡಂತೆ ಶಿಫಾರಸು ಮಾಡಲು ಕೆಳಗಿನ ಕಾರಣಗಳೇ ಮುಖ್ಯವಾದವುಗಳೆಂದು ತೋರಿಸಲಾಗಿದೆ —

೧ ಕಾರ್ಯಕ್ಷೇತ್ರವು ಒಂದೇ ತಾಲೂಕಿಗೆ ನಿರ್ದಿಷ್ಟಪಡಿಸಲ್ಪಟ್ಟ ಸಂಸ್ಥೆಯು ಸದಸ್ಯ ಸಂಘಗಳ ಉತ್ತಮ ಬೆಳವಣಿಗೆಗೆ ಪೋಷಕವಾಗುವದೆಂದು ಆಶಿಸಲಾಗಿದೆ

೨ ಈಗ ಪ್ರಾಥಮಿಕ ಸಂಘಗಳು ತಮ್ಮ ಸದಸ್ಯರಿಗೆ ಶೇತ್ಕಿ ಸಲಕರಣೆಗಳ ಪೂರೈಕೆ ಮುಂತಾದ ವಿವಿಧೋದ್ದೇಶ ಚಟುವಟಿಕೆಗಳನ್ನು ಕೈಕೊಳ್ಳಬೇಕಾಗಿದೆ ತಾಲೂಕಿನಂತಹ ಕ್ಷೇತ್ರದಲ್ಲಿರುವ ಸಂಘಟನೆಯು ಪ್ರಾಥಮಿಕ ಸಂಘಗಳ ಚಟುವಟಿಕೆಗಳಿಗೆ ಹೆಚ್ಚು ಸಹಾಯಕಾರಿಯಾಗುತ್ತದೆ.

೩. ಮೇಲ್ವಿಚಾರಣೆ ಮತ್ತು ಹಣಕಾಸಿನ ಪೂರೈಕೆ ಇವುಗಳನ್ನು ಒಂದೇ ಸಂಘಟನೆಗೆ ಒಪ್ಪಿಸುವದರಿಂದ ಮೇಲ್ವಿಚಾರಣೆಯು ಪರಿಪೂರ್ಣ ಮತ್ತು ಉತ್ತಮವಾಗುವದಲ್ಲದೆ ಕಡಿಮೆ ವೆಚ್ಚದಲ್ಲಿ ಸಾಧ್ಯವಾಗುತ್ತದೆ

ಬ್ಯಾಂಕಿಂಗ್ ಯೂನಿಯನ್ನದ ಕಾರ್ಯಕ್ಷೇತ್ರವನ್ನು ಒಂದು ಅಥವಾ ಎರಡು ತಾಲೂಕುಗಳಿಗೆ ನಿರ್ದಿಷ್ಟಪಡಿಸಿದ್ದರೂ ಇವುಗಳ ಉದ್ದೇಶಗಳು ಮಧ್ಯವರ್ತಿ ಬ್ಯಾಂಕುಗಳ ಉದ್ದೇಶಗಳಿಗಿಂತ ಹೆಚ್ಚು ವಿಶಾಲವಾಗಿವೆ ಅಂದರೆ ಹಣಕಾಸಿನ ಪೂರೈಕೆ, ಮೇಲ್ವಿಚಾರಣೆ ಮತ್ತು ಒಕ್ಕಲುತನದ ಹುಟ್ಟುವಳಿಯ ಮಾರಾಟ ಈ ಮೊದಲಾದ ಕಾರ್ಯಗಳು ಸಾಮಾನ್ಯವಾಗಿ ಇವುಗಳಲ್ಲಿ ಸಮಾವೇಶವಾಗುತ್ತವೆ.

ಈ ಯೂನಿಯನ್ನುಗಳಲ್ಲಿ ಆರು ನಮೂನೆಯ ಸದಸ್ಯರಿರುತ್ತಾರೆ ಅಂದರೆ —

೧ ಆ ಪ್ರದೇಶಗಳಲ್ಲಿಯ ಸಹಕಾರಿ ಸಂಘಗಳು

೨ ಕಾರ್ಯಕ್ಷೇತ್ರದಲ್ಲಿ ವಾಸಿಸುವ ಮತ್ತು ಭೂಮಿಯನ್ನು ಧಾರಣ ಮಾಡಿದ ಮತ್ತು ಶೇತ್ಕಿ ಕಾರ್ಯಗಳಿಗಾಗಿ, ಪ್ರಾಥಮಿಕ ಸಂಘಗಳಿಗೆ ಮಂಜೂರಾದ ಮರ್ಯಾದೆ ಮೀರಿ ಹಣ ಪಡೆಯಲಿಚ್ಛಿಸುವ ಜನರು

೩ ಕಾರ್ಯಕ್ಷೇತ್ರದಲ್ಲಿ ವಾಸಿಸುವ ಮತ್ತು ಒಕ್ಕಲುತನದ ಹುಟ್ಟುವಳಿ ಅಥವಾ ಬೆಲೆಯುಳ್ಳ ಸಾಮಾನುಗಳ ಒತ್ತೆಯ ಮೇಲೆ ಹಣ ಪಡೆಯಲಿಚ್ಛಿಸುವ ಜನರು

೪ ಸಹಾನುಭೂತಿ ಸದಸ್ಯರು -ಆ ಪ್ರದೇಶದಲ್ಲಿಯ ಸಹಕಾರಿ ಆಂದೋಲನ ದಲ್ಲಿ ಆಸ್ಥೆಯುಳ್ಳ ಮತ್ತು ಅದರ ಬೆಳವಣಿಗೆಗೆ ಸಹಾಯಕರಾದ ಜನರು

೫ ಒಕ್ಕಲುತನದ ಹುಟ್ಟುವಳಿ ಮತ್ತು ಬೆಲೆಯುಳ್ಳ ಸಾಮಾನುಗಳ ಮೇಲೆ ಹಣ ಪಡೆಯಲಿಚ್ಛಿಸುವ ಸಮಾವೇಶವಾದ ಪ್ರಾಥಮಿಕ ಸಂಘ ಗಳ ಸದಸ್ಯರು

೬. ಮುಂಬಯಿ ಒಕ್ಕಲುತನ ಸಾಲಗಾರರ ಪರಿಹಾರ ಕಾಯದೆಯ (ಬಿ ಎ ಡಿ ಆರ್ ಕಾಯದೆ) ವರದಿಗಳಿಗೆ ಸಂಬಂಧಿಸಿದ ಸದಸ್ಯರು

ಕಳೆದ ನಾಲ್ಕು ವರ್ಷಗಳಲ್ಲಿ ಈ ಬ್ಯಾಂಕುಗಳು ಸಾಧಿಸಿದ ಪ್ರಗತಿಯನ್ನು ಕೆಳಗಿನ ಅಂಕೆ-ಸಂಖ್ಯೆಗಳಿಂದ ಕಾಣಬಹುದು —

| ವಿವರಗಳು | ೧೯೪೭-೪೮ | ೪೮-೪೯ | ೪೯-೫೦ | ೫೦-೫೧ |
|---|---|---|---|---|
| | (ರೂಪಾಯಿಗಳು ಲಕ್ಷದಲ್ಲಿ) | | | |
| ೧ ಬ್ಯಾಂಕಿಂಗ ಯುನಿಯನ್ನುಗಳು | — | ೪ | ೬ | ೬ |
| ೨ ಸದಸ್ಯರು | — | | | |
| ಅ ಸಂಘಗಳು | ೨೯೬ | ೩೩೨ | ೪೩೭ | ೪೮೨ |
| ಬ ವ್ಯಕ್ತಿಗಳು | ೬೭೧ | ೮೮೭ | ೧೮೫೭ | ೨೦೪೫ |
| | ೯೬೭ | ೧೨೧೯ | ೨೨೯೪ | ೨೫೨೭ |
| ೩ ಶೇರ ಭಾಂಡವಲು | ೧ ೬೦ | ೧ ೮೯ | ೩ ೭೫ | ೪ ೦೦ |
| ೪ ಕಾಯ್ದಿಟ್ಟ ಮತ್ತಿತರ ನಿಧಿಗಳು | ೦ ೬೩ | ೦ ೮೭ | ೨ ೦೮ | ೨ ೨೪ |
| ಸ್ವಂತ ಭಾಂಡವಲು | ೨ ೨೩ | ೨ ೭೬ | ೫ ೮೩ | ೬ ೨೪ |
| ೫ ರೇವುಗಳು | | | | |
| ಅ ವ್ಯಕ್ತಿಗಳು | ೪ ೪೯ | ೬ ೬೫ | ೧೧ ೭೧ | ೧೩ ೨೮ |
| ಬ ಸಂಘಗಳು | ೪ ೦೪ | ೪ ೫೭ | ೩ ೫೪ | ೩ ೪೦ |
| ಒಟ್ಟು ರೂ | ೮ ೫೩ | ೧೧ ೨೨ | ೧೫ ೨೫ | ೧೬ ೬೮ |
| ೬ ಪಡೆದ ಸಾಲ | ೦ ೮೩ | ೩ ೦೬ | ೩ ೯೮ | ೧೧ ೨೩ |
| ೭ ದುಡಿಯುವ ಭಾಂಡವಲು | ೧೧·೫೯ | ೧೭ ೦೪ | ೨೫ ೦೬ | ೩೪ ೧೫ |
| ೮ ಕೊಟ್ಟ ಸಾಲ | | | | |
| ಅ ವ್ಯಕ್ತಿಗಳು | ೭ ೦೩ | ೪ ೦೧ | ೪ ೭೧ | ೬ ೮೪ |
| ಬ. ಸಂಘಗಳು | ೨೫ ೭೨ | ೧೫ ೦೪ | ೪೦ ೧೪ | ೬೦ ೯೧ |
| ಒಟ್ಟು ರೂ. | ೩೨ ೭೫ | ೧೯ ೦೫ | ೪೪ ೮೫ | ೬೭ ೭೫ |

| | | | | | |
|---|---|---|---|---|---|
| ೯ | ಬರತಕ್ಕ ಸಾಲ | | | | |
| | ಅ ವ್ಯಕ್ತಿಗಳು | ೧ ೦೧ | ೧ ೬೨ | ೩ ೫೫ | ೪ ೬೫ |
| | ಬ ಸಂಘಗಳು | ೬ ೩೮ | ೫ ೦೭ | ೧೧ ೦೧ | ೧೯ ೩೬ |
| | ಒಟ್ಟು ರೂ | ೭ ೩೯ | ೬ ೬೮ | ೧೪ ೫೬ | ೨೪ ೦೭ |
| ೧೦ | ಮುದ್ದತು ಮೀರಿದ ಸಾಲಗಳು | ೦ ೨೧ | ೦ ೮೬ | ೦ ೦೩ | ೧ ೦೯ |
| ೧೧ | ಲಾಭ | ೦ ೨೨ | ೦ ೨೯ | ೦ ೨೧ | ೦ ೭೦ |

ಈ ಬ್ಯಾಂಕುಗಳು ಸಾಧಿಸಿದ ಪ್ರಗತಿಯು ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳ ಪ್ರಗತಿಯಂತೆ ಹೆಚ್ಚು ಸಮಾಧಾನಕಾರಕವಾಗಿಲ್ಲವೆಂಬುದು ಮೇಲಿನ ಅಂಕ–ಸಂಖ್ಯೆಗಳಿಂದ ವಿದಿತವಾಗುತ್ತದೆ. ಈ ಬ್ಯಾಂಕುಗಳು ಸಂಘಗಳ ಹೆಚ್ಚುತ್ತಿರುವ ಬೇಡಿಕೆಯನ್ನು ಪೂರೈಸುವದರ ಸಲುವಾಗಿ ಸಾಕಷ್ಟು ಸ್ಥಾನಿಕ ಠೇವುಗಳನ್ನು ಪಡೆಯಲು ಸಮರ್ಥವಾಗಿಲ್ಲ ಮತ್ತು ಇವು ಬಹುಮಟ್ಟಿಗೆ ತಮ್ಮ ಶಕ್ತಿ ಮೀರಿ ವ್ಯವಹಾರ ಮಾಡಿವೆ ಮಧ್ಯವರ್ತಿ ಬ್ಯಾಂಕುಗಳ ಹಣಕಾಸಿನ ಪರಿಸ್ಥಿತಿಯ ಬಗ್ಗೆ ಸಾರ್ವಜನಿಕರಿಗೆ ಇರುವ ನಂಬಿಗೆಯು ಯೂನಿಯನ್‌ಗಳ ಬಗ್ಗೆ ಇರದೇ ಇರುವದರಿಂದ ಸ್ಥಾನಿಕ ಠೇವುಗಳನ್ನು ಸಾಕಷ್ಟು ಕೂಡಿಸಲು ಇವುಗಳಿಗೆ ಸಾಧ್ಯವಾಗಿಲ್ಲ

ಮಾಡಾ ಸಹಕಾರಿ ಬ್ಯಾಂಕಿಂಗ್ ಯೂನಿಯನ್ ಒಂದನ್ನು ಹೊರತುಪಡಿಸಿ ಇನ್ನುಳಿದ ಎಲ್ಲ ಬ್ಯಾಂಕಿಂಗ್ ಯೂನಿಯನ್ನುಗಳು ಜಿಲ್ಹಾ ಮಧ್ಯವರ್ತಿ ಬ್ಯಾಂಕುಗಳಂತೆ ಸಾಗುವಳಿ ಮತ್ತು ಮಾರಾಟಕ್ಕಾಗಿ ಪ್ರಾಥಮಿಕ ಸಂಘಗಳಿಗೆ ಕೊಡುವ ಸಾಲದ ೪೧/೨ ಬಡ್ಡಿಯ ದರವನ್ನು ಬದಲಾಯಿಸಲು ಒಪ್ಪಿಕೊಂಡಿವೆ ಮುಂಬಯಿ ಸಹಕಾರಿ ಬ್ಯಾಂಕುಗಳ ಸಂಸ್ಥೆಯ ಶಿಫಾರಸುಗಳ ಮೇರೆಗೆ ತಮ್ಮ ಪೋಟನಿಯಮಗಳಲ್ಲಿ ತಿದ್ದುಪಡೆ ಮಾಡಿಕೊಳ್ಳಲು ಈ ಯೂನಿಯನ್ನುಗಳು ಕ್ರಮಗಳನ್ನು ಕೈಕೊಂಡಿವೆ

## ೪ ಔದ್ಯೋಗಿಕ ಬ್ಯಾಂಕುಗಳು

ರಾಜ್ಯದಲ್ಲಿಯ ಎಲ್ಲ ತರದ ಸಂಘಗಳಿಗೆ ಮಧ್ಯವರ್ತಿ ಹಣಕಾಸಿನ ಸಂಸ್ಥೆಗಳೇ ಹಣ ಪೂರೈಸುತ್ತ ಬಂದಿದ್ದವು ಆದರೆ ಜಿಲ್ಹಾ ಮಧ್ಯವರ್ತಿ ಬ್ಯಾಂಕುಗಳು ಔದ್ಯೋಗಿಕ ಸಹಕಾರಿ ಸಂಘಗಳಿಗೆ ಹಣ ಪೂರೈಸುವ ಕಾರ್ಯವು ಶಕ್ತಿಮೀರಿದುದು ಎಂಬ ಭಾವನೆಯು ಕ್ರಮೇಣ ಬೆಳೆಯತೊಡಗಿತು ಏಕೆಂದರೆ ಈ ಮಧ್ಯವರ್ತಿ ಬ್ಯಾಂಕುಗಳ ನಿರ್ದೇಶಕ ಮಂಡಲದಲ್ಲಿ ಬಹುತರ ಒಕ್ಕಲುತನದ ಸಂಘಗಳ ಪ್ರತಿನಿಧಿಗಳೇ ಇರುತ್ತಿದ್ದು ಪತ್ತು ಪಡೆಯಲು ಅರ್ಹತೆಯುಳ್ಳ ರೈತರಿಗೆ ಹಣ ಪೂರೈಸುವದೇ ಈ ಬ್ಯಾಂಕುಗಳ ಮುಖ್ಯ ಹೊಣೆಯಾಗಿದ್ದಿತು ಆದುದರಿಂದ ಗೃಹ ಉದ್ದಿಮೆಯ ಉಪಸಮಿತಿಯು ಜಿಲ್ಹಾ ಅಥವಾ ಪ್ರಾದೇಶಿಕ ಔದ್ಯೋಗಿಕ ಸಹಕಾರಿ ಬ್ಯಾಂಕು

ಗಳನ್ನು ಸ್ಥಾಪಿಸಬೇಕೆಂದು ಶಿಫಾರಸು ಮಾಡಿತು. ಇಂಥ ಪ್ರತ್ಯೇಕ ಹಣಕಾಸಿನ ಸಂಸ್ಥೆಯನ್ನು ಸ್ಥಾಪಿಸುವದರಿಂದ ನೇಕಾರ ಮತ್ತಿತರ ಕಸಬುದಾರರ ಉಳಿತಾಯ ಗಳನ್ನು ಸಂಚಯಿಸಲು ಸುಲಭ ಸಾಧ್ಯವಾಗುವದೆಂದು ಭಾವಿಸಲಾಗಿದ್ದಿತು ಇದ ರಿಂದ ಗೃಹ ಮತ್ತು ಚಿಕ್ಕಪುಟ್ಟ ಉದ್ದಿಮೆಗಳಿಗೆ ಸಾಲ ಕೊಡಲು ಸ್ವಂತ ನಿಧಿಗಳನ್ನು ಕೂಡಿಸಲಿಕ್ಕೂ ಮತ್ತು ಮಧ್ಯವರ್ತಿ ಬ್ಯಾಂಕುಗಳ ಮೇಲಿನ ಅನಾವಶ್ಯಕ ಭಾರವನ್ನು ಕಡಿಮೆ ಮಾಡಲಿಕ್ಕೂ ಶಕ್ಯವಿದ್ದಿತು ಅಲ್ಲದೆ ಔದ್ಯೋಗಿಕ ಬ್ಯಾಂಕುಗಳು ತಂತ್ರಜ್ಞ ನಿರ್ದೇಶಕ ಮಂಡಲದ ಲಾಭ ಪಡೆಯಲೂ ಮತ್ತು ಔದ್ಯೋಗಿಕ ಸಂಘಗಳ ಅದ ರಂತೆಯೇ ಅವುಗಳ ಸದಸ್ಯರ ವಿಶ್ವಾಸ ಗಳಿಸಿಕೊಳ್ಳಲು ಸಮರ್ಥವಾಗಬಲ್ಲವೆಂದು ಬಗೆಯಲಾಗಿತ್ತು ನೇಕಾರಿಕೆಯ ಉದ್ಯೋಗವು ಸಹಕಾರಿ ತತ್ವದಮೇಲೆ ಸುವ್ಯವಸ್ಥಿತವಾಗಿ ಸಂಘಟಿತವಾಗಿರುವ, ಅನುಕೂಲ ವಾತಾವರಣ ಸನ್ನಿವೇಶಗಳ ಮೂಲಕವಾಗಿ ನೇಕಾರರು ಸಾಕಷ್ಟು ಹಣ ಸಂಪಾದಿಸಿರುವ ಮತ್ತು ನೇಕಾರ ಸಂಘ ಗಳಿಗೆ ಸಾಕಷ್ಟು ಹಣದ ಅವಶ್ಯಕತೆ ಇರುವ, ಸೊಲ್ಲಾಪೂರ, ವಿಜಾಪುರ, ಬೆಳಗಾಂವ ಮತ್ತು ಸುರತ ಈ ನಾಲ್ಕೂ ಜಿಲ್ಲೆಗಳಲ್ಲಿ ಪ್ರಾಯೋಗಿಕ ಕ್ರಮವೆಂದು ಸರಕಾರವು ಜಿಲ್ಲಾ ಔದ್ಯೋಗಿಕ ಸಹಕಾರಿ ಬ್ಯಾಂಕುಗಳ ಸ್ಥಾಪನೆಗೆ ಸಮ್ಮತಿಯನ್ನಿತ್ತಿತು

೩೦-೬-೧೯೫೧ಕ್ಕೆ ಇದ್ದ ಈ ಬ್ಯಾಂಕುಗಳ ಪರಿಸ್ಥಿತಿಯನ್ನು ಕೆಳಗಿನ ಅಂಕೆ-ಸಂಖ್ಯೆಗಳಲ್ಲಿ ಕಾಣಬಹುದು

| | | |
|---|---|---|
| ೧ | ಬ್ಯಾಂಕುಗಳು | ೪ |
| ೨ | ಸದಸ್ಯರು | |
| | ಅ ವ್ಯಕ್ತಿಗಳು | ೧೦೨೩ |
| | ಬ ಸಂಘಗಳು | ೨೪೫ |
| ೩ | ಶೇರ ಭಾಂಡವಲು | ೪೦೩೮೨೫ |
| ೪ | ಕಾಯ್ದಿಟ್ಟ ಮತ್ತಿತರ ನಿಧಿಗಳು | ೧೩೪೨ |
| ೫ | ಠೇವುಗಳು | ೧೧೯೭೯೦೩ |
| ೬ | ಸಾಲಗಳು | ೮೧೯೮೫ |
| ೭ | ದುಡಿಯುವ ಭಾಂಡವಲು | ೧೫೮೫೦೫೫ |
| ೮ | ಕೊಟ್ಟ ಸಾಲ | |
| | ಅ ವ್ಯಕ್ತಿಗಳು | ೮೬೮೧೭೧ |
| | ಬ ಸಂಘಗಳು | ೧೩೧೭೯೭೪ |
| ೯ | ಬರತಕ್ಕ ಸಾಲ | |
| | ಅ ವ್ಯಕ್ತಿಗಳಿಂದ | ೨೧೧೩೪೨ |
| | ಬ ಸಂಘಗಳಿಂದ | ೨೦೩೦೦೬ |

ಈ ನಾಲ್ಕು ಬ್ಯಾಂಕುಗಳಲ್ಲಿ ಸುರತದಲ್ಲಿಯ ಬ್ಯಾಂಕನ್ನು ಮತ್ತು ಕೆಲ ಮಟ್ಟಿಗೆ ವಿಜಾಪೂರ ಜಿಲ್ಲೆಯಲ್ಲಿಯ ಬಾಗಲುಕೋಟೆಯ ಬ್ಯಾಂಕನ್ನು ಹೊರ್ತು

ವಡಿಸಿ ಇನ್ನುಳಿದ ಎರಡು ಬ್ಯಾಂಕುಗಳು ಸಾಕಷ್ಟು ಪ್ರಗತಿಹೊಂದಿಲ್ಲವೆಂದು ಅವು ಗಳ ಕಾರ್ಯಕಲಾಪಗಳ ಮೇಲಿಂದ ಕಂಡುಬರುತ್ತದೆ ಈ ಬ್ಯಾಂಕುಗಳು ಸಾಕಷ್ಟು ಠೇವುಗಳನ್ನು ಪಡೆದುಕೊಂಡು ತಮ್ಮ ಸಾಧನ ಸಂಪತ್ತಿಗಳನ್ನು ಬೆಳೆಯಿಸಿಕೊಳ್ಳಲು ಸಮರ್ಥವಾಗಿಲ್ಲ ಆದುದರಿಂದ ತಮ್ಮ ಕಾರ್ಯಕ್ಷೇತ್ರದಲ್ಲಿಯ ಎಲ್ಲ ಔದ್ಯೋಗಿಕ ಸಂಘಗಳಿಗೆ ಹಣ ಪೂರೈಸುವದು ಶಕ್ಯವಾಗಿಲ್ಲ ಹಣಕಾಸಿನ ಸಹಾಯದ ಸಲುವಾಗಿ ಈ ಬ್ಯಾಂಕುಗಳು ಕೇವಲ ರಾಜ್ಯದ ಸಹಕಾರಿ ಬ್ಯಾಂಕನ್ನೇ (Bombay State Co-op Bank) ಅವಲಂಬಿಸಿವೆ ಯಾಕಂದರೆ ರಾಜ್ಯ ಬ್ಯಾಂಕು ಈ ಬ್ಯಾಂಕುಗಳಿಗೆ ಸಾಲ ಪೂರೈಸುವ ಕೇಂದ್ರ ಸಂಸ್ಥೆಯೆಂದು ಗಣಿಸಲ್ಪಟ್ಟಿದೆ ಅಲ್ಲದೆ ಸದಸ್ಯ ಸಂಘಗಳ ಲೆಕ್ಕ ತಪಾಸಣೆ ಅಥವಾ ಸೆಲ್ವಿಚಾರಣೆಯನ್ನು ಮಾಡಲೂ ಈ ಬ್ಯಾಂಕುಗಳು ಸಮರ್ಥವಾಗಿಲ್ಲ ಹಾಗೂ ವ್ಯಕ್ತಿಗಳಿಂದ ಮತ್ತು ಸಂಘಗಳಿಂದ ಬಂದ ಸಾಲದ ಅರ್ಜಿಯ ಪರಿಶೀಲನೆಗಾಗಿ ಯೋಗ್ಯ ತಾಂತ್ರಿಕ ಜ್ಞಾನವುಳ್ಳ ನೌಕರ ವರ್ಗವು ಈ ಬ್ಯಾಂಕುಗಳಲ್ಲಿಲ್ಲ. ಒಟ್ಟಿನಲ್ಲಿ ಹೇಳಬೇಕೆಂದರೆ ಈ ಬ್ಯಾಂಕುಗಳನ್ನು ಸ್ಥಾಪಿಸಲ್ಪಟ್ಟ ಉದ್ದೇಶಗಳು ಸಫಲವಾಗಲಿಲ್ಲ ಆದುದ ರಿಂದ ಈ ಬ್ಯಾಂಕುಗಳು ಔದ್ಯೋಗಿಕ ಸಹಕಾರಿ ಸಂಘಗಳ ಮತ್ತು ಕೆಲಸಗಾರರ ಬೇಡಿಕೆಗಳನ್ನು ಯೋಗ್ಯ ರೀತಿಯಲ್ಲಿ ಪೂರೈಸುವ ಹಾಗೆ ಶೀಘ್ರ ಕ್ರಮಗಳನ್ನು ಕೈಕೊಳ್ಳುವದು ಅವಶ್ಯವಿದೆ

## ಇತರ ಮಧ್ಯವರ್ತಿ ಹಣಪೂರೈಕೆಯ ಸಂಘಗಳು

ಈ ಎಲ್ಲ ಜಿಲ್ಲಾ ಮಧ್ಯವರ್ತಿ ಬ್ಯಾಂಕು, ಬ್ಯಾಂಕಿಂಗ್ ಯುನಿಯನ್ ಮತ್ತು ಔದ್ಯೋಗಿಕ ಬ್ಯಾಂಕುಗಳನ್ನು ಬಿಟ್ಟು ಮುಂಬಯಿ ರಾಜ್ಯದ ವಿಲೀನ ಹೊಂದಿದ ಪ್ರದೇಶದಲ್ಲಿ ೯ ಮಧ್ಯವರ್ತಿ ಹಣ ಪೂರೈಕೆಯ ಸಂಸ್ಥೆಗಳಿವೆ ಈ ೯ ಬ್ಯಾಂಕುಗಳನ್ನು ಇನ್ನುಮುಂದ ಮಧ್ಯವರ್ತಿ ಹಣಪೂರೈಕೆಯ ಸಂಸ್ಥೆಗಳೆಂದು ಮನ್ನಿಸುವ ಬಗೆಗೆ ಸಹಕಾರಿ ಖಾತೆಯು ವಿಚಾರಿಸುತ್ತಲಿದೆ

ಈ ಮೇರೆಗೆ ಮುಂಬಯಿ ರಾಜ್ಯದಲ್ಲಿ ಒಂದು ರಾಜ್ಯ ಸಹಕಾರಿ ಬ್ಯಾಂಕು, ೧೯ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳು, ೬ ಬ್ಯಾಂಕಿಂಗ್ ಯುನಿಯನ್ನುಗಳು, ೪ ಔದ್ಯೋಗಿಕ ಬ್ಯಾಂಕುಗಳು ಮತ್ತು ವಿಲೀನ ಹೊಂದಿದ ಪ್ರದೇಶಗಳಲ್ಲಿಯ ೯ ಬ್ಯಾಂಕುಗಳು ಹೀಗೆ ಒಟ್ಟು ೩೯ ಹಣಪೂರೈಕೆಯ ಕೇಂದ್ರ ಸಂಸ್ಥೆಗಳಿವೆ ಆದರೆ ಈ ಮೊದಲೇ ಹೇಳಿರುವಂತೆ ವಿಲೀನ ಹೊಂದಿದ ಪ್ರದೇಶಗಳಲ್ಲಿಯ ೯ ಬ್ಯಾಂಕುಗಳ ಭವಿತವ್ಯತೆಯು ಇನ್ನೂ ವಿಚಾರಣೆಯಲ್ಲಿದೆ ಈ ಎಲ್ಲ ಬ್ಯಾಂಕುಗಳು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ೨೪೬ ಶಾಖೋಪಶಾಖೆಗಳನ್ನು ತೆರೆದು ರಾಜ್ಯದ ತುಂಬೆಲ್ಲ ಅವುಗಳ ಜಾಳಿಗೆಯನ್ನೇ ಹೆಣೆದಿವೆ ಗ್ರಾಮಾಂತರ ಉಳಿತಾಯಗಳ ಸಂಚಯ ಕ್ಕಾಗಿಯೂ, ಸಹಕಾರಿ ಸಂಘಗಳ ಮುಖಾಂತರ ಒಕ್ಕಲುತನದ ಉದ್ದಿಮೆಯ ಬೆಳ ವಣಿಗೆಗಾಗಿಯೂ ಈ ಬ್ಯಾಂಕುಗಳು ಹೆಚ್ಚು ಸಹಾಯಕಾರಿಯಾಗಿವೆ ಒಟ್ಟು ೧೩೮೯೫ ಲಕ್ಷ ರೂಪಾಯಿಗಳ ಶೇರು ಭಾಂಡವಲವುಳ್ಳ ಈ ಬ್ಯಾಂಕುಗಳಿಗೆ ೩೯,೨೪೬ ವ್ಯಕ್ತಿಗಳು ಮತ್ತು ೧೩,೪೨೭ ಸಂಘಗಳು ಸಭಾಸದರಾಗಿರುವರು

ಈ ಬ್ಯಾಂಕುಗಳು ೧೯೭೭ ಕೋಟಿ ರೂ ಠೇವುಗಳನ್ನು ಸಂಪಾದಿಸಿವೆಯಲ್ಲದೆ ೧೨೦ ೧೬ ಲಕ್ಷ ರೂಪಾಯಿಗಳ ಕಾಯ್ದಿಟ್ಟ ಮತ್ತಿತರ ನಿಧಿಗಳನ್ನು ನಿರ್ಮಾಣ ಮಾಡಲು ಸಮರ್ಥವಾಗಿವೆ ಈ ಬ್ಯಾಂಕುಗಳ ದುಡಿಯುವ ಭಾಂಡವಲು ೨೪ ೭೧ ಕೋಟಿ ರೂಪಾಯಿಗಳಷ್ಟಿದೆ ಇಂಥ ಭದ್ರ ಸಾಧನ-ಸಂಪತ್ತುಗಳಿಂದ ೮,೯೭೧ ವ್ಯಕ್ತಿಗಳಿಗೆ ೫ ೨೮ ಕೋಟಿ ರೂಪಾಯಿ ಮತ್ತು ೬,೯೧೦ ಸಂಘಗಳಿಗೆ ೨೮ ೯೭ ಕೋಟಿ ರೂಪಾಯಿಗಳ ಸಾಲವನ್ನು ಕೊಡಲು ಈ ಬ್ಯಾಂಕುಗಳು ಸಮರ್ಥವಾಗಿವೆ ವರ್ಷದ ಅಂತ್ಯಕ್ಕೆ ೭,೯೩೦ ವ್ಯಕ್ತಿಗಳಿಂದ ೨ ೫೫ ಕೋಟಿ ರೂಪಾಯಿ ಮತ್ತು ೬,೯೪೪ ಸಂಘಗಳಿಂದ ೯ ೫೯ ಕೋಟಿ ರೂಪಾಯಿಗಳ ಸಾಲವು ಬರಬೇಕಾಗಿದೆ ಈ ಎಲ್ಲ ಬ್ಯಾಂಕುಗಳು ಒಟ್ಟು ೧೭ ೦೮ ಲಕ್ಷ ರೂಪಾಯಿಗಳಷ್ಟು ಲಾಭ ಪಡೆದಿವೆ ರಾಜ್ಯದ ೨೮ ಜಿಲ್ಹೆಗಳಲ್ಲಿಯ ೮ ಜಿಲ್ಹೆಗಳಲ್ಲಿ ರಾಜ್ಯ ಸಹಕಾರಿ ಬ್ಯಾಂಕು, ೧೧ ಜಿಲ್ಹೆಗಳಲ್ಲಿ ಜಿಲ್ಹಾ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳು ಉಳಿದ ಜಿಲ್ಹೆಗಳಲ್ಲಿ ಜಿಲ್ಹಾ ಮಧ್ಯವರ್ತಿ ಬ್ಯಾಂಕುಗಳು, ಬ್ಯಾಂಕಿಂಗ್ ಯುನಿಯನ್‌ಗಳು ಮತ್ತು ರಾಜ್ಯ ಸಹಕಾರಿ ಬ್ಯಾಂಕು ಇವು ಹಣ ಪೂರೈಕೆಯ ಕೇಂದ್ರ ಸಂಸ್ಥೆಗಳಂತೆ ಕಾರ್ಯಮಾಡುತ್ತವೆ ಗ್ರಾಮಾಂತರ ಹಣಕಾಸಿನ ಸಮೀಕ್ಷಕೃತ ಯೋಜನೆಯು ಮೇರೆಗೆ ಪತ್ತು ಪಡೆಯಲರ್ಹತೆಯುಳ್ಳ ಒಕ್ಕಲಿಗರಿಗೆಳ ೧/೨ ಬಡ್ಡೀ ದರಕ್ಕೆ ಮಿಕ್ಕದಂತೆ ಒಕ್ಕಲುತನಕ್ಕಾಗಿ ಸಾಲ ಪೂರೈಸುವ ಹೊಣೆಯನ್ನು ಈ ಬ್ಯಾಂಕುಗಳು ಹೊತ್ತುಕೊಂಡಿವೆ ಈ ಕಾರ್ಯದಲ್ಲಿ ಈ ಬ್ಯಾಂಕುಗಳಿಗೆ ಸರಕಾರವೂ ಮತ್ತು ಭಾರತದ ರಿಝರ್ವ ಬ್ಯಾಂಕೂ ಧನಸಹಾಯವನ್ನು ಮಾಡುತ್ತಿವೆ

ಈ ಮೇರೆಗೆ ಭದ್ರವಾದ ಆರ್ಥಿಕ ಪರಿಸ್ಥಿತಿಯುಳ್ಳ ಕೇಂದ್ರ ಬ್ಯಾಂಕುಗಳ ಒಂದು ಮಹಾಜಾಲವೇ ರಚಿತವಾಗಿರುವದು ಮುಂಬಯಿ ರಾಜ್ಯದ ಸುದೈವವೆಂದೇ ಹೇಳಬಹುದು

## ೫ ಶೇತ್ಕಿ ಪತ್ತಿನ ಸಂಘಗಳು

ಈ ರಾಜ್ಯದಲ್ಲಿ ಗ್ರಾಮಾಂತರ ಪತ್ತಿನ ಸಂಘಗಳು ರೈಫೀಜನ್ ಮಾದರಿಯ ಮೇರೆಗೆ ಅಂದರೆ ನಿರ್ದಿಷ್ಟ ಕಾರ್ಯಕ್ಷೇತ್ರವನ್ನೊಳಗೊಂಡು ಸ್ಥಾಪಿಸಲ್ಪಡುತ್ತಿದ್ದವು ಇದರ ಪರಿಣಾಮವಾಗಿ ಎಲ್ಲ ಸದಸ್ಯರಲ್ಲಿ ಪರಸ್ಪರ ಪರಿಚಯ, ಸಂಯುಕ್ತ ಮತ್ತು ಅನಿಯಮಿತ ಹೊಣೆ, ಸಮಿತಿಯವರ ಉಚಿತ ಸೇವೆ, ಲಾಭವನ್ನೆಲ್ಲ ಕಾಯ್ದಿಟ್ಟ ನಿಧಿಗೆ ಒಯ್ಯುವದು, ಸದಸ್ಯರಿಗೇನೇ ಸಾಲ ಪೂರೈಕೆ, ನಿಜ ಪತ್ತಿಗಿಂತ ವೈಯಕ್ತಿಕ ಪತ್ತಿನ ಮೇಲೆ ಅವಲಂಬಿಸುವದು ಮತ್ತು ಕೊಟ್ಟ ಸಾಲದ ಸದುಪಯೋಗವಾಗು ವಂತೆ ಮೇಲ್ವಿಚಾರಣೆ ಮತ್ತು ನಿಯಂತ್ರಣ ಈ ಮೊದಲಾದ ತತ್ವಗಳು ಅಸ್ತಿತ್ವದಲ್ಲಿ ಬಂದವು ಮೊದಲನೆಯ ಸಂಘವು ಧಾರವಾಡ ಜಿಲ್ಹೆಯ ಕಣಗಿನಹಾಳ ಎಂಬ ಹಳ್ಳಿ ಯಲ್ಲಿ ೧೯೦೫, ಮೇ ೮ ನೇ ತಾರೀಖಿಗೆ ನೋಂದಾಯಿಸಲ್ಪಟ್ಟಿತು ಶೇತ್ಕಿ ಪತ್ತಿನ ಸಂಘಗಳು ಸಹಕಾರಿ ಆಂದೋಲನದ ಮೇಟಿಯಾಗಿವೆ ಕೆಳಗಿನ ಅಂಕೆ-ಸಂಖ್ಯೆ ಗಳಲ್ಲಿ ಈ ಸಂಘಗಳು ಮೊದಲಿನಿಂದಲೂ ಸಾಧಿಸಿದ ವಿವರಗಳನ್ನು ಕೊಡಲಾಗಿದೆ

| ವಿವರಗಳು | ೧೯೦೬ | ೧೯೦೮ | ೧೯೧೩ | ೧೯೧೮ | ೧೯೨೩ | ೧೯೨೮ | ೧೯೩೧ |
|---|---|---|---|---|---|---|---|
| ೧. ಸಂಘಗಳು | ೨೧ | ೯೯ | ೪೦೬ | ೧,೩೨೮ | ೨,೭೧೦ | ೪,೧೭೭ | ೪,೬೫೦ |
| ೨. ಸದಸ್ಯರು | ೧,೧೨೭ | ೫,೧೫೦ | ೨೭,೭೫೫ | ೯೭,೨೬೮ | ೧,೯೭,೧೩೯ | ೨,೬೩,೪೯೩ | ೨,೬೮,೨೮೪ |
| ೩. ಶೇರು ಭಾಂಡವಲು | ೩೨೦ | ೨,೩೧೦ | ೧,೦೨೨ | ೪೩,೫೨೮ | ೪,೧೬,೫೩೪ | ೧೫,೪೪,೩೦೬ | ೨೫,೦೭,೭೦೮ |
| ೪. ರೇವುಗಳು | ೯,೫೬೦ | ೯೬,೯೪೦ | ೬,೧೮,೦೭೫ | ೨೮,೪೪,೬೪೭ | ೭೦,೯೯,೦೦೪ | ೧,೧೪,೨೦,೨೪೬ | ೧,೧೨,೭೩,೬೫೫ |
| ೫ ಕಾಯ್ದಿಟ್ಟ ಮತ್ತಿತರ ನಿಧಿಗಳು | — | ೫,೬೧೪ | ೯೦,೦೯೪ | ೪,೨೬,೧೩೭ | ೧೪,೪೮,೪೭೫ | ೪೦,೬೫,೭೪೫ | ೬೧,೬೩,೪೪೫ |
| ೬ ಪಡೆದ ಸಾಲಗಳು | ೧೨,೩೭೫ | ೬೯,೭೭೭ | ೧೫,೨೨,೮೩೬ | ೩೭,೪೩,೦೨೩ | ೮೧,೧೪,೪೫೩ | ೧,೮೨,೬೩,೨೨೬ | ೨,೨೬,೪೩,೮೬೬ |
| ೭ ದುಡಿಯುವ ಭಾಂಡವಲು | ೨೨,೫೫೫ | ೧,೭೪,೬೪೧ | ೨೨,೩೨,೦೦೭ | ೭೦,೫೭,೩೩೫ | ೧,೭೦,೭೮,೪೬೬ | ೩,೫೨,೯೩,೫೨೩ | ೪,೨೫,೮೮,೩೧೪ |
| ೮. ಬರತಕ್ಕ ಸಾಲ | ೧೯,೭೪೧ | ೧,೫೭,೦೬೫ | ೨೧,೦೦,೨೪೯ | ೬೩,೧೧,೯೨೧ | ೧,೫೫,೦೫,೦೮೪ | ೩,೧೬,೭೯,೦೯೦ | ೩,೮೬,೩೨,೬೩೦ |
| ೯ ಮುದ್ದತು ಮೀರಿದ ಸಾಲಗಳು | — | — | — | ೪,೬೨,೬೨೭ | ೩೧,೧೭,೦೯೩ | ೧,೦೮,೨೮,೫೨೬ | ೧,೧೫,೫೫,೫೮೬ |
| ೧೦ ಬರತಕ್ಕ ಸಾಲಗಳಿಗೆ ಮುದ್ದತು ಮೀರಿದ ಸಾಲಗಳ ಪ್ರಮಾಣ | — | — | — | ೭·೩% | ೨೦·೧% | ೩೪·೧% | ೩೯% |

ಈ ಸಂಘಗಳು ತಮ್ಮ ಮೊದಲಿನ ೫೫ ವರ್ಷಗಳಲ್ಲಿ ತೋರಿದ ಪ್ರಗತಿಯನ್ನು ಮೇಲಿನ ಪತ್ರಿಕೆಯು ತೋರಿಸುವದು ೧೯೧೨ರ ಸಹಕಾರಿ ಸಂಘಗಳ ಕಾಯದೆಯು ಪಾಸಾಗುವುದಕ್ಕೆ ಮುನ್ನ ಸಂಘಗಳ ಬೆಳವಣಿಗೆಯು ಸಾವಧಾನವಾಗಿದ್ದಿತು ಏಕೆಂದರೆ ೧೯೦೪ರ ಸಹಕಾರಿ ಪತ್ತಿನ ಸಂಘಗಳ ಕಾಯದೆಯ ಮೇರೆಗೆ ಪ್ರಾಥಮಿಕ ಸಂಘಗಳಿಗೆ ಹಣ ಪೂರೈಸುವದಕ್ಕಾಗಿ ಮಧ್ಯವರ್ತಿ ಹಣಕಾಸಿನ ಸಂಸ್ಥೆಗಳನ್ನು ಸಂಘಟಿಸಲು ಬರುವಂತಿರಲಿಲ್ಲ ಗ್ರಾಮಾಂತರ ಸಂಘಗಳು ತಮಗೆ ಬೇಕಾಗುವ ಹಣಕ್ಕಾಗಿ ತಮ್ಮ ಸ್ವಂತ ಭಾಂಡವಲವನ್ನೇ ಅವಲಂಬಿಸಬೇಕಾಗುತ್ತಿತ್ತು ಆದಾಗ್ಯೂ ಹಲಕೆಲ ಸಂಘಗಳು ಪಟ್ಟಣದ (Urban) ಪತ್ತಿನ ಸಂಘಗಳಿಂದಲೂ ಮತ್ತು ಸರಕಾರದಿಂದಲೂ ಹಣ ಪಡೆದುಕೊಳ್ಳುತ್ತಿದ್ದವು ೧೯೧೨ರ ಸಹಕಾರಿ ಸಂಘಗಳ ಕಾಯದೆಯು ಪಾಸಾದಂದಿನಿಂದ ಸಂಘಗಳು ಭರದಿಂದ ಬೆಳೆಯತೊಡ ಗಿದವು ಏಕೆಂದರೆ ಪ್ರಾಥಮಿಕ ಸಂಘಗಳಿಗೆ ಹಣವನ್ನು ಪೂರೈಸುವದಕ್ಕಾಗಿ ಮಧ್ಯ ವರ್ತಿ ಹಣ ಪೂರೈಕೆಯ ಸಂಸ್ಥೆಗಳನ್ನು ಮತ್ತು ಪ್ರಾಥಮಿಕ ಸಂಘಗಳ ಸಂಚಾಲ ನೆಯ ಮೇಲ್ವಿಚಾರಣೆಗಾಗಿ ಯೂನಿಯನ್ನುಗಳನ್ನು ಸ್ಥಾಪಿಸಲು ಈ ಕಾಯದೆಯಿಂದ ಅನುಕೂಲವಾಯಿತು. ಆರಂಭಕ್ಕ ಈ ಸಂಘಗಳಲ್ಲಿ ಶೇರ ಭಾಂಡವಲಿನ ಪದ್ಧತಿಯು ಬಳಕೆಯಲ್ಲಿರಲಿಲ್ಲ ಇದು ೧೯೨೩–೨೪ರಲ್ಲಿ ಸಂಘಗಳು ಶೇರು ಭಾಂಡವಲಿನ ಬಗೆಗೆ ಸುಧಾರಿಸಿದ ಪೋಟನಿಯಮುಗಳನ್ನು ಸ್ವೀಕರಿಸಿಕೊಂಡನಂತರ ಅಮಲಿನಲ್ಲಿ ಬಂದಿತು ೧೯೩೧ರ ಸಹಕಾರಿ ವರ್ಷದ ಕೊನೆಗೆ ಆರ್ಥಿಕ ಮುಗ್ಗಟ್ಟು ಉಂಟಾಗಿದ್ದರೂ ೪೬೩೦ ಸಂಘಗಳೂ ಮತ್ತು ೨೬೮೨೪೪ ಸದಸ್ಯರೂ ಇದ್ದರು ಈ ಸಂಘಗಳ ದುಡಿಯುವ ಭಾಂಡವಲು ಆ ಕಾಲಕ್ಕೆ ೪ ೫೫ ಕೋಟಿ ರೂ ಇದ್ದದ್ದು ಗಮನಾರ್ಹವಾಗಿದೆ ಇದರಲ್ಲಿ ಸಂಘಗಳ ಸ್ವಂತ ಭಾಂಡವಲು ೮೬ ೭೦ ಲಕ್ಷ ರೂ ಯಷ್ಟಿದ್ದಿತು ಅಂದರ ದುಡಿ ಯುವ ಭಾಂಡವಲಿನ ೨೦% ರಷ್ಟು ಇತ್ತು ಸಂಘಗಳು ಸ್ಥಾನಿಕವಾಗಿ ೧೧೨ ೭೩ ಲಕ್ಷ ರೂಪಾಯಿಗಳ ಠೇವುಗಳನ್ನು ಮತ್ತು ೨ ೨೬ ಕೋಟಿ ರೂಪಾಯಿಗಳ ಸಾಲ ವನ್ನು ಪಡೆದುಕೊಂಡಿದ್ದವು ೧೯೩೦–೩೧ನೆಯ ವರ್ಷದಲ್ಲಿ ಈ ಸಂಘಗಳು ಸದಸ್ಯರಿಗೆ ೧೩೩ ೧೨ ಲಕ್ಷ ರೂಪಾಯಿಗಳ ಸಾಲವನ್ನು ಕೊಟ್ಟದ್ದವಲ್ಲದೆ ೯೨ ೬೯ ಲಕ್ಷ ರೂಪಾಯಿಗಳ ಸಾಲವನ್ನು ವಸೂಲಮಾಡಿದ್ದವು ಆ ವರ್ಷದ ಅಂತ್ಯಕ್ಕೆ ಬರಬೇಕಾಗಿದ್ದ ಸಾಲವು ೩೮೬ ೩೨ ಲಕ್ಷ ರೂಪಾಯಿ ಇದ್ದು ಅವುಗಳಲ್ಲಿ ಮುದ್ದತು ಮೀರಿದ ಸಾಲವು ೧೧೫ ೫೫ ಲಕ್ಷ ರೂ ಇದ್ದಿತು ಬರತಕ್ಕ ಸಾಲಗಳಿಗೆ ಮುದ್ದತು ಮೀರಿದ ಸಾಲಗಳ ಪ್ರಮಾಣವು ೩೯% ಇದ್ದಿತು ಸದಸ್ಯರ ಸರಾಸರಿಯು ಪ್ರತಿ ಸಂಘಕ್ಕೆ ೫೭ ಇದ್ದಿತು ಮತ್ತು ದುಡಿಯುವ ಭಾಂಡವಲಿನ ಸರಾಸರಿಯು ಪ್ರತಿ ಸದಸ್ಯನಿಗೆ ರೂ ೧೫೮ ಮತ್ತು ಪ್ರತಿ ಸಂಘಕ್ಕೆ ರೂ ೯೧೧೬ ಇದ್ದಿತು ಅದರಂತೆಯೇ ಪ್ರತಿಯೊಬ್ಬ ಸದಸ್ಯನಿಂದ ಬರತಕ್ಕ ಬಾಕಿಯ ಸರಾಸರಿಯು ೧೪೪ ರೂ ಇದ್ದಿತು

೧೯೩೦-೩೧ ಮತ್ತು ಆ ತರುವಾಯ ಪ್ರಾರಂಭವಾದ ಆರ್ಥಿಕ ಮುಗ್ಗಟ್ಟಿನಿಂದ ಆಂದೋಲನಕ್ಕೆ ಹೆಚ್ಚಿನ ಪೆಟ್ಟು ತಗಲಿತು. ಆಂದೋಲನದ ಆಳಳಿತೆಯಲ್ಲಿಯ ದೋಷಗಳೆಲ್ಲವೂ ಈ ಅವಧಿಯಲ್ಲಿ ಹೆಚ್ಚು ಸ್ಪಷ್ಟವಾಗತೊಡಗಿದವು ಅನೇಕಾನೇಕ ಸಮಸ್ಯೆಗಳು ತಲೆದೋರಿದವು ಹೀಗಾಗಿ ಆಂದೋಲನೆಯಲ್ಲಿ ದುಡಿಯುತ್ತಿದ್ದ ಪ್ರತಿಯೊಬ್ಬ ಕಾರ್ಯಕರ್ತನು ಹೊಸ ಹೊಸ ಸಂಘಗಳನ್ನು ಸ್ಥಾಪಿಸುವ ಬದಲು ಇದ್ದ ಸಂಘಗಳನ್ನೇ ಬಲಪಡಿಸುವದಕ್ಕಾಗಿ ಮತ್ತು ಸಂಯೋಜಿಸುವದಕ್ಕಾಗಿ ಹೆಚ್ಚು ಗಮನ ಕೊಡಬೇಕಾಯಿತು. ಹೊಸ ಸಂಘಗಳ ನೋಂದಣಿಯ ಬಗೆಗೆ ಸಮ್ಮತಿ ಯನ್ನೀಯುವ ಪ್ರಸಂಗ ಬಂದಾಗ ಅವುಗಳ ಯಶಸ್ಸಿನ ಬಗ್ಗೆ ಕೂಲಂಕಷವಾಗಿ ವಿಚಾರ ಮಾಡಿ ಸಮ್ಮತಿ ಕೊಡಲಾಗುತ್ತಿದ್ದಿತು ಕೆಟ್ಟ ಸದಸ್ಯರನ್ನು ತಳ್ಳಿಹಾಕುವ, ದುರ್ಬಲ ಸಂಘಗಳನ್ನು ಬಂದು ಮಾಡುವ ದೊಡ್ಡ ಆಂದೋಲನವೇ ಪ್ರಾರಂಭ ವಾಯಿತು ಈ ಅವಧಿಯಲ್ಲಿ ಮುದ್ದತು ಮೀರಿದ ಸಾಲಗಳ ಪ್ರಮಾಣವು ಹೆಚ್ಚುತ್ತ ನಡೆದು ಕಳವಳಕ್ಕೆ ಎಡೆಗೊಟ್ಟಿತು ಸಂಘಗಳು ಅನಾವಶ್ಯಕ ತೊಂದರೆಗಳಿಗೆ ಒಳಗಾಗಬಾರದೆಂಬ ದೃಷ್ಟಿಯಿಂದ, ಮುದ್ದತು ಮೀರಿದ ಸಾಲಗಳ ಪ್ರಮಾಣವು ಹೆಚ್ಚಾಗದಂತೆ ನೋಡಿಕೊಳ್ಳಲು ಅನೇಕ ಕ್ರಮಗಳನ್ನನುಸರಿಸಲಾಯಿತು ಸವ ಲತ್ತಿನ ಯೋಜನೆಯನ್ನು ಜಾರಿ ಮಾಡಿದ್ದು ಇದೇ ಅವಧಿಯಲ್ಲಿಯೇ! ಆಗ ಈ ಯೋಜನೆಯು ಹೆಚ್ಚು ಯಶಸ್ವಿಯಾಯಿತೆಂದು ಹೇಳಬಹುದು. ಈ ಯೋಜನೆ ಯಿಂದ ಸಂಘಗಳಿಗೆ ಸದಸ್ಯರಿಂದ ಸಲ್ಲತಕ್ಕ ಸಾಲದ ಪ್ರಮಾಣವು ಕಡಿಮೆ ಯಾಯಿತಲ್ಲದೆ ಮುದ್ದತು ಮೀರಿದ ಸಾಲವೂ ಕಡಿಮೆಯಾಯಿತು ಹಾಗೂ ದಿವಾಳಿ ತೆಗೆಯುವಂತಹ ದುರ್ಧರ ಪ್ರಸಂಗದಿಂದ ಎಷ್ಟೋ ಸಂಘಗಳು ಪಾರಾದವು

ಕೆಳಗಿನ ಅಂಕೆ ಸಂಖ್ಯೆಗಳಲ್ಲಿ ಆರ್ಥಿಕ ಮುಗ್ಗಟ್ಟಿನ ಅವಧಿಯಲ್ಲಿಯು ಮತ್ತು ಎರಡನೆಯ ಜಾಗತಿಕ ಯುದ್ಧದ ಪೂರ್ವದಲ್ಲಿಯು ಸಂಘಗಳ ಪರಿಸ್ಥಿತಿಯ ಚಿತ್ರವನ್ನು ಕೊಡಲಾಗಿದೆ *

---

*ಇದರ ಬಗ್ಗೆ ಸವಿಸ್ತರ ವಿವರವುಳ್ಳ ಪತ್ರಿಕೆಯನ್ನು ಮುಂದಿನ ಪುಟದಲ್ಲಿ ಕೊಟ್ಟಿದೆ

| ವಿವರಗಳು | ೧೯೩೨-೩೩ | ೧೯೩೪-೩೫ | ೧೯೩೬-೩೭ | ೧೯೩೭-೩೮ |
|---|---|---|---|---|
| ೧ ಸಂಘಗಳು | ೪,೫೭೩ | ೪,೪೬೫ | ೩,೭೩೧ | ೩,೭೦೨ |
| ೨ ಸದಸ್ಯರು | ೨,೪೮,೫೦೪ | ೨,೨೭,೪೫೮ | ೨,೦೪,೪೮೪ | ೧,೯೫,೭೪೯ |
| ೩ ಶೇರ ಭಾಂಡವಲು | ೭೯,೪೨,೮೬೩ | ೩೦,೩೦ ೨೬೫ | ೨೭,೪೪,೬೪೯ | ೨೯,೯೮,೫೫೨ |
| ೪ ಠೇವುಗಳು | ೯೭,೪೦,೯೭೧ | ೭೯,೨೫,೫೬೩ | ೫೧,೬೮,೩೭೦ | ೪೪,೯೪,೧೮೩ |
| ೫ ಕಾಯ್ದಿಟ್ಟ ಮತ್ತಿತರ ನಿಧಿಗಳು | ೭೭,೭೯,೬೧೭ | ೭೬,೦೩,೭೮೭ | ೭೭,೩೯,೬೩೩ | ೭೯,೭೩ ೪೨೪ |
| ೬ ಪಡೆದ ಸಾಲ | ೨,೦೭,೮೭,೭೫೧ | ೧,೮೯,೭೪,೨೩೩ | ೧,೫೦,೨೩,೨೩೮ | ೧,೪೩,೪೬,೯೨೨ |
| ೭ ದುಡಿಯುವ ಭಾಂಡವಲು | ೪,೦೨,೮೧,೧೦೨ | ೩,೭೫,೩೩,೮೪೭ | ೩,೦೬,೭೫,೮೩೦ | ೨,೯೮,೧೩,೦೮೧ |
| ೮ ಬರತಕ್ಕ ಸಾಲ | ೩ ೫೮,೧೫,೧೭೩ | ೩,೨೧,೯೮,೨೭೯ | ೨,೫೭,೯೭,೭೮೧ | ೨,೫೦,೧೧,೧೫೬ |
| ೯. ಮುದ್ದತು ಮೀರಿದ ಸಾಲ | ೧,೭೯,೮೫,೫೮೦ | ೧,೫೯,೦೫,೪೪೫ | ೧,೨೮,೮೪,೦೪೯ | ೧,೫೬,೮೫,೩೧೫ |
| ೧೦ ಬರತಕ್ಕ ಸಾಲಗಳಿಗೆ ಮುದ್ದತು ಮೀರಿದ ಸಾಲಗಳ ಪ್ರಮಾಣ | ೫೦% | ೪೯ ೫% | ೪೮ ೨% | ೬೨ ೪% |

ಸಂಘಗಳ ಪರಿಸ್ಥಿತಿಯು ದಿನೇದಿನೇ ಹೇಗೆ ಕೆಡುತ್ತ ಹೋಗಿದೆ ಎಂಬುದನ್ನು ಮೇಲಿನ ಅಂಕೆ ಸಂಖ್ಯೆಗಳಲ್ಲಿ ಕಾಣಬಹುದು ಸಂಘಗಳ ಸಂಖ್ಯೆ, ಸದಸ್ಯರ ಸಂಖ್ಯೆ ಮತ್ತು ದುಡಿಯುವ ಭಾಂಡವಲುಗಳು ಒಂದೇಸವನೆ ಕಡಿಮೆಯಾಗುತ್ತ ನಡೆದಿದ್ದು ೧೯೩೭-೩೮ರ ಅಂತ್ಯಕ್ಕೆ ಮುದ್ದತು ಮೀರಿದ ಸಾಲಗಳ ಪ್ರಮಾಣವು ನೂರಕ್ಕೆ ೬೨ ೪ ರಷ್ಟಿದ್ದು ಕಳವಳಕ್ಕ ಎಡೆಗೊಟ್ಟಿದ್ದಿತು ಇದೇ ಅವಧಿಯಲ್ಲಿ ಮುಂಬಯಿ ರಾಜ್ಯದಿಂದ ಸಿಂಧವನ್ನು ಬೇರ್ಪಡಿಸಲಾಯಿತು ಆಂದೋಲನದ ಇತಿಹಾಸದಲ್ಲಿ ಇದು ಆರ್ಥಿಕ ಮುಗ್ಗಟ್ಟಿನ ಕಗ್ಗತ್ತಲೆಯ ಅವಧಿಯು ಸಾಲ ವಸೂಲಿಯನ್ನು ಪ್ರೋತ್ಸಾಹಿಸುವ ಸವಲತ್ತಿನ ಯೋಜನೆ, ಸಾಲ ವಸೂಲಿಗಾಗಿ ಕೈಕೊಳ್ಳತಕ್ಕ

ಉಗ್ರ ಕ್ರಮ ಈ ಮೊದಲಾದ ಕ್ರಮಗಳನ್ನು ಸಹಕಾರಿ ಖಾತೆಯವರು ಜಾರಿಯಲ್ಲಿ ತಂದುದರಿಂದ ಅಭೂತಪೂರ್ವವಾದ ಆರ್ಥಿಕ ಮುಗ್ಗಟ್ಟನ್ನು ಎದುರಿಸಲು ಆಂದೋಲನವು ಸಮರ್ಥವಾಯಿತು ಕೆಳಗಿನ ಅಂಕೆ ಸಂಖ್ಯೆಗಳು ಸಂಘಗಳ ಮೇಲೆ ಯುದ್ಧದಿಂದುಂಟಾದ ಪರಿಣಾಮವನ್ನು ವ್ಯಕ್ತಗೊಳಿಸುತ್ತವೆ

| ವಿವರಗಳು | ೧೯೩೮-೩೯ | ೧೯೪೦-೪೧ | ೧೯೪೨-೪೩ | ೧೯೪೪-೪೫ | ೧೯೪೫-೪೬ |
|---|---|---|---|---|---|
| ೧ ಸಂಘಗಳು | ೩,೭೦೯ | ೩,೭೭೭ | ೩,೮೯೭ | ೪,೩೪೪ | ೪,೭೯೬ |
| ೨ ಸದಸ್ಯರು | ೧,೯೨,೭೫೯ | ೧,೮೯,೧೯೭ | ೧,೮೯,೭೫೩ | ೨,೦೮,೬೬೮ | ೨,೩೨,೨೮೨ |
| ೩ ಶೇರ ಭಾಂಡವಲು | ೩೨,೨೫,೦೦೨ | ೩೩,೮೮,೧೮೩ | ೩೬,೨೬,೬೧೦ | ೪೪,೪೬,೦೪೮ | ೫೧,೪೪,೬೧೦ |
| ೪ ರೇವುಗಳು | ೪೦,೯೧,೩೦೧ | ೩೩,೩೬,೮೧೨ | ೩೧,೧೦,೦೫೧ | ೩೫,೩೬,೩೦೯ | ೩೭,೬೧,೩೧೭ |
| ೫ ಕಾಯ್ದಿಟ್ಟ ಮತ್ತಿತರ ನಿಧಿಗಳು | ೮೧,೪೭,೯೩೨ | ೮೬,೯೦,೮೯೩ | ೯೩,೮೧,೨[illegible]೫ | ೧,೦೫,೪೭,೯೫೧ | ೧,೧೧,೯೫,೭೦೫ |
| ೬ ಪಡೆದ ಸಾಲ | ೧,೩೮,೧೫,೪೩೭ | ೧,೧೫,೫೨,೭೪೨ | ೯೩,೮೬,೩೬೬ | ೮೬,೮೦,೭೬೭ | ೧,೦೬,೧೦,೭೭೭ |
| ೭ ಮಡಿಯುವ ಭಾಂಡವಲು | ೨,೯೨,೮೯,೬೭೨ | ೨,೬೯,೬೮,೧೩೦ | ೨,೫೫,೦೪,೨೪೨ | ೨,೭೨,೨೩,೨೫೬ | ೩,೦೬,೮೨,೪೦೯ |
| ೮. ಬರತಕ್ಕ ಸಾಲ | ೨,೪೪,೮೧,೨೭೬ | ೨,೧೯,೬೬,೮೪೪ | ೧,೯೧,೯೯,೧೫೮ | ೧,೮೯,೫೯,೫೪೩ | ೨,೧೨,೪೩,೭೭೩ |
| ೯. ಮುದ್ದತು ಮೀರಿದ ಸಾಲಗಳು | ೧,೪೨,೨೫,೪೫೬ | ೧,೨೪,೫೪,೯೫೪ | ೯೨,೫೭,೪೬೯ | ೭೪,೩೭ ೩೬೧ | ೭೫,೩೧,೮೭೫ |
| ೧೦. ಮುದ್ದತು ಮೀರಿದ ಸಾಲಗಳ ಪ್ರಮಾಣ | ೫೮ ೨% | ೫೭ ೬% | ೪೮ ೨% | ೩೯ ೨% | ೩೫ ೪% |

ಭನ್ಸಾಲಿ ಮೆಹತಾ ಸಮಿತಿಯ ವರದಿಯು ೧೯೩೮ರಲ್ಲಿ ಪ್ರಕಟವಾಯಿತು ಸಂಘಗಳ ಸುಧಾರಣೆಯ ಬಗ್ಗೆ ಈ ಸಮಿತಿಯು ಹಲವಾರು ಮುಖ್ಯ ಸೂಚನಗಳನ್ನು ಹೇಳಿದೆ ಆಂದೋಲನದಲ್ಲಿ ಇಲ್ಲಿಯವರೆಗೆ ನಿರ್ಲಕ್ಷಿಸಲ್ಪಟ್ಟಿದ್ದ ಉಳಿತಾಯ ವಿಭಾಗದ ಬಗ್ಗೆ ಸಮಿತಿಯು ಹೆಚ್ಚು ಗಮನಕೊಟ್ಟಿದ್ದು ಶೇತ್ಕಿ ಪತ್ತಿನ ಸಂಘಗಳ ಹೆಸರನ್ನು "ಶೇತ್ಕಿ ಮಿತವ್ಯಯ ಮತ್ತು ಪತ್ತು ಬೆಳೆಯಿಸುವ ಸಂಘ" ಎಂದು ಬದಲಾಯಿಸಲು ಸೂಚಿಸಿತು ಮತ್ತು ಈ ಸಮಿತಿಯ ವರದಿಯ ಮೇರಗೆ ಶೇತ್ಕಿ ಸಂಘಗಳ ಪೋಟ ನಿಯಮಗಳನ್ನು ಪುನರ್ನಿರ್ಮಿಸಲಾಯಿತು ೧೯೩೮–೩೯ರಿಂದ ೧೯೪೫–೪೬ರ ವರೆಗಿನ ಅವಧಿಯು ರೈತರಿಗೆ ಉತ್ತಮ ಕಾಲವಾಗಿದ್ದು ಆಗ ರೈತರ ಪರಿಸ್ಥಿತಿಯು ಎಷ್ಟೋ ಮಟ್ಟಿಗೆ ಸುಧಾರಣೆ ಹೊಂದಿರುವದೆಂಬುದು ಸಂಘಗಳ ಕಾರ್ಯಕಲಾಪಗಳಿಂದ ವಿದಿತವಾಗುತ್ತದೆ ಬರತಕ್ಕ ಸಾಲಗಳ ಪ್ರಮಾಣವು ಕಡಿಮೆಯಾಗುತ್ತಿರುವದನ್ನು ನೋಡಿದರೆ ಸಾಲಗಳ ಬೇಡಿಕೆಯು ಸಹಿತ ಕಡಿಮೆಯಾಗಿತ್ತೆಂದು ಕಂಡು ಬರುತ್ತದೆ ಸಾಲವನ್ನು ತೀರಿಸುವ ಶಕ್ತಿಯನ್ನು ಮೀರಿ ಸಾಲದಲ್ಲಿ ಮುಳುಗಿದ ರೈತರಿಗೆ ಸವಲತ್ತು ಕೊಡುವ ಧೋರಣೆಯನ್ನು ಸಹಿತ ಪುನರ್ಗಮನಿಸಲಾಯಿತು ಪ್ರಾಥಮಿಕ ಸಂಘಗಳಲ್ಲಿಯ ವೈಯಕ್ತಿಕ ಸಾಲಗಳನ್ನೆಲ್ಲ ಪರೀಕ್ಷಿಸಿ ಖಟ್ಟಬಾಕಿ, ಸಂಶಯಾತ್ಮಕ ಮತ್ತು ಮುಳುಗುವ ಸಾಲಗಳೆಂದು ವರ್ಗೀಕರಣ ಮಾಡಲಾಯಿತು ಮುಂಬಯಿ ಒಕ್ಕಲಿಗರ ಸಾಲ ಪರಿಹಾರ ಕಾಯದೆಯನ್ವಯ ರೈತರ ಸಾಲದಲ್ಲಿ ಅವರು ಕೊಡತಕ್ಕ ಪ್ರಮಾಣವನ್ನು ಗೊತ್ತುಪಡಿಸುವದು, ವಿವಿಧೋದ್ದೇಶ ಸಂಘಗಳ ಸಂಘಟನೆ, ಮಾರಾಟ ಸಂಘಗಳ ರಚನೆಯನ್ನು ಬಲಪಡಿಸುವದು ಈ ಮೊದಲಾದ ಕ್ರಮಗಳಿಂದ ಆಂದೋಲನವನ್ನು ಪುನರ್ಘಟಿಸುವ ಪ್ರಯತ್ನಗಳು ನಡೆದವು. ಮುಂಬಯಿ ಒಕ್ಕಲಿಗರ ಸಾಲಪರಿಹಾರ ಕಾಯದೆಯಿಂದ ರೈತರಿಗೆ ಎಷ್ಟೋ ಲಾಭವಾಯಿತು ಆರ್ಥಿಕ ಮುಗ್ಗಟ್ಟನ್ನು ಎದುರಿಸಲು ಮತ್ತು ಮಹತ್ತರವಾದ ಶೇತ್ಕಿ ಸಾಲದ ಸಮಸ್ಯೆಯನ್ನು ನಿವಾರಿಸಲು ಈ ಕಾಯದೆಯು ಸಹಾಯಕಾರಿಯಾಗಿದೆಯೆಂದು **ಗಾಡಗೀಳ ಸಮಿತಿಯು** ಅಭಿಪ್ರಾಯಪಟ್ಟಿದೆ ಈ ಎಲ್ಲ ಕ್ರಮಗಳ ಪರಿಣಾಮವಾಗಿ ಸಾಲ ವಸೂಲಿಯು ಸುಧಾರಣೆಯಾಗಿ ಮುದ್ದತು ಮೀರಿದ ಸಾಲಗಳ ಪ್ರಮಾಣವು ನೂರಕ್ಕೆ ೫೮.೨ ರಿಂದ ೩೫.೪ ಕ್ಕೆ ಇಳಿಯಿತು ೩೦–೬–೧೯೪೬ಕ್ಕೆ ಅಂದರೆ ಸ್ವಾತಂತ್ರ್ಯೋದಯದ ಸಮಯಕ್ಕೆ ೪,೭೯೬ ಸಂಘಗಳಿದ್ದವು ಇವುಗಳಲ್ಲಿ ೪,೫೩೨ ಶೇತ್ಕೀ ಪತ್ತಿನ ಮತ್ತು ಶೇತ್ಕೀ ಮಿತವ್ಯಯ ಪತ್ತು ಬೆಳೆಯಿಸುವ ಸಂಘಗಳಿದ್ದವು. ಈ ಎಲ್ಲ ಸಂಘಗಳ ಸದಸ್ಯರ ಸಂಖ್ಯೆಯು ೨,೧೧,೩೫೭ ರಷ್ಟು ಇದ್ದಿತು ಮತ್ತು ಅದೇ ಕಾಲಕ್ಕೆ ೨೬೪ ವಿವಿಧೋದ್ದೇಶ ಸಂಘಗಳು ಇದ್ದು, ಅವುಗಳ ಸದಸ್ಯರ ಸಂಖ್ಯೆ ೨೦,೯೨೫ ಇದ್ದಿತು ಗ್ರಾಮಾಂತರ ಪ್ರಾಥಮಿಕ ಸಂಘಗಳು ರಾಜ್ಯದ ಒಟ್ಟು ೨೧,೪೭೨ ಹಳ್ಳಿಗಳಲ್ಲಿ ೫,೯೪೨ ಹಳ್ಳಿಗಳನ್ನು ಆವರಿಸಿದ್ದವು ಅಂದರ ಸಹಕಾರಿ ಸಂಘಗಳು ನೂರಕ್ಕೆ ೨೭ ರಂತೆ ಹಳ್ಳಿಗಳನ್ನು ಆವರಿಸಿದ್ದವು. ಈ ಸಂಘಗಳ ಒಟ್ಟು ಸದಸ್ಯರ ಸಂಖ್ಯೆಯು ೨,೩೨,೨೮೨ ಇದ್ದಿತು ಐದು ಜನರ ಕುಟುಂಬಕ್ಕೆ ಒಬ್ಬ ಸದಸ್ಯನಿರುವನೆಂದು ಲೆಕ್ಕ ಹಾಕಿದರ ಸಹಕಾರಿ ಚಳವಳಿಯ ಕ್ಷೇತ್ರದಲ್ಲಿ ಹಳ್ಳಿಯ ಜನತೆಯ ನೂರಕ್ಕೆ ೭೫ ರಷ್ಟು ಜನರು ಬರುವರು ಪ್ರತಿ ಸಂಘದ ಸದಸ್ಯರ ಸರಾಸರಿ ಸಂಖ್ಯೆಯು ೪೮ ಇದ್ದಿತು ಒಟ್ಟು ದುಡಿಯುವ ಭಾಂಡವಲು ೩.೦೭ ಕೋಟಿ ರೂಪಾಯಿಗಳಷ್ಟು ಇದ್ದಿತು ಅದರಲ್ಲಿ ೧೮೧ ಕೋಟಿ ರೂಪಾಯಿ ಸ್ವಂತ

ಬಂಡವಾಳವಿದ್ದಿತು ಇದರಲ್ಲಿ ಶೇರ ಬಾಂಡವಲು ೨೨೯ ಲಕ್ಷ ರೂ ಕಾಯ್ದಿಟ್ಟ ಇತರ ನಿಧಿಗಳು ೨·೦೯ ಕೋಟಿ ರೂ ಮತ್ತು ಸದಸ್ಯರ ರೇವುಗಳು ೧೪೫ ಲಕ್ಷ ರೂ ಇದ್ದವು ಅಂದರೆ ಒಟ್ಟು ದುಡಿಯುವ ಬಂಡವಾಳದಲ್ಲಿ ೧೦೦ ಕ್ಕೆ ೫೪·೩ ರಷ್ಟು ಬಂಡವಾಳವು ಸಂಘಗಳಿಗೂ ಮತ್ತು ಅವುಗಳ ಸದಸ್ಯರಿಗೂ ಸಂಬಂಧಿಸಿದೆಂದು ಅರ್ಥವಾಗುತ್ತದೆ

ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ೩೦-೬-೫೧ ರ ವರೆಗೆ ಈ ಸಂಘಗಳು ತೋರಿಸಿದ ಪ್ರಗತಿಗೆ ಕೆಳಗಿನ ಪತ್ರಿಕೆಯು ನಿದರ್ಶನವಾಗಿದೆ

| ವಿವರಗಳು | ೧೯೪೬-೪೭ | ೧೯೪೭-೪೮ | ೧೯೪೮-೪೯ | ೧೯೪೯-೫೦ | ೧೯೫೦-೫೧ |
|---|---|---|---|---|---|
| ೧. ಸಂಘಗಳ ಸಂಖ್ಯೆ | ೫೨೭೧ | ೫೭೬೪ | ೮೨೧೪ | ೮೯೨೮ | ೯೭೦೨ |
| ೨ ಸದಸ್ಯರ ಸಂಖ್ಯೆ | ೨,೬೬,೪೨೭ | ೩,೨೧,೦೦೭ | ೪,೯೪,೧೬೫ | ೬,೧೧,೮೭೩ | ೭,೨೭,೨೭೬ |
| ೩ ಶೇರ ಭಾಂಡವಲು | ೬೫,೫೦,೪೯೯ | ೮೦,೪೨,೧೪೯ | ೧,೩೦,೦೯,೮೫೫ | ೧,೭೨,೫೭,೬೧೬ | ೨,೨೯,೮೫,೭೩೭ |
| ೪ ರೇವುಗಳು | ೪೩,೧೯ ೬೩೨ | ೪೪,೯೬,೩೧೭ | ೧,೧೦,೯೦,೬೦೬ | ೧,೨೭,೦೬,೬೦೪ | ೧,೪೫,೧೦,೫೧೫ |
| ೫ ಕಾಯ್ದಿಟ್ಟ ಪತ್ತಿ ತರ ನಿಧಿಗಳು | ೧,೧೭,೮೬,೪೬೫ | ೧,೨೫,೬೨,೭೭೪ | ೧,೬೪,೫೪,೩೪೬ | ೧,೯೩,೪೪,೩೭೬ | ೨,೦೯,೫೪,೮೭೮ |
| ೬ ಪಡೆದ ಸಾಲ | ೧,೪೩,೬೮,೭೧೫ | ೧,೫೫,೭೫,೪೩೨ | ೨,೯೩,೩೪,೯೭೧ | ೩,೭೭,೭೨,೦೪೦ | ೪,೮೯,೦೦,೨೪೦ |
| ೭. ದುಡಿಯುವ ಭಾಂಡವಲು | ೩,೭೦,೨೫,೩೧೧ | ೪,೦೬,೭೬,೬೭೨ | ೬,೯೮,೮೯,೭೭೪ | ೮,೬೦,೮೦,೬೫೬ | ೧೦,೭೩,೫೧,೩೭೦ |
| ೮ ಬರತಕ್ಕ ಸಾಲ | ೨,೫೧,೬೪,೩೪೦ | ೨,೯೦ ೦೭,೫೯೧ | ೪,೨೨,೮೫,೮೨೫ | ೫,೭೫,೯೦,೭೭೨ | ೭,೧೯,೩೧,೩೩೫ |
| ೯ ಮುದ್ದತು ಮೀರಿದ ಸಾಲಗಳು | ೮೧,೬೫,೨೨೬ | ೭೭,೩೮,೯೩೫ | ೯೭,೧೨,೮೯೯ | ೧ ೦೬,೭೧,೦೦೮ | ೧,೩೦,೮೧,೦೪೧ |
| ೧೦ ಮುದ್ದತು ಮೀರಿದ ಸಾಲಗಳ ಪ್ರಮಾಣ | ೩೨ ೨% | ೩೬ ೫% | ೨೩% | ೧೮ ೪% | ೧೮ ೪% |

(೧) ಯೋಜನಾ ಸಮಿತಿ (೨) ಗಾಡಗೀಳ ಸಮಿತಿ ಮತ್ತು (೩) ಶೇತ್ಕಿ ಪತ್ತಿನ ಸಂಘಟನಾ ಸಮಿತಿ ಈ ಮೂರು ಸಮಿತಿಗಳ ವರದಿಗಳು ಇದೇ ಅವಧಿಯಲ್ಲಿ ಪ್ರಕಟವಾದವು. ಗ್ರಾಮಾಂತರ ಮತ್ತು ಪಟ್ಟಣಗಳಲ್ಲಿಯ ಆರ್ಥಿಕ ಜೀವನದ ವಿವಿಧ ರಂಗಗಳಲ್ಲಿ ಸಹಕಾರಿ ತತ್ವವನ್ನು ಅನುಸರಿಸುವ ಬಗ್ಗೆ ಸಹಕಾರಿ ಯೋಜನಾ ಸಮಿತಿಯು ಹಲವಾರು ಸೂಚನೆಗಳನ್ನು ಮಾಡಿದೆ ನೂರಕ್ಕೆ ೫೦ ರಷ್ಟು ಹಳ್ಳಿಗಳನ್ನು ಮತ್ತು ೩೦ ರಷ್ಟು ಹಳ್ಳಿಯ ಜನಸಂಖ್ಯೆಯನ್ನು ಪ್ರಾಥಮಿಕ ಸಂಘಗಳು ೧೦ ವರ್ಷಗಳ ಅವಧಿಯಲ್ಲಿ ಆವರಿಸುವಂತೆ ಎಲ್ಲ ಪ್ರಯತ್ನಗಳನ್ನು ಮಾಡಬೇಕೆಂದು ಯೋಜನಾ ಸಮಿತಿಯು ಅಭಿಪ್ರಾಯ ಪಟ್ಟಿತು

ಎಲ್ಲ ಪ್ರದೇಶಗಳಲ್ಲಿಯ ಪತ್ತುಳ್ಳ ರೈತರಿಗೆ ಹಣಪೂರೈಕೆಯ ಸಂಸ್ಥೆಗಳಿಂದ ೧೦೦ಕ್ಕೆ ೪ ಬಡ್ಡೀ ದರಕ್ಕೆ ಹೆಚ್ಚಾಗದಂತೆ ದೀರ್ಘಾವಧಿ ಸಾಲಗಳನ್ನೂ, ೬. ೧/೪ ಬಡ್ಡೀ ದರಕ್ಕೆ ಹೆಚ್ಚಾಗದಂತೆ ಮಧ್ಯಮ ಮತ್ತು ಅಲ್ಪಾವಧಿ ಕಾಲದ ಸಾಲಗಳನ್ನೂ ಪೂರೈಸುವ ಉದ್ದೇಶವಿರಬೇಕೆಂದು ಡಾ ಗಾಡಗೀಳ ಅವರ ಧುರೀಣತ್ವದಲ್ಲಿದ್ದ ಉಪಸಮಿತಿಯೊಂದು ಶಿಫಾರಸು ಮಾಡಿದೆ ಈ ಉದ್ದೇಶದ ಸಲುವಾಗಿ ಸ್ವಾಯತ್ತ ಶೇತ್ಕಿ ಪತ್ತಿನ ಸಂಸ್ಥೆಯೊಂದನ್ನು (Credit Corporation) ಸ್ಥಾಪಿಸಬೇಕೆಂದು ಈ ಸಮಿತಿಯು ಸೂಚಿಸಿತು ಇದರ ಹಿನ್ನೆಲೆಯ ಮಹತ್ವವನ್ನೂ ಮತ್ತು ಮೇಲಿನ ಎರಡೂ ಸಮಿತಿಗಳ ವ್ಯಾಪಕ ಶಿಫಾರಸುಗಳನ್ನೂ ಲಕ್ಷಿಸಿ ಮುಂಬಯಿ ಸರಕಾರದವರು ೧೯೪೬ರಲ್ಲಿ ಸರ್ ಮಣಿಲಾಲ ನಾನಾವಟಿಯವರ ಅಧ್ಯಕ್ಷತೆಯಲ್ಲಿ ಈ ಶಿಫಾರಸುಗಳನ್ನು ಪರೀಕ್ಷಿಸಲಿಕ್ಕೂ ಮತ್ತು ಯೋಗ್ಯವೆಂದು ತೋರಬಹುದಾದ ಶಿಫಾರಸುಗಳನ್ನು ಈ ರಾಜ್ಯಕ್ಕೆ ಅನ್ವಯಿಸಲಿಕ್ಕೂ, ಒಕ್ಕಲುತನದ ಪತ್ತಿನ ಪುನರ್ಘಟನಾ ಸಮಿತಿಯೊಂದನ್ನು ನೇಮಿಸಿದರು ಸಹಕಾರಿ ಹಣಪೂರೈಕೆಯ ಸಂಸ್ಥೆಗಳ ಪರಿಸ್ಥಿತಿಯನ್ನೂ ಮತ್ತು ಅವು ಹೊಸ ವ್ಯವಹಾರವನ್ನು ಕೈಕೊಳ್ಳುವ ಸಾಮರ್ಥ್ಯವನ್ನೂ ಪರೀಕ್ಷಿಸಿ ಈ ಸಮಿತಿಯು, ಅಸ್ತಿತ್ವದಲ್ಲಿದ್ದ ಸಹಕಾರಿ ಸಂಸ್ಥೆಗಳನ್ನೇ ಯೋಗ್ಯರೀತಿಯಲ್ಲಿ ಪುನರ್ಘಟಿಸಿ ಸರಕಾರೀ ಸಹಾಯವನ್ನು ಒದಗಿಸಿದರೆ ಶೇತ್ಕೀ ಪತ್ತಿನ ಕಾರ್ಪೋರೇಶನ್ (Credit Corporation) ಮಾಡಬಹುದಾದ ಕೆಲಸಗಳನ್ನೂ ಈ ಸಂಸ್ಥೆಗಳು ಮಾಡಬಲ್ಲವೆಂಬ ನಿರ್ಣಯಕ್ಕೆ ಬಂದಿತು ಇದಲ್ಲದೆ ೧೦೦ಕ್ಕೆ ೫೦ ರಷ್ಟು ಹಳ್ಳಿಗಳನ್ನೂ ೩೦ ರಷ್ಟು ಹಳ್ಳಿಯ ಜನಸಂಖ್ಯೆಯನ್ನೂ ಸಹಕಾರಿ ಆಂದೋಲನದಲ್ಲಿ ತರಬೇಕೆಂಬ ಅಖಿಲ ಭಾರತ ಯೋಜನಾ ಸಮಿತಿಯ ಅಭಿಪ್ರಾಯಕ್ಕೆ ಈ ಸಮಿತಿಯು ಪುಷ್ಟಿ ಕೊಟ್ಟಿತು ಈ ಸಮಿತಿಗಳ ಶಿಫಾರಸುಗಳಮೇರೆಗೆ ಗ್ರಾಮಾಂತರ ಪತ್ತಿನ ಸಂಘಗಳ ಪುನರ್ಘಟನೆಯಾಗುವ ಬಗ್ಗೆ ಸರಕಾರವು ಆದೇಶಗಳನ್ನು ಕಳಿಸಿತು ಅಂದರೆ ಹಳ್ಳಿಯ ಸಂಘಗಳು ಭದ್ರತೆಯನ್ನು ಲಕ್ಷಿಸಿ ಸಾಧ್ಯವಿದ್ದಷ್ಟು ಹೆಚ್ಚಿಗೆ ಹೊಸ ಸದಸ್ಯರನ್ನು ಮಾಡಿಕೊಳ್ಳುವ ದೃಷ್ಟಿಯಿಂದಲೂ ಮತ್ತು ಪತ್ತು ಪಡೆಯಲು ಅರ್ಹತೆಯುಳ್ಳ ಎಲ್ಲ ಶೇತ್ಕೀ

ಉತ್ಪಾದಕರಿಗೆ ಬೆಳೆ ಬೆಳೆದುಕೊಳ್ಳಲು ಮತ್ತು ಇತರ ಶೇತ್ಕೀ ಕಾರ್ಯಗಳಿಗಾಗಿ ೬ ೧/೪ ಬಡ್ಡೀ ದರದಂತೆ ಹಣ ಪೂರೈಸುವ ದೃಷ್ಟಿಯಿಂದಲೂ ತಮ್ಮ ಕಾರ್ಯಕ್ಷಮತೆಯನ್ನು ಮತ್ತು ಉಪಯುಕ್ತತೆಯನ್ನು ಹೆಚ್ಚಿಸಬೇಕೆಂದು ಅವುಗಳಿಗೆ ಸರಕಾರವು ಸಲಹೆಕೊಟ್ಟಿತು ೧೯೫೨–೫೩ ವರ್ಷಕ್ಕೆ ಮುಕ್ತಾಯವಾಗುವ ೭ ವರ್ಷಗಳ ಅವಧಿಯಲ್ಲಿ ಹಳ್ಳಿಗಳ ಜನಸಂಖ್ಯೆಯಲ್ಲಿ ನೂರಕ್ಕೆ ೩೦ ರಷ್ಟು ಜನತೆಯನ್ನು ಆಂದೋಲನದಲ್ಲಿ ತರುನಂತೆ ಆಂದೋಲನದ ಬೆಳವಣಿಗೆಯ ದೃಷ್ಟಿಯಿಂದ ಅನೇಕ ಕ್ರಮಗಳನ್ನು ಇದೇ ಅವಧಿಯಲ್ಲಿ ಅನುಸರಿಸಲಾಯಿತು ಶೇತ್ಕೀ ಪತ್ತಿನ ಸಂಘಟನಾ ಸಮಿತಿಯ ಶಿಫಾರಸುಗಳ ಮೇರೆಗೆ ಕೈಕೊಂಡ ಕ್ರಮಗಳ ಫಲವಾಗಿ ಸಂಘಗಳ ಚಾಲನೆಯಲ್ಲಿ ಸರ್ವರೀತಿಯ ಪ್ರಗತಿ ಹಾಗೂ ಬೆಳವಣಿಗೆ ಆಯಿತೆಂದು ಮೇಲಿನ ಪತ್ರಿಕೆಯಿಂದ ವ್ಯಕ್ತವಾಗುತ್ತದೆ

೩೦–೬–೧೯೫೧ಕ್ಕೆ ೯,೭೦೨ ಸಂಘಗಳು ಮತ್ತು ೭,೨೭, ೨೬೬ ಸದಸ್ಯರಿದ್ದರು ರಾಜ್ಯದಲ್ಲಿಯ ೩೬,೫೩೯ ಹಳ್ಳಿಗಳಲ್ಲಿ ೨೧,೪೭೯ ಹಳ್ಳಿಗಳನ್ನು ಈ ಸಂಘಗಳು ಆವರಿಸಿದ್ದವು ಅಂದರೆ ನೂರಕ್ಕೆ ೫೮ ೩ ಹಳ್ಳಿಗಳು ಸಹಕಾರಿ ಸಂಘಗಳ ಕ್ಷೇತ್ರದಲ್ಲಿ ಒಂದವು ಪ್ರತಿಯೊಂದು ಸಂಘಕ್ಕೆ ಸರಾಸರಿ ಸದಸ್ಯರ ಸಂಖೆಯು ೭೪ರಷ್ಟಿದ್ದಿತು ದುಡಿಯುವ ಬಾಂಡವಲು ೧೦ ೭೩ ಕೋಟಿ ರೂ ಇದ್ದಿತು ಪ್ರತಿ ಸದಸ್ಯನಿಗೆ ಮತ್ತು ಪ್ರತಿ ಸಂಘಕ್ಕ ದುಡಿಯುವ ಭಾಂಡವಲು ಅನುಕ್ರಮವಾಗಿ ಸರಾಸರಿ ರೂ ೧೪೭ ಮತ್ತು ರೂ ೧೧,೦೬೫ ಇದ್ದು ಈ ಪ್ರಮಾಣವು ಭಾರತದಲ್ಲಿಯೇ ಅತಿ ದೊಡ್ಡ ಪ್ರಮಾಣವೆಂದು ಹೇಳಬಹುದು ಸದಸ್ಯರ ಉಳಿತಾಯಗಳು ಅಂದರೆ ಶೇರು ಮತ್ತು ಠೇವುಗಳು ೩ ೧೨ ಕೋಟಿ ರೂಪಾಯಿಗಳಷ್ಟಿದ್ದು ಪ್ರತಿ ಸದಸ್ಯನ ಸರಾಸರಿ ಉಳಿತಾಯವು ೪೩ ರೂ ಆಗುತ್ತಿದ್ದಿತು ಶೇರು ಭಾಂಡವಲು ಕಾಯ್ದಿಟ್ಟ ಮತ್ತಿತರ ನಿಧಿಗಳು ಮತ್ತು ಸದಸ್ಯರ ಠೇವುಗಳನ್ನೊಳಗೊಂಡು ಸಂಘಗಳ ಸ್ವಂತ ಭಾಂಡವಲವು ರೂ ೫ ೨೧ ಕೋಟಿಯಾಗಿದ್ದಿತು ಅಂದರೆ ದುಡಿಯುವ ಭಾಂಡವಲಿನ ೪೯%ರಷ್ಟಿದ್ದಿತು ಇದೇ ಅವಧಿಯಲ್ಲಿ ಈ ಸಂಘಗಳು ೬ ೪೯ ಕೋಟಿ ರೂಪಾಯಿಗಳ ಸಾಲ ಕೊಟ್ಟಿದ್ದು ವರ್ಷದ ಅಂತ್ಯಕ್ಕೆ ಬರಬೇಕಾಗಿದ್ದ ಸಾಲವು ೭ ೧೯ ಕೋಟಿ ರೂ ಅಂದರೆ, ಬರಬೇಕಾಗಿದ್ದ ಸಾಲದ ಪ್ರಮಾಣವು ಪ್ರತಿ ಸದಸ್ಯನಿಗೆ ಸರಾಸರಿ ೯೯ ರೂ. ಇದ್ದಿತು ಮುದ್ದತು ಮೀರಿದ ಸಾಲಗಳ ಪರಿಸ್ಥಿತಿಯಾದರೂ ಸಮಾಧಾನಕರವಾಗಿದ್ದು ಬರಬೇಕಾಗಿದ್ದ ಸಾಲಗಳಲ್ಲಿ ಅವುಗಳ ಪ್ರಮಾಣವು ಕೇವಲ ೧೦೦ಕ್ಕೆ ೧೯ ೪ ರಷ್ಟಾಗುತ್ತಿತ್ತು ಈ ಸಂಘಗಳ ಆಡಳಿತೆಯ ವೆಚ್ಚವು ೬೦ ೯೧ ಲಕ್ಷ ರೂಪಾಯಿಗಳಷ್ಟು ಆಗಿದ್ದು ಪ್ರತಿ ಸದಸ್ಯನಿಗೆ ಮತ್ತು ಪ್ರತಿ ಸಂಘಕ್ಕೆ ಈ ವೆಚ್ಚದ ಸರಾಸರಿ ಪ್ರಮಾಣವು ಅನುಕ್ರಮವಾಗಿ ೮ ರೂ. ಮತ್ತು ೬೨೫ ರೂಪಾಯಿಗಳಷ್ಟು ಆಗಿದೆ ಹೀಗೆ ಈ ರಾಜ್ಯದಲ್ಲಿ ಶೇತ್ಕೀ ಪತ್ತಿನ ಸಂಘಗಳ ಪರಿಸ್ಥಿಯು ಸಮಾಧಾನಕರವಾಗಿದೆಯೆಂದು ಕಂಡು ಬರುತ್ತದೆ ಅಲ್ಲದೆ ಪ್ರಾಥಮಿಕ ಪತ್ತಿನ ಸಂಘಗಳು ವಿವಿಧ ಚಟುವಟಿಕೆಗಳನ್ನು ಹೆಚ್ಚಿನ ರೀತಿಯಲ್ಲಿ ಕೈಕೊಳ್ಳುತ್ತಿರುವದು ಗಮನಾರ್ಹವಾದ ಸಂಗತಿಯಾಗಿದ ಎಂದು ಹೇಳಬಹುದು. ಯುದ್ಧದ ತರುವಾಯ, ಪ್ರಾಥಮಿಕ ಸಂಘಗಳ ಕಾರ್ಯಕಲಾಪಗಳು ರೈತರ ಜೀವನದ ಎಲ್ಲ ರಂಗಗಳನ್ನೂ ಆವರಿಸಿಕೊಳ್ಳುವಷ್ಟು

ವಿಸ್ತೃತವಾಗುವ ಹಾಗೆ ಕೊಡಲ್ಪಟ್ಟ ಚಾಲನೆಯು ಬರಬರುತ್ತ ತೀವ್ರವೂ ಬಲಿಷ್ಠವೂ ಆಗತೊಡಗಿದವು ಹಿಂದುಸ್ತಾನದಲ್ಲಿಯ ಸಹಕಾರಿ ಚಳವಳಿಯು ಪ್ರಗತಿ ಹೊಂದದಿರುವ ಅನೇಕ ಕಾರಣಗಳಲ್ಲಿ ಅದು ಕೇವಲ ಪತ್ತಿನ ಆಂದೋಲನದ ಮಟ್ಟಿಗೇನೇ ತನ್ನ ಚಟುವಟಿಕೆಗಳನ್ನು ಇಟ್ಟುಕೊಂಡುದುದು ಒಂದು ಕಾರಣವಾಗಿದೆ ಎಂದು ಕೆಲವರ ಭಾವನೆ ಇದ್ದಿತು ಆದುದರಿಂದ ಪತ್ತನ್ನು ಪೂರೈಸುವದರ ಜೊತೆಗೆ, ಮಾರಾಟ, ನಿತ್ಯಾವಶ್ಯಕ ಸರಕು, ಶೇತ್ಕೀ ಸಲಕರಣೆಗಳ ಪೂರೈಕೆ ಮೊದಲಾದ ವಿವಿಧ ಚಟುವಟಿಕೆಗಳನ್ನು ಕೈಕೊಳ್ಳಬಹುದಾದ ವಿವಿಧೋದ್ದೇಶ ಸಂಘಗಳನ್ನು ಸ್ಥಾಪಿಸುವ ಬಗ್ಗೆ ಸೂಚಿಸಲಾಯಿತು. ಯುದ್ಧ ಕಾಲದಲ್ಲಿ ಈ ವಿಚಾರಕ್ಕೆ ಹೆಚ್ಚಿನ ಪ್ರಾಧಾನ್ಯ ಬರತೊಡಗಿತು ಆದುದರಿಂದ ಶೇತ್ಕೀ ಪತ್ತಿನ ಸಂಘಟನಾ ಸಮಿತಿಯು, ಎಲ್ಲ ಪ್ರಾಥಮಿಕ ಸಂಘಗಳು ವಿವಿಧೋದ್ದೇಶ ಸಂಘಗಳಾಗಬೇಕೆಂದೂ ತಮ್ಮ ಶಕ್ತಿಗನುಗುಣವಾಗಿ ವ್ಯಾಪಾರೀ ನಷ್ಟಕ್ಕೆ ಗುರಿಯಾಗದಂತೆ ಬಿನ್ ಪತ್ತಿನ ಚಟುವಟಿಕಗಳನ್ನು ಬೆಳೆಯಿಸಿಕೊಳ್ಳಬೇಕೆಂದೂ ಶಿಫಾರಸು ಮಾಡಿತು. ಈ ಶಿಫಾರಸಿನ ಮೇರೆಗೆ ಈ ರಾಜ್ಯದಲ್ಲಿ ಸಾಧ್ಯವಿದ್ದ ಮಟ್ಟಿಗೆ ಪತ್ತಿನ ಸಂಘಗಳನ್ನು ವಿವಿಧೋದ್ದೇಶ ಸಂಘಗಳನ್ನಾಗಿ ಪರಿವರ್ತಿಸಲು ಮತ್ತು ಬಿನ್ ಪತ್ತಿನ ಚಟುವಟಿಕೆಗಳನ್ನು ಬೆಳೆಯಿಸಿಕೊಳ್ಳಲು ಪ್ರಯತ್ನಗಳು ನಡೆದಿವೆ

ಪಂಚವಾರ್ಷಿಕ ಯೋಜನೆಯಲ್ಲಿ ಪತ್ತು ಪಡೆಯಲು ಅರ್ಹತೆಯುಳ್ಳ ರೈತರಿಗೂ ಮತ್ತು ಸಾಕಷ್ಟು ಪತ್ತು ಇಲ್ಲದ ( Marginal Cultivators ) ಸಣ್ಣ ಸಣ್ಣ ರೈತರಿಗೂ ಉತ್ಪಾದನೆಯ ಶಕ್ತಿಯನ್ನು ಹೆಚ್ಚಿಸುವದರ ದೃಷ್ಟಿಯಿಂದ ಹಣ ಪೂರೈಸಬೇಕೆಂದು ಸೂಚಿಸಲಾಗಿದೆ. ಅಂದರೆ ರೈತರ ಕೊರತೆಯ ಆರ್ಥಿಕ ಸ್ಥಿತಿಯು ( deficit economy ) ಕಾಲಾಂತರದಲ್ಲಿ ಉಳಿತಾಯದ ( surplus economy ) ಸ್ಥಿತಿಯಾಗುವದು ಈ ಉದ್ದೇಶದ ಸಲುವಾಗಿ ಯೋಜನೆಯ ಇನ್ನುಳಿದ ಅವಧಿಯಲ್ಲಿ ನೂರಕ್ಕೆ ೬೦ ರಷ್ಟು ಜನಸಂಖ್ಯೆ ೭೫ ರಷ್ಟು ಹಳ್ಳಿಗಳನ್ನು ಆಂದೋಲನದಲ್ಲಿ ಸಮಾವೇಶಮಾಡಿಕೊಳ್ಳಬೇಕೆಂಬುದು ಸರಕಾರದ ಧೋರಣೆಯಾಗಿದೆ ಅಲ್ಲದೆ ಬೆಳವಣಿಗೆಯು ಸುಲಭಸಾಧ್ಯವಿದ್ದ ಹಿಂದುಳಿದ ಪ್ರದೇಶಗಳಿಗೂ ಶೇತ್ಕಿ ಪತ್ತಿನ ಆಂದೋಲನವನ್ನು ವಿಸ್ತರಿಸಬೇಕಂದು ಈಗಾಗಲೇ ಸೂಚಿಸಲಾಗಿದೆ ಒಕ್ಕಲುತನದ ಸಹಕಾರಿ ಚಳವಳಿಯು ಹಣ ಪೂರೈಸಬೇಕಾಗಿರುವ ರೈತರ ಸಂಖ್ಯೆಯನ್ನು ನಿರ್ಣಯಿಸುವಾಗ ಹಳ್ಳಿಗಳಲ್ಲಿ ದೊರೆಯಬಹುದಾದ ಪ್ರತಿಯೊಂದು ಇಂಚು ಭೂಮಿಯನ್ನು ಸಹಿತ ಗಮನಕ್ಕೆ ತಂದುಕೊಳ್ಳಬೇಕಾಗುವದು ಈ ಹಿಂದೆ ೩ ನೆಯ ಅಧ್ಯಾಯದಲ್ಲಿ ಹೇಳಿರುವಂತೆ ಹಳ್ಳಿಗಳ ವಿವಿಧ ಬೇಡಿಕೆಗಳನ್ನು ಪೂರೈಸುವಂತೆ ಗ್ರಾಮಾಂತರ ಜೀವನವನ್ನೇ ಪುನರ್ಘಟಿಸುವ ದೃಷ್ಟಿಯಿಂದ ಯೋಗ್ಯಸ್ಥಾನಗಳಲ್ಲಿ ವಿವಿಧೋದ್ದೇಶ ಸಂಘಗಳನ್ನು ಸಂಘಟಿಸುವ ಧೋರಣೆ ಮತ್ತು ಅಸ್ತಿತ್ವದಲ್ಲಿದ್ದ ಉತ್ತಮ ಸಂಘಗಳನ್ನು ವಿವಿಧೋದ್ದೇಶ ಸಂಘಗಳನ್ನಾಗಿ ಪರಿವರ್ತಿಸುವ ಕಾರ್ಯಕ್ರಮಗಳನ್ನು ಹೆಚ್ಚಾಗಿ ಅನುಸರಿಸಲಾಗುವದು ಸ್ಥಾನಿಕ ಉಳಿತಾಯಗಳನ್ನು ಆಕರ್ಷಿಸುವದಕ್ಕಾಗಿಯೂ, ಹಳ್ಳಿಯ ಜನರಲ್ಲಿ ಮಿತವ್ಯಯದ ಹವ್ಯಾಸವನ್ನು ಹೆಚ್ಚಿಸುವದಕ್ಕಾಗಿಯೂ ಮತ್ತು

ಸಂಘಗಳ ಸ್ವಂತ ಸಾಧನ ಸಂಪತ್ತಿಗಳನ್ನು ಬೆಳೆಯಿಸಿಕೊಳ್ಳುವದಕ್ಕಾಗಿಯೂ ಎಲ್ಲ ತರದ ಪ್ರಯತ್ನಗಳನ್ನು ಮಾಡಲಾಗುವದು

## ೬ ವಿವಿಧೋದ್ದೇಶ ಸಂಘಗಳು

ಭಾರತದಲ್ಲಿ ಸಹಕಾರಿ ಆಂದೋಲನವು ಈ ಹಿಂದೆ ಹೇಳಿರುವಂತೆ ವಿಶಿಷ್ಟ ಕಾರಣಗಳ ಸಲುವಾಗಿಯೇ ಸಣ್ಣ ಪತ್ತಿನ ಸಂಘಗಳಿಂದಲೇ ಪ್ರಾರಂಭ ವಾಯಿತು ಈ ಸಂಘಗಳು ಹಳ್ಳಿಗಳ ರೈತರಿಗೆ ಯೋಗ್ಯ ಬಡ್ಡಿ ದರದಲ್ಲಿ ಹಣ ಪೂರೈಸಿವೆಯಾದರೂ ಹಣ ಪೂರೈಕೆಯು ರೈತರ ಸಮಸ್ಯೆಗಳ ಒಂದು ಭಾಗ ಮಾತ್ರವಾಗಿತ್ತೆಂದು ಭಾವಿಸಲಾಯಿತು ಆದರೆ ಸಹಕಾರಿ ಆಂದೋಲನವು ಗ್ರಾಮಾಂತರ ಆರ್ಥಿಕ ರಚನೆಯನ್ನು ಉತ್ತಮ ತಳಹದಿಯ ಮೇಲೆ ಪುನರ್ಘಟಿಸಲು ಯಶಸ್ವಿಯಾಗಬೇಕಾದರೆ, ಬೆಳೆಗಳಿಗಾಗಿ ಹಣ ಪೂರೈಸುವದು, ಬೀಜ, ಗೊಬ್ಬರ, ಸಲಕರಣೆ ಮತ್ತಿತರ ನಿತ್ಯಾವಶ್ಯಕ ಕೌಟುಂಬಿಕ ವಸ್ತುಗಳನ್ನು ಪೂರೈಸುವದು, ಸಣ್ಣ ಪುಟ್ಟ ಉದ್ದಿಮೆಗಳಿಗೆ ಪ್ರೋತ್ಸಾಹಕೊಡುವದು ಮತ್ತು ಒಕ್ಕಲುತನ ಹುಟ್ಟುವಳಿಯ ಮಾರಾಟದ ವ್ಯವಸ್ಥೆ ಮಾಡುವದು ಈ ಮೊದಲಾದ ರೈತರೆದುರಿಗಿರುವ ಸಮಸ್ಯೆಗಳನ್ನು ಸಹಕಾರವು ನಿವಾರಿಸಲು ಪ್ರಯತ್ನಿಸಬೇಕು ಅರ್ಥಾತ್ ಹಳ್ಳಿಗಳ ಸಂಘಗಳು ಸದಸ್ಯರ ಶಕ್ಯವಿದ್ದ ಎಲ್ಲ ಬೇಡಿಕೆಗಳನ್ನು ಪೂರೈಸಬೇಕು. ಈ ಅಭಿಪ್ರಾಯವನ್ನು ಮೊದಲಬಾರಿಗೆ ರಿಝರ್ವ ಬ್ಯಾಂಕಿನ ಶೇತ್ಕೀ ಪತ್ತಿನ ಖಾತೆಯು ವ್ಯಕ್ತಪಡಿಸಿತು. ಭನ್ಸಾಲಿ ಮತ್ತು ಮೆಹತಾ ಅವರು ಮುಂಬಯಿ ಸರಕಾರಕ್ಕೆ ಸಾದರಪಡಿಸಿದ ತಮ್ಮ ಸಂಯುಕ್ತ ವರದಿಯಲ್ಲಿ ಈ ಅಭಿಪ್ರಾಯಕ್ಕೆ ಪುಷ್ಟಿಕೊಟ್ಟರು. ವಿವಿಧೋದ್ದೇಶ ಸಂಘಗಳನ್ನು ಸಂಘಟಿಸಬೇಕೆಂದು ಅವರು ಶಿಫಾರಸು ಮಾಡಿದರು ಎಲ್ಲಿ ಮಾರಾಟದ ಮತ್ತು ಪೇಟೆಯ ಸೌಕರ್ಯಗಳು ಸುಲಭಸಾಧ್ಯವಿವೆಯೋ ಅಲ್ಲಿ ಕೆಲವೊಂದು ಹಳ್ಳಿಗಳ ಗುಂಪಿಗಾಗಿ ಐದು ಮೈಲುಗಳ ಪ್ರದೇಶದಲ್ಲಿ ಒಂದು ವಿವಿಧೋದ್ದೇಶ ಸಂಘವನ್ನು ಸ್ಥಾಪಿಸಬೇಕು ಸದಸ್ಯರ ಎಲ್ಲ ನಿತ್ಯದ ಸಾಗುವಳಿ ಬೇಡಿಕಗಳನ್ನು ಪೂರೈಸುವದೇ ಸಂಘದ ಮುಖ್ಯ ಉದ್ದೇಶವಿರಬೇಕು ಮತ್ತು ಸದಸ್ಯರು ತಮ್ಮ ಉತ್ಪಾದನೆಗಳನ್ನೆಲ್ಲ ಮಾರಾಟಕ್ಕಾಗಿ ಇದೇ ಸಂಘಕ್ಕೆ ತರಲು ಒಪ್ಪಿಕೊಳ್ಳಬೇಕು ಈ ಶಿಫಾರಸುಗಳನ್ನು ಸರಕಾರವು ಒಪ್ಪಿಕೊಂಡು ಪ್ರಾತ್ಯಕ್ಷಿಕೆಯ ದೃಷ್ಟಿಯಿಂದ ಕಾರ್ಯಗತಗೊಳಿಸಬೇಕೆಂದು ಅಭಿಪ್ರಾಯಪಟ್ಟಿತು ಶೇತ್ಕಿ ಪತ್ತಿನ ಸಂಘಗಳ ಬೆಳವಣಿಗೆಯಲ್ಲಿ ವಿವಿಧೋದ್ದೇಶ ಸಂಘಗಳ ಸ್ಥಾಪನೆಯು ಮುಂದಿನ ಹೆಜ್ಜೆ ಎಂದು ಹೇಳಬಹುದು

ಈ ರಾಜ್ಯದಲ್ಲಿ ಮೊದಲನೆಯ ವಿವಿಧೋದ್ದೇಶ ಸಂಘವು ೧೯೩೭–೩೮ರಲ್ಲಿ ಠಾಣಾ ಜಿಲ್ಲೆಯ **ವಾಡಾ** ತಾಲೂಕಿನಲ್ಲಿಯ ಗೋರೆ ಎಂಬಲ್ಲಿ ಸ್ಥಾಪಿತವಾಯಿತು ವಿವಿಧೋದ್ದೇಶ ಸಂಘಗಳ ಬೆಳವಣಿಗೆಯನ್ನು ಸ್ಥೂಲವಾಗಿ ಕೆಳಗಿನಂತೆ ಎರಡು ಅವಧಿಗಳಲ್ಲಿ ವಿಭಾಗಿಸಬಹುದು

೧) ೧೯೩೭—೩೮ ರಿಂದ ೧೯೪೬—೪೭ರ ವರೆಗೆ
೨) ೧೯೪೭—೪೮ ರಿಂದ ೧೯೫೦—೫೧ರ ವರೆಗೆ

## ಅವಧಿಯ ಮೊದಲನೆಯ ಭಾಗ ( ೧೯೩೭–೩೮ ರಿಂದ ೧೯೪೬–೪೭ )

ಕೆಳಗಿನ ಅಂಕೆ–ಸಂಖ್ಯೆಗಳಲ್ಲಿ ಈ ಅವಧಿಯಲ್ಲಿಯ ಆಂದೋಲನದ ಬೆಳವಣಿಗೆಯ ಚಿತ್ರವನ್ನು ಕೊಡಲಾಗಿದೆ ೧೯೩೭–೩೮ ಮತ್ತು ೧೯೩೮–೩೯ ಈ ವರ್ಷಗಳ ಪ್ರತ್ಯೇಕ ಅಂಕೆ-ಸಂಖ್ಯೆಗಳು ದೊರೆಯುವಂತಿಲ್ಲ ೧೯೩೭-೩೮ರ ಅಂತ್ಯಕ್ಕೆ ಕೇವಲ ಒಂದೇ ಸಂಘ ಮತ್ತು ೧೯೩೮–೩೯ರ ಅಂತ್ಯಕ್ಕೆ ೮ ಸಂಘಗಳು ಇದ್ದವು

| ವಿವರಗಳು | ೧೯೩೯–೪೦ | ೧೯೪೧–೪೨ | ೧೯೪೩–೪೪ | ೧೯೪೬–೪೭ |
|---|---|---|---|---|
| ಸಂಘಗಳ ಸಂಖ್ಯೆ | ೭೫ | ೭೩ | ೧೦೬ | ೪೨೮ |
| ೨ ಸದಸ್ಯರ ಸಂಖ್ಯೆ | ೨,೭೪೧ | ೪,೪೪೧ | ೭,೮೬೬ | ೩೫,೦೮೨ |
| ೩ ಶೇರ ಭಾಂಡವಲು | ೪೨,೫೦೦ | ೭೫,೫೪೧ | ೧,೯೩,೬೨೪ | ೧೦,೪೮,೩೭೦ |
| ೪ ಕಾಯ್ದಿಟ್ಟ ಮತ್ತಿತರ ನಿಧಿಗಳು | ೧೨,೬೫೮ | ೨೧ ೫೬೬ | ೯೪,೦೧೦ | ೬,೧೧,೮೫೫ |
| ೫ ಠೇವುಗಳು | | | | |
| (ಅ) ಸದಸ್ಯರು | ೬,೫೮೪ | ೨೪,೬೮೯ | ೮೧,೨೨೪ | ೪,೫೩,೯೮೦ |
| (ಬ) ಸದಸ್ಯೇತರರು | ೧೭,೮೯೧ | ೨೫,೧೫೪ | ೧,೩೪,೬೫೨ | ೪,೦೪,೮೦೩ |
| ೬. ಮಧ್ಯವರ್ತಿ ಬ್ಯಾಂಕಿನಿಂದ ಸಾಲ | ೩೨,೨೯೫ | ೧,೨೭,೯೫೪ | ೨,೬೫,೦೮೦ | ೧೪,೭೦,೬೪೩ |
| ೭ ದುಡಿಯುವ ಭಾಂಡವಲು | ೧,೫೭,೮೫೨ | ೨ ೭೮ ೯೦೪ | ೨,೬೮,೫೯೦ | ೩೫,೫೬,೯೯೯ |

| | | | | | |
|---|---|---|---|---|---|
| ೮ | ಕೊಟ್ಟಸಾಲ | | | | |
| | (ಅ) ಬೆಳೆಗಳಿಗಾಗಿ ಸಾಲ | ೪೨,೫೮೮ | ೯೩,೩೪೫ | ೧,೩,೧೭೯೦ | ೬,೦೧ ೫೭೨ |
| | (ಬ) ಹುಟ್ಟುವಳಿ ಆಡವಿಟ್ಟು ಕೊಂಡು ಕೊಟ್ಟ ಸಾಲ | ೧,೧೯,೯೦೪ | ೨,೮೧,೪೩೨ | ೧೫,೩೬,೧೯೯ | ೫,೩೯,೭೪೪ |
| | (ಕ) ಮಧ್ಯಮ ಅವಧಿಯ ಸಾಲ | ೧೧,೪೩೫ | ೧೧,೮೬೮ | ೧೫,೧೩೦ | ೨,೭೮,೨೯೯ |
| | (ಡ) ಕೌಟುಂಬಿಕ ಮತ್ತು ಔದ್ಯೋಗಿಕ ನಲಕರಣೆ ಗಳಿಗಾಗಿ ಸಾಲ | ೧೦,೫೪೭ | ೬೭,೩೭೦ | ೯೨,೪೨೯ | ೩,೧೭,೫೫೫ |
| ೯ | ಬರತಕ್ಕ ಸಾಲ | ೭೦,೫೯೩ | ೨,೦೨,೧೪೦ | ೨,೯೧,೨೬೭ | ೧೪,೪೯,೬೭೦ |
| ೧೦ | ಪೂರೈಸಿದ ಶೇತ್ಕಿ ಮತ್ತು ಕೌಟುಂಬಿಕ ವಸ್ತುಗಳ ಬೆಲೆ | ೩೯,೦೧೭ | ೧,೨೧,೮೩೮ | ೧೦,೧೦,೯೩೮ | ೧,೦೮,೩೯,೦೨೬ |
| ೧೧ | ಒಕ್ಕಲುತನದ ಹುಟ್ಟುವಳಿ ಮಾರಾಟದ ಬೆಲೆ | ೨೬,೮೩೮ | ೩,೯೬,೮೪೮ | ೨೮,೫೩,೬೯೧ | — |
| ೧೨ | ಬಂದ ದಲಾಲಿ | ೨,೩೯೩ | ೯,೪೬೦ | ೩೧,೧೯೮ | ೧,೩೧,೬೫೫ |

ಮೊದಲನೇ ಸಂಘವು ಸ್ಥಾಪಿತವಾದಂದಿನಿಂದ ೧೦ ವರ್ಷಗಳ ಅವಧಿಯಲ್ಲಿ ವಿವಿಧೋದ್ದೇಶ ಸಂಘಗಳ ಸಂಖ್ಯೆಯು ೪೧೪ ಕ್ಕೂ ಅವುಗಳ ಸದಸ್ಯರ ಸಂಖ್ಯೆಯು ೩೫೦೮೨ ಕ್ಕೂ ಮುಟ್ಟಿತೆಂದು ಮೇಲಿನ ಅಂಕೆ-ಸಂಖ್ಯೆಗಳಿಂದ ತಿಳಿದು ಬರುತ್ತದೆ ಸಂಘಗಳ ದುಡಿಯುವ ಭಾಂಡವಲು ೩೫ ೬೬ ಲಕ್ಷ ರೂಪಾಯಿಗಳಿಗೆ ತಲುಪಿತು. ಅದರಲ್ಲಿ ೧೬.೫೯ ಲಕ್ಷ ರೂಪಾಯಿಗಳ ಸ್ವಂತ ಭಾಂಡವಲು ಇದ್ದಿತು ದೊರಕಿಸಿದ ಠೇವುಗಳು ೮ ೫೮ ಲಕ್ಷ ರೂಪಾಯಿ ಇದ್ದವು ೧೯೪೬-೪೭ರಲ್ಲಿ ಈ ಸಂಘಗಳು

೧೭ ೩೭ ಲಕ್ಷ ರೂಪಾಯಿಗಳ ಸಾಲ ಕೊಟ್ಟಿದ್ದವು ವರ್ಷದ ಅಂತ್ಯಕ್ಕೆ ಬರ ಬೇಕಾಗಿದ್ದ ಸಾಲದ ಮೊಬಲಗು ೧೪ ೪೯ ಲಕ್ಷ ರೂ ಇದ್ದಿತು ಸಂಘಗಳು ಪೂರೈಸಿದ ಶೇತ್ಕೀ ಮತ್ತು ಕೌಟುಂಬಿಕ ಸರಕುಗಳ ಬೆಲೆಯು ೧೦೮ ೩೯ ಲಕ್ಷ ರೂಪಾಯಿ ಇದ್ದಿತು. ಈ ಅವಧಿಯಲ್ಲಿ ಈ ಸಂಘಗಳು ತಡೆಇಲ್ಲದ ಪ್ರಗತಿ ಹೊಂದುತ್ತಲಿದ್ದ ವೆಂದೂ ಮೇಲಿನ ಅಂಕೆಗಳು ತೋರಿಸುತ್ತವೆ

**ಸರಕಾರದ ಸಹಾಯ ಧನ**—ಭನ್ಸಾಲಿ ಮೆಹತಾ ಸಮಿತಿಯ ವರದಿಯ ಶಿಫಾರಸುಗಳ ಮೇರೆಗೆ ಸರಕಾರವು ಈ ಸಂಘಗಳಿಗೂ ೧೫೦ ರೂಪಾಯಿ ಅಥವಾ ನೌಕರ ವರ್ಗದ ವೆಚ್ಚ ಇವೆರಡರಲ್ಲಿ ಕಡಿಮೆಯಾದುದನ್ನು ಸಹಾಯ ಧನವೆಂದು ಆರಂಭದ ಮೂರು ವರ್ಷಗಳವರೆಗ ಕೊಡಲು ಒಪ್ಪಿಕೊಂಡಿತು ಇದಲ್ಲದ ಕಟ್ಟಿ ಬೇಕಾಗಿದ್ದ ಗುದಾಮುಗಳ (ವಖಾರ) ವೆಚ್ಚದ ೨/೩ ದಷ್ಟು ಹಣವನ್ನು ೧೦೦ಕ್ಕೆ ೪ ಬಡ್ಡಿ ದರದಂತೆ ಸಾಲ ಕೊಡಲೂ ಸರಕಾರವು ಒಪ್ಪಿಕೊಂಡಿತು

**ಅವಧಿಯ ಎರಡನೆಯ ಭಾಗ (೧೯೪೭–೪೮ ರಿಂದ ೧೯೫೦–೫೧ ರವರೆಗೆ)**

ಈ ಅವಧಿಯಲ್ಲಿ ಈ ಸಂಘಗಳು ಸಾಧಿಸಿದ ಪ್ರಗತಿಯ ಚಿತ್ರವನ್ನು ಕೆಳಗಿನ ಅಂಕೆ–ಸಂಖ್ಯೆಗಳಲ್ಲಿ ಕೊಡಲಾಗಿದೆ.

| ವಿವರಗಳು | ೧೯೪೭-೪೮ | ೧೯೪೮-೪೯ | ೧೯೪೯-೫೦ | ೧೯೫೦-೫೧ |
|---|---|---|---|---|
| ೧ ಸಂಘಗಳ ಸಂಖ್ಯೆ | ೬೫೫ | ೧,೯೯೪ | ೨ ೧೬೧ | ೨,೮೦೭ |
| ೨ ಸದಸ್ಯರ ಸಂಖ್ಯೆ | ೫೪,೧೪೨ | ೧,೪೫ ೨೦೪ | ೨,೨೦,೧೧೧ | ೨,೮೮,೫೪೦ |
| | | (ರೂಪಾಯಿಗಳು ಲಕ್ಷದಲ್ಲಿ) | | |
| ೩ ಶೇರ ಭಾಂಡವಲು | ೧೭ ೬೩ | ೪೯ ೯೬ | ೭೩ ೦೨ | ೧೦೦ ೬೧ |
| ೪ ಕಾಯ್ದಿಟ್ಟ ಮತ್ತಿತರ ನಿಧಿಗಳು | ೧೨ ೪೦ | ೩೨ ೯೩ | ೫೧ ೩೫ | ೭೩ ೫೨ |
| ೫ ಠೇವುಗಳು | | | | |
| (ಅ) ಸದಸ್ಯರು | ೭ ೦೫ | ೨೪ ೪೯ | ೩೦ ೪೮ | ೩೯ ೬೩ |
| (ಬ) ಸದಸ್ಯೇತರರು | ೪ ೬೮ | ೧೫ ೯೬ | ೨೪ ೮೬ | ೨೯ ೧೫ |
| (ಕ) ಮಧ್ಯವರ್ತಿ ಬ್ಯಾಂಕುಗಳ ಸಾಲ | ೧೫ ೬೧ | ೮೧ ೩೬ | ೮೮ ೮೪ | ೧೪೮ ೪೬ |
| ೬ ದುಡಿಯುವ ಭಾಂಡವಲು | ೫೭ ೫೭ | ೨೨೧·೫೫ | ೨೮೭ ೭೮ | ೪೧೯ ೪೪ |

| | | | | | |
|---|---|---|---|---|---|
| ೭ | ಕೊಟ್ಟಸಾಲ | | | | |
| | (ಅ) ಬೆಳೆಗಳಿಗಾಗಿ ಸಾಲ | ೬ ೭೪ | ೨೪ ೫೬ | ೪೩ ೨೩ | ೮೫ ೧೪ |
| | (ಬ) ಹುಟ್ಟುವಳಿ ಅಡವಿಟ್ಟು ಕೊಂಡು ಕೊಟ್ಟ ಸಾಲ | ೧೨ ೨೧ | ೪ ೫೮ | ೧೨ ೧೪ | ೧೬ ೨೦ |
| | (ಕ) ಮಧ್ಯಮ ಅವಧಿಯ ಸಾಲ | ೪ ೪೭ | ೧೪ ೯೧ | ೩೫ ೫೭ | ೩೨ ೮೧ |
| | (ಡ) ಕೌಟುಂಬಿಕ ಮತ್ತು ಔದ್ಯೋಗಿಕ ಬೇಡಿಕೆಗಳ ಸಾಲ | ೧ ೭೦ | ೧೯ ೭೧ | ೩೫ ೦೮ | ೭೦ ೦೧ |
| ೮ | ಬರತಕ್ಕ ಸಾಲ | ೨೧ ೪೧ | ೬೯ ೩೭ | ೧೨೭ ೪೭ | ೧೯೯ ೭೫ |
| ೯ | ಮುದ್ದತು ಮೀರಿದ ಸಾಲ | ೩ ೪೯ | ೯ ೬೧ | ೧೮ ೫೩ | ೨೮ ೯೦ |
| ೧೦ | ಪೂರೈಸಿದ ಕೌಟುಂಬಿಕ ಮತ್ತು ಶೇತ್ಕಿ ಸರಕುಗಳ ಬೆಲೆ | ೧೩೯ ೫೦ | ೨೯೨ ೯೮ | ೬೬೮ ೦೭ | ೯೭೩ ೮೦ |
| ೧೧ | ದೊರೆತ ದಲಾಲಿ | ೧ ೮೨ | ೩ ೬೪ | ೫ ೪೫ | ೫ ೦೨ |

ಬೇರೊಂದೆಡೆಗೆ ಹೇಳಿರುವಂತೆ ೧೯೪೭ರಲ್ಲಿ ಸರಕಾರವು ಪತ್ತಿನ ಸಹಕಾರದ ಭವಿಷ್ಯವನ್ನು ಪರಿಶೀಲಿಸಲಿಕ್ಕೆ ಸರ್ ಮಣಿಲಾಲ ನಾನಾವಟಿ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿಯಮಿಸಿತು ಈ ಸಮಿತಿಯ ಶಿಫಾರಸುಗಳ ಮೇರೆಗ ಹೆಚ್ಚೆಚ್ಚು ವಿವಿಧೋದ್ದೇಶ ಸಂಘಗಳನ್ನು ಸ್ಥಾಪಿಸುವ ಮತ್ತು ಇದ್ದ ಶೇತ್ಕೀ ಸಂಘಗಳನ್ನು ವಿವಿಧೋದ್ದೇಶ ಸಂಘಗಳನ್ನಾಗಿ ಪರಿವರ್ತಿಸುವಬಗ್ಗೆ ಹೆಚ್ಚು ಮಹತ್ವ ಕೊಡಲಾಯಿತು ವಿವಿಧೋದ್ದೇಶ ಸಂಘಗಳ ಸ್ಥಾಪನೆಗೆ ಪ್ರೋತ್ಸಾಹ ಕೊಡುವ ಉದ್ದೇಶದಿಂದ ಇಂಥ ಸಂಘಗಳಿಗೆ ಕೊಡಲಾಗುವ ಸಹಾಯಧನದ ನಿರ್ಬಂಧನೆಗಳ ವಿಷಯದಲ್ಲಿ ಸರಕಾರವು ಉದಾರದೃಷ್ಟಿಯನ್ನಿಟ್ಟುಕೊಂಡಿತು ಅದರಂತೆ ಈಗ ಪ್ರತಿಯೊಂದು ಸಂಘಕ್ಕೆ ಪ್ರಾರಂಭದ ೩ ವರ್ಷಗಳಲ್ಲಿ ೩೦೦ ರೂ (ವಿಶಿಷ್ಟ ಪ್ರಸಂಗಗಳಲ್ಲಿ ೫೦೦ ರೂ) ನಾಲ್ಕನೆಯ ವರ್ಷದಲ್ಲಿ ೨೦೦ ರೂ ಮತ್ತು ಐದನೆಯ ವರ್ಷದಲ್ಲಿ ೧೫೦ ರೂ ಅಥವಾ ಸಂಘದ ವೆಚ್ಚದ ಅರ್ಧದಷ್ಟು ಇವುಗಳಲ್ಲಿ ಕಡಿಮೆ ಇದ್ದುದನ್ನು ಸರಕಾರವು ಸಹಾಯಧನವೆಂದು ಕೊಡಲು ನಿಶ್ಚಯಿಸಿತು ಈ ಎಲ್ಲ ಕ್ರಮಗಳ ಪರಿಣಾಮವಾಗಿ ಹೊಸ ಸಂಘಗಳ ಸ್ಥಾಪನೆ ಮತ್ತು

ಇದ್ದ ಸಂಘಗಳನ್ನು ಪರಿವರ್ತಿಸುವ ಕಾರ್ಯವು ೧೯೪೭–೪೮ರಿಂದ ಭರದಿಂದ ಸಾಗಿತು ವರುವರುಷಕ್ಕೂ ಸಂಘಗಳ ಸಂಖ್ಯೆ ಬೆಳೆಯುತೊಡಗಿತು ೩೦–೬–೫೧ಕ್ಕೆ ೨೮೦೭ ಸಂಘಗಳು, ೨೮೮೫೪೦ ಸದಸ್ಯರು ಮತ್ತು ೪೧೯ ೪೪ ಲಕ್ಷ ರೂ ದುಡಿಯುವ ಭಾಂಡವಲು ಇದ್ದಿತು ಆಂದೋಲನವು ೧೨೬೮೭ ಹಳ್ಳಿಗಳನ್ನು ಆವರಿಸಿದ್ದಿತು ಸಂಘಗಳ ಶೇರ ಭಾಂಡವಲು ಒಂಬು ಕೋಟಿ ರೂ ಮತ್ತು ಕಾಯ್ದಿಟ್ಟ ಮತ್ತಿತರ ನಿಧಿಗಳು ೭೩ ೫೩ ಲಕ್ಷ ರೂ ಇದ್ದವು ಆ ವರ್ಷದಲ್ಲಿ ಈ ಸಂಘಗಳು ೩೨೬ ೨೪ ಲಕ್ಷ ರೂ.ಗಳ ಸಾಲವನ್ನು ಕೊಟ್ಟಿದ್ದವು ವರ್ಷಾಂತ್ಯಕ್ಕೆ ೧೯೯ ೭೫ ಲಕ್ಷ ರೂ ಗಳ ಸಾಲ ಬರವೇಕಾಗಿದ್ದಿತು ಇವುಗಳ ಶೇತ್ಕಿ, ಕೌಟುಂಬಿಕ, ಇತರ ಬೇಡಿಕೆಗಳ ವ್ಯವಹಾರವು ೯೭೬ ೮೦ ಲಕ್ಷ ರೂ ಮತ್ತು ಪಡೆದ ಕಮೀಶನ್ ೫ ೦೨ ಲಕ್ಷ ರೂ ಆಗಿದ್ದಿತು ಪತ್ತು ಪಡೆಯಲು ಅರ್ಹತೆಯುಳ್ಳ ರೈತರಿಗೆಲ್ಲ ೭–೩–೦ ಬಡ್ಡಿ ದರದಂತೆ ಹಣ ಪೂರೈಸಲು ಅನುಕೂಲವಾಗುವಂತೆ ಸಂಘಗಳು ತಮ್ಮ ಪೋಟನಿಯಮಗಳಲ್ಲಿ ತಿದ್ದುಪಡೆ ಮಾಡಿಕೊಂಡಿವೆ ಬೆಳ್ಳಿ ಬಂಗಾರದ ಆಭರಣಗಳನ್ನು ಅಡವಾಗಿಟ್ಟುಕೊಂಡು ಸಾಲಕೊಡಲು ಕೆಲವು ಸಂಘಗಳು ಪರ್ಮಿಶಿಯನ್ನು ಪಡೆದಿವೆ ಕೆಲವು ಸಂಘಗಳು ನೀರಾವರಿ ಕಾರ್ಯವನ್ನು ಮತ್ತೆ ಕೆಲವು ಸಂಸ್ಕಾರ ಕೇಂದ್ರಗಳನ್ನು ತೆರೆದಿವೆ

ಉತ್ತಮ ರೀತಿಯಲ್ಲಿ ನಡೆದ ಕೆಲವೊಂದು ಸಂಘಗಳಿಗೆ ಸರಕಾರವು ಸಾಲವನ್ನು ಕೊಟ್ಟಿದೆಯಲ್ಲದೆ ವಖಾರಗಳನ್ನು ಕಟ್ಟಿಸಿಕೊಳ್ಳುವದಕ್ಕಾಗಿ ಸಹಾಯ ಧನವನ್ನೂ ಕೊಟ್ಟಿದೆ ೧೯೫೦–೫೧ ನೆಯ ವರ್ಷದಲ್ಲಿ ೭ ವಿವಿಧೋದ್ದೇಶ ಸಂಘಗಳಿಗೆ ಸರಕಾರವು ೪೭,೧೪೦ ರೂಪಾಯಿ ಸಾಲ ಮತ್ತು ೧೩,೧೭೦ ರೂಪಾಯಿ ಸಹಾಯಧನವನ್ನು ಕೊಟ್ಟಿದೆ. ಹೀಗೆ ವಿವಿಧೋದ್ದೇಶ ಸಂಘಗಳು ಸದಸ್ಯರಿಗೆ ಪತ್ತು ಮತ್ತು ಶೇತ್ಕಿ ಹಾಗೂ ಕೌಟುಂಬಿಕ ಸಲಕರಣೆಗಳನ್ನು ಪೂರೈಸುತ್ತ ಉಪಯುಕ್ತ ರೀತಿಯಲ್ಲಿ ಕಾರ್ಯ ನಡೆಯಿಸಿವೆ ಈ ಸಂಘಗಳಿಗೆ ಪಂಚವಾರ್ಷಿಕ ಯೋಜನೆಯಲ್ಲಿ ಮಹತ್ವದ ಸ್ಥಾನವನ್ನು ಕೊಡಲಾಗಿರುವದರಿಂದ ಅವುಗಳ ಭವಿತವ್ಯತೆಯು ಉಜ್ವಲವಾಗಿದೆ ಗ್ರಾಮಾಂತರ ಪ್ರದೇಶಗಳಲ್ಲಿ ಕಾರ್ಯಮಾಡುತ್ತಿರುವ ಸಹಕಾರಿ ಸಂಘಗಳಲ್ಲಿ ವಿವಿಧೋದ್ದೇಶ ಸಂಘಗಳು ಅತಿ ಉತ್ತಮವಾದವುಗಳೆಂದು ಯೋಜನಾ ಸಮಿತಿಯು ಅಭಿಪ್ರಾಯಪಟ್ಟಿದೆ ಶೇತ್ಕೀ ಸಲಕರಣೆಗಳನ್ನು ಕೊಳ್ಳುವ ಮತ್ತು ಹುಟ್ಟುವಳಿಯನ್ನು ಮಾರುವ ಚಟುವಟಿಕೆಗಳು ಬೇಸಾಯದ ಮುಖ್ಯ ಸೂತ್ರಗಳು ಎಂದು ಹೇಳಲಾಗಿದೆ ಸಾಮಾನ್ಯ ಒಕ್ಕಲಿಗನು ಅಜ್ಞನಿರುವದರಿಂದ ಈ ಎರಡೂ ವ್ಯವಹಾರಗಳಲ್ಲಿ ಅವನಿಗೆ ಅವನ ಶ್ರಮದ ಪೂರ್ಣ ಪ್ರತಿಫಲವು ಸಿಗುವದು ದುಸ್ತರವಾಗಿದೆ ಆದುದರಿಂದ ವಿವಿಧೋದ್ದೇಶ ಸಹಕಾರಿ ಸಂಘಗಳ ಸಂಘಟನೆಯು ಅತ್ಯವಶ್ಯವೆಂದು ಬೇರೆ ಹೇಳಬೇಕೇ ?

## ೬ ಕಾಳು ಕಡಿಯ ಬ್ಯಾಂಕುಗಳು ಮತ್ತು ಸಂಘಗಳು

**ಪೂರ್ವ ಇತಿಹಾಸ:**—೧೯೧೫ಕ್ಕಿಂತ ಮುಂಚಿತವಾಗಿಯೇ ಕಾಳುಕಡಿಯ ಬ್ಯಾಂಕುಗಳು ಪ್ರಾರಂಭಿಸಲ್ಪಟ್ಟವು. ೧೯೧೬ ಮತ್ತು ೧೯೧೮ರಲ್ಲಿ ವಿಜಾಪುರ ಜಿಲ್ಲೆಯ ಅಹಿರಸಂಗ ಮತ್ತು ಶಿರೂರಗಳಲ್ಲಿ ಈ ಬ್ಯಾಂಕುಗಳು ಅನುಕ್ರಮವಾಗಿ ಸ್ಥಾಪಿಸಲ್ಪಟ್ಟವು. ಕಾರವಾರ ಜಿಲ್ಲೆಯ ಮುರಡೇಶ್ವರದಲ್ಲಿಯೂ ೧೯೧೭ರಲ್ಲಿ ಕಾಳುಕಡಿಯ ಬ್ಯಾಂಕು ಸ್ಥಾಪಿತವಾಯಿತು. ಬೆಳಗಾಂವ ಜಿಲ್ಲೆಯ ಸಂತಿ ಬಸ್ತವಾಡ, ಸಟ್ಟಿಣಕುಡಿ ಮತ್ತು ಹುನ್ನರಗಿ ಗ್ರಾಮಗಳಲ್ಲಿ ಅನುಕ್ರಮವಾಗಿ ೧೯೧೮, ೧೯೨೦ ಮತ್ತು ೧೯೨೨ರಲ್ಲಿ ಕಾಳುಕಡಿಯ ಬ್ಯಾಂಕುಗಳು ಪ್ರಾರಂಭಿಸಲ್ಪಟ್ಟವು. ಕಾಳುಕಡಿಯ ಬ್ಯಾಂಕುಗಳ ಪ್ರಗತಿಯು ಅಷ್ಟೊಂದು ತೀವ್ರವಾಗಿರಲಿಲ್ಲ. ಈ ಬ್ಯಾಂಕುಗಳ ಚಟುವಟಿಕೆಗಳು ಕೆಲವೇ ಜಿಲ್ಲೆಗಳಿಗಷ್ಟೇ ಮರ್ಯಾದಿತವಾಗಿದ್ದವು. ಆ ತರುವಾಯ ರಾಜ್ಯದ ಇತರ ಕೆಲವೊಂದು ಜಿಲ್ಲೆಗಳಲ್ಲಿಯೂ ಕಾಳುಕಡಿಯ ಬ್ಯಾಂಕುಗಳು ಆರಂಭವಾದವು. ಆದರೆ ಅವುಗಳ ಪ್ರಗತಿಯು ಸಾವಧಾನವಾಗಿದ್ದಿತು.

**ಕಾಳುಕಡಿ ಬ್ಯಾಂಕುಗಳ ಅವಶ್ಯಕತೆ**— ರೈತರಲ್ಲಿಯ ಬಹು ಜನರು ಬಡವರಿದ್ದ ಮೂಲಕ ಸುಗ್ಗಿಯಾದಕೂಡಲೆ ಬೆಲೆಗಳು ತೀರ ಕಡಿಮೆ ಇದ್ದರೂ ತಮ್ಮ ಲಾವಣಿಯನ್ನು ಕೊಡಲಿಕ್ಕೆ, ಸಾಹುಕಾರರ ಸಾಲವನ್ನು ತೀರಿಸಲಿಕ್ಕೆ ಮತ್ತು ಸರಕಾರಿ ಕಂದಾಯವನ್ನು ಕೊಡಲಿಕ್ಕ ತಮ್ಮ ದವಸ-ಧಾನ್ಯಗಳನ್ನು ಮಾರಬೇಕಾಗುತ್ತಿತ್ತು. ಇದರ ಪರಿಣಾಮವಾಗಿ ಮರು ವರ್ಷದವರಗ ತಮ್ಮ ಕುಟುಂಬಕ್ಕೆ ಬೇಕಾಗುವ ಧಾನ್ಯಗಳನ್ನು ಸಾಕಷ್ಟು ಪ್ರಮಾಣದಲ್ಲಿ ಇಟ್ಟುಕೊಳ್ಳಲು ಅಸಮರ್ಥರಾಗುತ್ತಿದ್ದರು. ಬಹುತರ ಸುಗ್ಗಿಯಾದ ಮೂರು ನಾಲ್ಕು ತಿಂಗಳ ತರುವಾಯ ಹುಟ್ಟುವಳಿಯ ಬೆಲೆಗಳು ಏರತೊಡಗುವವು. ಆದರೆ ಇದರ ಲಾಭವು ರೈತರಿಗೆ ಹೋಗದೆ ವ್ಯಾಪಾರಸ್ಥರಿಗೆ ಹೋಗುತ್ತಿತ್ತು. ಸಾಮಾನ್ಯವಾಗಿ ಜೂನ ತಿಂಗಳದ ಅಖೈರದ ಸುಮಾರಕ್ಕ ಅತಿ ಬಡ ರೈತರಲ್ಲಿಯ ಕಾಳುಕಡಿಯ ಸಂಗ್ರಹವು ತೀರುತ್ತದೆ. ಇದರಿಂದ ಅವರು ಹೆಚ್ಚಿನ ಬೆಲೆಗೆ ಮತ್ತು ಭಾರವಾದ ಒಡ್ಡಿಯಿಂದ ಪೂರೈಸುವ ಸಾಹುಕಾರರ ಕಾಳುಕಡಿಯ ಮೇಲೆಯೇ ಉಪಜೀವಿಸಬೇಕಾಗುತ್ತದೆ. ಸುಮಾರು ಮೂರು ತಿಂಗಳುಗಳವರೆಗೆ ಇಡುವಷ್ಟು ಧಾನ್ಯದ ಸಂಗ್ರಹವು ರೈತರ ಹತ್ತಿರ ಸಾಕಷ್ಟು ಇದ್ದರೆ ಅದನ್ನು ಹೆಚ್ಚಿನ ಬೆಲೆಗೆ ಮಾರಲು ಅವರಿಗೆ ಶಕ್ಯವಾಗುತ್ತದೆ. ಇದರಿಂದ ಸಾಹುಕಾರರಿಗೆ ಮೊರೆ ಹೋಗದೆ ಮರು ವರ್ಷದವರೆಗೆ ತಮಗೆ ಬೇಕಾಗುವ ಧಾನ್ಯದ ಸಾಕಷ್ಟು ಸಂಗ್ರಹವನ್ನು ಇಟ್ಟುಕೊಳ್ಳಲು ಮತ್ತು ಮಾರಲು ಸಾಧ್ಯವಾಗುವದು. ಕಾಳುಕಡಿಯ ಬ್ಯಾಂಕುಗಳ ಉದ್ದೇಶಗಳೆಂದರೆ— ಮೊದಲನೆಯದಾಗಿ ಅಗ್ಗದರದಿಂದ ಮಾರಾಟ ಮಾಡದೆ ಹುಟ್ಟುವಳಿಯನ್ನು ಇಟ್ಟುಕೊಂಡು ಲಾಭದಾಯಕ ಬೆಲೆಗೆ ಮಾರಾಟ ಮಾಡಲು ರೈತರನ್ನು ಸಮರ್ಥರನ್ನಾಗಿ ಮಾಡುವದು, ಎರಡನೆಯದಾಗಿ ಸುಗ್ಗಿಯ ನಂತರದ ಕಾಲದಲ್ಲಿ ಕಾಳುಕಡಿಯ ಅವಶ್ಯಕತೆ ಇದ್ದ ರೈತರಿಗೆ ಅವರ ಕುಟುಂಬದ ಉಪಜೀವನಕ್ಕಾಗಿ ಯೋಗ್ಯ ಬೆಲೆಗೆ ಕಾಳುಕಡಿ

ಯನ್ನು ಪೂರೈಸುವದು ಸುಗ್ಗಿಯ ನಂತರದ ಕಾಲದಲ್ಲಿ ಹಿಂದುಳಿದ ಪ್ರದೇಶ ದಲ್ಲಿಯ ರೈತರಿಗೆ ಬೆಳೆ ಬೆಳೆದುಕೊಳ್ಳುವದಕ್ಕಾಗಿ ಬೀಜವನ್ನೂ ಮತ್ತು ಅವರ ಉದರ ಪೋಷಣೆಗಾಗಿ ಧಾನ್ಯವನ್ನೂ ಪತ್ತಿನ ಮೇಲೆ ಪೂರೈಸುವ ಕುರಿತು ಸರಕಾರವು ೧೯೩೪ರಲ್ಲಿ ಠಾಣಾ ಜಿಲ್ಹೆಯ ಮೊಖಾಡ ಪೇಠಾದಲ್ಲಿ ಧಾನ್ಯದ ಉಗ್ರಾಣಗಳನ್ನು ಸ್ಥಾಪಿಸುವ ಬಗ್ಗೆ ಕ್ರಮಗಳನ್ನು ಕೈಕೊಂಡಿತು ಸರಕಾರವು ಸ್ಥಾಪಿಸಿದ ಉಗ್ರಾಣ ಗಳು ಎರಡು ಪ್ರಕಾರದವುಗಳಿದ್ದವು ಒಂದು ಇಗತಪುರಿಯ ಮಾದರಿಯದು, ಎರಡನೆಯದು ಠಾಣಾ ಮಾದರಿಯದು ಕಾಳುಕಡಿಗಳನ್ನು ಕೊಳ್ಳುವದಕ್ಕಾಗಿ ಧಾನ್ಯದ ಉಗ್ರಾಣಗಳನ್ನು ತೆರೆಯುವದಕ್ಕಾಗಿ ಸರಕಾರವು ರೈತರಿಗೆ ೪% ಬಡ್ಡಿ ದರದಂತೆ ೧೦ ವಾರ್ಷಿಕ ಕಂತುಗಳಿಂದ ತೀರಿಸುವ ಸಾಲವನ್ನು ಕೊಟ್ಟಿತು ಧಾನ್ಯದ ಉಗ್ರಾಣಗಳಿಗೆ ಒಂದು ವೇಳೆ ಹಾನಿ ಸಂಭವಿಸಿದಲ್ಲಿ ಅದನ್ನು ಸರಕಾರವೇ ವಹಿಸುತ್ತಿತ್ತು ಧಾನ್ಯದ ಉಗ್ರಾಣಗಳನ್ನು ಸ್ಥಾಪಿಸಲು ಮತ್ತು ನಡೆಯಿಸಲು ಸರಕಾರದಿಂದ ಸಿಕ್ಕ ಪ್ರೋತ್ಸಾಹನೆಯ ಪರಿಣಾಮವಾಗಿ ಸಹಕಾರಿ ಧಾನ್ಯದ ಬ್ಯಾಂಕುಗಳ ಚಳವಳಿಯು ಮುಗ್ಗರಿಸಿತು ಸಲಹೆಗಾರರ ( Advisor's ) ಆಳಿಕೆಯಲ್ಲಿ, ಸಹಕಾರಿ ಸಂಘಗಳ ಕಾಯದೆಯ ಮೇರೆಗೆ ಧಾನ್ಯದ ಬ್ಯಾಂಕುಗಳ ಸ್ಥಾಪನೆಯನ್ನು ತಡೆಯುವ ಆಜ್ಞೆಗಳನ್ನು ಸರಕಾರವು ಹೊರಡಿಸಿತು ಇದರ ಪರಿಣಾಮವಾಗಿ ಮತ್ತು ಧಾನ್ಯವನ್ನು ಕಲೆಹಾಕುವ ಸರಕಾರದ ಯೋಜನೆಯಿಂದ ಧಾನ್ಯದ ಬ್ಯಾಂಕುಗಳ ಆಂದೋಲನವು ಯಾವ ಪ್ರಗತಿಯನ್ನೂ ತೋರಿಸಲಿಲ್ಲ ಪಶ್ಚಿಮ ಖಾನದೇಶ ಜಿಲ್ಹೆಯ ಭಿಲ್ಲರ ಪ್ರದೇಶದಲ್ಲಿಯ ಹಿಂದುಳಿದ ಜನರ ಎಲ್ಲ ಬೇಡಿಕೆಗಳನ್ನು ಪೂರೈಸುವದಕ್ಕಾಗಿ ಸರಕಾರವು ೧೯೪೩-೪೪ರಲ್ಲಿ ವಿವಿಧೋದ್ದೇಶ ಧಾನ್ಯದ ಉಗ್ರಾಣಗಳನ್ನು ಪ್ರಾರಂಭಿಸಿತು ಆದರೆ ಅವು ಯಶಸ್ವಿಯಾಗಿ ಕಾರ್ಯ ನಡೆಯಿಸಲಿಲ್ಲ ಧಾನ್ಯದ ಉಗ್ರಾಣಗಳ ಪರಿಸ್ಥಿತಿಯನ್ನು ಪರೀಕ್ಷಿಸಿ ಅವುಗಳ ಪುನರ್ಘಟನೆಯ ಬಗ್ಗೆ ಸರಕಾರವು ೧೯೪೬ ನವ್ಹಂಬರದಲ್ಲಿ ಆಜ್ಞೆಗಳನ್ನು ಹೊರ ಡಿಸಿತು ಶೇರು ಭಾಂಡವಲು ಮತ್ತು ಕಾಯ್ದಿಟ್ಟ ನಿಧಿಗಳು ಮತ್ತು ಸರಕಾರದ ಸಾಲದ ೨೫% ಕಿಂತಲೂ ಹೆಚ್ಚಾಗಿರುವ ಕಾಯ್ದಿಟ್ಟ ನಿಧಿಯಿದ್ದ ಧಾನ್ಯದ ಉಗ್ರಾಣಗಳನ್ನು ೧೯೨೫ರ ಸಹಕಾರಿ ಸಂಘಗಳ ಕಾಯಿದೆಯ ಮೇರೆಗೆ "ಸಹಕಾರಿ ಧಾನ್ಯದ ಸಂಘಗಳೆಂದು" ನೋಂದಾಯಿಸಬೇಕೆಂದು ಸರಕಾರವು ಆಜ್ಞೆ ವಿಧಿಸಿತು ಈ ಮೇರೆಗೆ, ಇದ್ದ ಧಾನ್ಯದ ಉಗ್ರಾಣಗಳ ಪರಿಸ್ಥಿತಿಯನ್ನು ಸಹಕಾರಿ ಖಾತೆಯ ಆಡಿಟರರು ಪರೀಕ್ಷಿಸಿದರು ಮತ್ತು ಸಹಕಾರಿ ಸಂಘಗಳ ಕಾಯದೆಯ ಮೇರೆಗೆ ನೋಂದಾಯಿಸಲ್ಪಡಬಹುದಾದ ಉಗ್ರಾಣಗಳನ್ನು ಸಹಕಾರಿ ಧಾನ್ಯದ ಸಂಘಗಳೆಂದು ನೋಂದಾಯಿಸಲಾಯಿತು ೩೦-೬-೧೯೫೧ರ ವರೆಗೆ ಹೀಗೆ ಪರಿವರ್ತಿಸಲಾದ ಧಾನ್ಯದ ಉಗ್ರಾಣಗಳ ಸಂಖ್ಯೆ ೪೦ ಇದ್ದಿತು ವಿಲೀನೀ ಕರಣದ ಮುನ್ನ ಕೊಲ್ಹಾಪುರ ಸಂಸ್ಥಾನದಲ್ಲಿ ಸುಮಾರು ೨೦೦ ಸಹಕಾರಿ ಧಾನ್ಯದ ಬ್ಯಾಂಕುಗಳಿದ್ದವು ಅವುಗಳಲ್ಲಿಯ ಕ್ರಿಯಾರಹಿತವಾದ ಕೆಲವುಗಳನ್ನು ಬಂದು ಮಾಡಲಾಯಿತು ೩೦-೬-೧೯೫೧ಕ್ಕೆ ೨೭೮ ಧಾನ್ಯದ ಬ್ಯಾಂಕುಗಳಿದ್ದವು ಅವು ಗಳನ್ನು ಕೆಳಗಿನಂತೆ ವಿಂಗಡಿಸಬಹುದು—

| ಜಿಲ್ಹೆಯು ಹೆಸರು | ಧಾನ್ಯದ ಬ್ಯಾಂಕುಗಳ ಸಂಖ್ಯೆ |
|---|---|
| ವಿಜಾಪುರ | ೨ |
| ಬೆಳಗಾಂವ | ೨೨ |
| ಕಾರವಾರ | ೪ |
| ಕೊಲ್ಹಾಪುರ | ೧೭೬ |
| ಸೊಲ್ಲಾಪುರ | ೪ |
| ದ ಸಾತಾರಾ | ೪ |
| ಉ ಸಾತಾರಾ | ೧ |
| ಅಹಮ್ಮದನಗರ | ೧ |
| ರಾಣಾ | ೫೧ |
| ನಾಶಿಕ | ೧ |
| ಪ ಖಾನದೇಶ | ೧೦ |
| ಕುಲಾಬಾ | ೨ |
| ಒಟ್ಟು | ೨೭೮ |

೨೭೮ ಧಾನ್ಯದ ಬ್ಯಾಂಕುಗಳಲ್ಲಿ ೧೭೬ ಬ್ಯಾಂಕುಗಳು ಕೊಲ್ಹಾಪುರ ಜಿಲ್ಹೆಯಲ್ಲಿವೆ ಮೇಲೆ ಹೇಳಿದಂತೆ ವಿಲೀನೀಕರಣದ ಮುನ್ನ ಧಾನ್ಯದ ಬ್ಯಾಂಕುಗಳು ಈ ಸಂಸ್ಥೆಯಲ್ಲಿಯು ಸಹಕಾರಿ ಚಳವಳಿಯ ವಿಶಿಷ್ಟ ಲಕ್ಷಣಗಳಾಗಿದ್ದವು ೩೦-೫-೫೧ಕ್ಕೆ ಇದ್ದ ಧಾನ್ಯದ ಬ್ಯಾಂಕುಗಳ ಕಾರ್ಯಕಲಾಪಗಳ ವಿವರಗಳನ್ನು ಕೆಳಗೆ ಕೊಡಲಾಗಿವೆ

| | | | |
|---|---|---|---|
| ೧ | ಸಂಘಗಳ ಮತ್ತು ಬ್ಯಾಂಕುಗಳ ಸಂಖ್ಯೆ | | ೨೭೮ |
| ೨ | ಸದಸ್ಯರ ಸಂಖ್ಯೆ | | ೨೮,೧೯೪ |
| ೩. | ಕೊಟ್ಟ ಸಾಲ | ರೂ | ೨,೬೪,೫೨೩ |
| ೪. | ವಸೂಲಾದ ಸಾಲ | ರೂ | ೨,೦೮,೧೬೦ |
| ೫ | ವರ್ಷದ ಅಂತ್ಯಕ್ಕೆ ಬರಬೇಕಿದ್ದ ಸಾಲ | ರೂ | ೨,೧೨,೬೧೫ |
| ೬ | ಮುದ್ದತು ಮೀರಿದ ಸಾಲ | ರೂ | ೯೧,೬೫೯ |
| ೭ | ಬರತಕ್ಕ ಸಾಲಗಳಿಗೆ ಮುದ್ದತು ಮೀರಿದ ಸಾಲದ ಪ್ರಮಾಣ | | ೪೩.೧% |
| ೮ | ಲಾಭ | ರೂ | ೧೮,೮೮೭ |

ಸುಗ್ಗಿಯ ನಂತರದ ಕಾಲದಲ್ಲಿ ಉದರ ನಿರ್ವಹಣೆಗೆ ಬೇಕಾಗುವ ಧಾನ್ಯದ ವಿಷಯದಲ್ಲಿರುವ ಸಂಕಟಗಳಿಂದ ಪಾರುಮಾಡಲು ಈ ಕಾಳುಕಡಿಯ ಬ್ಯಾಂಕುಗಳು ಬಡ ರೈತರಿಗೆ ಬಹಳೇ ಉಪಯುಕ್ತವಿವೆ ಈ ಆಂದೋಲನದ ಪ್ರಗತಿಗೆ ವಿಶೇಷ ಪ್ರಯತ್ನಗಳ ಅವಶ್ಯಕತೆ ಇದೆ ಹೆಚ್ಚಿನ ಭಾರವಿಲ್ಲದೆ ಮತ್ತು ತೊಂದರೆ ಇಲ್ಲದ ಈಗಿದ್ದ ಪತ್ತಿನ ಮತ್ತು ವಿವಿಧ ಉದ್ದೇಶದ ಸಂಘಗಳು ತಮ್ಮ ಪೋಟನಿಯಮಗಳಲ್ಲಿ ಯೋಗ್ಯ ತಿದ್ದುಪಡೆ ಮಾಡಿಕೊಂಡು ಈ ಕಾರ್ಯವನ್ನು ತೆಗೆದುಕೊಳ್ಳಬಲ್ಲವು ಈ ಕಾರ್ಯವನ್ನು ಪ್ರೋತ್ಸಾಹಿಸಿದರೆ ಕೊರತೆಯ ಮತ್ತು ಬರಗಾಲದ ಪ್ರದೇಶಗಳಲ್ಲಿಯ ಹಾಗೂ ಹಿಂದುಳಿದ ಕ್ಷೇತ್ರದಲ್ಲಿಯ ಹಳ್ಳಿಗರಿಗಿರುವ ಧಾನ್ಯದ ಕೊರತೆಯನ್ನು ಇದು ನಿಶ್ಚಯವಾಗಿಯೂ ಹೋಗಲಾಡಿಸುತ್ತದೆ

## ೮ ಮುಂಬಯಿ ಪ್ರಾಂತಿಕ ಭೂವತ್ತೆ ಬ್ಯಾಂಕು

ಭೂವತ್ತೆ ಸಮಿತಿಯ ಶಿಫಾರಸುಗಳ ಮೇರೆಗೆ ಮುಂಬಯಿ ಪ್ರಾಂತಿಕ ಭೂವತ್ತೆ ಬ್ಯಾಂಕು ೧೯೩೫–೩೬ರಲ್ಲಿ ಸ್ಥಾಪಿತವಾಯಿತು ಈ ಬ್ಯಾಂಕನ್ನು ಔಪಚಾರಿಕವಾಗಿ ೧೯೩೬ ಜಾನೇವರಿ ೧೫ ರಂದು ಮುಂಬಯಿ ಗವ್ಹರ್ನರರು ಉದ್ಘಾಟಿಸಿದರು ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕಿನ ಸಂಸ್ಥಾಪಕರಲ್ಲೊಬ್ಬರಾದ ಸರ್ ಲಲ್ಲುಭಾಯಿ ಶಾಮಲದಾಸ ಅವರು ಈ ಬ್ಯಾಂಕಿನ ಮೊದಲನೆಯ ಅಧ್ಯಕ್ಷರಾದರು ರಾಜ್ಯದಲ್ಲಿಯ ಪ್ರಾಥಮಿಕ ಭೂವತ್ತೆ ಬ್ಯಾಂಕುಗಳಿಗೆ ಹಣ ಪೂರೈಸುವದು ಮತ್ತು ಅವುಗಳ ಕಾರ್ಯಾಚರಣೆಯ ಮೇಲ್ವಿಚಾರಣೆಯನ್ನು ಮಾಡುವದು ಈ ಮೊದಲಾದ ಕಾರ್ಯಗಳು ಈ ಪ್ರಾಂತಿಕ ಬ್ಯಾಂಕಿಗೆ ಸೇರಿವೆ ದೀರ್ಘಾವಧಿ ಸಾಲಗಳನ್ನು ಕೊಡುವ ಪ್ರಾಥಮಿಕ ಬ್ಯಾಂಕುಗಳ ಮಧ್ಯವರ್ತಿ ಹಣಪೂರೈಕೆಯ ಸಂಸ್ಥೆಯಾಗಿಯೂ ಇದು ವರ್ತಿಸುತ್ತದೆ ಸರಕಾರದ ನಿಯಮ ಮತ್ತು ನಿರ್ಬಂಧನೆಗಳ ಮೇರೆಗೆ ಡಿಬೆಂಚರುಗಳ ಮುಖಾಂತರ ಹಣ ಪಡೆದುಕೊಳ್ಳಲು ಸರಕಾರವು ಈ ಬ್ಯಾಂಕಿಗೆ ಅಧಿಕಾರ ಕೊಟ್ಟಿದೆ ವ್ಯಕ್ತಿಗಳು, ಸಹಕಾರಿ ಸಂಘಗಳು, ಪ್ರಾಥಮಿಕ ಭೂವತ್ತೆ ಬ್ಯಾಂಕುಗಳು ಈ ಬ್ಯಾಂಕಿನ ಸದಸ್ಯರಾಗಬಹುದು ಬ್ಯಾಂಕಿನ ಆಡಳಿತೆಯನ್ನು ೧೫ ಜನ ಡಾಯರೆಕ್ಟರರ ಬೋರ್ಡಿಗೆ ಒಪ್ಪಿಸಲಾಗಿದೆ ಅದರಲ್ಲಿ ೫ ಜನರನ್ನು ಪ್ರಾಥಮಿಕ ಬ್ಯಾಂಕುಗಳು ಪ್ರಾದೇಶಿಕ ತಳಹದಿಯ ಮೇರೆಗೆ ಆರಿಸುತ್ತವೆ ೬ ಜನರನ್ನು ಪ್ರಾಥಮಿಕ ಬ್ಯಾಂಕುಗಳನ್ನು ಬಿಟ್ಟು ಉಳಿದ ಸದಸ್ಯರು ಆರಿಸುತ್ತಾರೆ ರಜಿಸ್ಟ್ರಾರರು ಅಧಿಕಾರದಿಂದ (Ex-officio) ಈ ಬ್ಯಾಂಕಿನ ಡೈರೆಕ್ಟರರಾಗುತ್ತಾರೆ ಇದಲ್ಲದ ರಾಜ್ಯದ ಸಹಕಾರಿ ಬ್ಯಾಂಕು ಒಬ್ಬ ಡಾಯರಕ್ಟರನನ್ನೂ ರಜಿಸ್ಟ್ರಾರರು ಇಬ್ಬರು ಡಾಯರೆಕ್ಟರರನ್ನೂ ಸರಕಾರದ ಒಪ್ಪಿಗೆಯ ಮೇರೆಗೆ ನಿಯಮಿಸುತ್ತಾರೆ ಮುಂಬಯಿ ರಾಜ್ಯದ ಸಹಕಾರಿ ಸಂಘಗಳ ರಜಿಸ್ಟ್ರಾರರು ಡಿಬೆಂಚರು ಧಾರಣ ಮಾಡಿದವರಿಗೆ ಏಕಮೇವ ವಿಶ್ವಸ್ಥರಾಗಿರುತ್ತಾರೆ ಕೆಳಗಿನ ಅಂಕೆ–ಸಂಖ್ಯೆಗಳು ಪ್ರಾರಂಭದಿಂದ ೩೦–೬–೫೧ರ ವರೆಗಿನ ಬ್ಯಾಂಕಿನ ಪ್ರಗತಿಯನ್ನು ತೋರಿಸುತ್ತವ

| ವರ್ಷ | ಸದಸ್ಯರು ವ್ಯಕ್ತಿಗಳು | ಸದಸ್ಯರು ಸಂಘಗಳು | ಕೊಟ್ಟ ಸಾಲ | ವಸೂಲಾದ ಸಾಲ | ಬರತಕ್ಕ ಸಾಲ | ಮುದ್ದತು ಮೀರಿದ ಸಾಲ | ಶೇರು ಭಾಂಡವಲು | ಕಾಯ್ದಿಟ್ಟ ಮತ್ತಿತರ ನಿಧಿಗಳು | ದುಡಿಯುವ ಭಾಂಡವಲು |
|---|---|---|---|---|---|---|---|---|---|
| ೧೯೩೫–೩೬ | ೬೧೩ | ೧೦೮ | ೬೫,೩೨೫ | — | ೬೫,೩೨೫ | — | ೩,೬೩,೦೨೦ | — | ೩,೮೯,೩೨೦ |
| ೧೯೩೬–೩೭ | ೬೧೩ | ೧೦೮ | ೫,೭೪,೯೨೦ | ೩೭,೪೯೦ | ೮,೦೨,೭೫೫ | — | ೩,೭೪,೩೦೦ | — | ೬,೧೫,೦೯೯ |
| ೧೦೩೭–೩೮ | ೬೦೩ | ೧೨೩ | ೭,೦೦,೮೩೦ | ೮೭,೭೮೬ | ೧೨,೧೫,೮೨೨ | — | ೩,೯೪,೭೦೦ | — | ೨೦,೩೭,೦೧೯ |
| ೧೯೩೮–೩೯ | ೬೦೪ | ೧೧೦ | ೮,೧೧,೪೬೦ | ೧,೦೮,೯೨೦ | ೧೯,೨೫,೯೫೮ | — | ೪,೨೧,೦೦೦ | ೧,೧೩೬ | ೨೧,೧೮,೯೬೭ |
| ೧೯೩೯–೪೦ | ೬೮೮ | ೧೧೩ | ೮,೦೭,೪೫೦ | ೧,೪೯,೭೯೯ | ೨೩,೮೮,೬೭೮ | — | ೪,೪೬,೩೦೦ | ೧೨,೮೪೮ | ೩೦,೬೨,೯೦೬ |
| ೧೯೪೦–೪೧ | ೫೯೨ | ೧೧೩ | ೫,೯೨,೦೦೦ | ೧,೮೭,೩೧೬ | ೨೭,೯೩,೨೯೩ | — | ೪,೭೧,೯೦೦ | ೯,೩೫೯ | ೩೫,೧೯,೭೦ |
| ೧೯೪೧–೪೨ | ೫೮೧ | ೧೧೩ | ೫,೫೪,೦೫೫ | ೨,೮೬,೭೫೦ | ೩೦,೮೨,೮೬೦ | ೨೮,೬೨೭ | ೪,೯೨,೭೦೦ | ೧೪,೩೩೧ | ೩೬,೬೫,೩೭೧ |
| ೧೯೪೨–೪೩ | ೫೭೮ | ೧೧೪ | ೩,೯೪,೩೭೦ | ೪,೧೬,೬೮೦ | ೩೧,೩೩,೮೭೯ | ೪,೭೮೫ | ೪,೯೯,೪೨೦ | ೨೦,೫೨೭ | ೪೧,೪೮,೫೦೬ |
| ೧೯೪೩–೪೪ | ೫೮೨ | ೧೧೩ | ೨,೨೭,೪೫೦ | ೪,೬೮ ೨೪೪ | ೨೮,೯೩,೦೮೬ | ೩,೦೮೪ | ೫,೦೦,೦೭೦ | ೨೪,೭೭೨ | ೪೧,೭೧,೫೯೬ |
| ೧೯೪೪–೪೫ | ೫೮೦ | ೧೧೩ | ೩,೬೧,೮೨೫ | ೩,೫೪,೩೯೭ | ೨೯,೦೦,೫೧೪ | - | ೫,೦೦,೭೮೦ | ೨೮,೫೫೨ | ೪೧,೬೪,೪೦೨ |
| ೧೯೪೫–೪೬ | ೫೭೦ | ೧೧೩ | ೩,೩೧,೫೦೦ | ೩,೫೭,೩೬೮ | ೨೮,೭೪,೮೪೬ | ೨೬,೭೭೨ | ೫,೦೩,೨೮೦ | ೪೯,೬೫೫ | ೪೧,೫೯,೧೮೫ |
| ೧೯೪೬–೪೭ | ೫೬೬ | ೧೧೩ | ೩,೮೯,೭೬೨ | ೩,೩೦,೮೩೫ | ೨೯,೩೩,೫೩೩ | ೩೧,೫೭೭ | [illegible],೧೨,೬೪೦ | ೪೧,೪೪೦ | ೪೨,೩೮,೧೭೫ |
| ೧೯೪೭–೪೮ | ೫೬೪ | ೧೧೩ | ೧,೮೩,೬೧೬ | ೩,೧೮ ೯೭೮ | ೨೭,೯೧,೩೬೭ | ೩೭,೩೭೧ | ೫,೧೨,೬೪೦ | ೪೩,೬೦೪ | ೪೫,೮೮,೧೨೯ |
| ೧೯೪೮–೪೯ | ೫೬೬ | ೧೧೩ | ೪,೭೯,೨೮೦ | ೩,೫೩,೧೭೫ | ೨೯,೩೦,೪೮೫ | ೫೯,೨೭೦ | ೫,೧೫,೫೯೫ | ೬೪,೬೯೯ | ೪೯,೦೫,೯೬೩ |
| ೧೯೪೯–೫೦ | ೫೯೫ | ೧೧೭ | ೧೪,೩೮,೫೫೬ | ೩,೯೨,೧೨೯ | ೩೯,೭೭,೦೦೨ | ೩೨,೮೦೫ | ೫,೬೩,೦೭೫ | ೬೯,೨೦೨ | ೬೭,೪೮,೮೬೪ |
| ೧೯೫೦–೫೧ | ೭೪೬ | ೧೧೮ | ೧೮,೯೮,೧೧೭ | ೪,೪೧,೫೪೫ | ೫೪,೩೩,೫೭೪ | ೫೮,೭೨೮ | ೬,೨೭,೭೭೦ | ೨,೩೬,೦೭೫ | ೮೭,೬೮,೩೦೫ |

ಬ್ಯಾಂಕು ಒಂದೇರೀತಿಯಲ್ಲಿ ಪ್ರಗತಿ ಹೊಂದುತ್ತಲಿದೆ ಎಂದು ಮೇಲಿನ ಅಂಕೆ-ಸಂಖ್ಯೆಗಳಿಂದ ತಿಳಿದು ಬರುತ್ತದೆ ಒಟ್ಟು ೭೬೪ ಸದಸ್ಯರಲ್ಲಿ ೧೧೮ ಸಂಘಗಳೂ ೬೪೬ ವ್ಯಕ್ತಿಗಳೂ ಇರುವರು ೧೯೫೦-೫೧ರಲ್ಲಿ ಬ್ಯಾಂಕಿನ ಶೇರು ಭಾಂಡವಲು ೬೨೭೭೦ ರೂ ಇದ್ದಿತು. ೧೮ ೯೮ ಲಕ್ಷ ರೂ.ಗಳ ೭೨೩ ಸಾಲಗಳನ್ನು ಕೊಡಲಾಗಿದ್ದು ಸಾಲಗಳ ಉದ್ದೇಶಗಳು ಕೆಳಗಿನಂತಿವೆ

| | | |
|---|---|---|
| ೧ ಹಿಂದಿನ ಸಾಲಗಳನ್ನು ತೀರಿಸುವ ದಕ್ಕಾಗಿ | ೩೭೬ | ೮ ೭೪ ಲಕ್ಷ ರೂ |
| ೨. ಭೂ ಸುಧಾರಣೆಗಳಿಗಾಗಿ | ೧೬೭ | ೪ ೩೯ ಲಕ್ಷ ರೂ |
| ೩ ಭೂಮಿಯನ್ನು ಕೊಳ್ಳುವದಕ್ಕಾಗಿ | ೬೦ | ೧ ೪೮ ಲಕ್ಷ ರೂ |
| ೪ ಇತರ | ೧೯ | ೫೫ ಲಕ್ಷ ರೂ |
| ೫ ಮುಂಬಯಿ ಒಕ್ಕಲಿಗರ ಸಾಲ ಪರಿಹಾರ ಕಾಯಿದೆಯ ತೀರ್ಪುಗಳ ಮೇರೆಗೆ ಕೊಟ್ಟ ಹಣ | | |
| (ಅ) ಪ್ರಾಥಮಿಕ ಬ್ಯಾಂಕುಗಳು | ೭೯ | ೫೬ ಲಕ್ಷ ರೂ |
| (ಬ) ಪ್ರಾಂತಿಕ ಬ್ಯಾಂಕಿನಿಂದ | ೧೬ | ೦೭ ಲಕ್ಷ ರೂ. |
| ೬. ಮನೆಕಟ್ಟುವ ಸಂಘಗಳಿಗೆ ಕೊಟ್ಟ ಹಣ | ೬ | ೩ ೧೯ ಲಕ್ಷ ರೂ |
| ಒಟ್ಟು | ೭೨೩ | ೧೮ ೯೮ ಲಕ್ಷ ರೂ |

ವರ್ಷದ ಅಂತ್ಯಕ್ಕೆ ಬರಬೇಕಾಗಿದ್ದ ಸಾಲದ ರಕಮು ೫೪.೩೩ ಲಕ್ಷ ರೂಗಳಷ್ಟಿದ್ದು ಮುದ್ದತು ಮೀರಿದ ಹಣವು ೩೮,೮೩೮ ರೂ ಇದ್ದಿತು ಬ್ಯಾಂಕು ಆರು ಸಲ ಡಿಬೆಂಚರುಗಳನ್ನು ಮಾರಿ ಅವುಗಳ ಮುಖಾಂತರ ೭೩,೪೭,೬೦೦ ರೂಗಳನ್ನು ಪಡೆದಿದೆ ಬ್ಯಾಂಕಿನ ದುಡಿಯುವ ಭಾಂಡವಲು ೮೭.೬೮ ಲಕ್ಷ ರೂ ಇದ್ದು ೧೯೫೦-೫೧ ನೇ ವರ್ಷದಲ್ಲಿ ೨೭,೯೪ ರೂ ಗಳ ಲಾಭವಾಗಿದೆ ೧೯೫೦-೫೧ ನಯ ವರ್ಷದಲ್ಲಿ ಬ್ಯಾಂಕು ಸರಕಾರದಿಂದ ಕೆಳಗೆ ಕಂಡ ರೀತಿಯಲ್ಲಿ ಸಹಾಯ ಪಡೆದಿದೆ

(೧) ಮ್ಯಾನೇಜರ ಮತ್ತು ಅಕೌಂಟೆಂಟರ ವೆಚ್ಚಕ್ಕೆಂದು ೬೫೦೦ ರೂ

(೨) ಲ್ಯಾಂಡ ಡೆವ್ಹಲಪ್‌ಮೆಂಟ ಆಫೀಸರರಿಬ್ಬರ ವೆಚ್ಚಕ್ಕೆಂದು ೧೦,೦೦೦ ರೂ

(೩) ಬಡ್ಡಿಯ ಪ್ರಮಾಣವು ಹೆಚ್ಚಾಗಿ ಬ್ಯಾಂಕಿಗೆ ಆದ ಹಾನಿಯನ್ನು ತುಂಬಿಕೊಳ್ಳಲು ೨,೦೨೬ ರೂಪಾಯಿ

ಶೇತ್ಕೀ ಕಾರ್ಯಗಳಿಗಾಗಿ ಕೊಡುವ ದೀರ್ಘಾವಧಿ ಸಾಲದ ವ್ಯವಹಾರವು ಕ್ರಮೇಣ ಬೆಳವಣಿಗೆ ಹೊಂದುತ್ತಲಿದ್ದು ರೈತರ ದೀರ್ಘಾವಧಿ ಬೇಡಿಕೆಗಳನ್ನು ಪೂರೈಸಲು ಬ್ಯಾಂಕು ಸಮರ್ಥವಾಗಬಹುದೆಂದು ಆಶಿಸಲಾಗಿದೆ

## ೯ ಭೂ-ವತ್ತೆ ಬ್ಯಾಂಕುಗಳು

ಸಹಕಾರಿ ಆಂದೋಲನವು ಪ್ರಾರಂಭಿಸಲ್ಪಟ್ಟ ಮೇಲೆ ರೈತರಿಗೆ ದೀರ್ಘಾವಧಿಯ ಮತ್ತು ಅಲ್ಪಾವಧಿಯ ಸಾಲವನ್ನು ಅದು ಪೂರೈಸುವದೆಂದು ಭಾವಿಸಲಾಯಿತು ಆರಂಭದಲ್ಲಿ ರಜಿಸ್ಟ್ರಾರವರು ಪ್ರತಿಯೊಂದು ಸಂಘಕ್ಕೆ ಅಥವಾ ಸಂಘಗಳ ವರ್ಗಕ್ಕೆ ಗೊತ್ತುಪಡಿಸಿದ ಮರ್ಯಾದೆಗನುಸರಿಸಿ ಪತ್ತಿನ ಸಂಘಗಳು ದೀರ್ಘಾವಧಿಯ ಸಾಲಗಳನ್ನು ಪೂರೈಸುತ್ತಿದ್ದವು ಆದರೆ ಇಂಥ ಕಾರ್ಯಗಳನ್ನು ಕೈಕೊಳ್ಳುವದಕ್ಕೆ ಪತ್ತಿನ ಸಂಘಗಳು ಅನರ್ಹವೆಂದು ಕಂಡು ಬಂದಿತು ಈ ಸಂಘಗಳು ಅಲ್ಪಾವಧಿ ಠೇವುಗಳನ್ನು ಸಂಪಾದಿಸಿ ದೀರ್ಘಾವಧಿ ಸಾಲಗಳನ್ನು ಕೊಡುವದು ಅಸಾಧ್ಯವಾಯಿತು ಒಂದು ವೇಳೆ ಅವು ಹಾಗೆ ಮಾಡಿದಲ್ಲಿ ತೊಂದರೆಗೀಡಾಗಿ ಆತ್ಮಘಾತ ಮಾಡಿಕೊಂಡಂತಾಗುತ್ತಿತ್ತು ೧೯೨೬ರಲ್ಲಿ ಸೇರಿದ ರಜಿಸ್ಟ್ರಾರರ ಪರಿಷತ್ತೂ ಶೇತ್ಕಿ ರಾಯಲ ಕಮೀಶನ್ನೂ ಹಾಗೂ ಮಧ್ಯವರ್ತಿ ಬ್ಯಾಂಕಿಂಗ್ ವಿಚಾರಣಾ ಸಮಿತಿಯೂ ಭೂವತ್ತೆ ಬ್ಯಾಂಕುಗಳನ್ನು ಸ್ಥಾಪಿಸುವ ಬಗ್ಗೆ ಶಿಫಾರಸುಮಾಡಿದವು

ಮುಂಬಯಿ ರಾಜ್ಯದಲ್ಲಿ ಭೂವತ್ತೆ ಬ್ಯಾಂಕುಗಳನ್ನು ಸ್ಥಾಪಿಸಬೇಕೆಂಬ ವಿಷಯವನ್ನು ಮೊದಲ ಬಾರಿಗೆ ೧೯೨೬ರಲ್ಲಿ ಸೇರಿದ ಗುಜರಾತ ವಿಭಾಗದ ಸಹಕಾರಿ ಪರಿಷತ್ತು ಪರಿಶೀಲಿಸಿತು ೧೯೨೬ರಲ್ಲಿ ಆಗ ಸಹಕಾರಿ ಸಂಘಗಳ ರಜಿಸ್ಟ್ರಾರರಾಗಿದ್ದ ಶ್ರೀ ಜ ಎ ಮದನ ಅವರು ಭೂವತ್ತೆ ಬ್ಯಾಂಕುಗಳನ್ನು ಸ್ಥಾಪಿಸುವ ಬಗ್ಗೆ ಒಂದು ಯೋಜನೆಯನ್ನು ಸರಕಾರಕ್ಕೆ ಸಾದರಪಡಿಸಿದರು ಇಂಥ ಬ್ಯಾಂಕುಗಳನ್ನು ಪ್ರಯೋಗಕ್ಕೆಂದು ಸ್ಥಾಪಿಸಬೇಕೆಂಬ ಬಗ್ಗೆ ಸರಕಾರವು ಒಪ್ಪಿಕೊಂಡಿತು ಹೀಗೆ ೧೯೨೯ರಲ್ಲಿ ಧಾರವಾಡ, ಭರೋಚಗಳಲ್ಲಿ ಸರಕಾರೀ ಆಜ್ಞೆಯ ಮೇರೆಗೆ ಇಂಥ ಎರಡು ಬ್ಯಾಂಕುಗಳನ್ನು ಸ್ಥಾಪಿಸಲಾಯಿತು ಈ ಎರಡು ಬ್ಯಾಂಕುಗಳ ಕಾರ್ಯಕ್ಷೇತ್ರವು ಧಾರವಾಡ ಮತ್ತು ಭರೋಚ ಜಿಲ್ಹೆಗಳಿಗಷ್ಟೇ ಮರ್ಯಾದಿತವಾಗಿದ್ದಿತು ಇದೇ ವರ್ಷ ಪೂರ್ವಖಾನದೇಶ ಜಿಲ್ಹೆಯ ಪಾಚೋರಾದಲ್ಲಿ ಇಂಥ ಇನ್ನೊಂದು ಬ್ಯಾಂಕು ಸ್ಥಾಪಿಸಲ್ಪಟ್ಟಿತು ಇದರ ಕಾರ್ಯಕ್ಷೇತ್ರವು ಪಾಚೋರಾ ತಾಲೂಕಿಗಷ್ಟೇ ಮರ್ಯಾದಿತವಾಗಿತ್ತು

ಈ ರಾಜ್ಯದಲ್ಲಿಯ ಭೂವತ್ತಿ ಬ್ಯಾಂಕುಗಳ ಬೆಳವಣಿಗೆಯನ್ನು ಕೆಳಗಿನಂತೆ ಮೂರು ಅವಧಿಗಳಲ್ಲಿ ವಿಂಗಡಿಸಬಹುದು

೧ ೧೯೨೮–೨೯ ರಿಂದ ೧೯೩೩–೩೪ರ ವರೆಗೆ

೨ ೧೯೩೪–೩೫ ರಿಂದ ೧೯೪೧–೪೨ರ ವರೆಗೆ

೩ ೧೯೪೨–೪೩ ರಿಂದ ೧೯೫೦–೫೧ರ ವರೆಗೆ

## ಮೊದಲನೆಯ ಅವಧಿ ( ೧೯೨೮-೨೯ ರಿಂದ ೧೯೩೩-೩೪ )

೧೯೨೮-೨೯ರಲ್ಲಿ ಸ್ಥಾಪಿತವಾದ ಈ ಪ್ರಾಯೋಗಿಕ ಬ್ಯಾಂಕುಗಳನ್ನು ಪ್ರಾರಂಭಕ್ಕೆ ಪತ್ತಿನ ಸಂಘಗಳೆಂದು ಪರಿಗಣಿಸಲಾಗಿದ್ದರಿಂದ ಇವುಗಳ ಕಾರ್ಯಾಚರಣೆಯ ಪ್ರತ್ಯೇಕ ಅಂಕೆ-ಸಂಖ್ಯೆಗಳು ದೊರೆಯುವಂತಿಲ್ಲ ಆ ಅಂಕೆ-ಸಂಖ್ಯೆಗಳನ್ನೆಲ್ಲ ಪತ್ತಿನ ಸಂಘಗಳ ಅಂಕೆ-ಸಂಖ್ಯೆಗಳಲ್ಲಿ ಸೇರಿಸಲಾಗಿದೆ ಈ ಬ್ಯಾಂಕುಗಳು ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕಿನಿಂದ ಹಣ ಪಡೆಯುತ್ತಿದ್ದವು ಈ ಉದ್ದೇಶದ ಸಲುವಾಗಿ ರಾಜ್ಯದ ಸಹಕಾರಿ ಬ್ಯಾಂಕು ಡಿಬೆಂಚರುಗಳನ್ನು ಮಾರಿ ಹಣ ಸಂಗ್ರಹಿಸುತ್ತಿತ್ತು ಹಣ ಪಡೆದುಕೊಳ್ಳುವವರು ಮಾತ್ರ ಪ್ರಾಯೋಗಿಕ ಬ್ಯಾಂಕುಗಳ ಸದಸ್ಯರಾಗಲು ಬರುತ್ತಿತ್ತು ಆದರೂ ಸಾಲ ಪಡೆದುಕೊಳ್ಳಬೇಕೆಂಬ ಇಚ್ಛೆಯುಳ್ಳವರು ಬ್ಯಾಂಕಿನ ಸದಸ್ಯರಾಗಲು ಬರುತ್ತಿತ್ತು ಈ ಬ್ಯಾಂಕುಗಳ ಆರಿಸಲ್ಪಟ್ಟ ನಿರ್ದೇಶಕ ಸಮಿತಿಯಲ್ಲಿ (೧) ರಜಿಸ್ಟ್ರಾರರ ಪ್ರತಿನಿಧಿ (೨) ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕಿನ ಪ್ರತಿನಿಧಿ ಮತ್ತು (೩) ಕಾರ್ಯಕ್ಷೇತ್ರದಲ್ಲಿ ವಾಸಿಸುತ್ತಿರುವ ಡಿಬೆಂಚರುಗಳನ್ನು ಪಡೆದುಕೊಂಡ ಜನರಿಂದ ಆರಿಸಲ್ಪಟ್ಟ ಒಬ್ಬ ಪ್ರತಿನಿಧಿ ಈ ಮೂವರೂ ಇರುತ್ತಿದ್ದರು ಈ ಬೋರ್ಡಿನ ಕೆಲಸಗಳು ಮುಖ್ಯವಾಗಿ ಸಲಹೆಕೊಡುವದು ಮತ್ತು ಸಾಲಗಳನ್ನು ಶಿಫಾರಸು ಮಾಡುವವಾಗಿದ್ದವು ಸಾಲಗಳನ್ನು ಮಂಜೂರ ಮಾಡುವ ಅಂತಿಮ ಅಧಿಕಾರವು ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕ ಮತ್ತು ರಜಿಸ್ಟ್ರಾರರಿಗೆ ಸಂಬಂಧಿಸಿದ್ದಿತು ವೈಯಕ್ತಿಕ ಸಾಲದ ಪರಮಾವಧಿಯನ್ನು ೧೦ ಸಾವಿರ ರೂ ಗಳಿಗೆ ನಿರ್ದಿಷ್ಟ ಪಡಿಸಲಾಗಿದ್ದಿತು

ಬ್ಯಾಂಕುಗಳು ಸ್ಥಾಪಿಸಲ್ಪಟ್ಟ ತರುವಾಯ ಬಂದಕಾಲವು ತೀವ್ರತರದ ಆರ್ಥಿಕ ಮುಗ್ಗಟ್ಟಿನ ಕಾಲವಾಗಿದ್ದಿತು ಶೇತ್ಕೀ ಹುಟ್ಟುವಳಿಗಳ ಬೆಲೆಗಳು ಒಂದೇ ಸವನೆ ಕಡಿಮೆಯಾಗತೊಡಗಿ ರೈತರ ಸಾಲದ ಭಾರವು ಹೆಚ್ಚಾಗತೊಡಗಿತು ಹಿಂದಿನ ಸಾಲಗಳನ್ನು ತೀರಿಸುವದಕ್ಕಾಗಿ ಮತ್ತು ಭೂ ಸುಧಾರಣೆ ಮಾಡಿಕೊಳ್ಳುವದಕ್ಕಾಗಿ ದೀರ್ಘಾವಧಿ ಸಾಲಗಳ ಬೇಡಿಕೆಯು ಹೆಚ್ಚಾಗತೊಡಗಿತು ೧೯೩೩ರಲ್ಲಿ ಸರಕಾರವು ರೈತರ ಸಾಲ ಪರಿಹಾರಕ್ಕಾಗಿ ಭೂವತ್ತೆ ಬ್ಯಾಂಕುಗಳ ಬೆಳವಣಿಗೆಯ ಪ್ರಶ್ನೆಯನ್ನು ಪರಿಶೀಲಿಸಲು ಒಂದು ಸಮಿತಿಯನ್ನು ನಿಯಮಿಸಿತು ಆಗಿನ ಸಹಕಾರಿ ಸಂಘಗಳ ರಜಿಸ್ಟ್ರಾರರಾಗಿದ್ದ ಶ್ರೀ ಕೆ ಎಲ್ ಪಂಜಾಬಿ ಅವರು ಈ ಸಮಿತಿಯ ಚೇಅರಮನ್‌ರಾಗಿದ್ದರು ಪ್ರಾಂತಿಕ ಕೇಂದ್ರ ಭೂವತ್ತೆ ಬ್ಯಾಂಕನ್ನು ಸ್ಥಾಪಿಸಬೇಕಂದೂ ಭೂವತ್ತೆ ಬ್ಯಾಂಕುಗಳನ್ನು ಉತ್ತಮ ತಳಹದಿಯಮೇಲೆ ಸಂಘಟಿಸಬೇಕೆಂದೂ ಈ ಸಮಿತಿಯು ಸಿಫಾರಸು ಮಾಡಿತು

## ಎರಡನೆಯ ಅವಧಿ (೧೯೩೪-೩೫ ರಿಂದ ೧೯೪೧-೪೨)

ಈ ಅವಧಿಯಲ್ಲಿ ಭೂವತ್ತೆ ಬ್ಯಾಂಕುಗಳು ಸಾಧಿಸಿದ ಪ್ರಗತಿಯನ್ನು ಕೆಳಗಿನ ಅಂಕೆ-ಸಂಖ್ಯೆಗಳಲ್ಲಿ ಕೊಡಲಾಗಿದೆ ೧೯೩೪-೩೫, ೧೯೩೫-೩೬ ಮತ್ತು ೧೯೩೬-೩೭ ಈ ವರ್ಷಗಳ ಪ್ರತ್ಯೇಕ ಅಂಕೆ-ಸಂಖ್ಯೆಗಳು ದೊರೆತಿಲ್ಲ ಉಳಿದ ವರ್ಷಗಳ ಅಂಕೆ-ಸಂಖ್ಯೆಗಳನ್ನು ಕೆಳಗೆ ಕೊಡಲಾಗಿದೆ

| ವಿವರಗಳು | ೧೯೩೭-೩೮ | ೧೯೩೮-೩೯ | ೧೯೩೯-೪೦ | ೧೯೪೦-೪೧ | ೧೯೪೧-೪೨ |
|---|---|---|---|---|---|
| ೧ ಬ್ಯಾಂಕುಗಳ ಸಂಖ್ಯೆ | ೧೩ | ೧೪ | ೧೭ | ೧೭ | ೧೭ |
| ೨ ಸದಸ್ಯರ ಸಂಖ್ಯೆ | ೫,೪೧೬ | ೭,೮೪೦ | ೯,೦೮೯ | ೯,೮೧೮ | ೧೩,೬೨೯ |
| ೩ ಶೇರ ಭಾಂಡವಲು | ೨,೨೬,೪೦೮ | ೨,೫೮,೬೬೧ | ೨,೯೯,೫೭೬ | ೩,೩೧,೮೬೮ | ೩,೪೪,೪೬೦ |
| ೪ ಕಾಯ್ದಿಟ್ಟ ಮತ್ತಿತರ ನಿಧಿಗಳು | ೧೫,೪೭೨ | ೧೯,೬೩೭ | ೨೮,೩೫೯ | ೫೮,೯೭೮ | ೬೩,೭೬೧ |
| ೫ ದುಡಿಯುವ ಭಾಂಡವಲು | ೧೮,೪೦,೩೧೩ | ೨೪,೩೦,೮೫೯ | ೨೯,೧೬,೪೬೮ | ೩೩,೪೫,೫೪೯ | ೩೬,೦೧,೨೫೨ |
| ೬ ಕೊಟ್ಟ ಸಾಲ | ೬,೯೬,೯೫೭ | ೮ ೨೩,೪೨೭ | ೫,೯೦,೪೪೨ | ೫,೭೭,೯೪೯ | ೫,೫೮,೩೯೮ |
| ೭ ವಸೂಲಾದ ಸಾಲ | ೬೬,೨೦೮ | ೧.೮೧,೪೩೪ | ೧,೮೯,೯೭೮ | ೨,೦೯,೦೭೭ | ೨,೯೮,೭೭೭ |
| ೮. ಬರಬೇಕಾದ ಸಾಲ | ೧೬,೬೧,೩೩೧ | ೨೨,೨೯ ೯೬೮ | ೨೭,೦೧,೫೦೦ | ೩೬,೬೯,೯೧೭ | ೩೩,೩೧,೨೦೩ |
| ೯. ಮುದ್ದತು ಮೀರಿದ ಸಾಲ | ೪೦,೬೦೯ | ೮೭,೩೨೯ | ೧,೧೬ ೨೦೭ | ೧,೦೯,೮೩೫ | ೮೯,೯೯೨ |

ಭೂವತ್ತೆ ಬ್ಯಾಂಕುಗಳ ಸಮಿತಿಯ ಶಿಫಾರಸುಗಳ ಮೇರೆಗೆ ೧೦ ಪ್ರಾಥಮಿಕ ಭೂವತ್ತೆ ಬ್ಯಾಂಕುಗಳನ್ನು ಸ್ಥಾಪಿಸಲು ಸರಕಾರವು ಒಪ್ಪಿಕೊಂಡಿತು ಇವುಗಳಲ್ಲಿ ೩ ಕರ್ನಾಟಕದಲ್ಲಿ, ೫ ಮಹಾರಾಷ್ಟ್ರದಲ್ಲಿ, ೨ ಗುಜರಾತದಲ್ಲಿ ಇದ್ದವು ಸಾಮಾನ್ಯವಾಗಿ ಬರಗಾಲ ಮತ್ತು ಕೊರತೆಗಳಿಲ್ಲದ ಪ್ರದೇಶಗಳನ್ನೇ ಈ ಬ್ಯಾಂಕುಗಳನ್ನು ಸ್ಥಾಪಿಸಲು ಆರಿಸಿಕೊಳ್ಳಲಾಯಿತು ಶೇತ್ಕಿ ಸಾಲ ಪರಿಹಾರ ಕಾಯದೆಯು ಪಾಸಾದ ನಂತರ ಪ್ರಾಥಮಿಕ ಭೂವತ್ತೆ ಬ್ಯಾಂಕುಗಳ ಸಂಖ್ಯೆಯು ಹೆಚ್ಚಾಗು

ನದು ಅವಶ್ಯವೆಂದು ಅನಿಸಿದ್ದರಿಂದ ಮತ್ತೆ ನಾಲ್ಕು ಬ್ಯಾಂಕುಗಳು ಸ್ಥಾಪಿಸಲ್ಪಟ್ಟವು ಇವುಗಳಲ್ಲಿ ಎರಡು ಧಾರವಾಡ ಜಿಲ್ಲೆಯಲ್ಲಿ ಮತ್ತೆರಡು ಕುಲಾಬಾ ಮತ್ತು ಠಾಣಾ ಜಿಲ್ಲೆಗಳಲ್ಲಿ ಸ್ಥಾಪಿಸಲ್ಪಟ್ಟು, ಒಟ್ಟು ಸಂಖ್ಯೆಯು ೧೯೩೯–೪೦ರಲ್ಲಿ ೧೭ಕ್ಕೆ ಮುಟ್ಟಿತು. ಭೂವತ್ತೆ ಬ್ಯಾಂಕುಗಳ ಸಮಿತಿಯ ಶಿಫಾರಸುಗಳ ಮೇರೆಗೆ ಪೋಟನಿಯಮಗಳ ತಿದ್ದುಪಡಿ ಮಾಡಲಾಯಿತು ಈ ಹೊಸ ಪೋಟನಿಯಮಗಳ ಮೇರೆಗೆ ಬ್ಯಾಂಕುಗಳ ಸದಸ್ಯತ್ವದಲ್ಲಿ ಅ ಮತ್ತು ಬ ಎಂದು ಎರಡು ವರ್ಗಗಳನ್ನು ಮಾಡಲಾಯಿತು. ಸಾಲ ಪಡೆಯುವ ಮತ್ತು ಪಡೆಯದ ಸದಸ್ಯರು 'ಅ' ವರ್ಗದಲ್ಲಿ ಬರುತ್ತಾರೆ. ಸಾಲ ಪಡೆಯುವ ಸದಸ್ಯನು ೫ ರೂ ಗಳ ಒಂದು ಶೇರನ್ನು, ಸಾಲ ಪಡೆಯದ ಸದಸ್ಯನು ೫ ರೂ ಗಳ ೧೦ ಶೇರುಗಳನ್ನು ಧಾರಣ ಮಾಡಬೇಕಾಗುವದು ಸಹಭಾಗೀದಾರರಿಗೆ 'ಬ' ವರ್ಗವನ್ನು ಮಾಡಲಾಗಿದ್ದು ಅವರು ಹೆಸರಿಗೆ ೧ ರೂ. ಯ ವಂತಿಗೆಯನ್ನು ಕೊಡಬೇಕಾಗುವದು ಬ್ಯಾಂಕಿನ ಆಡಳಿತೆಯನ್ನು ೭ ಜನರಿಗೆ ಮಿಕ್ಕದ ಒಂದು ಸಮಿತಿಗೆ ಒಪ್ಪಿಸಲಾಗಿದ ಈ ಜನರಲ್ಲಿ ಇಬ್ಬರು 'ಅ' ವರ್ಗದ ಸಾಲ ಪಡೆದ ಸದಸ್ಯರಿಂದಲೂ, ಒಬ್ಬನು 'ಬ' ವರ್ಗದ ಸಾಲ ಪಡೆಯದ ಸದಸ್ಯರಿಂದಲೂ ಆರಿಸಲ್ಪಡುವರು ಮತ್ತು ರಜಿಸ್ಟ್ರಾರರು, ಮುಂಬಯಿ ಪ್ರಾಂತಿಕ ಸಹಕಾರಿ ಭೂ–ಒತ್ತೆಯ ಬ್ಯಾಂಕು ಮತ್ತು ಆಕ್ಷೇತ್ರದಲ್ಲಿಯ ಜಿಲ್ಹಾ ಮಧ್ಯವರ್ತಿ ಹಣಪೂರೈಕೆಯ ಸಂಸ್ಥೆಗಳು ಒಬ್ಬೊಬ್ಬ ಪ್ರತಿನಿಧಿಯನ್ನು ನಿಯಮಿಸುತ್ತಾರೆ ಪ್ರಾರಂಭಕ್ಕೆ ಬ್ಯಾಂಕಿನ ಲ್ಯಾಂಡ ವ್ಯಾಲ್ಯುಏಶನ್ ಆಫೀಸರನ ವೆಚ್ಚಕ್ಕೆಂದು ಸರಕಾರವು ಈ ಬ್ಯಾಂಕುಗಳಿಗ ೫೦೦ ರೂ ಗಳ ಧನಸಹಾಯ ಕೊಡುತ್ತಿತ್ತು ವೈಯಕ್ತಿಕ ಸಾಲದ ಮರ್ಯಾದೆಯು ೧೦ ಸಾವಿರ ರೂ ಗಳ ವರೆಗೆ ಇದ್ದಿತು ಕೆಲವು ವಿಶಿಷ್ಟ ಪ್ರಸಂಗಗಳಲ್ಲಿ ರಜಿಸ್ಟ್ರಾರರ ಸಮ್ಮತಿಯ ಮೇರೆಗೆ ಈ ಮರ್ಯಾದೆ ಮೀರಿ ಸಾಲ ಕೊಡಲು ಬರುತ್ತಿತ್ತು ತಿರುಗಿ ಕೊಡಬೇಕಾದ ಕಂತುಗಳ ಅವಧಿಯನ್ನು ೨೦ ವರ್ಷಗಳ ವರಗ ಗೊತ್ತು ಮಾಡಬಹುದಾಗಿತ್ತು ಸಾಲದ ಮೇಲಿನ ಬಡ್ಡಿ ದರವು ೧೦೦ಕ್ಕೆ ೬ ೧/೨ ರಂತೆ ಇದ್ದಿತು

ಹೀಗೆ ಎರಡನೆಯ ಜಾಗತಿಕ ಯುದ್ಧವು ಪ್ರಾರಂಭವಾಗುವವರೆಗೆ ಈ ಬ್ಯಾಂಕುಗಳು ಉತ್ತಮ ರೀತಿಯಲ್ಲಿ ಪ್ರಗತಿಹೊಂದಿದವೆಂದು ಮೇಲಿನ ವಿವರಣೆಯಿಂದ ತಿಳಿದುಬರುತ್ತದೆ ೧೯೪೧–೪೨ರ ಅಂತ್ಯಕ್ಕೆ ಒಟ್ಟು ೧೭ ಭೂವತ್ತೆ ಬ್ಯಾಂಕುಗಳಿದ್ದು ಅವುಗಳ ಸದಸ್ಯರ ಸಂಖ್ಯ ೧೩,೬೨೧, ದುಡಿಯುವ ಭಾಂಡವಲು ೩೬ ೦೧ ಲಕ್ಷ ರೂ ಇದ್ದಿತು ಕೊಟ್ಟ ಸಾಲಗಳ ಪ್ರಮಾಣವು ೧೯೩೮–೩೯ ರಿಂದ ಕಡಿಮೆಯಾಗುತ್ತ ನಡೆದು ೧೯೪೧–೪೨ರಲ್ಲಿ ೫ ೫೮ ಲಕ್ಷ ರೂ ಗಳಿಗೆ ಬಂದಿತು ವರ್ಷದ ಅಂತ್ಯಕ್ಕೆ ಬರಬೇಕಾಗಿದ್ದ ಸಾಲವು ೩೩ ೩೧ ಲಕ್ಷ ರೂ ಇದ್ದಿತು

### ಮೂರನೆಯ ಅವಧಿ ( ೧೯೪೨–೪೩ ರಿಂದ ೧೯೫೦–೫೧ )

ಈ ಅವಧಿಯಲ್ಲಿ ಈ ಬ್ಯಾಂಕುಗಳು ಸಾಧಿಸಿದ ಪ್ರಗತಿಯ ಅಂಕ-ಸಂಖ್ಯೆಗಳನ್ನು ಕೆಳಗೆ ಕೊಡಲಾಗಿದೆ ಆದರ ೧೯೪೨–೪೩ ನೆಯ ವರ್ಷದ ವರದಿಯು ಪ್ರಕಟವಾಗಿಲ್ಲವಾದ್ದರಿಂದ ಆ ವರ್ಷದ ಅಂಕೆ–ಸಂಖ್ಯೆಗಳು ದೊರತಿಲ್ಲ

| ವಿವರಗಳು | ೧೯೪೩–೪೪ | ೧೯೪೫–೪೬ | ೧೯೪೭–೪೮ | ೧೯೪೮–೪೯ | ೧೯೫೦–೫೧ |
|---|---|---|---|---|---|
| ೧ ಬ್ಯಾಂಕುಗಳ ಸಂಖ್ಯೆ | ೧೭ | ೧೬ | ೧೫ | ೧೯ | ೧೯ |
| ೨ ಸದಸ್ಯರ ಸಂಖ್ಯೆ | ೧೬,೬೧೦ | ೧೭,೩೫೩ | ೧೭,೯೪೨ | ೨೧,೭೨೭ | ೨೦,೦೦೦ |
| ೩ ಶೇರ ಭಾಂಡವಲು | ೩,೬೭,೧೧೪ | ೩,೯೧,೯೯೬ | ೩,೭೬,೬೮೩ | ೬,೩೨,೭೩೭ | ೭,೬೭,೧೨೮ |
| ೪ ಕಾಯ್ದಿಟ್ಟ ಮತ್ತಿತರ ನಿಧಿಗಳು | ೯೩ ೧೭೨ | ೧,೨೨,೧೬೬ | ೧,೩೭,೧೩೫ | ೨,೯೨,೦೯೫ | ೩,೩೮,೪೧೧ |
| ೫ ದುಡಿಯುವ ಭಾಂಡವಲು | ೩೧,೫೧,೨೦೫ | ೩೩,೪೪,೬೨೮ | ೩೩,೩೭,೧೧೧ | ೫೧ ೬೬,೬೭೦ | ೬೫,೮೧,೯೫೬ |
| ೬ ಕೊಟ್ಟ ಸಾಲ | ೨,೬೪,೬೦೦ | ೩,೨೩,೯೦೦ | ೧,೭೩,೦೧೧ | ೧೦,೧೫,೯೪೧ | ೧೪,೪೩,೦೯೧ |
| ೭ ವಸೂಲಾದ ಸಾಲ | ೪,೦೯,೨೦೭ | ೩,೨೯,೨೩೩ | ೩,೨೫ ೨೦೭ | ೫ ೨೩,೪೫೪ | ೪,೭೭,೭೭೯ |
| ೮ ಬರತಕ್ಕ ಸಾಲ | ೩೧,೨೯,೮೬೯ | ೩೧,೪೨ ೭೦೮ | ೨೯,೭೯,೭೩೫ | ೪೩,೩೪,೫೨೬ | ೫೮,೯೪ ೬೮೦ |
| ೯. ಮುದ್ದತು ಮೀರಿದ ಸಾಲ | ೮೬,೨೩೨ | ೧,೧೫,೯೨೫ | ೧,೩೮,೪೩೪ | ೧,೮೫,೮೭೮ | ೩,೨೮,೨೯೦ |

ಈ ಹಿಂದೆ ಹೇಳಿದಂತೆ ಬೆಲೆಗಳು ಏರತೊಡಗಿ ರೈತರ ಆರ್ಥಿಕ ಪರಿಸ್ಥಿತಿಯು ಸುಧಾರಿಸಿದಂತೆ, ಸಾಲಗಳ ಬೇಡಿಕೆಯು ಕಡಿಮೆಯಾಗತೊಡಗಿತು ಒಕ್ಕಲಿಗರ ಸಾಲ ಪರಿಹಾರ ಕಾಯದೆಯ ಮೇರೆಗೆ ಸರಿಪಡಿಸಲಾದ ಸಾಲಗಾರರ ಸಾಲವನ್ನು ಮುಟ್ಟಿಸುವದಕ್ಕಾಗಿ ಸಾವುಕಾರರಿಗೆ ಭೂವತ್ತೆ ಬ್ಯಾಂಕುಗಳ ಡಿಬೆಂಚರುಗಳನ್ನು ಮಾರಲು ಅವಕಾಶವಿದ್ದದರಿಂದ ಬ್ಯಾಂಕುಗಳ ವ್ಯವಹಾರವು ಹೆಚ್ಚಾಗಬಹುದೆಂದು ಆಶಿಸಲಾಗಿತ್ತು. ಆದರೆ ಕಾಯದೆಯ ೩೩ ನೆಯ ಕಲಮು

(ತಿದ್ದುಪಡೆಯಾದ ಮೇರೆಗೆ) ವ್ಯವಹಾರವು ಹೆಚ್ಚಾಗುವದನ್ನು ಮರ್ಯಾದಿತ ಗೊಳಿಸಿತು ಸಂಸ್ಥಾನಗಳು ವಿಲೀನವಾದ್ದರಿಂದ ಬ್ಯಾಂಕುಗಳ ಸಂಖ್ಯೆಯು ೧೯೪೮-೪೯ರಲ್ಲಿ ೧೯ಕ್ಕೆ ಮುಟ್ಟಿತು ಭೂವತ್ತೆ ಬ್ಯಾಂಕುಗಳ ಪರಿಸ್ಥಿತಿಯನ್ನು ಪರಿಶೀಲಿಸುವದಕ್ಕಾಗಿ ಮತ್ತು ರೈತರಿಗೆ ಶೀಘ್ರ ಹಣ ದೊರೆಯುವಂತೆ ಮಾಡುವ ದನ್ನು ವಿಚಾರಿಸುವದಕ್ಕಾಗಿ ೧೯೫೦ರಲ್ಲಿ ಒಂದು ಪರಿಷತ್ತನ್ನು ಕರೆಯಲಾಯಿತು ಈ ಪರಿಷತ್ತಿನ ಸಿಫಾರಸುಗಳ ಮೇರೆಗೆ ಕೆಳಗಿನ ಕ್ರಮಗಳನ್ನು ಅನುಸರಿಸಲಾಗಿದೆ

(೧) ಭೂ ಸುಧಾರಣೆಗಾಗಿ ಬಂದ ೪೦೦೦ ರೂ ಗಳ ಪರಿಗಿನ ಸಾಲದ ಅರ್ಜಿ ಗಳನ್ನು ಜಿಲ್ಹಾ ಒಕ್ಕಲುತನದ ಅಧಿಕಾರಿಯ ಅಭಿಪ್ರಾಯ ತೆಗೆದು ಕೊಳ್ಳದೆ ನೇರವಾಗಿ ರಾಜ್ಯದ ಭೂವತ್ತೆ ಬ್ಯಾಂಕಿಗೆ ಕಳಿಸಲು ಪ್ರಾಥ ಮಿಕ ಭ ತ್ತೆ ಬ್ಯಾಂಕುಗಳಿಗೆ ಅಧಿಕಾರ ಕೊಡಲಾಯಿತು ಆದರೆ ೪೦೦೦ ರೂ ಗೆ ಮಿಕ್ಕಿದ ಅರ್ಜಿಗಳನ್ನು ಮಾತ್ರ ಸಲಹೆಗಾಗಿ ಕಳಿಸಿ ಕೊಡಬೇಕಾಗುವದು

(೨) ೨೦೦೦ ರೂ ಗಳ ವರೆಗಿನ ಸಾಲಗಳನ್ನು ಮಂಜೂರ ಮಾಡಲು ಪ್ರಾಥಮಿಕ ಬ್ಯಾಂಕುಗಳಿಗೆ ಅಧಿಕಾರ ಕೊಡಲಾಗಿದೆ.

(೩) ಅಸಿಸ್ಟಂಟ ರಜಿಸ್ಟ್ರಾರರಿಗೆ ವಿಚಾರಣೆಗೆಂದು ಕಳಿಸಲ್ಪಾಗಿರುವ ಅರ್ಜಿ ಗಳನ್ನು ಶಕ್ಯವಾದಷ್ಟು ತೀವ್ರ ಪರಿಶೀಲಿಸಿ ರವಾನಿಸಲು ವಿನಂತಿಸಿ ಕೊಳ್ಳಲಾಗಿದೆ

(೪) ಮುಂಬಯಿ ಟನನ್ಸಿ ಮತ್ತು ಶೇತ್ಕಿ ಭೂಮಿಯ ಕಾಯದೆಯ ೬೩ ಮತ್ತು ೬೪A ಕಲಮುಗಳನ್ನು, ಸಹಕಾರಿ ಸಂಘಗಳಿಗೆ ಅನ್ವಯಿಸ ದಂತೆ ಸರಕಾರವು ತಿದ್ದುಪಡೆಮಾಡಿದೆ ಹೀಗಾಗಿ ಸದಸ್ಯರು ಅಡವಿಟ್ಟ ಭೂಮಿಗಳ ಒಡೆತನವನ್ನು ಬ್ಯಾಂಕುಗಳು ಪಡೆಯಲು ಅನುಕೂಲ ವಾಗಿದೆ ಈ ಎಲ್ಲ ಕ್ರಮಗಳಿಂದ ಇನ್ನು ಮುಂದೆ ಭೂವತ್ತೆ ಬ್ಯಾಂಕು ಗಳ ಪರಿಸ್ಥಿತಿಯು ಸುಧಾರಿಸಬಹುದೆಂದು ಆಶಿಸಲಾಗಿದೆ

## ೧೦ ಬಿನ್ ಶೇತ್ಕಿ ಪತ್ತಿನ ಸಂಘಗಳು

**ಪೂರ್ವ ಇತಿಹಾಸ:**—೧೯೦೪ರ ಸಹಕಾರಿ ಕಾಯದೆಯ ಮೇರೆಗೆ ಹಳ್ಳಿಗಳ ಮತ್ತು ಪಟ್ಟಣಗಳ ಪತ್ತಿನ ಸಂಘಗಳನ್ನು ಮಾತ್ರ ಸ್ಥಾಪಿಸಲು ಅವಕಾಶವಿತ್ತು. ಆದರೆ ಈ ಕಾಯದೆಯ ಮೇರೆಗೆ ಮಧ್ಯವರ್ತಿ ಬ್ಯಾಂಕುಗಳನ್ನು ಸ್ಥಾಪಿಸಲು ಬರುವಂತಿರಲಿಲ್ಲ ಆದುದರಿಂದ ಈ ರಾಜ್ಯದಲ್ಲಿಯ ಗ್ರಾಮಾಂತರ ಪತ್ತಿನ ಸಂಘಗಳು ಪ್ರಾರಂಭಕ್ಕೆ ಮಾರ್ಗದರ್ಶನಕ್ಕಾಗಿಯೂ ಮತ್ತು ಸರಕಾರದಿಂದ ಮತ್ತು ಸ್ಥಾನಿಕ ಠೇವುಗಳಿಂದ ಪಡೆದ ಹಣಕ್ಕೆ ಪೂರಕವಾಗಿ ಬೇಕಾಗುವ ಹಣಕ್ಕೂ ಅರ್ಬನ್ ಬ್ಯಾಂಕುಗಳನ್ನು ಅವಲಂಬಿಸಬೇಕಾಯಿತು. ರೈತರಲ್ಲಿ ಹಳ್ಳಿಯ ಪತ್ತಿನ ಸಂಘ

ಗಳನ್ನು ಸ್ಥಾಪಿಸುವ ಬಗ್ಗೆ ಸ್ಥಾನಿಕ ಸರಕಾರಗಳು ಹೆಚ್ಚಿನ ಪ್ರಾಧಾನ್ಯ ಕೂಡ ಬೇಕೆಂದು ಭಾರತ ಸರಕಾರದ ಧೋರಣೆಯಾಗಿದ್ದರೂ ಕಸಬುದಾರರ, ಔದ್ಯೋಗಿಕ ಜನರ, ಸಣ್ಣ ವ್ಯಾಪಾರಿಗಳ, ಗಿರಣಿ ಮತ್ತು ಫ್ಯಾಕ್ಟರಿಗಳಲ್ಲಿ ದುಡಿಯುವವರ ಮತ್ತು ಸಂಬಳಪಡೆಯುವವರ ಪತ್ತಿನ ಬೇಡಿಕಗಳನ್ನು ನಿರ್ಲಕ್ಷಿಸಲಾಗಿರಲಿಲ್ಲ. ಪ್ರಾರಂಭದಿಂದಲೂ ಈ ರಾಜ್ಯದಲ್ಲಿ ನಗರ ಪತ್ತಿನ ಆಂದೋಲನಕ್ಕೆ ಪ್ರೋತ್ಸಾಹ ದೊರೆಯುತ್ತಲಿದೆ ಮೊದಲು ಸ್ಥಾಪಿತನಾದ ಅರ್ಬನ್ ಬ್ಯಾಂಕು ಎಂದರ ೧೯೦೫ರಲ್ಲಿ ಸ್ಥಾಪಿತವಾದ ಧಾರವಾಡ ಜಿಲ್ಹೆಯಲ್ಲಿಯ ಗದಗ–ಬೆಟಗೇರಿ ಅರ್ಬನ್ ಬ್ಯಾಂಕು ಆ ತರುವಾಯ ರಾಜ್ಯದ ಇತರ ಭಾಗಗಳಲ್ಲಿಯ ಬ್ಯಾಂಕುಗಳು ನೊಂದಾಯಿಸಲ್ಪಡ ತೊಡಗಿದವು

**ನಗರ ( ಅರ್ಬನ್) ಪತ್ತಿನ ಅವಶ್ಯಕತೆ :—** ಪಟ್ಟಣಗಳಲ್ಲಿಯ ವ್ಯಾಪಾರಿಗಳ, ಕಸಬುದಾರರ ಮತ್ತು ನೌಕರ ವರ್ಗದ ಪತ್ತಿನ ಬೇಡಿಕೆಗಳು ಹಳ್ಳಿಗಳ ಜನರ ಬೇಡಿಕೆಗಳಷ್ಟೇ ಮುಖ್ಯವಾಗಿವೆ ಪಟ್ಟಣಗಳಲ್ಲಿ ಜಾಯಿಂಟ ಸ್ಟಾಕ್ ಬ್ಯಾಂಕುಗಳು ಸ್ಥಾಪಿಸಲ್ಪಟ್ಟದ್ದರೂ ಅವು ದೊಡ್ಡ ಊರುಗಳಲ್ಲಿ ಮಾತ್ರ ಇದ್ದು ದೊಡ್ಡ ವ್ಯಾಪಾರಿಗಳ ಮತ್ತು ಔದ್ಯೋಗಿಕ ಜನರ ಬೇಡಿಕೆಗಳನ್ನು ಮಾತ್ರ ಪೂರೈಸುತ್ತವೆ ಅಲ್ಲದೆ ಅವು ಸಣ್ಣ ಸಾಲದ ವ್ಯವಹಾರವನ್ನು ಮಾಡುತ್ತಿರಲಿಲ್ಲ ಸಹಕಾರಿ ಆಂದೋಲನವು ಪ್ರಾರಂಭವಾಗುವದಕ್ಕಿಂತ ಮುನ್ನ ಪಟ್ಟಣಗಳಲ್ಲಿಯ ಸಣ್ಣ ವ್ಯಾಪಾರಿಗಳು, ಕಸಬುದಾರರು, ಕಾರಖಾನೆ ಕೆಲಸಗಾರರು, ಸಣ್ಣ ಪಗಾರದ ನೌಕರರು ತಮ್ಮ ಪತ್ತಿನ ಬೇಡಿಕೆಗಳಿಗಾಗಿ ಸಾವುಕಾರರನ್ನೇ ಅವಲಂಬಿಸಬೇಕಾಗಿತ್ತು ಮಾರ್ಬಡ್ಡಿಯ ವ್ಯವಹಾರವು ಹಳ್ಳಿಗಳಲ್ಲಿಯಂತೆ ಪಟ್ಟಣಗಳಲ್ಲಿಯೂ ಹೆಚ್ಚಾಗಿತ್ತು ಆದುದರಿಂದ ಹಳ್ಳಿಗಳಂತೆ ಪಟ್ಟಣಗಳಲ್ಲಿಯೂ ಸಹಕಾರಿ ಪತ್ತಿನ ಸಂಘಗಳನ್ನು ಸ್ಥಾಪಿಸುವ ಆವಶ್ಯಕತೆಯು ಹೆಚ್ಚಾಗಿದ್ದಿತು ಸಣ್ಣ ಜನರ ಪತ್ತಿನ ಪೂರೈಕೆಗಾಗಿ ಮತ್ತು ಅವರಲ್ಲಿ ಮಿತವ್ಯಯ ಹವ್ಯಾಸವನ್ನು ಬೆಳೆಯಿಸುವದಕ್ಕಾಗಿ ಸಹಕಾರವು ಸಹಾಯಕಾರಿಯಾಯಿತು

**ನಗರ ಪತ್ತಿನ ಸಂಘಗಳ ವರ್ಗೀಕರಣ** — ನಗರ ಪತ್ತಿನ ಸಂಘಗಳನ್ನು ಕೆಳಗಿನಂತೆ ಮುಖ್ಯ ಮೂರು ವಿಭಾಗಗಳಲ್ಲಿ ಹಂಚಲಾಗಿದೆ —

೧ ಶೂಲ್ ಡಿಲಿಲ್ಶು ಮಾದರಿಯ ಜನತಾ ಬ್ಯಾಂಕುಗಳು ನಿರ್ದಿಷ್ಟ ಊರಿನ ಜನರೇ ಈ ಬ್ಯಾಂಕಿನ ಸದಸ್ಯರಾಗಬಲ್ಲರು ಈ ಸಂಸ್ಥೆಯ ಸದಸ್ಯರಲ್ಲಿ ವಾಸಸ್ಥಳದ ಸಾಮೀಪ್ಯವೇ ಮುಖ್ಯ ಸಂಬಂಧವಾಗಿದ್ದಿತು

೨ **ನೌಕರರ ಸಂಘಗಳು —** ಇವುಗಳಲ್ಲಿ ಮತ್ತೆ ಕೆಳಗಿನಂತೆ ವರ್ಗೀಕರಣ ಮಾಡಬಹುದು

**ಅ)** ಸರಕಾರೀ ಮತ್ತು ಸರಕಾರದ ಸಹಾಯ ಪಡೆದ ಖಾತೆಯ ನೌಕರರ ಸಂಘಗಳು ಇವುಗಳ ವೈಶಿಷ್ಟ್ಯಗಳು ಕೆಳಗಿನಂತಿರುತ್ತವೆ

i) ನಿರ್ದಿಷ್ಟ ಪ್ರದೇಶಗಳಲ್ಲಿಯ ಎಲ್ಲ ಸರಕಾರೀ ನೌಕರರಿಗೆ ಪ್ರವೇಶ ಕೊಡುವ ಸಂಘಗಳು

ii) ಒಂದೇ ಕಚೇರಿ ಅಥವಾ ಖಾತೆಗೆ ಸಂಬಂಧಿಸಿದ ನೌಕರರ ಸಂಘಗಳು

ಬ) ರೇಲ್ವೆ ಮೊದಲಾದ ಕಂಪನಿಗಳ ನೌಕರರ ಸಂಘಗಳು

೩. **ಜಾತಿಯ ಸಂಘಗಳು:—** ಒಂದೇ ವರ್ಗಕ್ಕೆ ಸೇರಿದ ಜಾತಿಯ ಭಾವನೆಯೇ ಈ ಸಂಘಗಳ ಮುಖ್ಯ ಸಂಬಂಧವಾಗಿದೆ.

೪ **ಇತರ ಸಂಘಗಳು —**ಕಾರಖಾನೆ ಕೂಲಿಕಾರರ ಸಂಘಗಳು ಇತ್ಯಾದಿ

ಇವುಗಳಲ್ಲದೆ ೨೦ ಸಾವಿರಕ್ಕೆ ಕಡಿಮೆ ದುಡಿಯುವ ಭಾಂಡವಲಿರುವ ನಗರ ಪತ್ತಿನ ಸಂಘಗಳಿದ್ದು ನಗರದ ನಿವಾಸಿಗಳು ಮಾತ್ರ ಇವುಗಳ ಸದಸ್ಯರಾಗ ಬಹುದು ಬ್ಯಾಂಕಿನ ವ್ಯವಹಾರವನ್ನು ಈ ಸಂಘಗಳು ಮಾಡಲು ಬರುವಂತಿಲ್ಲ. ಅವು ಕೇವಲ ಪತ್ತಿನ ಸಂಘಗಳು ಮಾತ್ರ ಇರುತ್ತವೆ

೧೯೧೫ರಲ್ಲಿ ಮ್ಯಾಕ್ಲೆಗಾನ ಸಮಿತಿಯು ಸಹಕಾರಿ ಆಂದೋಲನದ ಪರಿಸ್ಥಿತಿಯನ್ನು ಪರೀಕ್ಷಿಸಿ ಹೆಚ್ಚು ಅರ್ಬನ್ ಬ್ಯಾಂಕುಗಳನ್ನು ಸ್ಥಾಪಿಸಬೇಕೆಂದು ಶಿಫಾರಸು ಮಾಡಿತು ಆ ಪರಿಣಾಮವಾಗಿ ಅರ್ಬನ್ ಬ್ಯಾಂಕುಗಳು ಬೆಳೆಯ ತೊಡಗಿದವು

೧೯೧೧–೧೨ ರಿಂದ ೧೯೩೬–೩೭ರ ವರಗೆ ನಗರ ಪತ್ತಿನ ಆಂದೋಲನದ ಪ್ರಗತಿಯನ್ನು ಕೆಳಗೆ ಕೊಡಲಾಗಿದೆ

| ವರ್ಷ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ದುಡಿಯುವ ಭಾಂಡವಲು |
|---|---|---|---|
| ೧೯೧೧–೧೨ | ೭೫ | ೬,೫೬೧ | ೪,೮೧,೫೩೯ |
| ೧೯೧೬–೧೭ | ೧೨೬ | ೪೩,೬೬೮ | ೪೦,೧೧,೨೯೮ |
| ೧೯೨೧–೨೨ | ೩೭೦ | ೯೭,೨೬೫ | ೧,೧೦,೩೯,೮೮೭ |
| ೧೯೨೬–೨೭ | ೪೮೭ | ೧,೪೯,೧೪೦ | ೨,೧೮,೧೭,೬೪೧ |
| ೧೯೩೧–೩೨ | ೬೩೬ | ೨,೧೮,೬೦೭ | ೪,೧೪,೭೯,೪೭೧ |
| ೧೯೩೬–೩೭ | ೬೫೩ | ೨,೬೪,೬೪೯ | ೫,೩೭,೯೮,೬೮೭ |

ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿ ನಗರ ಪತ್ತಿನ ಆಂದೋಲನವು ವಸೂಲಿ, ಮುದ್ದತು ಮೀರಿದ ಸಾಲ, ಮಂದ ವ್ಯವಹಾರ ಈ ಮೊದಲಾದ ಸಮಸ್ಯೆಗಳನ್ನು ಎದುರಿಸಬೇಕಾಯಿತು

೧೯೩೭ರ ವರೆಗೆ ೫೦ ಸಾವಿರ ರೂ ಗೆ ಮಿಕ್ಕಿದ ದುಡಿಯುವ ಭಾಂಡವಲು ಇದ್ದ ಪಟ್ಟಣ ಸಂಘಗಳನ್ನು ಬ್ಯಾಂಕುಗಳೆಂದು ಪರಿಗಣಿಸಲಾಗಿದ್ದಿತು ಈ ವರ್ಗದಲ್ಲಿ ನಿರ್ದಿಷ್ಟ ದುಡಿಯುವ ಭಾಂಡವಲು ಇದ್ದ ಸಂಬಳ ಪಡೆಯುವವರ ಸಂಘಗಳು ಮತ್ತಿತರ ನಗರ ಪತ್ತಿನ ಸಂಘಗಳು ಸಮಾವೇಶವಾಗಿದ್ದವು ೧೯೩೬ರಲ್ಲಿ ನಿಯಮಿಸಲ್ಪಟ್ಟ ಭನ್ಸಾಲಿ ಮೆಹತಾ ಸಮಿತಿಯು ಇಂಡಿಯನ್ ಕಂಪನಿಗಳ ಕಾಯದೆಯ ೨೭೭ ಎಫ್, ಕಲಮಿನ ಮೇರೆಗೆ ಬ್ಯಾಂಕಿನ ವ್ಯವಹಾರ ಮಾಡುವ ಮತ್ತು ೨೦ ಸಾವಿರ ರೂ ಗಳ ವಸೂಲಾದ ಶೇರ ಭಾಂಡವಲು ಇರುವ ಸಂಘಗಳಿಗೆ ಮಾತ್ರ 'ಬ್ಯಾಂಕ' ಎಂದು ಕರೆಯಲು ಶಿಫಾರಸು ಮಾಡಿತು ಈ ಶಿಫಾರಸನ್ನು ಸರಕಾರವು ಒಪ್ಪಿಕೊಂಡು ಆ ಮೇರೆಗೆ ಆಜ್ಞೆಗಳನ್ನು ಹೊರಡಿಸಿತು

೧೯೩೯-೪೦ ರಿಂದ ೧೯೫೦-೫೧ರ ವರೆಗೆ ನಗರ ಪತ್ತಿನ ಆಂದೋಲನವು ಸಾಧಿಸಿದ ಪ್ರಗತಿಯ ಅಂಕೆ-ಸಂಖ್ಯೆಗಳನ್ನು ಕಳಗೆ ಕೊಡಲಾಗಿದೆ.

| | ೧೯೩೯-೪೦ | ೧೯೪೪-೪೫ | ೧೯೫೦-೫೧ |
|---|---|---|---|
| ೧ ಸಂಘಗಳ ಸಂಖ್ಯೆ | ೭೧೫ | ೮೫೧ | ೧,೪೦೯ |
| ೨ ಸದಸ್ಯರ ಸಂಖ್ಯೆ | ೩,೦೫,೪೫೯ | ೩,೯೪,೯೪೭ | ೭,೬೦,೮೯೫ |
| ೩. ಶೇರ ಭಾಂಡವಲು | ೧,೩೭,೦೭,೦೫೮ | ೨,೨೦,೧೧,೬೭೩ | ೫,೫೨,೨೧,೩೪೩ |
| ೪. ಕಾಯ್ದಿಟ್ಟ ಮತ್ತಿತರ ನಿಧಿಗಳು | ೮೫,೪೬,೪೭೫ | ೧,೧೨,೧೪,೮೮೪ | ೨,೦೫,೮೦,೪೪೭ |
| ೫ ದುಡಿಯುವ ಭಾಂಡವಲು | ೫,೯೭,೮೯,೧೫೩ | ೧೧,೫೭,೮೩,೪೦೬ | ೨೪,೮೧,೧೩,೨೬೧ |
| ೬ ವ್ಯಕ್ತಿಗಳಿಗೆ ಕೊಟ್ಟ ಸಾಲ | ೩,೯೨,೭೪,೮೦೬ | ೬,೯೨,೭೪,೩೭೮ | ೨೩,೯೪,೮೫,೬೦೧ |
| ೭ ವ್ಯಕ್ತಿಗಳಿಂದ ಬಂದ ಸಾಲ | ೩,೮೧,೧೪,೬೫೦ | ೬,೬೩,೨೦,೭೦೭ | ೨೧,೦೦,೬೦,೯೪೨ |
| ೮ ವ್ಯಕ್ತಿಗಳಿಂದ ಬರ ತಕ್ಕ ಸಾಲ | ೩,೯೪,೯೧,೩೧೩ | ೪,೭೮,೧೫,೨೪೮ | ೧೪,೧೩,೧೧,೨೮೪ |
| ೯ ಮುದ್ದತು ಮೀರಿದ ಸಾಲ | ೫೪,೦೭,೦೬೩ | ೩೩,೯೯,೩೧೮ | ೯೬,೮೦,೬೮೯ |

ಸಂಘಗಳ ಸಂಖ್ಯೆ, ಸದಸ್ಯರ ಸಂಖ್ಯೆ ಮತ್ತು ದುಡಿಯುವ ಭಾಂಡವಲುಗಳು ವೃದ್ಧಿಯಾಗುತ್ತಲೇ ಇವೆ ಎಂದು ಮೇಲಿನ ಅಂಕೆ-ಸಂಖ್ಯೆಗಳಿಂದ ತಿಳಿದು ಬರುತ್ತದೆ

೩೦-೬-೧೯೫೭ಕ್ಕೆ ಇದ್ದ ನಗರ ಪತ್ತಿನ ಆಂದೋಲನದ ಪರಿಸ್ಥಿತಿಯನ್ನು ಕೆಳಗೆ ಕೊಡಲಾಗಿದೆ

| | | | |
|---|---|---|---|
| ೧ | ಸಂಘಗಳ ಸಂಖ್ಯೆ | | ೧,೪೦೯ |
| ೨ | ಸದಸ್ಯರ ಸಂಖ್ಯೆ | | ೭,೬೦,೮೯೫ |
| ೩ | ಶೇರ ಭಾಂಡವಲು | ರೂ | ೫,೫೨,೨೧,೩೪೩ |
| ೪ | ರಿಝರ್ವ ಮತ್ತಿತರ ಫಂಡುಗಳು | ರೂ | ೨,೦೫,೮೦,೪೪೭ |
| ೫. | ಸದಸ್ಯರ ಠೇವುಗಳು | ರೂ | ೯,೯೧,೪೦,೧೪೪ |
| ೬ | ಸದಸ್ಯೇತರ ಠೇವುಗಳು | ರೂ. | ೫,೯೧,೪೩,೬೭೫ |
| ೭ | ದುಡಿಯುವ ಭಾಂಡವಲು | ರೂ | ೨೪,೮೧,೧೩,೨೬೧ |
| ೮. | ವ್ಯಕ್ತಿಗಳಿಗೆ ಕೊಟ್ಟ ಸಾಲ | ರೂ | ೨೩,೯೪,೮೫,೬೦೧ |
| ೯ | ವ್ಯಕ್ತಿಗಳಿಂದ ವಸೂಲಾದ ಸಾಲ | ರೂ | ೨೧,೦೦,೬೦,೯೪೨ |
| ೧೦. | ವ್ಯಕ್ತಿಗಳಿಂದ ಬರತಕ್ಕ ಸಾಲ | ರೂ | ೧೪,೧೩,೧೧,೨೮೪ |
| ೧೧ | ಮುದ್ದತು ಮೀರಿದ ಸಾಲ | ರೂ | ೯೬,೮೦,೬೮೯ |
| ೧೨ | ಲಾಭ | ರೂ | ೨೧,೧೨,೦೭೫ |

ನಗರ ಪತ್ತಿನ ಸಂಘಗಳ ಸಂಖ್ಯೆಯು ೧,೪೦೯ ಇದ್ದು ಅವುಗಳ ಸದಸ್ಯರ ಸಂಖ್ಯೆಯು ೭,೬೦,೮೯೫ ಇದ್ದಿತು ಹಳ್ಳಿಗಳಲ್ಲಿಯ ವಿವಿಧೋದ್ದೇಶ ಸಂಘಗಳನ್ನೊಳಗೊಂಡ ಶೇತ್ಕಿ ಪತ್ತಿನ ಸಂಘಗಳ ಸಂಖ್ಯೆ ೯,೭೦೨ ಇದ್ದು ಅವುಗಳ ಸದಸ್ಯರ ಸಂಖ್ಯೆ ೭,೨೭,೨೭೬ ಇದ್ದಿತು ನಗರ ಪತ್ತಿನ ಆಂದೋಲನದ ಶೇರ ಭಾಂಡವಲು, ಕಾಯ್ದಿಟ್ಟ ನಿಧಿ ಮತ್ತು ದುಡಿಯುವ ಭಾಂಡವಲು ಅನುಕ್ರಮವಾಗಿ ರೂ ೫,೫೨,೨೧,೩೪೩, ರೂ ೨,೦೫,೮೦,೪೪೭ ಮತ್ತು ರೂ ೨೪,೮೧,೧೩,೨೬೧ ಇದ್ದವು ಆದರೆ ವಿವಿಧೋದ್ದೇಶ ಸಂಘಗಳನ್ನೊಳಗೊಂಡ ಶೇತ್ಕಿ ಸಂಘಗಳ ಶೇರ ಭಾಂಡವಲು, ಕಾಯ್ದಿಟ್ಟ ನಿಧಿ ಮತ್ತು ದುಡಿಯುವ ಭಾಂಡವಲುಗಳು ಅನುಕ್ರಮವಾಗಿ ೨೨೯ ೮೫ ಲಕ್ಷ ರೂ. ೨೦೯ ೫೪ ಲಕ್ಷ ರೂ ಮತ್ತು ೧,೦೭೩ ೫೧ ಲಕ್ಷ ರೂ ಇದ್ದವು ನಗರ ಪತ್ತಿನ ಆಂದೋಲನವು ಸದಸ್ಯ ಮತ್ತು ಸದಸ್ಯೇತರರಿಂದ ದೊರಕಿಸಿದ ಸ್ಥಾನಿಕ ಠೇವುಗಳು ಅನುಕ್ರಮವಾಗಿ ೯,೯೧,೪೦,೧೪೪ ರೂ ಮತ್ತು ೫,೯೧,೪೩,೬೭೫ ರೂ ಗಳಷ್ಟು ಇದ್ದವು. ಆದರೆ ಶೇತ್ಕಿ ಸಂಘಗಳು ಸದಸ್ಯ ಮತ್ತು ಸದಸ್ಯೇತರರಿಂದ ಅನುಕ್ರಮವಾಗಿ ರೂ. ೮೨ ೪೧ ಲಕ್ಷ ಮತ್ತು ೫೪ ೬೭ ಲಕ್ಷ ರೂ ಗಳ ಠೇವುಗಳನ್ನು ದೊರಕಿಸಿವೆ ಪಟ್ಟಣ ಪತ್ತಿನ ಆಂದೋಲನವು ಚನ್ನಾಗಿ ಬೆಳೆದಿದ್ದು ತನ್ನ ಹಣಕಾಸಿಗಾಗಿ ಮಧ್ಯವರ್ತಿ ಬ್ಯಾಂಕುಗಳನ್ನು ಅದು ಅವಲಂಬಿಸಿಲ್ಲ.

**ಅರ್ಬನ್ ಕೋ-ಅಪರೇಟಿವ್ ಬ್ಯಾಂಕ:—** ಪಟ್ಟಣ ಪತ್ತಿನ ಸಂಘಗಳಲ್ಲಿ ಪರಿಪೂರ್ಣತೆಗೆ ಸಂದ ( full fledged ) ಬ್ಯಾಂಕುಗಳು ಹೆಚ್ಚು

ಮಹತ್ವದ್ದಾಗಿವೆ. ಈ ಕೆಳಗಿನ ಅಂಕೆ-ಸಂಖ್ಯೆಗಳಿಂದ ಅರ್ಬನ್ ಬ್ಯಾಂಕುಗಳು ಸತತವಾಗಿ ಮತ್ತು ಸರ್ವವಿಧದಲ್ಲಿ ಪ್ರಗತಿ ಹೊಂದುತ್ತಲಿವೆ ಎಂದು ಕಂಡು ಬರುತ್ತದೆ.

| ವರ್ಷ | ಬ್ಯಾಂಕುಗಳ ಸಂಖ್ಯೆ | ಸದಸ್ಯರ ಸಂಖ್ಯೆ | ಶೇರ ಭಾಂಡವಲು | ರಿಝರ್ವ ಮತ್ತಿತರ ಫಂಡು | ದುಡಿಯುವ ಭಾಂಡವಲು | ಲಾಭ |
|---|---|---|---|---|---|---|
| ೧೯೧೯—೨೦ | ೧೮ | ೩೫,೪೦೫ | ೧೧,೨೭,೯೨೯ | ೬,೧೯,೪೭೩ | ೫೩,೭೦,೩೫೦ | ೧,೪೯,೦೬೭ |
| ೧೯೨೪—೨೫ | ೪೩ | ೬೬,೩೭೦ | ೨೩,೧೬,೭೬೫ | ೬,೨೫,೬೩೪ | ೧,೩೧,೨೮,೬೭೮ | ೩,೫೭,೪೧೩ |
| ೧೯೨೯—೩೦ | ೭೬ | ೧,೨೦ ೦೮೮ | ೫೧,೨೧,೧೭೯ | ೧೪,೫೮,೩೩೧ | ೨ ೮೨,೪೭,೫೮೩ | ೬,೫೭,೦೦೮ |
| ೧೯೩೪—೩೫ | ೧೩೧ | ೨,೦೯,೬೦೦ | ೭೬ ೯೭ ೪೭೭ | ೪೦,೩೫,೯೫೮ | ೮ ೮೩ ೫೩,೧೭೭ | ೧೧,೬೦,೩೫೩ |
| ೧೯೩೯—೪೦ | ೧೮೧ | ೨ ೧೦,೪೬೦ | ೮,೦೯,೨೮೭ | ೫೯,೨೫,೬೪೦ | ೫ ೦೭ ೫೧ ೧೨೫ | ೯,೪೭,೭೫೨ |
| ೧೯೪೪—೪೫ | ೯೮ | ೯೦,೯೭೧ | ೫೭,೬೦,೦೧೮ | ೫೮,೮೨,೯೯೧ | ೭ ೧೫,೦೨ ೬೫೬ | ೭ ೩೮ ೮೮೮ |
| ೧೯೫೦—೫೧ | ೧೭೬ | ೨ ೦೭,೨೯೧ | ೧ ೪೭,೯೮,೭೩೪ | ೧,೧೨,೮೮ ೧೪೨ | ೧೫,೩೯,೭೮,೭೯೧ | ೨೦ ೨೭ ೬೯೮ |

**ಸೂಚನೆಃ**— ಮುಂಬಯಿ ರಾಜ್ಯದಿಂದ ಸಿಂಧವನ್ನು ಬೇರ್ಪಡಿಸಿದ್ದರಿಂದ ಮತ್ತು ಮೆಹತಾ–ಭನ್‌ಸಾಲಿ ವರದಿಯನ್ನು ಕಾರ್ಯರೂಪಕ್ಕೆ ಇಳಿಸಿದುದರಿಂದ ೧೯೩೪–೩೫ ಮತ್ತು ೧೯೩೯–೪೦ರಲ್ಲಿ ಸಂಘಗಳ ಮತ್ತು ಅವುಗಳ ಸದಸ್ಯರ ಸಂಖ್ಯೆಗಳು ಕಡಿಮೆಯಾಗಿವೆ

ಈ ರಾಜ್ಯವಲ್ಲಿಯ ಪರಿಪೂರ್ಣತೆಗೆ ಸಂದ ( full fledged ) ಅರ್ಬನ್ ಬ್ಯಾಂಕುಗಳು ಸತತವಾಗಿ ಸರ್ವ ವಿಧದಲ್ಲಿಯೂ ಪ್ರಗತಿ ಹೊಂದುತ್ತಲಿವೆ ೧೯೨೦ ರಿಂದ ೧೯೫೫ ಈ ಅವಧಿಯಲ್ಲಿ ಸಂಸ್ಥಾನಗಳ ವಿಲೀನವಾಗುವವರೆಗೆ ಬ್ಯಾಂಕುಗಳ ಸಂಖ್ಯೆ ೧೮ ರಿಂದ ೧೭೬ಕ್ಕೆ ಏರಿತು ಅವುಗಳ ಸದಸ್ಯರ ಸಂಖ್ಯೆ, ಶೇರ ಭಾಂಡವಲು, ದುಡಿಯುವ ಭಾಂಡವಲುಗಳು ಅನುಕ್ರಮವಾಗಿ ೧೯೨೦ರಲ್ಲಿ ರೂ ೩೫,೪೦೫, ೧೧,೨೬,೯೨೯ ರೂ ಮತ್ತು ೫೩,೭೦,೩೫೦ ರೂ ಇದ್ದು, ೧೯೫೧ರಲ್ಲಿ ಅನುಕ್ರಮವಾಗಿ ೨,೦೭,೨೮೫, ರೂ ೧,೪೭ ೯೮ ೬೩೪ ರೂ ಮತ್ತು ೧೫,೫೯,೭೮,೭೧೧ ರೂ ಗಳಿಗೆ ಏರಿದವು ೩೦-೬-೧೯೫೧ಕ್ಕೆ ಇದ್ದ ಈ ಬ್ಯಾಂಕುಗಳ ವ್ಯವಹಾರಗಳ ಮುಖ್ಯ ಅಂಕ-ಸಂಖ್ಯೆಗಳನ್ನು ಕೆಳಗೆ ಕೊಡಲಾಗಿದೆ

( ರೂ ಗಳು ಲಕ್ಷದಲ್ಲಿ )

| | | |
|---|---|---|
| ೧ | ಬ್ಯಾಂಕುಗಳ ಸಂಖ್ಯೆ | ೧೭೬ |
| ೨ | ಸದಸ್ಯರ ಸಂಖ್ಯೆ | ೨,೦೭,೨೮೫ |
| ೩ | ಶೇರ ಭಾಂಡವಲು | ೧೪೭ ೯೮ |
| ೪ | ಕಾಯ್ದಿಟ್ಟ ಮತ್ತಿತರ ನಿಧಿಗಳು | ೧೧೨ ೬೮ |
| ೫ | ಸದಸ್ಯರ ಠೇವುಗಳು | ೬೫೩ ೩೬ |
| ೬. | ಪ್ರತಿ ಸದಸ್ಯನಿಗೆ ಸರಾಸರಿ ಠೇವು | ೧೩೫ ೦೦ |
| ೭ | ಸದಸ್ಯೇತರ ಠೇವುಗಳು | ೫೪೭ ೧೬ |
| ೮ | ಮಧ್ಯವರ್ತಿ ಬ್ಯಾಂಕುಗಳಿಂದ ಠೇವು ಮತ್ತು ಸಾಲ | ೭೮ ೧೭ |
| ೯ | ದುಡಿಯುವ ಭಾಂಡವಲು | ೧,೫೭೯ ೭೮ |
| ೧೦ | ವ್ಯಕ್ತಿಗಳಿಂದ ಬರತಕ್ಕ ಸಾಲ | ೭೦೬ ೬೭ |
| ೧೧ | ಮುದ್ದತು ಮೀರಿದ ಸಾಲ | ೬೦ ೨೦ |
| ೧೨ | ಸದಸ್ಯರಿಂದ ಬರತಕ್ಕ ಸಾಲಗಳಿಗೆ ಮುದ್ದತು ಮೀರಿದ ಸಾಲಗಳ ಪ್ರಮಾಣ | ೮ ೫% |
| ೧೩ | ಆಡಳಿತೆಯ ವೆಚ್ಚ | ೨೮ ೩೦ |
| ೧೪ | ದುಡಿಯುವ ಭಾಂಡವಲಿಗೆ ಆಡಳಿತೆಯ ವೆಚ್ಚದ ಪ್ರಮಾಣ | ೧ ೮% |
| ೧೫ | ಲಾಭ | ೨೦ ೨೭ |
| ೧೬ | ಒಟ್ಟು ದುಡಿಯುವ ಭಾಂಡವಲಿಗೆ ಲಾಭದ ಪ್ರಮಾಣ | ೧·೨೮% |
| ೧೭ | ಸಾಲ ಕೊಡುವ ವಾಡಿಕೆಯ ಬಡ್ಡಿದರ | ೪ ರಿಂದ ೮ ೩/೮% |
| ೧೮ | ಸಾಲ ಪಡೆದು ಕೊಳ್ಳುವ ವಾಡಿಕೆಯ ಬಡ್ಡಿದರ | ೧/೨ ರಿಂದ ೪.೧/೨% |
| ೧೯ | ಡಿವ್ಹಿಡೆಂಡಿನ ಪ್ರಮಾಣ | ೩ ರಿಂದ ೬. ೧/೪% |

ಬ್ಯಾಂಕುಗಳ ಪ್ರಗತಿಯು ಸರ್ವಾಂಗೀಣವಾಗಿದೆ ಎಂದು ಮೇಲಿನ ಅಂಕೆ-ಸಂಖ್ಯೆಗಳಿಂದ ವಿದಿತವಾಗುತ್ತದೆ. ಪಟ್ಟಣಗಳಲ್ಲಿಯ ಮತ್ತು ದೊಡ್ಡ ಊರುಗಳಲ್ಲಿಯ ಬ್ಯಾಂಕುಗಳು ಉಪಯುಕ್ತ ರೀತಿಯಲ್ಲಿ ಸೇವೆಯನ್ನು ಸಲ್ಲಿಸುತ್ತಿವೆ. ಎಷ್ಟೋ ಸಹಕಾರಿ ಅರ್ಬನ್ ಬ್ಯಾಂಕುಗಳನ್ನು ಇತರ ಜಾಯಿಂಟ ಸ್ಟಾಕ್ ಬ್ಯಾಂಕುಗಳಿಗೆ ಸರಿ ಹೋಲಿಸಿ ನೋಡಿದಾಗ ಅವುಗಳಂತೆಯೇ ಠೇವುಗಳನ್ನು ದೊರಕಿಸುವದರಲ್ಲಿ ಜನರ ವಿಶ್ವಾಸವನ್ನು ಗಳಿಸಿವೆ ಎಂದು ಕಂಡುಬರುವದು ಅನೇಕ ಬ್ಯಾಂಕುಗಳು ಆಧುನಿಕ ಬ್ಯಾಂಕಿನ ವ್ಯವಹಾರ ಪದ್ಧತಿಯನ್ನು ಜಾರಿಯಲ್ಲಿ ತಂದಿವೆ ಮತ್ತು ಎಷ್ಟೋ ಅರ್ಬನ್ ಬ್ಯಾಂಕುಗಳು ಇತರ ಸಹಕಾರಿ ಸಂಘಗಳ ಸದಸ್ಯರಿಲ್ಲದ ಶೇತ್ಕಿ ಮತ್ತು ಬಿನ್ ಶೇತ್ಕಿ ಜನರಿಗೂ, ಅವರನ್ನು ನಿಮಿತ್ ಸದಸ್ಯರನ್ನಾಗಿ ಮಾಡಿಕೊಂಡು, ಬೆಲೆಯುಳ್ಳ ಸಾಮಾನುಗಳನ್ನು ಅಡವಾಗಿಟ್ಟುಕೊಂಡು ಸಾಲ ಕೊಡುವ ಪದ್ಧತಿಯನ್ನು ಜಾರಿಯಲ್ಲಿ ತಂದಿವೆ ಸಾಹುಕಾರ ಕಾಯಿದೆಯ ಪರಿಣಾಮವಾಗಿ ಅಡಚಣಿಯಲ್ಲಿ ಬಂದ, ಸಣ್ಣ ಸಣ್ಣ ಸಾಲಗಳನ್ನು ಬಿಡುವಂಥ ಜನರಿಗೆ ಸಹಾಯ ಮಾಡುವದಕ್ಕಾಗಿ ಈ ತರಗತಿಯ ಸದಸ್ಯತನವನ್ನು ಪ್ರಾರಂಭಿಸಲಾಗಿವೆ

ಕಾರಖಾನ ಕೆಲಸಗಾರರ ಸಂಘಗಳು, ಸಂಬಳ ಪಡೆಯುವ ನೌಕರರ ಸಂಘಗಳು, ಗಿರಣಿ ಕೂಲಿಕಾರ ಸಂಘಗಳು ಈ ಮೊದಲಾದ ಬೇರೆ ಬೇರೆ ಸಂಘಗಳು ಸಹಿತ ಉತ್ತಮ ರೀತಿಯಲ್ಲಿ ಪ್ರಗತಿ ಹೊಂದುತ್ತಲಿದ್ದು ಹಣದ ಅವಶ್ಯಕತೆ ಇರುವ ಸಣ್ಣ ಜನರಿಗೆ ಹೆಚ್ಚು ಉಪಯುಕ್ತವಾಗುತ್ತವೆ.

## (ಕ) ಶೇತ್ಕೀ ಬಿನ್ನ ಪತ್ತಿನ ಸಂಸ್ಥೆಗಳು.

### ೧ ಸಹಕಾರಿ ಮಾರಾಟ ಸಂಘಗಳು

ರೈತನ ಅಭ್ಯುದಯದ ಮತ್ತು ಒಕ್ಕಲುತನದ ಸುಧಾರಣೆಯ ಯಾವದೇ ಯೋಜನೆಯ ಯಶಸ್ಸು ಮುಖ್ಯವಾಗಿ, ರೈತರಿಗೆ ಅವರು ಹೆಚ್ಚಾಗಿದ ಹುಟ್ಟುವಳಿಯ ಲಾಭದಾಯಕ ಮಾರಾಟಕ್ಕಾಗಿ ಒದಗಿಸಲಾಗಿರುವ ಸೌಕರ್ಯಗಳ ಮೇಲೆ ಅವಲಂಬಿಸಿದೆ. ಒಕ್ಕಲುತನದ ಹುಟ್ಟುವಳಿಯ ಮಾರಾಟದ ಬೆಲೆಯಲ್ಲಿ ಒಕ್ಕಲಿಗನಿಗೆ ಉಚಿತ ಲಾಭವೂ, ಯೋಗ್ಯ ಪ್ರಾಮಾಣಿಕ ವ್ಯವಹಾರವೂ ಘಟಿಸುವಂತೆ ಮಾರಾಟದ ವ್ಯವಸ್ಥೆ ಮಾಡುವದೇ ಹಳ್ಳಿಯ ಆರ್ಥಿಕ ರಚನೆಯ ಸರಪಳಿಯಲ್ಲಿಯ ಒಂದು ಮಹತ್ವದ ಕೊಂಡಿಯಾಗಿದೆ ಒಕ್ಕಲಿಗನ ಅಭ್ಯುದಯವಾಗಬೆ ಕಾದರೆ ಗ್ರಾಮಾಂತರ ಮಾರಾಟ ಪದ್ಧತಿಯು ಉತ್ತಮ ತಳಹದಿಯ ಮೇಲೆ ಸಾಗುವದು ಅತ್ಯವಶ್ಯವಾಗಿದೆ ವೈಯಕ್ತಿಕ ಮಾರಾಟ ಪದ್ಧತಿಗಿಂತ ಸಾಮೂಹಿಕ ಮಾರಾಟ ಪದ್ಧತಿಯು ಹೆಚ್ಚು ಹಿತಕಾರಿಯಾದುದು. ಈ ಪದ್ಧತಿಯು ಭಾರತಕ್ಕೆ ಹೆಚ್ಚು ಅನ್ವಯಿಸುತ್ತದೆ ಏಕೆಂದರೆ ಭಾರತದಲ್ಲಿ ರೈತನು ನಿರಕ್ಷರಿಯು, ಸಾಧನ ಸಂಪತ್ತು ಇಲ್ಲದವನು ಮತ್ತು ನಿರಂತರ ಅಡಚಣಿಯುಳ್ಳವನು ಇದ್ದು, ಪೇಟೆಯ ರಚನೆಯಲ್ಲಿ ಒಂದು ಕ್ಷುಲ್ಲಕ ಘಟಕನಾಗಿದ್ದಾನೆ ಆದುದರಿಂದ ಸಹಕಾರಿ

ಮಾರಾಟ ಪದ್ಧತಿಯು, ಉತ್ತಮ ಸಾಧನೆಗಳಲ್ಲಿ ಒಂದಾಗಿದೆ ಎಂದು ಒಪ್ಪಿಕೊಳ್ಳಲಾಗಿದೆ ನಿಯಮಿತಗೊಳಿಸಲಾದ ( Regulated ) ಮಾರಾಟ ಪದ್ಧತಿಯು ಸದ್ಯದ ದೋಷಗಳನ್ನು ಬಹುಮಟ್ಟಿಗೆ ಕಡಿಮೆ ಮಾಡಬಹುದಾದರೂ ಸಂಪೂರ್ಣವಾಗಿ ಅವುಗಳನ್ನು ನಿರ್ಮೂಲಗೊಳಿಸುವದು ಅಸಾಧ್ಯವು ಆದುದರಿಂದ ಮಾರಾಟದ ಬೆಳವಣಿಗೆಗೆ ನಿಯಮಿತ ಪದ್ಧತಿಗಿಂತ ಬೇರೊಂದು ಹೆಚ್ಚಿನ ಪದ್ಧತಿಯು ಅತ್ಯಾವಶ್ಯವಿದೆ ಅದುವೇ ಸಹಕಾರಿ ಮಾರಾಟ ಪದ್ಧತಿ ಎಂದು ಹೇಳಬಹುದು! ಬೇರೆಡೆಗೆ ಬಂದ ಅನುಭವದ ಮೇರೆಗೆ ಹೇಳುವದಾದರೆ ಸಹಕಾರಿ ಮಾರಾಟ ಪದ್ಧತಿಯು ಮಾರಾಟ ಮಾಡುವ ರೈತನ ಪರಿಸ್ಥಿತಿಯನ್ನು ಬಲಗೊಳಿಸಿ, ಅವನಿಗೆ ದೊಡ್ಡ ಉತ್ಪಾದಕರಿಗೆ ಸಿಗುವ ನಿರಂತರ ಮಾರಾಟ ಸಾಧನಗಳನ್ನೂ ಯೋಗ್ಯ ಬೆಲೆಯನ್ನೂ ದೊರಕಿಸಿ ಕೊಡುತ್ತದೆ. ಸಹಕಾರಿ ಮಾರಾಟದಿಂದ ರೈತನಿಗೆ ದೊರೆಯುವ ಲಾಭಗಳಲ್ಲಿ ಕೆಳಗಿನವು ಮುಖ್ಯವಾಗಿವೆ —

**ಮಾರಾಟದ ವೆಚ್ಚದಲ್ಲಿ ಮಿತವ್ಯಯ**

ಸಹಕಾರಿ ಮಾರಾಟವು ಹುಟ್ಟುವಳಿಯನ್ನು ಕೂಡಿಹಾಕುವ ಮತ್ತು ಸುವ್ಯವಸ್ಥಿತಗೊಳಿಸುವ ವೆಚ್ಚವನ್ನು ಕಡಿಮೆ ಮಾಡುತ್ತದೆ ಇದು ದಲಾಲರಿಂದಾಗುವ ಶೋಷಣೆಯನ್ನೂ ಮಾರಾಟದಲ್ಲಿ ಕಂಡು ಬರುವ ದೋಷಗಳನ್ನೂ ( Mal-practices ) ಹೋಗಲಾಡಿಸುವದಲ್ಲದೆ ಒಕ್ಕಲಿಗರಿಗೆ ಕಷ್ಟದಿಂದ ಬೆಳೆದ ಹುಟ್ಟುವಳಿಗೆ ಯೋಗ್ಯ ಬೆಲೆಯನ್ನು ತಂದು ಕೊಡುತ್ತದೆ ಈ ವ್ಯವಹಾರದಲ್ಲಿ ಸಹಕಾರಿ ಸಂಘಗಳಿಗೆ ಆದ ಲಾಭದ ಕೆಲಭಾಗವು ಒಕ್ಕಲಿಗರಿಗೆ ಬೋನಸ್ಸೆಂದು ಸಿಗುತ್ತದೆ ಸಹಕಾರಿ ಸಂಘವು ಒಕ್ಕಲಿಗನ ಸಂಸ್ಥೆಯಾಗಿರುವದರಿಂದ ಅವನಲ್ಲಿ ಆತ್ಮೀಯ ಭಾವನೆಯು ಬರುತ್ತದೆ ವ್ಯವಹಾರದಲ್ಲಿ ದಲಾಲರಿಗೆ ಸಿಕ್ಕುವ ಲಾಭವು ಒಕ್ಕಲಿಗರಿಗೆ ಸಿಗುತ್ತದೆ ರೈತರು ತಮ್ಮ ಸರಕುಗಳ ಸಾಮೂಹಿಕ ಮಾರಾಟಕ್ಕಾಗಿ ಸಹಕಾರಿ ಮಾರಾಟ ಸಂಘವನ್ನು ರಚಿಸಿಕೊಳ್ಳಲು ಒಂದು ಗೂಡಿದರೆ, ಸಣ್ಣ ವ್ಯಾಪಾರಿಗಳನ್ನು ಹೋಗಲಾಡಿಸಿ ಮಾರಾಟದ ಪೇಟೆಯಲ್ಲಿ ನೇರವಾಗಿ ರೋಕ ವ್ಯವಹಾರ ಮಾಡಲು ಅನುಕೂಲವಾಗುವದಲ್ಲದೆ ಸಣ್ಣ ಪ್ರಮಾಣದಲ್ಲಿ ಸಂಗ್ರಹಿಸುವ ವೆಚ್ಚವು ಕಡಿಮೆಯಾಗುತ್ತದೆ

**ಹುಟ್ಟುವಳಿಯ ತರಗತಿಯಲ್ಲಿ ಸುಧಾರಣೆ.**

ಮಾರಾಟ ಸಂಘವು ದೊಡ್ಡ ಪ್ರಮಾಣದಲ್ಲಿ ಸರಕುಗಳನ್ನು ಮಾರಾಟ ಮಾಡುವದರಿಂದ ಸರಕುಗಳ ವರ್ಗೀಕರಣ ಮಾಡಲು ( Grading ) ಅನುಕೂಲವಾಗುವದು. ಮತ್ತು ಪೇಟೆಯಲ್ಲಿ ಯಾವ ವರ್ಗಕ್ಕೆ ಹೆಚ್ಚಿನ ಬೇಡಿಕೆ ಇದೆಯೋ ಅದನ್ನೇ ಬೆಳೆಯಲು ರೈತರಿಗೆ ಮನ ಒಲಿಸಲು ಅನುಕೂಲವಾಗುವದು. ಮಾರಾಟ ಸಂಘಗಳು ರೈತರಿಗೆ ಅವರ ಸರಕುಗಳ ವರ್ಗದ ಮೇರೆಗೆ ಹಣ ಕೊಡುವದರಿಂದ ಉತ್ತಮ ತರಗತಿಯ ಸರಕುಗಳನ್ನೇ ಉತ್ಪಾದಿಸಲು ಪ್ರತ್ಯಕ್ಷವಾಗಿ ಪ್ರೋತ್ಸಾಹಿಸಿದಂತಾಗುತ್ತದೆ

**ಹೆಚ್ಚಿನ ಬೆಲೆಯನ್ನು ದೊರಕಿಸುವಿಕೆ.**

ಮಾರಾಟ ಸಂಘವು ತನ್ನ ವ್ಯವಹಾರವನ್ನು ದೊಡ್ಡ ಪ್ರಮಾಣದಲ್ಲಿ ಸಾಗಿಸಿದರೆ ಅದಕ್ಕೆ ಮಾರಾಟ ಸೌಕರ್ಯಗಳು ಕಡಿಮೆ ವೆಚ್ಚದಲ್ಲಿ ದೊರೆಯುತ್ತವೆ ಅಂದರೆ ಸ್ಟೋರಿಂಗ, ಗ್ರೇಡಿಂಗ, ಸಾಗಾಟಗಳನ್ನು ಕಡಿಮೆ ವೆಚ್ಚದಲ್ಲಿ ಮಾಡಲು ಅನುಕೂಲವಾಗುವದು ಹೀಗೆ ಸರಕುಗಳನ್ನು ಪೇಟೆಗೆ ತರುವ ವೆಚ್ಚವು ಕಡಿಮೆಯಾದ ಬಳಿಕ ಮಾರಾಟ ಸಂಘಗಳ ಮುಖಾಂತರ ಮಾರಾಟ ಮಾಡುವ ರೈತನಿಗೆ ಯೋಗ್ಯ ಪ್ರತಿಫಲವು ದೊರೆಯುತ್ತದೆ.

**ಸಾಮೂಹಿಕ ವ್ಯವಹಾರದ ಲಾಭಗಳು.**

ಸಹಕಾರಿ ತತ್ವಗಳ ಮೇರೆಗೆ ರಚಿಸಲ್ಪಟ್ಟ ರೈತರ ಸಂಘವು ದೊಡ್ಡ ಪ್ರಮಾಣದಲ್ಲಿ ಪೂರೈಕೆಯನ್ನು ಕೈಕೊಂಡು ಯೋಗ್ಯ ಬೆಲೆಯನ್ನು ದೊರಕಿಸಿ ಕೊಡುವದರ ಜೊತೆಗೆ ಸಾಮೂಹಿಕವಾಗಿ ಕೊಡು ಕೊಳ್ಳುವ ಪದ್ಧತಿಯಿಂದ ರೈತರಿಗೆ ಅನೇಕ ಸವಲತ್ತುಗಳನ್ನು ದೊರಕಿಸಿಕೊಡುವ ಶಕ್ತಿಯುಳ್ಳದ್ದಾಗುತ್ತದೆ ರೇಲ್ವೆ, ಸರಕಾರ ಮತ್ತು ಸಾರ್ವಜನಿಕರೊಡನೆ ವ್ಯವಹಾರ ಮಾಡುವಾಗ ರೈತನಿಗೆ ಸಂಘಗಳ ಮುಖಾಂತರ ವೈಯಕ್ತಿಕ ಪದ್ಧತಿಗಿಂತ ಹೆಚ್ಚಿನ ಅನುಕೂಲತೆಗಳು ದೊರೆಯುವವು

**ಸೋವಿ ಬಡ್ಡಿದರದಲ್ಲಿ ಹಣ ಪೂರೈಕೆ**

ವೈಯಕ್ತಿಕ ರೈತನು ಸಣ್ಣ ಉತ್ಪಾದಕನಾಗಿರುವದರಿಂದ ತನ್ನ ಸರಕುಗಳನ್ನು ಅಡವಾಗಿಟ್ಟು ಯೋಗ್ಯ ಬಡ್ಡಿದರದಲ್ಲಿ ಸಾಲ ಪಡೆದುಕೊಳ್ಳುವ ಸ್ಥಿತಿಯಲ್ಲಿರುವದಿಲ್ಲ ಆದರೆ ಮಾರಾಟ ಸಂಘಗಳು ಮಧ್ಯವರ್ತಿ ಹಣ ಪೂರೈಕೆ ಸಂಘಗಳಿಂದ ತಮ್ಮ ಸದಸ್ಯರ ಹುಟ್ಟುವಳಿಯನ್ನು ಅಡವಾಗಿಟ್ಟು ಸೋವಿ ಬಡ್ಡಿ ದರದಲ್ಲಿ ಸಾಲ ಪಡೆದುಕೊಳ್ಳಲು ಸಮರ್ಥವಿರುತ್ತವೆ ಇದರ ಪರಿಣಾಮವಾಗಿ ಹುಟ್ಟುವಳಿಯ ಮಾರಾಟದ ವೆಚ್ಚವು ಕಡಿಮೆಯಾಗುವದು ಇದಲ್ಲದೆ ಯೋಗ್ಯ ಧಾರಣಿ ಬರುವವರೆಗೆ ತನ್ನ ಮಾಲನ್ನು ಹಿಡಿದಿಡುವ ಶಕ್ತಿ (Holding capacity) ಒಕ್ಕಲಿಗನಿಗೆ ಬರುತ್ತದೆ

**ರೈತರ ವ್ಯವಹಾರಿಕ ಶಿಕ್ಷಣ**

ಸಹಕಾರಿ ಮಾರಾಟ ಪದ್ಧತಿಯು ರೈತರಿಗೆ ವ್ಯವಹಾರ ಪದ್ಧತಿಗಳ ಶಿಕ್ಷಣ ಕೊಡುತ್ತದೆ ಒಕ್ಕಲುತನದ ಮತ್ತು ಹೈನದ ಹುಟ್ಟುವಳಿಗಳ ಸಹಕಾರಿ ಮಾರಾಟ ಪದ್ಧತಿಯು ಡೆನ್ಮಾರ್ಕ, ನೆದರ್ಲಂಡ, ಇಂಗ್ಲಂಡ, ಕಾನಡಾ, ನ್ಯೂಝಿಲಂಡ ಮತ್ತು ಆಸ್ಟ್ರಿಯಾಗಳಲ್ಲಿ ಸರಿಯಾಗಿ ಬೆಳವಣಿಗೆ ಹೊಂದಿದ (ಈ ಸಂಘಗಳ ಕಾರ್ಯ ಪದ್ಧತಿಯ ವಿವರಗಳನ್ನು ೨ನೆಯ ಅಧ್ಯಾಯದಲ್ಲಿ ಕೊಡಲಾಗಿದೆ ) ಅಲ್ಲಿ ರೈತನೇ

ಉತ್ಪಾದಕ ಮತ್ತು ಮಾರಾಟಗಾರನಾಗಿದ್ದಾನೆ. ಅಂತೆಯೇ ಅಲ್ಲಿಯ ರೈತರು ಸುಖ ಸಮೃದ್ಧಿಯಲ್ಲಿದ್ದಾರೆ

**ಕರ್ನಾಟಕದಲ್ಲಿ ಹತ್ತಿಯ ಮಾರಾಟದ ಸಂಘಗಳು:**— ಈ ರಾಜ್ಯದಲ್ಲಿ ಸಹಕಾರಿ ಮಾರಾಟ ಆಂದೋಲನವು ವಿಶೇಷತಃ ಹತ್ತಿ, ಶೇಂಗಾ, ಬೆಲ್ಲ, ಮೆಣಸಿನ ಕಾಯಿ, ಅಡಿಕೆ ಮೊದಲಾದ ರೊಕ್ಕದ ಪೀಕುಗಳನ್ನು ಮಾರಾಟ ಮಾಡುವ ಪದ್ಧತಿಯಲ್ಲಿ ಹೆಚ್ಚಾಗಿ ಬೆಳೆದು ಕೊಂಡಿದೆ. ಈ ರಾಜ್ಯದಲ್ಲಿ ಅಸ್ತಿತ್ವದಲ್ಲಿ ಬಂದ ಮಾರಾಟ ಸಂಘಗಳಲ್ಲಿ ಹತ್ತಿಯ ಮಾರಾಟ ಸಂಘಗಳೇ ಮೊದಲಿನವುಗಳಾಗಿವೆ. ಒಕ್ಕಲುತನದ ಖಾತೆಯವರು ನಡೆಯಿಸುತ್ತಿದ್ದ ಕರ್ನಾಟಕದಲ್ಲಿ ಬೆಳೆಯುತಿದ್ದ ಕುಮಟಾ ಮತ್ತು ಧಾರವಾಡ ಅಮೇರಿಕನ್ ಹತ್ತಿಯ ಲಿಲಾವಿನ ಮಾರಾಟ ಪದ್ಧತಿಯಲ್ಲಿಯೇ ಈ ಮಾರಾಟ ಸಂಘಗಳು ರೂಪಗೊಂಡವು. ೧೯೧೭ರ ವರೆಗೆ ಈ ಲಿಲಾವಿನ ವ್ಯವಹಾರವನ್ನು ಶೇತ್ಕಿ ಖಾತೆಯು ಸಾಗಿಸುತ್ತಬಂದಿತು. ಈ ಲಿಲಾವಿನ ಮಾರಾಟವು ಒಂದೇ ಸವನೆ ಬೆಳೆಯತೊಡಗಿ ೧೯೧೭ಕ್ಕೆ ೧೦ ಲಕ್ಷ ರೂಗಳಿಗೆ ಮುಟ್ಟಿತು ಈ ಪದ್ಧತಿಯು ಹೆಚ್ಚು ಜನಪ್ರಿಯವಾಗತೊಡಗಿತಲ್ಲದೆ ಅದರಿಂದ ಮಾರುವವನಿಗೂ ಕೊಳ್ಳುವವನಿಗೂ ಲಾಭವಾಗುತ್ತಿತ್ತು ಆದುದರಿಂದ ಈ ವ್ಯವಹಾರ ಮಾಡುವದಕ್ಕೆ ಸಹಕಾರಿತತ್ವಗಳ ಮೇಲೆ ಸಂಘಗಳನ್ನು ರಚಿಸಿಕೊಳ್ಳಲು ಉಪದೇಶಿಸಲಾಯಿತು ಅದರಂತೆ ಹುಬ್ಬಳ್ಳಿ ಮತ್ತು ಗದಗಿನಲ್ಲಿ ಇಂಥ ಸಂಘಗಳು ಸ್ಥಾಪಿಸಲ್ಪಟ್ಟವು ಹುಬ್ಬಳ್ಳಿಯ ಹತ್ತಿ ಮಾರಾಟ ಸಂಘವು ೧೯೧೫ರಲ್ಲಿಯೂ ಗದಗಿನ ಮಾರಾಟ ಸಂಘವು ೧೯೧೭ರಲ್ಲಿಯೂ ಅಣ್ಣಿಗೇರಿ ಮಾರಾಟ ಸಂಘವು ೧೯೧೫ರಲ್ಲಿಯೂ ನೋಂದಾಯಿಸಲ್ಪಟ್ಟವು. ಒಕ್ಕಲುತನದ ಡಾಯರೆಕ್ಟರರು ಲಿಲಾವಿನ ವ್ಯವಹಾರವನ್ನು ಈ ಸಂಘಗಳಿಗೆ ವರ್ಗಾಯಿಸಿದರು. ವಿಶಾಲವಾದ ಕಾರ್ಯಕ್ಷೇತ್ರ ವಿರುವದೇ ಕರ್ನಾಟಕ ಮಾರಾಟದ ಸಂಘಗಳ ಮುಖ್ಯ ವೈಶಿಷ್ಟ್ಯವಾಗಿದೆ ವೈಯಕ್ತಿಕ ತಳಹದಿಯ ಮೇರೆಗೆ ಮುಖ್ಯ ರೈತರನ್ನೂ, ವ್ಯಾಪಾರಿಗಳನ್ನೂ ಮತ್ತು ಜಮೀನದಾರರನ್ನೂ ಸದಸ್ಯರನ್ನಾಗಿ ಮಾಡಿಕೊಂಡು ಈ ಸಂಘಗಳನ್ನು ರಚಿಸಲಾಗಿದೆ ಸದಸ್ಯೇತರರ ಹತ್ತಿಯನ್ನೂ ಮಾರಲಾಗುತ್ತಿದೆ ಉತ್ಪಾದನೆಯನ್ನು ಕೂಡಿ ( Pooling ) ಹಾಕುವದಿಲ್ಲ ಸಂಘಗಳು ರೈತರಿಗೆ ಉತ್ತಮ ಬೀಜಗಳನ್ನು ಪೂರೈಸಿ ಹುಟ್ಟುವಳಿಯನ್ನು ವರ್ಗೀಕರಿಸಿ ಮಾರಾಟ ಮಾಡುತ್ತವೆ ಉತ್ತಮ ತರಗತಿಯ ಹತ್ತಿಯನ್ನು ಸಂಘದ ಆವಾರದಲ್ಲಿ ಲಿಲಾವಿನಿಂದ ಮಾರಲಾಗುತ್ತದೆ ಕೆಳತರಗತಿಯ ಹತ್ತಿಯನ್ನು ಪ್ರತ್ಯೇಕ ಒಡಂಬಡಿಕೆಗಳ ಮೇರೆಗೆ ಮಾರಲಾಗುತ್ತದೆ ಸದಸ್ಯರಿಗೆ ಹಣ ಪೂರೈಸುವದಕ್ಕಾಗಿ ಸಂಘಗಳಿಗೆ ಬೇಕಾಗುವ ಹಣವನ್ನು ಕರ್ನಾಟಕ ಮಧ್ಯವರ್ತಿ ಸಹಕಾರಿ ಬ್ಯಾಂಕು ಪೂರೈಸುತ್ತದೆ ಗದಗ, ಹುಬ್ಬಳ್ಳಿ ಹತ್ತಿ ಮಾರಾಟದ ಸಂಘಗಳ ಯಶಸ್ಸನ್ನು ನೋಡಿ ಬಾಗಲಕೋಟೆ ಮತ್ತು ಬೈಲಹೊಂಗಲಗಳಲ್ಲಿ ಇಂಥ ಸಂಘಗಳು ಸ್ಥಾಪಿಸಲ್ಪಟ್ಟವು. ಆದರೆ ಕೆಲವೊಂದು ಕಾರಣಗಳ ಮೂಲಕ ಈ ಸಂಘಗಳನ್ನು ರದ್ದು ಮಾಡಲಾಯಿತು. ಇತ್ತೀಚೆಗೆ ಹತ್ತಿಯ ಮಾರಾಟದ ಸಲುವಾಗಿಯೇ ಆಗಲಿ ಅಥವಾ ಒಕ್ಕಲುತನದ ಇನ್ನುಳಿದ ಯಾವದೇ ವಿಶಿಷ್ಟ ಉತ್ಪಾದನೆಯ ಮಾರಾಟಕ್ಕಾಗಲೀ ಸ್ವತಂತ್ರ

ಸಂಘಗಳನ್ನು (Single-Commodity-Societies) ಸ್ಥಾಪಿಸುವ ಬದಲಾಗಿ ಒಕ್ಕಲುತನದ ಎಲ್ಲ ಹುಟ್ಟುವಳಿಯ ಮಾರಾಟಕ್ಕಾಗಿಯೂ ಮತ್ತು ಒಕ್ಕಲಿಗರಿಗೆ ಒಕ್ಕಲುತನಕ್ಕೆ ಬೇಕಾಗುವ ಸಲಕರಣೆಗಳ ಪೂರೈಕೆಗಾಗಿಯೂ ಖರೀದಿ-ವಿಕ್ರಿ ಸಂಘಗಳನ್ನು (Purchase & Sale Unions) ಸ್ಥಾಪಿಸಲಾಗಿದೆ ಬಹುತರ ಹತ್ತಿ ಬೆಳೆಯುವ ಎಲ್ಲ ಪ್ರದೇಶಗಳಲ್ಲಿ ಮಾರಾಟದ ಸಂಘಗಳು ಸ್ಥಾಪಿಸಲ್ಪಟ್ಟಿವೆ ಈ ಸಂಘಗಳು ಹತ್ತಿಯ ಮಾರಾಟವನ್ನು ಮಾಡುತ್ತವೆ ಗದಗ ಮತ್ತು ಹುಬ್ಬಳ್ಳಿ ಹತ್ತಿಯ ಮಾರಾಟದ ಸಂಘಗಳು ಇಲ್ಲಿಯವರೆಗೆ ಹತ್ತಿ, ಅರಳೆಯ ಮಾರಾಟವನ್ನೇ ಮಾಡುತ್ತವೆ ಈ ಸಂಘಗಳಾದರೂ ಒಕ್ಕಲುತನದ ಉಳಿದ ಹುಟ್ಟುವಳಿಯ ಮಾರಾಟವನ್ನು ಕೈಕೊಳ್ಳುವ ಅವಶ್ಯಕತೆ ಇದೆ ಈ ಎಲ್ಲ ಮಾರಾಟದ ಸಂಘಗಳ ವ್ಯವಹಾರದ ವಿವರಗಳನ್ನು ೬ ನೆಯ ಅಧ್ಯಾಯದಲ್ಲಿ ಕೊಡಲಾಗಿದೆ ಈ ಸಂಘಗಳು ಶೇತ್ಕಿ ಖಾತೆಯ ಯೋಜನೆಯು ಮೇರೆಗೆ ಆ ಖಾತೆಯ ಸುಪರಿಂಟೆಂಡೆಂಟರ ದೇಖರೇಖಿಯಲ್ಲಿ ಕಾದಿಟ್ಟ ಕ್ಷೇತ್ರಗಳಲ್ಲಿ ಸುಧಾರಿಸಿದ ಬೀಜಗಳನ್ನು ಬಿತ್ತಲು ಸಹಾಯ ಮಾಡುತ್ತವೆ ಈ ಬೀಜಗಳನ್ನು ಸಂಘಗಳು ಪೂರೈಸುತ್ತವೆ ರೂಪಾಂತರ ಚಟುವಟಿಕೆಗಳನ್ನು ಇನ್ನೂ ಈ ಸಂಘಗಳು ಕೈಕೊಳ್ಳಬೇಕಾಗಿದೆ ಮತ್ತು ಮುಂಬಯಿಯಲ್ಲಿ ಗಿರಣಿಗಳ ಮತ್ತು ಆಯಾತ ಮಾಡಿಕೊಳ್ಳುವ ವ್ಯಾಪಾರಸ್ಥರೊಡನೆ ಹೆಚ್ಚಿಗೆ ನೇರವಾದ ಸಂಬಂಧವನ್ನು ಬೆಳೆಯಿಸಿಕೊಳ್ಳಬೇಕಾಗಿದೆ

**ಗುಜರಾಥದಲ್ಲಿಯ ಹತ್ತಿಯ ಮಾರಾಟ ಸಂಘಗಳು** — ಮುಂಬಯಿ ರಾಜ್ಯದಲ್ಲಿ ಮತ್ತೊಂದು ಹತ್ತಿ ಬೆಳೆಯುವ ಪ್ರದೇಶವಾದ ಗುಜರಾಥವು ಸಹಕಾರಿ ಮಾರಾಟ ಪದ್ಧತಿಯ ಸಾಧ್ಯತೆಗಳನ್ನು ಗ್ರಹಿಸುವದರಲ್ಲಿ ತಡಮಾಡಲಿಲ್ಲ ಗುಜರಾಥದಲ್ಲಿ ಮೊದಲನೆಯ ಸಂಘವು ಸುರತ ಜಿಲ್ಲೆಯ ಸಸ್ಸೇಕ ಎಂಬ ಹಳ್ಳಿಯಲ್ಲಿ ೧೯೨೦ರಲ್ಲಿ ಸ್ಥಾಪಿಸಲ್ಪಟ್ಟಿತು **ಶ್ರೀ ಪಿ ಜೆ ಪಟೇಲ** ಅವರ ನೇತೃತ್ವದಲ್ಲಿ ಈ ಸಂಘವು ಸಂಘಟಿಸಲ್ಪಟ್ಟಿತು. ಕರ್ನಾಟಕ ಮತ್ತು ಗುಜರಾಥದಲ್ಲಿಯ ಹತ್ತಿಯ ಮಾರಾಟ ಸಂಘಗಳಲ್ಲಿ ಬಹಳ ಅಂತರವು ಕಂಡು ಬರುತ್ತದೆ ಕರ್ನಾಟಕದಲ್ಲಿಯ ಹತ್ತಿಯ ಮಾರಾಟ ಸಂಘಗಳ ಮೂಲ ಸ್ವರೂಪಗಳನ್ನು ಈಗಾಗಲೇ ಮೇಲೆ ವಿವರಿಸಲಾಗಿದೆ ಗುಜರಾಥದಲ್ಲಿಯ ಹತ್ತಿಯ ಮಾರಾಟದ ಸಂಘಗಳು ಹಳ್ಳಿಗಳ ಗುಂಪಿನ ಘಟಕಗಳಾಗಿವೆ ಅಂದರೆ ಒಂದೇ ಜಾತಿಯ ಹತ್ತಿಯನ್ನು ಬೆಳೆಯುವ ೩-೪ ಹಳ್ಳಿಗಳ ರೈತರು ಕೂಡಿ, ಸಂಘವನ್ನು ಸ್ಥಾಪಿಸಿ, ತಮ್ಮ ಹತ್ತಿಯನ್ನು ಕೂಡಿಹಾಕಿ (Pool), ಸಾಮೂಹಿಕವಾಗಿ ಮಾರಾಟ ಮಾಡುತ್ತಾರೆ ಸುಗ್ಗಿಯು ಮುಗಿದ ಮೇಲೆ ಸಂಘಕ್ಕೆ ತಂದ ಹತ್ತಿಯನ್ನು ಮಾರಾಟಮಾಡಿ ಬಂದ ಎಲ್ಲ ರಕಮಿನಲ್ಲಿ, ಜಿನಿಂಗ, ಪ್ರೆಸಿಂಗ್ ಮತ್ತು ವಿಮಾ ವೆಚ್ಚಗಳನ್ನು ಕಳೆದನಂತರ ಹತ್ತಿಯ ಸರಾಸರಿಯ ಬೆಲೆಯನ್ನು ನಿರ್ಧರಿಸುತ್ತಾರೆ ಮತ್ತು ರೈತರಿಗೆ ಮುಂಗಡ ಕೊಟ್ಟ ಹಣವನ್ನು ವಸೂಲ ಮಾಡಿಕೊಂಡು ಉಳಿದ ರಕಮನ್ನು ಕೊಡುತ್ತಾರೆ ಸಸ್ಸೇಕದಲ್ಲಿಯ ಸಂಘವು ನೋಂದಾಯಿಸಲ್ಪಟ್ಟ ಮೇಲೆ ಗುಜರಾಥದ ಬೇರೆ ಬೇರೆ

ಭಾಗಗಳಲ್ಲಿ ಅಂಥ ಅನೇಕ ಸಂಘಗಳು ಸ್ಥಾಪಿಸಲ್ಪಟ್ಟವು ೩೦-೬-೫೧ಕ್ಕೆ ಗುಜರಾಥದಲ್ಲಿ ೫೬ ಹತ್ತಿಯ ಮಾರಾಟ ಸಂಘಗಳಿದ್ದವು ಇವುಗಳಲ್ಲಿ ೩೫ ಸಂಘಗಳು ಸುರತ ಜಿಲ್ಲೆಯಲ್ಲಿಯೇ ಇದ್ದವು ಈ ಎಲ್ಲ ಸಂಘಗಳ ಸದಸ್ಯರ ಸಂಖ್ಯೆಯು ೧೧,೫೫೨ ಮತ್ತು ದುಡಿಯುವ ಭಾಂಡವಲು ೨೪ ೪೦ ಲಕ್ಷ ರೂಪಾಯಿ ಇದ್ದಿತು. ಈ ಸಂಘಗಳ ಮುಖಾಂತರ ೧೬೮ ೨೨ ಲಕ್ಷ ರೂ.ಗಳ ಬೆಲೆಯ ಹತ್ತಿ ಮಾರಾಟವಾಗಿ ೪೪,೭೪೯ ರೂ. ಗಳ ಲಾಭವಾಯಿತು

## ನಾಸಿಕ ಮತ್ತು ಖಾನದೇಶಗಳಲ್ಲಿಯ ಹತ್ತಿಯ ಮಾರಾಟದ ಸಂಘಗಳು

ಶುದ್ಧ ಜರಿಲ್ಲಾ ಹತ್ತಿಯ ಬೀಜಗಳನ್ನು ವೃದ್ಧಿಗೊಳಿಸುವ, ಹಂಚುವ ಮತ್ತು ಹತ್ತಿಯ ಮಾರಾಟದ ಬಗ್ಗೆ ಕ್ರಮಬದ್ಧ ಪೇಟೆಯನ್ನು ನಿರ್ಮಿಸುವ ಉದ್ದೇಶದಿಂದ ಸುರತ ಮಾದರಿಯಮೇಲೆ ಪೂರ್ವಖಾನದೇಶ ಜಿಲ್ಹೆಯಲ್ಲಿ ೧೬ ಹತ್ತಿಯ ಮಾರಾಟದ ಸಂಘಗಳನ್ನು ಸ್ಥಾಪಿಸುವ ಮತ್ತು ಅವುಗಳ ಮೇಲ್ವಿಚಾರಣೆ ಮತ್ತು ಆಡಳಿತೆಯ ಬಗ್ಗೆ ತಯಾರಿಸಿದ ಯೋಜನೆಯು ೧೯೪೨ ರಲ್ಲಿ ಸರಕಾರದಿಂದ ಮಾನ್ಯ ಮಾಡಲ್ಪಟ್ಟಿತು ಈ ಯೋಜನೆಯ ಮೇರೆಗೆ ೧೯೪೨ ರಲ್ಲಿ ೧೬ ಸಂಘಗಳು ನೋಂದಾಯಿಸಲ್ಪಟ್ಟವು ಜಳಗಾಂವದ ಅಸಿಸ್ಟಂಟ ರಜಿಸ್ಟ್ರಾರ, ಕಾಟನ್ ಸುಪರಿಂಟೆಂಡೆಂಟ ಮತ್ತು ಪೂರ್ವಖಾನದೇಶ ಜಿಲ್ಹಾ ಮಧ್ಯವರ್ತಿ ಸಹಕಾರಿ ಬ್ಯಾಂಕಿನ ಚೇರಮನ್‌ರನ್ನೊಳಗೊಂಡ ಒಂದು ಸಮಿತಿಯು ಈ ಯೋಜನೆಯ ಮೇಲ್ವಿಚಾರಣೆ ಮಾಡುತ್ತದೆ ಪೂರ್ವ ಖಾನದೇಶ ಜಿಲ್ಹೆಯ ಮಧ್ಯವರ್ತಿ ಸಹಕಾರಿ ಬ್ಯಾಂಕಿನ ಮ್ಯಾನೇಜಿಂಗ ಡಾಯರಕ್ಟರು ಮತ್ತು ಜಳಗಾಂವದ ಮಾರ್ಕೆಟಿಂಗ ಇನಸ್ಪೆಕ್ಟರರು ಈ ಸಮಿತಿಯ ಸಹಕಾರ್ಯದರ್ಶಿಗಳಾಗಿ ಕೆಲಸ ಮಾಡುತ್ತಿದ್ದರು ಈ ಯೋಜನೆಯ ಮೇರೆಗೆ ನೋಂದಾಯಿಸಲ್ಪಡುವ ಸಂಘದ ಕಾರ್ಯಕ್ಷೇತ್ರವು ಕೆಲವೊಂದು ಹಳ್ಳಿಗಳ ಗುಂಪುಗಳಿಗೆ ಮಾತ್ರ ನಿರ್ದಿಷ್ಟಗೊಳಿಸಲ್ಪಟ್ಟಿದ್ದು, ಕೇಂದ್ರ ಹಳ್ಳಿಯಿಂದ ೫ ರಿಂದ ೭ ಮೈಲು ಅಂತರದ ಮೇಲಿರುವ ಹಳ್ಳಿಗಳು ಸಮಾವೇಶವಾಗುತ್ತವೆ ಶುದ್ಧ ಜರಿಲ್ಲಾ ಹತ್ತಿಯ ಬೀಜಗಳನ್ನು ಹೆಚ್ಚಿಸುವದು, ಹಂಚುವದು ಮತ್ತು ಶುದ್ಧ ಜರಿಲ್ಲಾ ಹತ್ತಿಯನ್ನು ಕಲೆಹಾಕಿ ಯೋಗ್ಯ ಪ್ರಮಾಣದಲ್ಲಿ ಮಾರಾಟ ಮಾಡುವದು ಹಾಗೂ ಸುಗ್ಗಿಯಲ್ಲಿ ಹತ್ತಿಯ ಮಾರಾಟದಿಂದ ಬಂದ ಎಲ್ಲ ಹಣದಿಂದ ಸರಾಸರಿಯ ಮಾರಾಟದ ಬೆಲೆಯನ್ನು ನಿರ್ಧರಿಸಿ, ಪ್ರತಿಯೊಬ್ಬ ಸದಸ್ಯನು ತಂದ ಹತ್ತಿಯ ಪ್ರಮಾಣದ ಮೇರೆಗೆ ಹಣವನ್ನು ಹಂಚುವದು ಈ ಮೊದಲಾದವುಗಳು ಈ ಸಂಘಗಳ ಮೂಲ ಉದ್ದೇಶಗಳಾಗಿವೆ. ಇದೇ ಯೋಜನೆಯ ಮೇರೆಗೆ ಮತ್ತೆ ಇಂಥ ಎಂಟು ಸಂಘಗಳು— ಆರು ಪಶ್ಚಿಮ ಖಾನದೇಶದಲ್ಲಿ, ಎರಡು ನಾಶಿಕ ಜಿಲ್ಹೆಯಲ್ಲಿ ನೋಂದಾಯಿಸಲ್ಪಟ್ಟವು ಹೀಗೆ ೩೦-೬-೧೯೫೧ ಕ್ಕೆ ಮಹಾರಾಷ್ಟ್ರದಲ್ಲಿ ೨೪ ಸಂಘಗಳಿದ್ದವು ಈ ಎಲ್ಲ ಸಂಘಗಳ ಸದಸ್ಯರ ಸಂಖ್ಯೆ ೫೮೩೭ ಇದ್ದು ಆದರಲ್ಲಿ ೫೭೭೧ ವ್ಯಕ್ತಿಗಳೂ ೬೬ ಸಂಘಗಳೂ ಇದ್ದವು ದುಡಿಯುವ ಭಾಂಡವಲು ೬ ೫೯ ಲಕ್ಷ ರೂಪಾಯಿ ಇದ್ದಿತು. ೧೯೫೦-೫೧ರಲ್ಲಿ ಈ ಸಂಘಗಳು ೨೯.೫೯ ಲಕ್ಷ ರೂಪಾಯಿಗಳ ಹತ್ತಿಯ ಮಾರಾಟ ಮಾಡಿದವು. ಮತ್ತು ೬೦,೨೬೮ ರೂಪಾಯಿಗಳ

ಲಾಭ ಪಡೆದವು. ಈಗ ಪೂರ್ವಖಾನದೇಶ ಜಿಲ್ಲೆಯಲ್ಲಿ ಜರಿಲ್ಲಾ ಹತ್ತಿಯ ಬದಲು ೧೯೭–೩ ಎಂಬ ಹೊಸ ನಮೂನೆಯ ಹತ್ತಿಯನ್ನು ಬೆಳೆಯಲಾಗುತ್ತಿದೆ ಈ ಹೊಸ ಜಾತಿಯ ಹತ್ತೀ ಬೀಜಗಳನ್ನು ಹೆಚ್ಚಿಸುವ ಉದ್ದೇಶದ ಪಂಚ ವಾರ್ಷಿಕ ಯೋಜನೆಯನ್ನು ಇಂಡಿಯನ್ ಸೆಂಟ್ರಲ್ ಕಾಟನ್ ಕಮಿಟಿಯು ಮಾನ್ಯ ಮಾಡಿರುತ್ತದೆ. ಆದುದರಿಂದ ಈ ಯೋಜನೆಯ ಮೇರೆಗೆ ಸಂಘಗಳು ಕಾರ್ಯ ಕೈಕೊಳ್ಳುವ ವಿಷಯವು ಸಹಕಾರಿ ಖಾತೆಯವರ ವಿಚಾರಣೆಯಲ್ಲಿದೆ

**ಇತರ ಮಾರಾಟದ ಸಂಘಗಳು.:—** ಮೇಲೆ ವಿವರಿಸಲಾಗಿರುವ ಹತ್ತಿಯ ಮಾರಾಟದ ಸಂಘಗಳಲ್ಲದೆ, ಮುಂಬೈ ರಾಜ್ಯದಲ್ಲಿ ಹಣ್ಣು, ಅಡಿಕೆ, ಉಪ್ಪು ಮೊದಲಾದ ಮರಾಟದ ಸಂಘಗಳೂ ಇವೆ. ಅವುಗಳಲ್ಲಿ ಕೆಲವೊಂದು ಸಂಘಗಳ ಕಾರ್ಯಕಲಾಪಗಳನ್ನು ಕೆಳಗೆ ಕೊಡಲಾಗಿದೆ.

**(ಅ) ಹಣ್ಣು ಮತ್ತು ಕಾಯಿಪಲ್ಲೆಯ ಮಾರಾಟದ ಸಂಘಗಳು —** ೩೦–೬–೫೧ಕ್ಕೆ ಈ ರಾಜ್ಯದಲ್ಲಿ ೪೫ ಹಣ್ಣು ಮತ್ತು ಕಾಯಿಪಲ್ಲೆ ಮಾರಾಟದ ಸಂಘಗಳಿದ್ದವು. ಪೂರ್ವಖಾನದೇಶ ಜಿಲ್ಹೆಯಲ್ಲಿ ಅತಿ ಹೆಚ್ಚು ಅಂದರೆ ೧೨ ಹಣ್ಣಿನ ಮಾರಾಟದ ಸಂಘಗಳಿದ್ದವು ಅವು ಹೆಚ್ಚಾಗಿ ಬಾಳೀಹಣ್ಣು ಮತ್ತು ಮೋಸಂಬಿ ಹಣ್ಣುಗಳನ್ನು ಮಾರುತ್ತಿದ್ದವು ಈ ೪೫ ಸಂಘಗಳ ಸದಸ್ಯರಲ್ಲಿ ೧೦೮೨೭ ವ್ಯಕ್ತಿಗಳೂ ಮತ್ತು ೧೨ ಸಂಘಗಳೂ ಇದ್ದವು. ೨೫.೮೫ ಲಕ್ಷ ರೂಪಾಯಿಗಳ ದುಡಿಯುವ ಭಾಂಡವಲು ಇದ್ದಿತು ಆ ವರ್ಷದಲ್ಲಿ ೯೯ ೧೬ ಲಕ್ಷರೂಪಾಯಿಗಳ ಹುಟ್ಟುವಳಿಯನ್ನು ಮಾರಾಟಮಾಡಿ ೩.೪೪ ಲಕ್ಷ ರೂಪಾಯಿಗಳ ಕಮೀಶನ್ ಮತ್ತು ೧ ೫೬ ಲಕ್ಷ ರೂಪಾಯಿಗಳ ಲಾಭವನ್ನು ಪಡೆದವು "ಆಗ್ ಮಾರ್ಕ" ಯೋಜನೆಯ ಮೇರೆಗೆ ಪೂರ್ವಖಾನದೇಶದಲ್ಲಿಯ ಸಂಘಗಳು ಮೋಸಂಬಿ ಹಣ್ಣುಗಳನ್ನು ವರ್ಗೀಕರಿಸುತ್ತವೆ

**(ಬ) ಅಡಿಕೆ ಮಾರಾಟ ಸಂಘಗಳು:—** ಈ ರಾಜ್ಯದಲ್ಲಿ ಇಂಥ ಸಂಘಗಳು ಎರಡು ಇದ್ದು ಒಂದು ಶಿರ್ಶಿಯಲ್ಲಿ ಮತ್ತೊಂದು ಕುಮಟಾದಲ್ಲಿ ಇವೆ ಈ ಎರಡರಲ್ಲಿ ಶಿರ್ಶಿ ಸಂಘವು ದೊಡ್ಡದಾಗಿದೆ. ಅದರ ಶೇರ ಭಾಂಡವಲು ೩೦–೬–೧೯೫೧ ಕ್ಕೆ ೧೦೮೬೦ ರೂಪಾಯಿ ಇದ್ದಿತು ೧೯೫೦–೫೧ ರಲ್ಲಿ ಈ ಸಂಘವು ೨೭.೦೩ ಲಕ್ಷ ರೂಪಾಯಿಗಳ ಅಡಿಕೆ, ಯಾಲಕ್ಕಿ, ಮತ್ತು ಮೆಣಸನ್ನು ಮಾರಿ ೨೧೧೩೪ ರೂಪಾಯಿಗಳ ಕಮೀಶನ್ನು ಪಡೆಯಿತು. ಕುಮಠಾದಲ್ಲಿಯ ಸಂಘಕ್ಕೆ ೨೮೮೨೪ ರೂಪಾಯಿಗಳ ಸಣ್ಣ ದುಡಿಯುವ ಭಂಡವಲು ಇದ್ದು ೮.೭೮ ಲಕ್ಷ ರೂಪಾಯಿಗಳ ಅಡಿಕೆ ಮಾರಾಟ ಮಾಡಿತು.

**(ಕ) ಉಪ್ಪಿನ ಮಾರಾಟ ಸಂಘಗಳು:—** ಈ ರಾಜ್ಯದಲ್ಲಿ ಉಪ್ಪು ಮಾರಾಟ ಮಾಡುವ ೨ ಸಂಘಗಳಿದ್ದು, ಒಂದು ಕಾರವಾರ ಜಿಲ್ಹೆಯ ಸಾಣಿಕಟ್ಟಾದಲ್ಲಿಯೂ ಮತ್ತೊಂದು ಸುರತ ಜಿಲ್ಹೆಯ ಧರ್ಸಾನಾದಲ್ಲಿಯೂ ಇವೆ. ಧರ್ಸಾನಾ ಸಂಘವು ೨೨೩೦೮ ಬಂಗಾಲಿ ಮಣದಷ್ಟು ಉಪ್ಪನ್ನುಮಾರಿ ೧೦೮೦೧ ರೂಪಾಯಿಗಳ ಲಾಭ ಪಡೆಯಿತು.

**(ಡ) ರೂಪಾಂತರ ಸಂಘಗಳು (Processing Societies):—** ಶೇತ್ಕಿ ಮಾರಾಟ ಪದ್ಧತಿಯಲ್ಲಿ ರೂಪಾಂತರಕ್ಕೆ ಹೆಚ್ಚಿನ ಸ್ಥಾನವು ಸಿಕ್ಕಿದೆ ಮಧ್ಯಸ್ಥರು ಮಾಡಬಹುದಾದ ಎಲ್ಲ ಕಾರ್ಯವನ್ನು ಲಾಭದಾಯಕ ರೀತಿಯಲ್ಲಿ ಕೈಕೊಳ್ಳಬೇಕೆಂಬುದೇ ಸಹಕಾರೀ ಮಾರಾಟ ಪದ್ಧತಿಯ ಉದ್ದೇಶವಾಗಿರುವದ ರಿಂದ ರೂಪಾಂತರವು ಒಂದು ಮಹತ್ವದ ಕಾರ್ಯವಾಗುತ್ತದೆ ಅಂದರೆ ಮಾರಾಟದ ಸಂಘಕ್ಕೆ ಆಯಾ ವೇಳೆಯಲ್ಲಿ ಜನರಿಗೆ ಬೇಕಾಗುವ ಸರಕುಗಳನ್ನು ಮಾರಾಟ ಮಾಡಲು ಅನುಕೂಲವಾಗುತ್ತದೆ ಗುಜರಾಥದಲ್ಲಿ ಮಾರಾಟದ ಸಂಘಗಳು ಜಿನಿಂಗ್ ಸಲುವಾಗಿ ತಂದ ಕಪಾಸದ (Cotton) ಸಲುವಾಗಿ ಜಿನ್ನಿನ ಮಾಲಕರು ಮಾಡಿದ ಆಪಾದನೆಗಳನ್ನು ಹೋಗಲಾಡಿಸಬೇಕೆಂದು ಸನ್ಸೇಕ ಹತ್ತಿಯ ಮಾರಾಟ ಸಂಘವು ೧೯೨೫ರಲ್ಲಿ ಒಂದು ಜಿನ್ನಿಂಗ್ ಫ್ಯಾಕ್ಟರಿಯನ್ನು ಸ್ಥಾಪಿಸಿತು ಸನ್ಸೇಕ ಮಾರಾಟ ಸಂಘವು ಮತ್ತಿತರ ೩ ಮಾರಾಟ ಸಂಘಗಳೊಡನೆ ಸೇರಿ ಜಿನಿಂಗ್ ಫ್ಯಾಕ್ಟರಿಯನ್ನು ಸ್ಥಾಪಿಸಿತು ಸನ್ಸೇಕ ಮಾರಾಟ ಸಂಘದ ಸಂಸ್ಥಾಪಕರಾಗಿದ್ದ **ಶ್ರೀ ಪುರುಷೋತ್ತಮ ಪಟೇಲರವರ** ಹೆಸರನ್ನೇ ಆ ಫ್ಯಾಕ್ಟರಿಗೆ ಇಡಲಾಯಿತು ಜಿನ್ನಿಂಗ್ ಸಂಘಗಳ ಪ್ರಯೋಜನೆಗಳನ್ನು ಮಾರಾಟ ಸಂಘಗಳ ಸದಸ್ಯರು ಅರಿತುಕೊಳ್ಳತೊಡಗಿದ್ದರಿಂದ ಹೆಚ್ಚು ಹೆಚ್ಚು ಜಿನ್ನಿಂಗ್ ಸಂಘಗಳು ಅಸ್ತಿತ್ವದಲ್ಲಿ ಬರತೊಡಗಿದವು ೧೯೩೪ರಲ್ಲಿ "ರೈತರ ಸಹಕಾರಿ ಜಿನ್ನಿಂಗ್ ಮತ್ತು ಪ್ರೆಸಿಂಗ್ ಸೊಸಾಯಟಿ" ಎಂಬ ದೊಡ್ಡ ಸಂಘವು ನೋಂದಾಯಿಸಲ್ಪಟ್ಟಿತು ಹತ್ತಿಯನ್ನು ಜಿನ್ನಿಂಗ್ ಮತ್ತು ಪ್ರೆಸ್ ಮಾಡುವ ಉದ್ದೇಶ ಒಂದೇ ಅಲ್ಲದೆ ಹತ್ತಿಯ ಮಾರಾಟದ ಸಂಘಗಳು ಜಿನ್ನಿಂಗ್ ಫ್ಯಾಕ್ಟರಿಯನ್ನೂ ಸ್ಥಾಪಿಸಲು ಅಸಮರ್ಥವಿದ್ದ ಸ್ಥಾನಗಳಲ್ಲಿ ಜಿನ್ನಿಂಗ್ ಫ್ಯಾಕ್ಟರಿಯನ್ನು ತೆರೆಯುವದೂ ಈ ದೊಡ್ಡ ಸಂಸ್ಥೆಯ ಉದ್ದೇಶ ವಾಗಿದ್ದಿತು. ಜಿನ್ ಮಾಡುವ ದರವನ್ನು ಕಡಿಮೆ ಮಾಡುವದರಲ್ಲಿ ಈ ಎಲ್ಲ ಸಂಘಗಳು ಬಹುಮಟ್ಟಿಗೆ ಯಶಸ್ವಿಯಾಗಿವೆ

ಗುಜರಾಥದಲ್ಲಿ ೩೦-೬-೧೯೫೫ಕ್ಕೆ ೧೨ ಜಿನ್ನಿಂಗ್ ಮತ್ತು ಪ್ರೆಸಿಂಗ್ ಸಂಘಗಳಿದ್ದವು ಅವುಗಳ ಸದಸ್ಯರ ಸಂಖ್ಯೆ ೬೭೪೭ ಮತ್ತು ದುಡಿಯುವ ಭಾಂಡವಲು ೩೪ ೪೨ ಲಕ್ಷ ರೂಪಾಯಿಗಳು ಇದ್ದವು ಈ ಸಂಘಗಳು ೭,೩೬,೧೪೭ ಬಂಗಾಲಿ ಮಣದಷ್ಟು ಹತ್ತಿಯನ್ನು ಜಿನ್-ಮಾಡಿ ೫ ೫೦ ಲಕ್ಷ ರೂ ಗಳಷ್ಟು ಆದಾಯವನ್ನು ಪಡೆದಿದ್ದವು ೪೫೩೩೫ ಬೇಲ ಹತ್ತಿಯನ್ನು ಪ್ರೆಸ್‌ಮಾಡಿ ೪.೭೩ ಲಕ್ಷ ರೂ ಗಳನ್ನು ಗಳಿಸಿದವು ಹೀಗೆ ಈ ಸಂಘಗಳು ೭೨೪೫೦ ರೂ. ಗಳ ಒಟ್ಟು ಲಾಭವನ್ನು ಪಡೆದವು ಇಲ್ಲಿ ಸದರ್ನ ಗುಜರಾಥ ಸಹಕಾರಿ ಹತ್ತಿಯ ಸಂಘಗಳ ಯೂನಿಯನ್ ಗಮನಾರ್ಹವಾಗಿದೆ ಸುರತ ಜಿಲ್ಹೆಯಲ್ಲಿಯ ಕೆಲವು ಹತ್ತಿಯ ಮಾರಾಟ ಸಂಘಗಳು ಮತ್ತು ಜಿನ್ನಿಂಗ್ ಸಂಘಗಳು ಈ ಸಂಸ್ಥೆಯನ್ನು ಸ್ಥಾಪಿಸಿದವು ಸದಸ್ಯ ಸಂಘಗಳ ಹಿಂಜಿದ ಹತ್ತಿಗೆ ಸುರತ ಹತ್ತಿಯ ಪೇಟೆಯಲ್ಲಿ ಗಿರಾಕಿಗಳನ್ನು ಹುಡುಕುವದೇ ಈ ಯೂನಿಯನ್ನದ ಉದ್ದೇಶವಾಗಿದ್ದಿತು. ಈ ಯೂನಿಯನ್ ಸುರತದ ಪೇಟೆಯಲ್ಲಿ ಬಲಗೊಳ್ಳುತ್ತ ನಡೆದಿದ್ದು ಹತ್ತಿಯ ದೊಡ್ಡ

ವ್ಯಾಪಾರಸ್ಥರೊಡನೆ ಸದಸ್ಯಸಂಘಗಳ ಪರವಾಗಿ ಪರಿಣಾಮಕಾರಕ ರೀತಿಯಲ್ಲಿ ವ್ಯವಹಾರ ಮಾಡುತ್ತದೆ. ಯೂನಿಯನ್ನದ ಕಚೇರಿ ಜಾಗೆಯಲ್ಲಿ ಊಟ ಮತ್ತು ವಸತಿ ಸೌಕರ್ಯದ ವ್ಯವಸ್ಥೆಯನ್ನು ಮಾಡಿರುವದು ಈ ಯೂನಿಯನ್ನದ ಮತ್ತೊಂದು ವೈಶಿಷ್ಟ್ಯವಾಗಿದ ಈ ಯೂನಿಯನ್ನಿಗೆ ಈಗ ದೊಡ್ಡ ಸ್ವಂತ ಕಟ್ಟಡವಿದ್ದು ವಿಶಾಲವಾದ ಆವಾರವಿದೆ. ಪ್ರಚಾರಕಾರ್ಯ ಮಾಡುವದು, ಹೊಸ ಸಂಘಗಳನ್ನು ಸಂಘಟಿಸುವದು ಕಾರ್ಯ ಕರ್ತರರ ಪರಿಷತ್ತುಗಳನ್ನು ಏರ್ಪಡಿಸುವದು, ನೌಕರ ವರ್ಗಕ್ಕೆ ತರಬೇತಿ ವರ್ಗಗಳನ್ನು ತೆರೆಯುವದು ಈ ಮೊದಲಾದ ಕಾರ್ಯಗಳನ್ನು ಈ ಯೂನಿಯನ್ ಮಾಡುತ್ತದೆ.

## ಎಲ್ಲ ಪ್ರಕಾರಗಳ ವ್ಯಾಪಾರದ ಸಂಘಗಳ ಪ್ರಗತಿ

ಕಳೆದ ೪ ವರ್ಷಗಳ ಅವಧಿಯಲ್ಲಿ ಸಹಕಾರಿ ಮಾರಾಟದ ಸಂಘಗುಳ ಸಾಧಿಸಿದ ಪ್ರಗತಿಯ ಅಂಕೆ ಸಂಖ್ಯೆಗಳನ್ನು ಕೆಳಗೆ ಕೊಡಲಾಗಿವೆ.

| ವರ್ಷ | ಸಂಘಗಳ ಸಂಖ್ಯೆ | ಸದಸ್ಯರ – ಸಂಖ್ಯೆ | | ದುಡಿಯುವ ಭಾಂಡವಲು | ಕೊಟ್ಟ ಸಾಲ | ಮಾರಾಟ |
|---|---|---|---|---|---|---|
| | | ವ್ಯಕ್ತಿಗಳು | ಸಂಘಗಳು | ( ರೂ ಗಳು ಲಕ್ಷದಲ್ಲಿ ) | | |
| ೧೯೪೭–೪೮ | ೨೨೪ | ೭೩,೬೩೯ | ೨,೯೮೯ | ೧೫೯ ೧೧ | — | ೭೮೪ ೩೮ |
| ೧೯೪೮–೪೯ | ೩೨೬ | ೯೯,೦೦೩ | ೩,೮೪೨ | ೬೧೦ ೩೨ | ೧೭೮ ೩೯ | ೨೩೪೪·೮೭ |
| ೧೯೪೯–೫೦ | ೩೪೪ | ೧,೦೧,೨೦೫ | ೪,೩೩೫ | ೨೭೦ ೩೯ | ೨೮೪ ೯೭ | ೨೦೩೨·೦೫ |
| ೧೯೫೦–೫೧ | ೩೬೭ | ೧,೧೮,೯೮೪ | ೪,೧೨೦ | ೫೧೪ ೮೦ | — | ೧೭೦೫ ೯೭ |

ವರುವರ್ಷಕ್ಕೂ ಮಾರಾಟ ಸಂಘಗಳು ಹೆಚ್ಚುತ್ತ ಹೋಗಿವೆ ಎಂದು ಮೇಲಿನ, ಅಂಕೆಸಂಖ್ಯೆಗಳಿಂದ ಕಂಡುಬರುತ್ತದೆ ಈ ರಾಜ್ಯದ ಯೋಜಿತ ಸಹಕಾರಿ ಮಾರಾಟದ ಬೆಳವಣಿಗೆಯ ಮೇರೆಗೆ ಪ್ರತಿ ತಾಲೂಕಿನ ಪ್ರಾಥಮಿಕ ಪೇಟೆಯಲ್ಲಿ ಒಂದು ಮಾರಾಟದ ಸಂಘವನ್ನು ಸ್ಥಾಪಿಸಬೇಕೆಂದು ವಿಚಾರಿಸಲ್ಪಾಗಿದೆ. ಸಹಕಾರಿ ಮಾರಾಟ ಪದ್ಧತಿಯು ಇರದೆ ಇರುವ ಪ್ರದೇಶಗಳನ್ನು

ಈ ಪದ್ಧತಿಯಲ್ಲಿ ಬರುವಂತೆ ಮಾಡುವದಕ್ಕಾಗಿ ಸಮೀಕೃತ ಮಾರಾಟ ಪದ್ಧತಿ ಯನ್ನು ಅಸ್ತಿತ್ವದಲ್ಲಿ ತರಲು ಜಿಲ್ಹಾ ಖರೀದಿ ಮತ್ತು ವಿಕ್ರಿ ಸಂಘಗಳನ್ನು ಸ್ಥಾಪಿಸಲಾಗಿದೆ ಮಾರಾಟ ಸಂಘಗಳಿರದ ಪ್ರದೇಶಗಳಲ್ಲಿ ಇವು ತಮ್ಮ ಶಾಖೆ ಗಳನ್ನು ತೆರೆಯಬಹುದು ಎಲ್ಲ ಮುಖ್ಯ ಪೇಟೆಗಳ ಕೇಂದ್ರಗಳಲ್ಲಿ ಮಾರಾಟ ಸಂಘಗಳನ್ನು ಸ್ಥಾಪಿಸುವ ಕೆಲಸವು ಇನ್ನೂ ನಾಗಿದೆ ೩೬೭ ಸಂಘಗಳು, ೧.೨೨ ಲಕ್ಷ ಸದಸ್ಯರು, ೫೧೪೮೦ ಲಕ್ಷ ರೂ ಗಳ ದುಡಿಯುವ ಭಾಂಡವಲು, ಇದ್ದವೆಂದು ಮೇಲಿನ ಅಂಕೆಸಂಖ್ಯೆಗಳಿಂದ ತಿಳಿದುಬರುತ್ತದೆ. ಈ ವರ್ಷದಲ್ಲಿ ಈ ಸಂಘಗಳು ೧.೦೫೯೭ ಲಕ್ಷ ರೂ ಗಳ ಸರಕುಗಳನ್ನು ಮಾರಾಟಮಾಡಿ ೨೦೯೬ ಲಕ್ಷ ರೂ. ಗಳ ಲಾಭ ಪಡೆದವು. ಒಕ್ಕಲುತನದ ಹುಟ್ಟುವಳಿಯ ಮಾರಾಟ ಮಾಡುವದರ ಜೊತೆಗೆ ಇವುಗಳಲ್ಲಿ ಕೆಲವೊಂದು ಸಂಘಗಳು ಬೀಜ, ಗೊಬ್ಬರ, ಸುಧಾರಿಸಿದ ಉಪಕರಣಗಳ ಪೂರೈಕೆಯ ಕಾರ್ಯ ಮಾಡುತ್ತಲಿವೆ ಅಲ್ಲದೆ ಕೆಲವು ಸಂಘಗಳು ಟ್ರ್ಯಾಕ್ಟರುಗಳನ್ನು ಕೊಂಡುಕೊಂಡಿವೆ ನಿಯಂತ್ರಣ ಕಾಲದಲ್ಲಿ ಆಹಾರ ಧಾನ್ಯ, ಅರಿವೆ, ಸಕ್ಕರೆ, ಕಲ್ಲೆಣ್ಣೆ, ಕಬ್ಬಿಣ, ಸಿಮೆಂಟು ಮೊದ ಲಾದ ನಿಯಂತ್ರಿತ ಸರಕುಗಳ ವಿತರಣೆಯನ್ನೂ ಕೆಲವು ಸಂಘಗಳು ಮಾಡುತ್ತಿದ್ದವು

ಮಾರಾಟ ಸಂಘಗಳಿಗೆ ರಾಜ್ಯ ಸರಕಾರವು ಹಲವಾರು ರೀತಿಗಳಲ್ಲಿ ಸಹಾಯ ಮಾಡಿವೆ ಸಂಘಗಳ ಕಾರ್ಯದರ್ಶಿಯಾಗಿ ಕಾರ್ಯ ಮಾಡಲು ಸರಕಾರವು ತನ್ನ ನೌಕರರನ್ನು ಪುಕ್ಕಟೆಯಾಗಿ ಕೊಡುತ್ತಿತ್ತು ೩೦-೬-೫೧ಕ್ಕೆ ೧೩ ಸರಕಾರಿ ನೌಕರರು ಕಾರ್ಯದರ್ಶಿಗಳಾಗಿ ಕೆಲಸಮಾಡುತ್ತಿದ್ದರು ಗುದಾಮು ಗಳನ್ನು ಕಟ್ಟಿಸಿಕೊಳ್ಳಲು ಸರಕಾರವು ಸಾಲ ಮತ್ತು ಸಹಾಯ ಧನವನ್ನು ಈ ಸಂಘ ಗಳಿಗೆ ಕೊಡುತದೆ ೧೯೫೦-೫೧ರಲ್ಲಿ ಈ ರೀತಿಯಲ್ಲಿ ಸರಕಾರವು ೫ ಸಂಘಗಳಿಗೆ ೨೭೬೬೪೦ ರೂ ಸಾಲವನ್ನೂ ಮತ್ತು ೬೦೦೩೪ ರೂ ಗಳ ಸಹಾಯ ಧನವನ್ನು ಕೊಟ್ಟಿವೆ ಖರೀದಿ ಮತ್ತು ವಿಕ್ರಿ ಸಂಘಗಳ ಫೆಡರೇಶನ್ನುಗಳಿಗೆ ೬,೦೦೦ ರೂ ಗಳ ವರೆಗ ಸಹಾಯ ಧನವನ್ನು ಸರಕಾರವು ಕೊಡುತ್ತಿದ್ದಿತು ಇಂಥ ಸಂಘಗಳ ಸಂಖ್ಯೆ ೬ ಇದ್ದಿತು

**ಮುಂಬಯಿ ಪ್ರಾಂತಿಕ ಸಹಕಾರಿ ಮಾರಾಟದ ಸಂಘ.—** ಈ ರಾಜ್ಯದ ಮಧ್ಯವರ್ತಿ ಮಾರಾಟದ ಸಂಘದ ಬಗ್ಗೆ ಹೇಳದೆ ಇದ್ದರೆ ರಾಜ್ಯದ ಮಾರಾಟ ಆಂದೋಲನದ ಚಿತ್ರವು ಪೂರ್ತಿಯಾದಂತಾಗುವದಿಲ್ಲ ರಾಜ್ಯದ ಕೇಂದ್ರ ಸಂಘಟನಯಾದ ಮುಂಬಯಿ ಪ್ರಾಂತಿಕ ಸಹಕಾರಿ ಮಾರಾಟ ಸಂಘವು ೧೯೪೧ರಲ್ಲಿ ಸ್ಥಾಪಿಸಲ್ಪಟ್ಟಿತು ಬೇರೆ ಬೇರೆ ಭಾಗಗಳಿಂದ ಬಂದ ಸರಕುಗಳ

ಮಾರಾಟ ಮತ್ತು ವೈಯಕ್ತಿಕ ಮಾರಾಟ ಸಂಘಗಳ ಸಂಯೋಜನೆ ಇವುಗಳೇ ಈ ಕೇಂದ್ರ ಸಂಸ್ಥೆಯ ಮುಖ್ಯ ಉದ್ದೇಶಗಳಾಗಿವೆ

ಈ ಸಂಸ್ಥೆಯ ಸದಸ್ಯರಲ್ಲಿ ಅ, ಬ, ಕ ಎಂಬ ಮೂರು ವಿಭಾಗಗಳನ್ನು ಮಾಡಲಾಗಿದೆ ಮನೆ ಕಟ್ಟುವ ಸಂಘಗಳನ್ನು ಬಿಟ್ಟು ಇತರ ಎಲ್ಲ ಸಹಕಾರಿ ಸಂಘಗಳು 'ಅ' ವರ್ಗದಲ್ಲಿ, ವೈಯಕ್ತಿಕ ಜನರು ಮತ್ತು ಖಾಸಗಿ ಭಾಗೀದಾರ ಸಂಸ್ಥೆಗಳು 'ಬ' ವರ್ಗದಲ್ಲಿ ಬರುತ್ತವೆ 'ಕ' ವರ್ಗದಲ್ಲಿ ವ್ಯಕ್ತಿ ಸದಸ್ಯರೇ ಇದ್ದು ಅವರಿಗೆ ಲಾಭ ಹಂಚುವಿಕೆಯಲ್ಲಿ ಮತ್ತು ಮತದಾನದಲ್ಲಿ ಅಧಿಕಾರವಿರುವದಿಲ್ಲ

ಸಂಸ್ಥೆಯ ಆಡಳಿತವನ್ನು ೧೧ ಜನ ಡಾಯರೆಕ್ಟರರ ಬೋರ್ಡಿಗೆ ಒಪ್ಪಿಸಲಾಗಿದೆ. ಇವರಲ್ಲಿ ೪ ಡಾಯರೆಕ್ಟರರನ್ನು 'ಅ' ವರ್ಗದ ಸದಸ್ಯರು, ೪ ಡಾಯರೆಕ್ಟರರನ್ನು 'ಬ' ವರ್ಗದ ಸದಸ್ಯರು ಆರಿಸುತ್ತಾರೆ ಇನ್ನುಳಿದ ಮೂವರು ಅಧಿಕಾರ ಬಲದಿಂದ ( Ex-officio ) ಡಾಯರೆಕ್ಟರರಾಗಿರುತ್ತಾರೆ ಈ ಮೂವರಲ್ಲಿ ಸಹಕಾರಿ ಸಂಘಗಳ ರಜಿಸ್ಟ್ರಾರ, ಚೀಫ್ ಮಾರ್ಕೆಟಿಂಗ ಆಫೀಸರ ಮತ್ತು ರಾಜ್ಯದ ಸಹಕಾರಿ ಬ್ಯಾಂಕಿನ ಒಬ್ಬ ಪ್ರತಿನಿಧಿ ಇರುತ್ತಾರೆ ನಿತ್ಯದ ವ್ಯವಹಾರದ ಆಡಳಿತೆಯನ್ನು ೫ ಜನರ ಕಾರ್ಯಕಾರೀ ಮಂಡಲಕ್ಕೆ ಒಪ್ಪಿಸಲಾಗಿದೆ

ಪ್ರಾರಂಭಕ್ಕೆ ಸರಕಾರವು ಈ ಸಂಘದ ಕಾರ್ಯಕ್ಕಾಗಿ ಅಸಿಸ್ಟಂಟ ರಜಿಸ್ಟ್ರಾರರ ಜಾಗೆಯನ್ನು ನಿರ್ಮಿಸಿತು ೧೯೪೩-೪೪ರ ವರೆಗೆ ಅವರು ಈ ಸಂಘದ ಕಾರ್ಯದರ್ಶಿಗಳಾಗಿ ಕಲಸ ಮಾಡಿದರು ಅಲ್ಲದೆ ಖಾತೆಯು ಈ ಸಂಘಕ್ಕೆ ಒಬ್ಬ ಸೀನಿಯರ ಆಡಿಟರ ಮತ್ತು ಸಬ್ ಆಡಿಟರರನ್ನು ಮ್ಯಾನೇಜರ ಮತ್ತು ಅಸಿಸ್ಟಂಟ ಮ್ಯಾನೇಜರರಂತೆ ಕಾರ್ಯಮಾಡಲು ಕೊಟ್ಟಿತ . ಸರಕಾರವು ಆಡಳಿತೆಯ ವೆಚ್ಚಕ್ಕೆಂದು ಮೊದಲನೆಯ ವರ್ಷದಲ್ಲಿ ೮೦೦೦ ರೂಪಾಯಿಗಳನ್ನು ಎರಡನೆಯ ವರ್ಷದಲ್ಲಿ ೬೦೦೦ ರೂಪಾಯಿಗಳನ್ನು ಮತ್ತು ಮೂರನೆಯ ವರ್ಷದಲ್ಲಿ ೪೦೦೦ ರೂಪಾಯಿಗಳ ಸಹಾಯ ಧನವನ್ನು ಕೊಟ್ಟಿತು

೧೯೪೫-೪೬ ರಿಂದ ೧೯೫೦-೫೧ರ ವರೆಗೆ ಈ ಸಂಸ್ಥೆಯು ಮಾಡಿದ ವ್ಯವ-ಹಾರದ ಅಂಕೆ ಸಂಖ್ಯೆಗಳನ್ನು ಇಲ್ಲಿ ಕೊಡಲಾಗಿದೆ.

| ವರ್ಷ | ಸದಸ್ಯರ ಸಂಖ್ಯೆ | | ಶೇರ ಭಾಂಡವಲು | ರಿಝರ್ವ ಮತ್ತಿತರ ಫಂಡು | ದುಡಿಯುವ ಭಾಂಡವಲು | ವ್ಯವಹಾರ | ಲಾಭ |
|---|---|---|---|---|---|---|---|
| | ಸಂಘಗಳು | ವ್ಯಕ್ತಿಗಳು | | | | | |
| ೧೯೪೫-೪೬ | ೨೬೪ | ೫೨೮ | ೯೧ ೧೭೫ | ೧,೦೯,೫೯೧ | ೪,೨೬,೪೩೭ | ೩೯,೯೬,೧೪೬ | ೧,೩೧೭ |
| ೧೯೪೬-೪೭ | ೨೭೨ | ೫೧೪ | ೯೬,೬೨೫ | ೧,೧೧,೯೨೯ | ೬,೧೧,೪೧೭ | ೪೪,೦೪,೪೪೫ | ೫೦,೮೦ |
| ೧೯೪೭-೪೮ | ೨೯೧ | ೫೨೦ | ೯೯,೦೨೫ | ೧,೩೬,೭೮೯ | ೫,೨೯,೦೪೩ | ೫೮,೩೪,೪೭೩ | ೨೧,೪೯೨ |
| ೧೯೪೮-೪೯ | ೩೦೭ | ೫೪೨ | ೧,೦೩,೬೨೫ | ೧,೬೧,೬೭೮ | ೪,೫೦,೭೩೬ | ೬೫,೫೫,೩೨೪ | ೨೧,೫೦೫ |
| ೧೯೪೯-೫೦ | ೩೩೯ | ೫೭೭ | ೧,೦೯,೬೫೦ | ೧,೮೩,೦೬೩ | ೭,೧೭,೦೯೭ | ೭೩,೪೭,೪೮೮ | ೮,೨೦೦ |
| ೧೯೫೦-೫೧ | ೪೩೪ | ೭೪೫ | ೧,೨೦,೫೨೫ | ೧,೯೮,೪೮೨ | ೮೪,೯೪,೭೩೯ | ೧,೮೭,೦೦,೦೦೦ | ೨೫,೪೯೬ |

ಈ ಸಂಸ್ಥೆಯ ಮುಖ್ಯ ಚಟುವಟಿಕೆಗಳನ್ನು ಕೆಳಗಿನಂತೆ ವರ್ಗೀಕರಿಸಬಹುದು

೧ ಮಾರಾಟ ೨ ಪೂರೈಕೆ ೩ ಪೇಟೆಯ ವ್ಯವಹಾರದ ಕಾರ್ಯ
೪ ವಿಶೇಷ ಚಟುವಟಿಕೆಗಳು.

**ಮಾರಾಟ** — ಈ ಸಂಸ್ಥೆಯು ಹಣ್ಣು, ಕಾಯಿಪಲ್ಲೆಗಳ ದೊಡ್ಡ ವ್ಯವಹಾರವನ್ನು ಮಾಡುತ್ತದೆ ಇದು ಮೋಸಂಬಿ, ದ್ರಾಕ್ಷೆ, ಬಾಳೆಹಣ್ಣು, ಮಾವಿನ ಹಣ್ಣು

ಮೊದಲಾದವುಗಳನ್ನು ಬಂದರದಿಂದ ತೆಗೆದುಕೊಂಡು ಪಾರ್ಸಲುಗಳ ಮುಖಾಂತರ ಗಿರಾಕಿಗಳಿಗೆ ಪೂರೈಸುತ್ತದೆ ಈ ಸಂಘವು ಬಾಳೀ ಹಣ್ಣುಗಳ ಮಾರಾಟಕ್ಕಾಗಿ ದಿಲ್ಲಿಯಲ್ಲಿ ಒಂದು ಶಾಖೆಯನ್ನು ತೆರೆದಿದ್ದು ೧೯೫೦-೫೧ರಲ್ಲಿ ಈ ಸಂಸ್ಥೆಯು ೮ ೫೩ ಲಕ್ಷ ರೂಪಾಯಿಗಳ ಹಣ್ಣು ಮಾರಿ ೧೯೦೦೦ ರೂಪಾಯಿಗಳ ಲಾಭ ಪಡೆಯಿತು ಅಗ್ಗದರದಲ್ಲಿ ಹಣ್ಣು ಕಾಯಿಪಲ್ಲೆಗಳ ಮಾರಾಟಕ್ಕಾಗಿ ಈ ಸಂಘವು ಮುಂಬಯಿ ನಗರದ ಬೇರೆಬೇರೆ ಭಾಗಗಳಲ್ಲಿ ೧೦ ಅಂಗಡಿಗಳನ್ನು ತೆರೆದಿದ್ದು ಈ ಅಂಗಡಿಗಳು ೧ ೮೮ ಲಕ್ಷ ರೂಪಾಯಿಗಳ ವ್ಯವಹಾರ ಮಾಡಿದವು

**ಪೂರೈಕೆ:—** ಇಡೀ ರಾಜ್ಯದಲ್ಲಿ ಅಮೋನಿಯಂ ಸಲ್ಫೇಟ ಹಂಚುವ ಕಾರ್ಯವನ್ನು ಸರಕಾರವು ಈ ಸಂಸ್ಥೆಗೆ ಒಪ್ಪಿಸಿದೆ ಈ ಸಂಘವು ಸಲ್ಫೇಟ ಹಂಚುವದಕ್ಕಾಗಿ ರಾಜ್ಯದಲ್ಲಿ ೨೧೨ ಎಜೆಂಟರನ್ನು ನಿಯಮಿಸಿದ್ದು ಇವರುಗಳಲ್ಲಿ ೧೬೨ ಸಂಘಗಳೂ ೫೦ ವ್ಯಾಪಾರಿಗಳೂ ಇರುತ್ತಾರೆ ಸಂಘವು ೩೪ ೫೦ ಲಕ್ಷ ರೂಪಾಯಿಗಳ ಅಮೋನಿಯಂ ಸಲ್ಫೇಟ ಆಯಾತ ಮಾಡಿಕೊಂಡಿತು ಅಲ್ಲದೆ ಸುಪರ-ಫಾಸ್ಫೇಟ, ಶೇಂಗಾ-ಹಿಂಡಿ ಹಂಚುವ ಕಾರ್ಯವನ್ನು ಈ ಸಂಘಕ್ಕೆ ಕೊಡಲಾಗಿದೆ ಈ ವಿಭಾಗದಲ್ಲಿ ಸಂಘದ ವ್ಯವಹಾರವು ೧ ೨೮ ಕೋಟಿ ರೂಪಾಯಿಗಳಷ್ಟಿದ್ದು ಅದರಿಂದ ೧ ೩೩ ಲಕ್ಷ ರೂಪಾಯಿಗಳ ಕಮೀಶನ್ ಸಿಕ್ಕಿತು

**ಪೇಟೆಯ ವ್ಯವಹಾರದ ಕಾರ್ಯ:—** ಈ ಕಾರ್ಯವನ್ನು ಸಂಘವು ೧೯೪೮-೪೯ರಲ್ಲಿ ಪ್ರಾರಂಭಿಸಿತು ಮುಂಬಯಿ ಪೇಟೆಯಿಂದ ಶೇತ್ಕಿ ಹುಟ್ಟುವಳಿ, ಹಣ್ಣು, ಕಾಯಿಪಲ್ಲೆ, ಎಣ್ಣೆ, ಎಣ್ಣೆ ಕಾಳುಗಳ ದರವನ್ನು ನಿತ್ಯವೂ ಸಂಗ್ರಹಿಸಿ ಮಾರಾಟ ಸಮಿತಿಗಳಿಗೆ ಪತ್ತಿನ ಸಂಘಗಳಿಗೆ ತಿಳಿಸುತ್ತದೆ ಪ್ರತಿವಾರದ ಅಂತ್ಯಕ್ಕೆ ಇರುವ ದರಗಳ ಬುಲೆಟಿನ್ನನ್ನು ಹೊರಡಿಸುತ್ತದೆ ಮತ್ತು ಮೇರೆಗೆ ತಿಂಗಳ ಅಂತ್ಯದ ದರಗಳ ಪ್ರಕಟಿಸುವ ವ್ಯವಸ್ಥೆಯನ್ನೂ ಮಾಡಿದೆ ಹಾಗೂ ಮುಖ್ಯ ಸರಕುಗಳ ದರವನ್ನು ತಿಳಿಸಲು ಆಕಾಶವಾಣಿ ಕೇಂದ್ರದಿಂದ ಬಿತ್ತರಿಸುವ ವ್ಯವಸ್ಥೆಯನ್ನು ಮಾಡಿದೆ

**ವಿಶೇಷ ಚಟುವಟಿಕೆಗಳು:—** ಈ ಸಂಘವು ಈಗ ಕೊಡೆಗಳನ್ನು ತಯಾರಿಸುವ ಕಾರ್ಯವನ್ನು ಕೈಕೊಂಡಿದೆ ೧೯೫೦-೫೧ ರಲ್ಲಿ ೩೨೮ ಡಜನ್ ಕೊಡೆಗಳನ್ನು ತಯಾರಿಸಿತು ಅಲ್ಲದೆ ಜಪಾನದಿಂದ ೬೦ ಲಕ್ಷ ರೂಪಾಯಿಗಳ ಡಿಜೇಲ ಎಣ್ಣೆಯನ್ನು ತರಿಸಿ ಮಾರಾಟ ಮಾಡಿ ಅದರಿಂದ ೬೦೦೦೦ ರೂಪಾಯಿಗಳ ಲಾಭ ಪಡೆಯಿತು ಸಂಘವು ೧೯೪೯-೫೦ ರಲ್ಲಿ ರಾಜ್ಯದ ಸಹಕಾರಿ ಮಾರಾಟ ಸಂಘಗಳ ಮತ್ತು ಇಂಡಿಯನ್ ಯೂನಿಯನ್ನಿನಲ್ಲಿಯ ಫಡರೇಶನ್ನುಗಳ ಪರಿಷತ್ತನ್ನು ಕರೆದಿದ್ದಿತು ರೇಲ್ವೆ ಸೌಕರ್ಯಗಳಿರುವ ಶಿವ್ರಿಯಲ್ಲಿ ಗುದಾಮು ಕಟ್ಟಿಸಲು ಜಾಗೆಕೊಳ್ಳುವದಕ್ಕಾಗಿ ಸರಕಾರವು ೨ ಲಕ್ಷ ರೂಪಾಯಿಗಳ ಸಾಲವನ್ನು ಕೊಟ್ಟಿದೆ.

## (೨) ತಾಲೂಕಾ ಅಭಿವೃದ್ಧಿ ಮಂಡಲಗಳು.
### ( Taluka Development Boards. )

೧೯೨೨ರಲ್ಲಿ ಮುಂಬಯಿ ಸರಕಾರವು ಪಾಸುಮಾಡಿದ ಗೊತ್ತುವಳಿಯ ಮೇರೆಗೆ ತಾಲೂಕಾ ಅಭಿವೃದ್ಧಿ ಮಂಡಲಗಳನ್ನು ಸ್ಥಾಪಿಸಲಾಯಿತು ಸಹಕಾರಿ ಸಂಘಗಳ ಕಾಯ್ದೆಯ ಮೇರೆಗೆ ಈ ಮಂಡಲಗಳು ನೋಂದಾಯಿಸಲ್ಪಟ್ಟಿವೆ ಸುಧಾರಿಸಿದ ಉಪಕರಣ, ಬೀಜ ಮತ್ತು ಗೊಬ್ಬರಗಳನ್ನು ಉಪಯೋಗ ಮಾಡಿಕೊಳ್ಳುವಂತೆ ಪ್ರಚಾರ ಕಾರ್ಯವನ್ನು ಕೈಕೊಳ್ಳುವದೇ ಈ ಮಂಡಲಗಳ ಮುಖ್ಯ ಉದ್ದೇಶ ವಾಗಿದೆ ಸರಕಾರದ ಸಂಶೋಧನ ಕೇಂದ್ರಗಳಲ್ಲಿ ಸಂಶೋಧನೆಗಳನ್ನು ಪ್ರದರ್ಶಿಸುವ ಕಾರ್ಯವನ್ನೂ ಇವು ಕೈಕೊಳ್ಳುತ್ತವೆ ತಾಲೂಕಾ ಅಭಿವೃದ್ಧಿ ಮಂಡಲಗಳು ಮುಂಬಯಿ ರಾಜ್ಯದ ಪೇತ್ಕಿ ಸಹಕಾರದ ವಿಶಿಷ್ಟ ಸಂಸ್ಥೆಗಳಾಗಿವೆ ಸಹಕಾರಿ ಸಂಘಗಳೂ ಮತ್ತು ವ್ಯಕ್ತಿಗಳೂ ಈ ಮಂಡಲಗಳ ಸದಸ್ಯರಾಗಬಹುದು ಈ ಮಂಡಲಗಳು ಪ್ರಚಾರ ಕಾರ್ಯದ ಜೊತೆಗೆ ಸುಧಾರಿಸಿದ ಬೀಜ ಮತ್ತು ಗೊಬ್ಬರಗಳ ಪ್ರಯೋಗ ಕಾರ್ಯಗಳನ್ನು ರೈತರ ಹೊಲಗಳಲ್ಲಿ ಮಾಡುತ್ತವೆ ಒಕ್ಕಲುತನದ ಪ್ರದರ್ಶನಗಳನ್ನು ಈ ಮಂಡಲಗಳು ಏರ್ಪಡಿಸುತ್ತವೆ. ಹೀಗೆ ಈ ಮಂಡಲಗಳು ಗ್ರಾಮಾಭಿವೃದ್ಧಿಯ ಯೋಗ್ಯ ಸಾಧನಗಳಾಗಿವ ತಾಲೂಕಾ ಅಭಿವೃದ್ಧಿ ಮಂಡಲಗಳ ಪ್ರಗತಿಯನ್ನು ಕೆಳಗೆ ಕೊಡಲಾಗಿದೆ

| ವರ್ಷ | ಮಂಡಲಗಳ ಸಂಖ್ಯೆ | ಸದಸ್ಯರ — ಸಂಖ್ಯೆ | | | ನಿಧಿ |
|---|---|---|---|---|---|
| | | ಸಂಘಗಳು | ವ್ಯಕ್ತಿಗಳು | | |
| ೧೯೨೫ | ೩೬ | | | | |
| ೧೯೩೦ | ೮೦ | ೬೩೧ | ೩೫,೮೭ | ರೂ | ೧೯೪೧೦೭ |
| ೧೯೩೫ | ೮೪ | ೭೯೨ | ೪೬,೭೫೪ | ,, | ೧,೨೧,೨೦೫ |
| ೧೯೪೦ | ೧೦೪ | ೬೧೭ | ೨೫೫೧೪ | ,, | ೮೨೮೧೦ |
| ೧೯೪೫ | ೧೧೬ | ೨೦೧೨ | ೧೦೧೧೫೯ | ,, | ೨೭೩೦೪೮ |

೧೯೪೮-೪೯ರಲ್ಲಿ ತಾಲೂಕಾ ಅಭಿವೃದ್ಧಿ ಮಂಡಲಗಳ ಕಾರ್ಯಗಳ ಮತ್ತು ಘಟನೆಗಳ ಪುನರ್ಘಟನೆಯ ಬಗ್ಗೆ ಸರಕಾರವು ಆಜ್ಞೆಹೊರಡಿಸಿತು ಗ್ರಾಮಾಭಿವೃದ್ಧಿಯ ಚಟುವಟಿಕೆಗಳನ್ನು ಹೆಚ್ಚು ಪರಿಣಾಮಕರ ರೀತಿಯಲ್ಲಿ ಸಾಗಿಸಿಕೊಂಡು ಹೋಗಬೇಕೆಂದೂ, ಗ್ರಾಮ ಮಂಡಲ, ಸಹಕಾರಿ ಸಂಘ ಮೊದಲಾದ ಗ್ರಾಮಾಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿದ ಅಧಿಕಾರೇತರ ಸಂಸ್ಥೆಗಳಲ್ಲಿ ಉತ್ತಮ ಸೌಹಾರ್ದವು ಬೆಳೆಯಬೇಕೆಂದೂ ೧೯೪೮ ರಿಂದ ತಾಲೂಕಾ ಅಭಿವೃದ್ಧಿ ಸಂಸ್ಥೆಗಳನ್ನು ತಾಲೂಕಾ ಅಭಿವೃದ್ಧಿ ಮಂಡಲಗಳೆಂದು ಕರೆಯಲಾಗುತ್ತಿದೆ ಈ ಮಂಡಲದ ಮುಖ್ಯ ಕಾರ್ಯಗಳೆಂದರೆ —

(೧) ತಾಲೂಕಗಳಲ್ಲಿ ಜಿಲ್ಹಾ ಅಭಿವೃದ್ಧಿ ಮಂಡಲಗಳ ಚಟುವಟಿಕೆಗಳನ್ನು ನಾಗಿಸುವದಕ್ಕಾಗಿ ಅದರ ಪ್ರತಿನಿಧಿ ಎಂದು ಕಾರ್ಯ ಮಾಡುವದು.

(೨) ಸರಕಾರದ ಮನ್ನಣೆ ಪಡೆದ ಗ್ರಾಮಾಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿದ ಎಲ್ಲ ಅಧಿಕಾರಿಗಳಿಗೆ ಕಾರ್ಯಮಾಡುವದಕ್ಕಾಗಿ ಸಹಾಯ ಮತ್ತು ಸಲಹೆ ನೀಡುವದು ಮತ್ತು ಗ್ರಾಮಾಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿದ ಬೇರೆ ಬೇರೆ ಖಾತೆಯ ಅಧಿಕಾರಿಗಳನ್ನು ಮತ್ತು ಕಾರ್ಯಕರ್ತರನ್ನು ಸಂಯೋಜಿಸುವದು.

(೩) ಗ್ರಾಮಾಭಿವೃದ್ಧಿಯ ಯೋಜನೆಗಳನ್ನು ಸಿದ್ಧಪಡಿಸಿ ಜಿಲ್ಹಾ ಅಭಿವೃದ್ಧಿ ಮಂಡಲಗಳ ಮುಖಾಂತರ ಸರಕಾರಕ್ಕೆ ಕಳಿಸುವದು

(೪) ಗ್ರಾಮ ಪಂಚಾಯತಿ, ಗ್ರಾಮ ಮಂಡಲ ಮತ್ತು ಸಹಕಾರಿ ಸಂಘಗಳು ತಮ್ಮ ಚಟುವಟಿಕೆಗಳನ್ನು ಪರಿಣಾಮಕರ ರೀತಿಯಲ್ಲಿ ನಾಗಿಸಿಕೊಂಡು ಹೋಗುವಂತೆ ಸಲಹೆ ಮತ್ತು ಸಹಕಾರ ನೀಡುವದು

(೫) ತಾಲೂಕಿನಲ್ಲಿಯ ಎಲ್ಲ ಗ್ರಾಮಾಭಿವೃದ್ಧಿ ಚಟುವಟಿಕೆಗಳ ಕೇಂದ್ರದಂತೆ ಕಾರ್ಯಮಾಡುವದು.

೧೯೪೯–೫೦ ಮತ್ತು ೧೯೫೦–೫೧ರಲ್ಲಿಯ ತಾಲೂಕಾ ಅಭಿವೃದ್ಧಿ ಸಂಸ್ಥೆ ಮತ್ತು ಮಂಡಲಗಳ ಪರಿಸ್ಥಿತಿಯ ತುಲನಾತ್ಮಕ ಚಿತ್ರವನ್ನು ಇಲ್ಲಿ ಕೊಡಲಾಗಿದೆ

| ವಿವರ | ೧೯೪೯–೫೦ | ೧೯೫೦–೫೧ |
|---|---|---|
| ಸಂಘಗಳ ಸಂಖ್ಯೆ | ೧೪೭ | ೧೮೪ |
| ಡಿಪೋಗಳ ಸಂಖ್ಯೆ | ೧೦೧ | ೧೦೮ |
| ವೈಯಕ್ತಿಕ ಸದಸ್ಯರ ಸಂಖ್ಯೆ | ೧೦,೨೪೮ | ೧೧೯೬೩೨ |
| ಶೇತ್ಕಿ ಸಲಕರಣೆಗಳ ಒಟ್ಟು ಖರೀದಿ ರೂ | ೮೧೮,೨೪೭ | ರೂ ೭೮೬೭೬೨೧ |
| ಪುಕ್ಕಟೆ ಪೂರೈಸಿದ ಸರಕುಗಳ ಬೆಲೆ ” | ೧೦೨೩೬ | ” ೨೩೭೩೭ |
| ಸಸಿ ಮತ್ತು ಬೀಜಗಳ ಪೂರೈಕೆ | ೮೫೫೧ | ೭೮೧ |
| ಆಡಳಿತೆಯ ವೆಚ್ಚ | ಅಂಕೆದೊರೆತಿಲ್ಲ | ೬೮೯೪೧೦ |
| ಲಾಭ | ” | ೨೬೮೧೮೯ |
| ಹಾನಿ | ” | ೧೩೧೮೮೧ |

ತಾಲೂಕಾ ಅಭಿವೃದ್ಧಿ ಸಂಸ್ಥೆಗಳು ಮಂಡಲಗಳಾಗುವಂತೆ ಪುನರ್ವಿಮರ್ಶಿತ ಪೋಟನಿಯಮಗಳನ್ನು ಸ್ವೀಕರಿಸಬೇಕೆಂದು ೩೦–೬–೫೨ರಂದು ಸಲಹೆಕೊಡಲಾಯಿತು ೧೮೪ ತಾಲೂಕಾ ಸಂಸ್ಥೆಗಳಲ್ಲಿ ೧೦೮ ಮಂಡಲಗಳು ತಾಲೂಕಾ ಅಭಿವೃದ್ಧಿ ಮಂಡಲ (Board) ಎಂದು ಹೆಸರು ಬದಲಾಯಿಸಿಕೊಂಡು ಪುನರ್ವಿಮರ್ಶಿತ ಪೋಟನಿಯಮಗಳನ್ನು ಸ್ವೀಕರಿಸಿಕೊಂಡಿವೆ

ಈ ಮಂಡಲಗಳು ಶೇತ್ಕಿ ಪ್ರಚಾರ ಕಾರ್ಯ ಮತ್ತು ರೈತರಿಗೆ ಸುಧಾರಿಸಿದ ಬೀಜ ಗೊಬ್ಬರ ಮತ್ತು ಶೇತ್ಕಿ ಸಲಕರಣೆಗಳನ್ನು ಪೂರೈಸುವದು ಈ ಮೊದಲಾದ ಕಾರ್ಯಗಳನ್ನು ಮಾಡುತ್ತವ ಸರಕಾರದ "**ಹೆಚ್ಚು ಆಹಾರ ಬೆಳೆಯಿರಿ**" ಆಂದೋಲನದ ಚಟುವಟಿಕೆಗಳಬಗ್ಗೆ ಒಕ್ಕಲುತನ ಖಾತೆಯ ಮತ್ತು ಗ್ರಾಮಾಭಿವೃದ್ಧಿ ಮಂಡಲಗಳ ಪ್ರತಿನಿಧಿಯಾಗಿ ಈ ಮಂಡಲಗಳು ಹೆಚ್ಚು ಕಾರ್ಯ ಮಾಡುತ್ತವೆ ಎಷ್ಟೋ ಮಂಡಲಗಳು ತಮ್ಮ ಚಟುವಟಿಕಗಳನ್ನು ಹೆಚ್ಚಿಸಿಕೊಂಡು ರೈತರಿಗೆ ಕಬ್ಬಿಣ ಸಿಂಡಿ ಮೊದಲಾದ ನಿಯಂತ್ರಿತ ಸರಕುಗಳನ್ನು ಪೂರೈಸುತ್ತಿವೆ

## (೩) ಉತ್ತಮ ಸಾಗುವಳಿ ಸಂಘಗಳು
## (Better Farming Societies)

ರೈತರ ಸರಾಸರಿ ಉತ್ಪನ್ನವು ಕಡಿಮೆಯಾಗಿದೆ ಅವರು ಧಾರಣ ಮಾಡಿರುವ ಭೂಮಿಯ ಪ್ರಮಾಣವು ಸಣ್ಣದಾಗಿದೆ ಅವರು ಸುಧಾರಿಸಿದ ಸಾಗುವಳಿ ಪದ್ಧತಿಯನ್ನಾಗಲೀ ಕೃತಕ ಗೊಬ್ಬರ ಅಥವಾ ಸುಧಾರಿಸಿದ ಉತ್ತಮ ಬೀಜಗಳನ್ನಾ-ಗಲೀ ಉಪಯೋಗಿಸುವದಿಲ್ಲ ಹೀಗಾಗಿ ಉತ್ಪಾದನೆಯು ಕಡಿಮೆಯಾಗಿದೆ ಉತ್ತಮ ಸಾಗುವಳಿಯು ಉತ್ಪಾದನಯನ್ನೂ ರೈತರ ಉತ್ಪನ್ನವನ್ನೂ ಹೆಚ್ಚಿಸಬಲ್ಲದು

ಪಂಜಾಬದಲ್ಲಿ ಉತ್ತಮ ಸಾಗುವಳಿ ಸಂಘಗಳು ಚನ್ನಾಗಿ ನಡೆದಿವೆ ಉತ್ತಮ ಸಾಗುವಳಿಯ ಪ್ರದರ್ಶನಮಾಡಿ ಸರಕಾರವು ಶಿಫಾರಸು ಮಾಡಿದ ಸುಧಾರಣಾ ಕ್ರಮಗಳನ್ನು ಸದಸ್ಯರು ಅನುಸರಿಸುವಂತೆ ಮಾಡುವದೇ ಈ ಸಂಘಗಳ ಮುಖ್ಯ ಕರ್ತವ್ಯವಾಗಿದೆ. ಈ ರಾಜ್ಯದಲ್ಲಿ ಈ ಸಂಘಗಳನ್ನು ಕಲವೊಂದು ಮಾರ್ಪಾಡುಗಳೊಂದಿಗೆ ಸಂಘಟಿಸಲಾಯಿತು. ತಾಲೂಕಾ ಅಭಿವೃದ್ಧಿ ಮಂಡಲಗಳಿಗಿಂತ ನಿರ್ದಿಷ್ಟ ಕಾರ್ಯಕ್ಷೇತ್ರವುಳ್ಳ ಉತ್ತಮ ಬೇಸಾಯ ಸಂಘಗಳು ಸುಧಾರಿಸಿದ ಬೇಸಾಯ ಪದ್ಧತಿಗಳ ಪ್ರಚಾರಕಾರ್ಯವನ್ನು ಚನ್ನಾಗಿ ಮಾಡಬಲ್ಲವೆಂದು ೧೯೩೭ರಲ್ಲಿ ರಜಿಸ್ಟ್ರಾರ ಮತ್ತು ಶ್ರೀ ವ್ಹಿ ಎಲ್ ಮೆಹತಾ ಅವರು ಸರಕಾರಕ್ಕೆ ಸಾದರ ಪಡಿಸಿದ ಸಂಯುಕ್ತ ವರದಿಯಲ್ಲಿ ಹೇಳಲಾಗಿದೆ ಆನಂತರ ಸರಕಾರವು ತಾಲೂಕಾ ಅಭಿವೃದ್ಧಿ ಮಂಡಲಗಳ ಪರಿಸ್ಥಿತಿಯನ್ನು ಪರೀಕ್ಷಿಸಿ ಹೊಸ ಅಭಿವೃದ್ಧಿ ಮಂಡಲಗಳನ್ನು ಸರಕಾರದ ಮನ್ನಣೆ ಇಲ್ಲದೆ ಸ್ಥಾಪಿಸಬಾರದೆಂದು ೧೯೩೯ರಲ್ಲಿ ಆದೇಶ ಕಳಿಸಿತು ತಾಲೂಕಾ ಅಭಿವೃದ್ಧಿ ಮಂಡಲಗಳನ್ನು

ಸ್ಥಾಪಿಸಬೇಕೆಂಬ ಬೇಡಿಕೆ ಬರುವ ಪ್ರದೇಶಗಳಲ್ಲಿ ಉತ್ತಮ ಬೇಸಾಯ ಸಂಘಗಳನ್ನು ಸ್ಥಾಪಿಸಬೇಕೆಂದು ಆದೇಶ ಕಳಿಸಲಾಯಿತು ೧೯೩೯—೪೦ರಲ್ಲಿ ೧೭ ಉತ್ತಮ ಬೇಸಾಯ ಸಂಘಗಳು ಮತ್ತು ಅವುಗಳಲ್ಲಿ ೨೮೭ ಸದಸ್ಯರಿದ್ದರು. ೧೯೪೦-೪೧ರಲ್ಲಿ ಸಂಘಗಳ ಸಂಖ್ಯೆಯು ೩೬ಕ್ಕೂ ಸದಸ್ಯರ ಸಂಖ್ಯೆಯು ೩೮೭ಕ್ಕೂ ಮುಟ್ಟಿತು ೧೯೪೫ ಜೂನ ೩೦ಕ್ಕೆ ೫೯ ಸಂಘಗಳಿದ್ದವು ೧೯೪೫—೪೬ರಿಂದ ೧೯೪೯-೫೦ರ ವರೆಗೆ ಸಂಘಗಳ ಪ್ರಗತಿಯು ಅಂಕೆ — ಸಂಖ್ಯೆಗಳನ್ನು ಕೆಳಗೆ ಕೊಡಲಾಗಿದೆ

| **ವರ್ಷ** | **ಸಂಘಗಳ—ಸಂಖ್ಯೆ** |
|---|---|
| ೧೯೪೫—೪೬ | ೬೬ |
| ೧೯೪೬—೪೭ | ೭೬ |
| ೧೯೪೭-೪೮ | ೮೯ |
| ೧೯೪೮—೪೯ | ೧೦೬ |
| ೧೯೪೯—೫೦ | ೯೮ |

೩೦—೬-೧೯೫೧ಕ್ಕೆ ೯೫ ಉತ್ತಮ ಬೇಸಾಯ ಸಂಘಗಳಿದ್ದು ಅವುಗಳ ಸದಸ್ಯರ ಸಂಖ್ಯೆ ೫೬೫೩ ಮತ್ತು ದುಡಿಯುವ ಭಾಂಡವಲು ರೂ, ೫೯೪೭೬೪ ಇದ್ದವು ಇವು ತಮ್ಮ ಸದಸ್ಯರಿಗೆ ೧೭೬೬೫ ರೂಪಾಯಿಗಳ ಸಾಲ ಮತ್ತು ೧೧೮೩೦ ರೂಪಾಯಿಗಳ ಬೀಜ ಗೊಬ್ಬರ ಮತ್ತು ಉಪಕರಣಗಳನ್ನು ಪೂರೈಸಿದ್ದು ಸದಸ್ಯರಿಗೆ ಬಾಡಿಗೆ ಕೊಡುವ ದೃಷ್ಟಿಯಿಂದ ಈ ಸಂಘಗಳು ೮೧೮೭೦ ರೂಪಾಯಿ ಗಳ ಕೀತ್ತಿ ಉಪಕರಣಗಳನ್ನು ಇಟ್ಟುಕೊಂಡಿದ್ದವು ಕೆಲವೊಂದು ಸಂಘಗಳು ಬೇಲಿ ಕಟ್ಟುವ, ಒಡ್ಡು ಹಾಕುವ ಮತ್ತು ಹೊಲಗಳ ಸಂಯೋಜನೆಯ ಕಾರ್ಯಗಳನ್ನು ಮಾಡಿದವು ಆದರೆ ಇತ್ತಿತ್ತಲಾಗಿ ಭೂಸುಧಾರಣೆಯ ಮತ್ತು ಉತ್ತಮ ಬೇಸಾಯದ ನಿರ್ದಿಷ್ಟ ಕ್ರಮಗಳಿದ್ದರೆ ಮಾತ್ರ ಉತ್ತಮ ಬೇಸಾಯ ಸಂಘಗಳನ್ನು ಸಂಘಟಿಸಬೇಕೆಂಬ ಧೋರಣೆಯನ್ನು ಅನುಸರಿಸಲಾಗಿದೆ ಇಂಥ ಸಂಘಗಳ ಚಟುವಟಿಕೆಗಳು ಏಕಮುಖವಾಗಿರುವದರಿಂದ ಪತ್ತಿನ ಪೂರೈಕೆ, ಸದಸ್ಯರ ಹುಟ್ಟುವಳಿಯ ಖರೀದಿ ಮತ್ತು ಮಾರಾಟ, ಮತ್ತು ಗೊಬ್ಬರ ಮತ್ತು ಬೀಜಗಳ ಪೂರೈಕೆಯ ಕಾರ್ಯಗಳನ್ನು ಶೇತ್ಕಿ ಪತ್ತಿನ ಸಂಘ, ವಿವಿಧೋದ್ದೇಶ ಸಂಘ, ಮತ್ತು ಖರೀದಿ ವಿಕ್ರಿ ಸಂಘಗಳು ಮಾಡಬೇಕಾಗುತ್ತವೆ ಆದುದರಿಂದ ಇತ್ತಿತ್ತಲಾಗಿ ಅಸ್ತಿತ್ವದಲ್ಲಿದ್ದ ಉತ್ತಮ ಬೇಸಾಯದ ಸಂಘಗಳನ್ನು ವಿವಿಧೋದ್ದೇಶ ಸಂಘಗಳನ್ನಾಗಿ ಪರಿವರ್ತಿಸಲು ಅಥವಾ ಇಂಥ ಸಂಘಗಳು ಯೋಗ್ಯ ಆರ್ಥಿಕ ತಳಹದಿಯ ಮೇಲೆ ಸಾಗುತ್ತಿರದಿದ್ದರೆ ಇತರ ಸಂಘಗಳಿಗೆ ಜೋಡಿಸುವ ಬಗ್ಗೆ ಕ್ರಮಗಳನ್ನು ಕೈಕೊಳ್ಳಲಾಗುತ್ತಿದೆ

## ೪. ಸಹಕಾರಿ ಬೇಸಾಯ ಸಂಘಗಳು.
## ( Co-op. Farming Societies. )

ಈ ರಾಜ್ಯದಲ್ಲಿ ೧೯೧೮ರಿಂದ ಸಹಕಾರಿ ಬೇಸಾಯ ಸಂಘಗಳನ್ನು ಸ್ಥಾಪಿಸುವ ಬಗ್ಗೆ ಪ್ರಯತ್ನಗಳು ನಡೆದಿವೆ ಆಗ ನಾಶಿಕದ ಕಲೆಕ್ಟರರಾಗಿದ್ದ ಶ್ರೀ ಸಿವರ್‌ಕಾಕ್ಸ್ ಅವರು ನಾಶಿಕ ಜಿಲ್ಹೆಯಲ್ಲಿ ಸಿವರ್‌ಕಾಕ್ಸ್ ಸಹಕಾರಿ ಸಂಯುಕ್ತ ಬೇಸಾಯ ಸಂಘವನ್ನು ಸ್ಥಾಪಿಸಿದರು ಸೊಲ್ಲಾಪೂರ ಮತ್ತು ಧಾರವಾಡ ಜಿಲ್ಹೆಗಳಲ್ಲಿ ಇಂಥ ಸಂಘಗಳನ್ನು ಸ್ಥಾಪಿಸುವ ಬಗ್ಗೆ ಪ್ರಯತ್ನಗಳೂ ನಡೆದವು ಆದರೆ ಈ ಪ್ರಯತ್ನಗಳೆಲ್ಲ ಪ್ರತ್ಯೇಕವಾಗಿದ್ದು ಯೋಜಿತವಾಗಿರಲಿಲ್ಲ. ಆ ತರುವಾಯ ಸಾತಾರಾ ಜಿಲ್ಹೆಯಲ್ಲಿಯೂ ಕೆಲವು ಪ್ರಯತ್ನಗಳು ನಡೆದವು ಆದರೆ ಈ ಪ್ರಯತ್ನಗಳೆಲ್ಲ ಯಶಸ್ವಿಯಾಗಲಿಲ್ಲ. ೩೦-೬-೧೯೪೫ಕ್ಕೆ ಈ ರಾಜ್ಯದಲ್ಲಿ ೪ ಸಂಯುಕ್ತ ಬೇಸಾಯದ ಸಂಘಗಳಿದ್ದವು

೧೯೪೫ರಲ್ಲಿ ಶ್ರೀ ಆರ್ ಜಿ ಸರಯ್ಯಾ ಅವರು ಅಧ್ಯಕ್ಷರಾಗಿದ್ದ ಅಖಿಲ ಭಾರತ ಸಹಕಾರಿ ಯೋಜನಾ ಸಮಿತಿಯ ಮತ್ತು "ಮುಂಬಯಿ ರಾಜ್ಯದಲ್ಲಿ ಸಹಕಾರಿ ಬೇಸಾಯ"ದ ಬಗ್ಗೆ ಕ್ಯಾ ಮೋಹಿತೆ ಅವರ ಶಿಫಾರಸುಗಳ ಮೇರೆಗೆ ರಾಜ್ಯದಲ್ಲಿ ನಿತ್ಯದ ಮತ್ತು ಯುದ್ಧೋತ್ತರ ಯೋಜನೆಯ ಕ್ರಮವೆಂದು ಸಹಕಾರಿ ಬೇಸಾಯ ಸಂಘಗಳನ್ನು ಸ್ಥಾಪಿಸುವ ಬಗ್ಗೆ ಯೋಜನೆಯನ್ನು ಸಿದ್ಧಪಡಿಸಲು ಮುಂಬಯಿ ಸರಕಾರವು ಸಹಕಾರಿ ಖಾತೆಗೆ ಆದೇಶ ಕಳಿಸಿತು ಆ ಮೇರೆಗೆ ತಯಾರಿಸಿದ ಯೋಜನೆಯನ್ನು ೧೯೪೭ರಲ್ಲಿ ಸರಕಾರವು ಒಪ್ಪಿಕೊಂಡಿತು ೧೬-೫-೧೯೪೭ರಿಂದ ಮುಂದಿನ ಐದು ವರ್ಷಗಳ ಅವಧಿಯಲ್ಲಿ ೧೧೨ ಸಹಕಾರಿ ಬೇಸಾಯ ಸಂಘಗಳನ್ನು ಸ್ಥಾಪಿಸಬೇಕೆಂದು ಈ ಯೋಜನೆಯಲ್ಲಿ ನಮೂದಿಸಲಾಗಿದ್ದಿತು ರೈತರು ಹೆಚ್ಚು ಪೀಕು ಬೆಳೆದುಕೊಳ್ಳಬೇಕೆಂದೂ ಮತ್ತು ತುಂಡು ಹೊಲಗಳನ್ನು ಸಂಯೋಜಿಸಿ ಸುಧಾರಿಸಿದ ಸಾಗುವಳಿಯ ಲಾಭವು ರೈತರಿಗೆ ಮುಟ್ಟಬೇಕೆಂದೂ ಮತ್ತು ಒಕ್ಕಲುತನದ ಹುಟ್ಟುವಳಿಗಳ ಮಾರಾಟಮಾಡಬೇಕೆಂಬುದೂ ಈ ಸಂಘಗಳ ಉದ್ದೇಶಗಳಾಗಿದ್ದವು ಸಾಗುವಳಿಯು ಸುಗ್ಗಿಯ ಕಾಲದ ಉದ್ಯೋಗವಾಗಿರುವದರಿಂದ ರೈತರಿಗೆ ಇನ್ನುಳಿದ ಕಾಲದಲ್ಲಿ ಪೂರಕ ಉತ್ಪನ್ನ ದೊರೆಯಬೇಕೆಂದು ಚಿಕ್ಕ ಪುಟ್ಟ ಉದ್ದಿಮೆಗಳನ್ನು ಪ್ರಾರಂಭಿಸಬೇಕೆಂದೂ ಸೂಚಿಸಲಾಗಿದ್ದಿತು ಬೇಸಾಯ ಸಂಘಗಳಲ್ಲಿ ಕೆಳಗಿನ ನಾಲ್ಕು ಪ್ರಕಾರಗಳಿವೆ (೧) ಸಹಕಾರಿ ಉತ್ತಮ ಬೇಸಾಯ ಸಂಘಗಳು (೨) ಸಹಕಾರಿ ಸಂಯುಕ್ತ ಬೇಸಾಯ ಸಂಘಗಳು (೩) ಸಹಕಾರಿ ( ಟೆನಂಟ ) ರೈತಾವಿ ಬೇಸಾಯ ಸಂಘಗಳು (೪) ಸಹಕಾರಿ ಸಾಮೂಹಿಕ ಬೇಸಾಯ ಸಂಘಗಳು

ಸಾಮಾನ್ಯವಾಗಿ ತುಂಡು ಹೊಲಗಳನ್ನು ಒಂದುಗೂಡಿಸಿ ದೊಡ್ಡ ಪ್ರಮಾಣದ ಸಾಗುವಳಿಯ ಲಾಭ ಪಡೆದುಕೊಳ್ಳಬೇಕೆಂಬ ಉದ್ದೇಶದಿಂದ, ದಕ್ಷಿತ ವೈಯಕ್ತಿಕ ಒಡೆಯರ ಮತ್ತು ರೈತರ ಹೊಲಗಳನ್ನು ಒಂದುಗೂಡಿಸಿ ನಿರುಪಯುಕ್ತವಾಗದಂತೆ ಸಂಯುಕ್ತ ಭೂಮಿಯನ್ನಾಗಿ ಮಾಡಿ ಸಂಯುಕ್ತ ಸಾಗುವಳಿಯ ಸಂಘಗಳನ್ನು ಸಂಘಟಿಸಲಾಗುತ್ತಿದೆ. ಇದೇ ಮೇರೆಗೆ, ಸರಕಾರದಿಂದ ಅಥವಾ

ಸಾಗುವಳಿ ಮಾಡದ ಜಮೀನದಾರರಿಂದ ಕೋರು ಅಥವಾ ಪುಕ್ಕಟೆಯಾಗಿ ಭೂಮಿಯನ್ನು ಪಡೆದುಕೊಂಡು ಅದನ್ನು ಯೋಗ್ಯ ಭಾಗಗಳಲ್ಲಿ ವಿಂಗಡಿಸಿ ರೈತಾವಿ ಅಥವಾ ಸಾಮೂಹಿಕ ಬೇಸಾಯ ಪದ್ಧತಿಯ ಮೇರೆಗೆ ಸಾಗುವಳಿ ಮಾಡಲು ಸದಸ್ಯ ರೈತರಿಗೆ ಕೊಟ್ಟು ಸಹಕಾರಿ ಸಾಮೂಹಿಕ ಮತ್ತು ರೈತಾವಿ ಸಂಘಗಳನ್ನು ರಚಿಸಲಾಗುತ್ತಿದೆ

ಸಾಗುವಳಿ ಸಂಘಗಳ ಸಂಘಟನೆಗೆ ಪ್ರೋತ್ಸಾಹಕೊಡಬೇಕೆಂಬ ಉದ್ದೇಶ ದಿಂದ ಸರಕಾರವು ಕೆಲವೊಂದು ಸಂಘಗಳಿಗೆ ಧನ ಸಹಾಯ ಮಾಡುವದಾಗಿ ವಚನವಿತ್ತಿತು ಅವುಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ

(೧) ಪ್ರಾರಂಭದ ಮೂರು ವರ್ಷಗಳ ಅವಧಿಯಲ್ಲಿ ಬೀಜ ಗೊಬ್ಬರ ಉಪಕರಣಗಳನ್ನು ಕೊಳ್ಳುವದಕ್ಕೆ ನಿಯಮಿತ ಸಹಾಯಧನವನ್ನು ಕೊಡುವದು

(೨) ಸಂಘದ ಪ್ರಾರಂಭದ ಮೂರು ವರ್ಷಗಳ ಅವಧಿಯಲ್ಲಿ ಭೂಕಂದಾಯ ದಲ್ಲಿ ರಿಯಾಯತಿ ತೋರಿಸುವದು

(೩) ಸಂಘಗಳು ಕೈಕೊಂಡ ಭೂ-ಸುಧಾರಣೆ ಮತ್ತು ಅಭಿವೃದ್ಧಿ ಯೋಜನೆ ಗಳಿಗಾಗಿ ಬೇಕಾಗುವ ಕಿಮ್ಮತ್ತಿನ ಸಾಮಾನುಗಳನ್ನು ಕೊಳ್ಳಲು ದೀರ್ಘಾವಧಿ ಸಾಲವನ್ನು ರಿಯಾಯತಿ ಬಡ್ಡಿದರದಲ್ಲಿ ಕೊಡುವದು

(೪) ಗುದಾಮು ಮತ್ತು ದನಗಳ ಕೊಟ್ಟಿಗೆಗಳನ್ನು ಕಟ್ಟಿಸಿಕೊಳ್ಳುವದಕ್ಕೆ ದೀರ್ಘಾವಧಿ ಸಾಲವನ್ನು ರಿಯಾಯತಿ ಬಡ್ಡಿದರಲ್ಲಿ ಕೊಡುವದು

(೫) ಸರಕಾರದ ಪಡು ಭೂಮಿಯನ್ನು ಸಾಗುವಳಿ ಮಾಡುವದಕ್ಕೆ ರಿಯಾಯತಿ ಬಡ್ಡಿದರದಲ್ಲಿ ದೀರ್ಘಾವಧಿ ಸಾಲಗಳನ್ನು ಕೊಡು ವದು ಅಲ್ಲದೆ ಈ ವೆಚ್ಚದ ೧/೪ ಹಣವನ್ನು ಸಹಾಯಧನವೆಂದು ಕೊಡುವದು

(೬) ಪ್ರಾರಂಭದ ಎರಡು ವರ್ಷಗಳಲ್ಲಿ ಸಂಘದ ಮ್ಯಾನೇಜರರಂತೆ ಕಾರ್ಯಮಾಡಲು ಅಗ್ರಿಕಲ್ಚರಲ್ ಅಸಿಸ್ಟಂಟರನ್ನು ಪುಕ್ಕಟೆಯಾಗಿ ಕೊಡುವದು ಮತ್ತು ಮುಂದಿನ ೨ ವರ್ಷಗಳಲ್ಲಿ ವೆಚ್ಚದ ಅರ್ಧ ಭಾಗವನ್ನು ಸರಕಾರವು ವಹಿಸಿಕೊಳ್ಳುವದು

(೭) ಹಿಂದುಳಿದ ಪ್ರದೇಶಗಳ ಅಥವಾ ಹಿಂದುಳಿದ ಜನರ ಸಂಘಗಳ ಶೇರು ಭಾಂಡವಲದ ಕೆಲವು ಭಾಗವನ್ನು ಸರಕಾರವು ಕೊಂಡುಕೊಳ್ಳುವದು ಮತ್ತು ಇಂಥ ಸಂಘಗಳಿಗೆ ಮಧ್ಯವರ್ತಿ ಹಣಪೂರೈಕೆಯ ಸಂಸ್ಥೆಗಳು ಕೊಟ್ಟ ಸಾಲಗಳ ಬಗ್ಗೆ ಹೊಣೆಗಾರವಾಗುವದು

ಈ ಯೋಜನೆಯು ಇಡೀ ರಾಜ್ಯಕ್ಕೆ ಅನ್ವಯಿಸುತ್ತದೆ ಅದರಲ್ಲೂ ವಿಶೇಷತಃ ಠಾಣಾ, ಸುರತ, ಉ ಕನ್ನಡ, ಧಾರವಾಡ, ಪೂರ್ವ ಮತ್ತು ಪಶ್ಚಿಮ ಖಾನದೇಶ ಜಿಲ್ಲೆಗಳಿಗೆ ಅನ್ವಯಿಸುತ್ತದೆ ಏಕೆಂದರೆ ಇಲ್ಲಿ ಸರಕಾರದಿಂದಲೂ ಜಮೀನದಾರರಿಂದಲೂ ಭೂಮಿಯನ್ನು ಪಡೆದುಕೊಂಡು ಸಹಕಾರಿ ಸಾಮೂಹಿಕ ಮತ್ತು ರೈತಾವಿ ಸಂಘಗಳನ್ನು ಸಂಘಟಿಸಲು ಯೋಗ್ಯ ಅವಕಾಶವಿದೆ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಸರಕಾರವು ವಿಶೇಷ ನೌಕರಿವರ್ಗವನ್ನು ನಿಯಮಿಸಿತು

**ಯೋಜನೆಯ ಪ್ರಗತಿ** — ೧೬–೫–೧೯೪೯ ಕ್ಕೆ ಈ ರಾಜ್ಯದಲ್ಲಿ ೩೩ ಸಹಕಾರಿ ಬೇಸಾಯ ಸಂಘಗಳಿದ್ದವು ಸರಕಾರವು ಹೆಚ್ಚು ಹೆಚ್ಚು ಧನ ಸಹಾಯ ಕೊಡತೊಡಗಿದ್ದರಿಂದ ಮತ್ತು ಸಹಕಾರಿ ಬೇಸಾಯ ಸಂಘಟನೆಗ ಪ್ರಾಶಸ್ತ್ಯ ಕೊಡಬೇಕೆಂದು ಸರಕಾರವು ನಿರ್ಧರಿಸಿದ್ದರಿಂದ ಈ ರಾಜ್ಯದಲ್ಲಿ ಅನೇಕ ಸಹಕಾರಿ ಬೇಸಾಯ ಸಂಘಗಳು ಸಂಘಟಿಸಲ್ಪಟ್ಟವು ಇಂಥ ಸಂಘಗಳನ್ನು ಸಂಘಟಿಸಲು ಹೆಚ್ಚು ಹೆಚ್ಚು ರೈತರು ಮುಂದೆ ಬರತೊಡಗಿದ್ದರಿಂದ ಯೋಜನೆಯ ಗೊತ್ತುಗುರಿಗಳನ್ನು ಶೀಘ್ರವೇ ಮುಟ್ಟಲಾಯಿತು

ಕೆಳಗಿನ ಅಂಕೆ–ಸಂಖ್ಯೆಗಳಲ್ಲಿ ಈ ಆಂದೋಲನದ ಪ್ರಗತಿಯ ಚಿತ್ರವನ್ನು ಕೊಡಲಾಗಿದೆ

| ವರ್ಷ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ಸಂಘಗಳು ಆವರಿಸಿದ ಎಕರೆಗಳ ಸಂಖ್ಯೆ |
|---|---|---|---|
| ೧೬–೫–೪೯ ಕ್ಕಿಂತ ಮುನ್ನ | ೩೨ | ೧,೩೦೬ | ೭,೯೮೫ |
| ೧೬–೫–೪೯ರಿಂದ ೩೧–೩–೧೯೫೦ | ೧೮ | ೭೪೧ | ೫,೪೮೨ |
| ೧೯೫೦–೫೧ | ೭೬ | ೧,೮೯೯ | ೨೯,೦೦೫ |

**ಕೊಟ್ಟ ಆರ್ಥಿಕ ಸಹಾಯ**

| ಸಾಲ. ರೂ. | ಸಹಾಯ ಧನ (ಸಬ್‌ಸಿಡಿ) | ಒಟ್ಟು ರೂ. |
|---|---|---|
| | ರೂ. | |
| ೮೨,೯೦೦ | ೭,೧೮೪ | ೯೦,೦೮೪ |
| ೪,೦೦೦ | ೩೨,೪೧೧ | ೩೬,೪೧೧ |
| ೨,೨೯,೦೭೦ | ೧,೫೯,೩೧೩ | ೩,೮೮,೩೮೩ |

ಸಹಕಾರಿ ಬೇಸಾಯಕ್ಕೆ ಉಜ್ವಲವಾದ ಭವಿತವ್ಯತೆ ಇದೆ ತುಂಡು ಹೊಲಗಳ ದುಷ್ಪರಿಣಾಮಗಳನ್ನು ಹೋಗಲಾಡಿಸುವದಕ್ಕೆಂದು ಹೆಚ್ಚು ಹೆಚ್ಚು ಸಹಕಾರಿ ಬೇಸಾಯ ಸಂಘಗಳನ್ನು ಸ್ಥಾಪಿಸಿ ದೊಡ್ಡ ಬೇಸಾಯದ ಲಾಭಗಳನ್ನೆಲ್ಲ ಪಡೆದುಕೊಳ್ಳಬೇಕೆಂದು ಯೋಜನಾ ಸಮಿತಿಯು ಅಭಿಪ್ರಾಯ ಪಟ್ಟಿದೆ ಸಹಕಾರಿ ಬೇಸಾಯವು ಇನ್ನೂ ಬಾಲ್ಯಾವಸ್ಥೆಯಲ್ಲಿದೆ ಅಸ್ತಿತ್ವದಲ್ಲಿಯ ಸಂಘಗಳ ಸಂಯೋಜನೆ ಮತ್ತು ಹೊಸ ಸಂಘಗಳ ಸಂಘಟನೆ ಈ ಎರಡೂ ಕಾರ್ಯಗಳು ಏಕಕಾಲಕ್ಕೆ ನಡೆಯಬೇಕಾಗಿದೆ

## ೫. ಯೂತದ ನೀರಾವರಿ ಸಂಘಗಳು.
## ( Lift Irrigation Societies. )

ಆಹಾರ ಧಾನ್ಯಗಳ ಮತ್ತು ಒಕ್ಕಲುತನದ ಉತ್ಪಾದನೆಯನ್ನು ಹೆಚ್ಚಿಸುವದಕ್ಕಾಗಿ ಮುಂಬಯಿ ಸರಕಾರವು ಹಲವಾರು ಯೋಜನೆಗಳನ್ನು ಸಿದ್ಧಪಡಿಸಿತು ಮಳೆ-ಗಾಳಿಗಳನ್ನು ಅವಲಂಬಿಸಿರುವ ಮತ್ತು ಒಂದೇ ಒಂದು ಬೆಳೆಯನ್ನು ಬೆಳೆದುಕೊಳ್ಳಲು ಬರುವ ಸಾಗುವಳಿಯ ಪ್ರದೇಶದಲ್ಲಿ, ಹೆಚ್ಚು ಉತ್ಪಾದನೆಯನ್ನು ಮತ್ತು ಬೆಳೆಯನ್ನು ಪಡೆಯುವದಕ್ಕಾಗಿ ನೀರಾವರಿಯಮೇಲೆ ಹಚ್ಚು ಅವಲಂಬಿಸಬೇಕಾಗುತ್ತದೆ. ಮುಂಬಯಿ ರಾಜ್ಯದಲ್ಲಿ ನದಿ, ಟ್ಯಾಂಕು ಮತ್ತು ಬಾವಿ ಮೊದಲಾದ ನೀರಿನ ಸಾಧನಗಳಿವೆ ಇತ್ತಿತ್ತಲಾಗಿ “ ಹೆಚ್ಚು ಆಹಾರ ಬೆಳೆಯಿರಿ ” ಆಂದೋಲನಕ್ಕೆ ಸಹಾಯವಾಗಬೇಕಂದು ಈ ರಾಜ್ಯದಲ್ಲಿ ಮಧ್ಯಮ ತರದ ನೀರಾವರಿ ಚಟುವಟಿಕಗಳು ಹೆಚ್ಚಾಗತೊಡಗಿದವು ಸಹಕಾರಿ ಬೇಸಾಯದ ಭವಿತವ್ಯತೆಯನ್ನು ಅರಿತುಕೊಂಡು ಶೇತ್ಕಿ ಉದ್ದೇಶಗಳಿಗಾಗಿ ಯೂತದ ನೀರಾವರಿ ಯೋಜನೆಯೊಂದನ್ನು ಸಹಕಾರಿ ಖಾತೆಯು ಸರಕಾರಕ್ಕೆ ಕಳಿಸಿತು ಯೂತದ ನೀರಾವರಿ ಯೋಜನೆಯನ್ನು ಸಹಕಾರಿ ತತ್ವದ ಮೇರೆಗೆ ಕಾರ್ಯರೂಪಕ್ಕೆ ತರಲು ಸರಕಾರವು ೧೯೪೯ರಲ್ಲಿ ಒಪ್ಪಿಕೊಂಡಿತು ಈ ಯೋಜನೆಯು ಯೂತದ ನೀರಾವರಿಯ ಆಧುನಿಕ ಕ್ರಮಗಳನ್ನು ಅನುಸರಿಸಿ ಮತ್ತು ರೈತರಿಗೆ ನೀರಾವರಿ ಸೌಕರ್ಯಗಳನ್ನು ಒದಗಿಸಿ “ ಹೆಚ್ಚು ಆಹಾರ ಬೆಳೆಯಿರಿ ” ಆಂದೋಲನಕ್ಕೂ ಆದರಂತ ಒಕ್ಕಲುತನ ಉತ್ಪಾದನೆಯನ್ನು ಹೆಚ್ಚಿಸುವದಕ್ಕೂ ಸಹಾಯಕಾರಿಯಾಯಿತು ಯೂತದ ನೀರಾವರಿ ಯೋಜನೆಗಳನ್ನು ಕೈಕೊಂಡ ಸಹಕಾರಿ ಸಂಘಗಳಿಗೆ ಕೆಳಗಿನಂತೆಸರಕಾರದ ಯೋಜನೆಯ ಮೇರೆಗೆ ಧನಸಹಾಯ ದೊರೆಯುತ್ತಿದೆ

(೧) ನೀರಾವರಿ ಯಂತ್ರಗಳು ಅಂದರೆ ಜಾಕ್ ಪೈಪು, ಎಂಜನ್ ಶೆಡ್ಡು, ಪಂಪಿನ ಬಾವಿ ಮತ್ತು ಟ್ಯಾಂಕು ಮೊದಲಾದವುಗಳಿಗೆ ತಗಲುವ ವೆಚ್ಚದ ಅರ್ಧದಷ್ಟನ್ನು ಸಾಲವಾಗಿ ಕೊಡುವದು

(೨) ನೀರಾವರಿ ಯಂತ್ರ, ಜಾಕ್ ಬಾವಿಗಳನ್ನು ತೋಡುವದಕ್ಕೆ ಪೈಪು, ಎಂಜನ್‌ಶೆಡ್ಡು, ಪಂಪಿನ ಬಾವಿ ಮತ್ತು ನೀರು ಕಳಿಸುವ ಟ್ಯಾಂಕು ಮೊದಲಾದವುಗಳಿಗಾಗಿ ತಗಲುವ ವೆಚ್ಚದಲ್ಲಿ ಅರ್ಧದಷ್ಟು

ಹಣವನ್ನು ಪ್ರತಿ ಎಕರೆಗೆ ೧೫೦ ರೂ ಗೆ ಹೆಚ್ಚಾಗದಂತೆ ಸಹಾಯ ಧನವೆಂದು ಕೊಡುವದು.

(೩) ಸೆಕ್ರೆಟರಿ-ಕಮ್ ಡ್ರ್ಯಾಯವ್ಹರನ ವೆಚ್ಚಕ್ಕೆಂದು ಮೊದಲಿನ ವರ್ಷದಲ್ಲಿ ೧೦೦ ರೂ ಆ ತರುವಾಯದ ೨ ನೆಯ ಮತ್ತು ೩ ನೆಯ ವರ್ಷದಲ್ಲಿ ೪೫೦ ರೂ ಸಹಾಯ ಧನವೆಂದು ಕೊಡಲಾಗುವದು

(೪) ಸಂಘಗಳಿಗೆ ಪೈಪು, ಪೈಪಲಾಯಿನ, ಕಾಲುವೆ ತೋಡುವದು, ನೀರಿನ ಸಂಗ್ರಹವನ್ನು ಕಟ್ಟಿಸುವದಕ್ಕೆ ತಗುಲಿದ ವೆಚ್ಚಕ್ಕಾಗಿ ವಿಶೇಷ ಸಾಲ ವನ್ನು ಕೊಡಲಾಗುವದು ಆದರೆ ಈ ಸಾಲವು ೧೫,೦೦೦ ರೂ ಗಳಿಗೆ ಮಿಕ್ಕದಂತೆ ಅಥವಾ ಪಂಪಿನ ಸಲಕರಣೆಗಳ ವೆಚ್ಚದ ಅರ್ಧ ಇವು ಗಳಲ್ಲಿ ಯಾವುದು ಕಡಿಮೆ ಆಗುವವೋ ಅದನ್ನು ಕೊಡಲಾಗುವದು

ಹೀಗೆ ಈ ಸಂಘಗಳಿಗೆ ಮೇಲ್ಕಂಡ ರೀತಿಯಲ್ಲಿ ಧನ ಸಹಾಯ ದೊರೆಯುವ ದಲ್ಲದೆ, ಇಂಥ ಸಂಘಗಳನ್ನು ಸಂಘಟಿಸುವದು, ಮತ್ತು ನೀರಾವರಿಯ ಯೋಜನೆ ಮತ್ತು ವೆಚ್ಚದ ಅಂದಾಜನ್ನು ಈ ಮೊದಲಾದ ಶಾಸ್ತ್ರ–ತಂತ್ರೀಯ ವಿಷಯ ಗಳಲ್ಲಿ ಸಹಕಾರಿ ಖಾತೆಯು, ಸಾರ್ವಜನಿಕ ಖಾತೆಯು, ಕೃಷಿ ಎಂಜನಿ ಯರ ಖಾತೆಯು ಅವಶ್ಯವಿದ್ದ ಎಲ್ಲ ಸಲಹೆ ಸಹಕಾರವನ್ನು ನೀಡುತ್ತವೆ. ಬೇರೆ ಬೇರೆ ಯಂತ್ರ, ಸಿಮೆಂಟ ಮತ್ತು ಕಬ್ಬಿಣಗಳನ್ನು ಪೂರೈಸಿಕೊಡುವಂತೆ ವ್ಯವಸ್ಥೆ ಮಾಡಲಾಗಿದೆ

ಸರಕಾರವು ಈ ರೀತಿ ಸಹಾಯ ಸಲ್ಲಿಸತೊಡಗಿದ್ದರಿಂದ ಯಾತದ ನೀರಾವರಿ ಸಂಘಗಳ ಸ್ಥಾಪನೆಯು ಹೆಚ್ಚಾಗತೊಡಗಿತು ಈ ಯೋಜನೆಯ ಪ್ರಗತಿಯ ವಿಹಂಗಮ ನೋಟವನ್ನು ಕೆಳಗೆ ಕೊಡಲಾಗಿದೆ

| ವರ್ಷ | ಸಂಘಗಳ ಸಂಖ್ಯೆ | ನೀರಾವರಿಯ ಕ್ಷೇತ್ರ, ಎಕರೆಗಳು | ಪ್ರಮಾಣ ಟನ್‌ಗಳಲ್ಲಿ | ಕೊಟ್ಟ ಸಾಲ | ಕೊಟ್ಟ ಸಹಾಯ ಧನ |
|---|---|---|---|---|---|
| ೧೯೪೬–೪೭ | ೧ | ೪೦೦ | ೮೦ | — | — |
| ೧೯೪೭–೪೮ | ೪ | ೭೫೦ | ೧೫೦ | ೩೨,೦೦೦ | ೨,೦೦೦ |
| ೧೯೪೮–೪೯ | ೪ | ೮೭೦ | ೧೭೪ | ೩೬‘೪೦೦ | ೧೬,೬೦೦ |
| ೧೯೪೯–೫೦ | ೧೦೨ | ೩೩,೩೦೦ | ೬,೩೦೨ | ೪,೫೩,೮೮೪ | ೫,೨೯,೪೮೮ |
| ೧೯೫೦–೫೧ | ೧೬೩ | ೫೫,೦೦೦ | ೧೧,೦೦೦ | ೯,೮೦,೬೯೩ | ೧೧,೨೫,೦೦೦ |

ಈ ಯೋಜನೆಗೆ ಹೆಚ್ಚಿನ ಪ್ರೋತ್ಸಾಹ ದೊರೆಯುತ್ತಿದೆ ಎಂದು ಮೇಲಿನ ಅಂಕೆ-ಸಂಖ್ಯೆಗಳಿಂದ ತಿಳಿದು ಬರುತ್ತದೆ ಸರಕಾರದ "ಹೆಚ್ಚು ಆಹಾರ ಬೆಳೆಯಿರಿ" ಆಂದೋಲನಕ್ಕೆ ಸಹಾಯವಾಗುವ ಅವಕಾಶವೂ ಹೆಚ್ಚಿಗಿದೆ ಸಹಕಾರಿ ಚಟುವಟಿಕಗಳು ಸಣ್ಣ ಪ್ರಮಾಣದಲ್ಲಿ ಸಣ್ಣ ಭಾಂಡವಲಿನಿಂದ ಆದರೆ ದೊಡ್ಡ ಯೋಜನೆಗಳಿಗಿಂತ ತೀವ್ರ ಪರಿಣಾಮಕಾರಿಯಾಗುವದರಿಂದ ಸಹಕಾರಿ ಆಂದೋಲನಕ್ಕೆ ಬೆಳವಣಿಗೆಯ ಉಜ್ವಲ ಭವಿತವ್ಯತೆ ಇದೆ ಯೋಜನೆಯನ್ನು ಕಾರ್ಯರೂಪಕ್ಕಿಳಿಸಬೇಕಾದರೆ ವಿವಿಧ ಖಾತೆಗಳ ಸಹಕಾರವನ್ನು ಪಡೆಯಬೇಕಾಗಿ ಬರುವದರಿಂದ ನಿರೀಕ್ಷಿಸಿದಂತೆ ಯೋಜನೆಯು ಶೀಘ್ರವಾಗಿ ಕಾರ್ಯಗತವಾಗುತ್ತಿರುವದಿಲ್ಲ ವಿವಿದ ಖಾತೆಗಳ ಸಹಕಾರದ ಸಂಯೋಜನೆಯ ಬಗ್ಗೆ ಎಷ್ಟೋ ಪ್ರಯತ್ನಗಳು ನಡೆದಿವೆಯಾದರೂ ಯೋಜನೆಗಳನ್ನು ಶೀಘ್ರವಾಗಿ ಕಾರ್ಯಗತಗೊಳಿಸುವದು ಸಾಧ್ಯವಾಗಿಲ್ಲ ಜಾಗೆಗಳನ್ನು ಪರೀಕ್ಷಿಸುವದಕ್ಕೆ, ಯಾತದ ನೀರಾವರಿ ಯೋಜನೆಯ ಸಾಧ್ಯಾಸಾಧ್ಯತೆಯ ಸರ್ಟಿಫಿಕೇಟು ಪಡೆದು ಕೊಳ್ಳಲಿಕ್ಕ, ಯೋಜನೆ ಮತ್ತು ವೆಚ್ಚದ ಅಂದಾಜು ಸಿದ್ಧ ಪಡಿಸುವದಕ್ಕೆ, ಆರ್ಥಿಕ ಸಹಾಯ ಪಡೆದುಕೊಳ್ಳಲಿಕ್ಕೆ ಮತ್ತು ಕಾರ್ಯಕ್ಕಾಗಿ ಬೇಕಾಗುವ ಯಂತ್ರ ಮತ್ತಿತರ ಸಾಮುಗ್ರಿಗಳನ್ನು ದೊರಕಿಸುವದಕ್ಕೆ ಈ ಮೊದಲಾದ ಕಾರ್ಯಗಳಿಗಾಗಿಯೇ ಹೆಚ್ಚು ವೇಳೆಯು ವ್ಯಯವಾಗುತ್ತಿದೆ ಇತ್ತಿತ್ತಲಾಗಿ ಹೀಗೆ ಕಾಲಹರಣವಾಗುವದನ್ನು ಕಡಿಮೆ ಮಾಡುವ ಬಗ್ಗೆ ದಕ್ಷತೆಯಿಂದ ವಿಚಾರಿಸಲಾಗುತ್ತಿದ

## (೬) ಯಂತ್ರ ಸಾಮುಗ್ರಿ ಮತ್ತು ಉಪಕರಣ ಸಂಘಗಳು

## (Machinery and Implement Societies.)

ಯಂತ್ರ ಸಾಮುಗ್ರಿ ಮತ್ತು ಉಪಕರಣ ಸಂಘಗಳು ೧೯೨೦-೩೦ರಲ್ಲಿಯೇ ನೋಂದಾಯಿಸಲ್ಪಡುತ್ತಾ ಬಂದಿದ್ದರೂ ಸಂಘಗಳ ಸಂಖ್ಯೆ ೩೦ ಮತ್ತು ಅವುಗಳ ವಶದಲ್ಲಿದ್ದ ಉಪಕರಣಗಳ ಬೆಲೆಯು ರೂ ೩೪,೨೭೮ ಇದ್ದಿತು ೧೯೩೫ರಲ್ಲಿ ಸಂಘಗಳ ಸಂಖ್ಯೆಯು ೩೩ ಕ್ಕೆ ಮುಟ್ಟಿತು ಆದರ ೧೯೩೯-೪೦ ರಲ್ಲಿ ಈ ಸಂಖ್ಯೆಯು ೨೭ಕ್ಕೆ ಇಳಿಯಿತು ಈ ೨೭ ಸಂಘಗಳಲ್ಲಿ ೧೦ ಪುಣೆ ಜಿಲ್ಹೆಯಲ್ಲಿ ೭ ಧಾರವಾಡ ಜಿಲ್ಹೆಯಲ್ಲ ಉಳಿದವುಗಳು ಇತರ ಜಿಲ್ಹೆಗಳಲ್ಲಿದ್ದವು ಯುದ್ಧ ಮತ್ತು ಯುದ್ಧೋತ್ತರ ಕಾಲದಲ್ಲಿಯೂ ಸಂಘಗಳ ಸಂಖ್ಯೆಯು ಹೆಚ್ಚಾಗಲಿಲ್ಲ ೩೦-೬-೧೯೫೧ ಕ್ಕ ೨೭ ಸಂಘಗಳು ಮತ್ತು ೧೯೦೮ ಸದಸ್ಯರು ಇದ್ದರು ಸುಧಾರಿಸಿದ ಉಪಕರಣ ಮತ್ತು ಶೇತ್ಕಿ ಯಂತ್ರ ಸಾಮುಗ್ರಿ, ಕಬ್ಬಿನ ಹಾಲು ತೆಗೆಯುವ ಯಂತ್ರ ಬೆಲ್ಲದ ಪರಿವಾಣ ಮೊದಲಾದವುಗಳನ್ನು ತಮ್ಮ ಸದಸ್ಯರಿಗೆ ಮಾರಾಟ ಮಾಡುವದು ಅಥವಾ ಬಾಡಿಗೆಯಿಂದ ಕೊಡುವದು ಈ ಸಂಘಗಳ ಮುಖ್ಯ ಕಾರ್ಯವಾಗಿದ್ದಿತು ಉಪಕರಣಗಳನ್ನು ಬಾಡಿಗೆ ಕೊಡುವ ಮೊದಲಾದ ಚಟುವಟಿಕಗಳಿಂದ ಈ ಸಂಘಗಳ ಉತ್ಪನ್ನವು ರೂ ೬೪,೦೨೯ ಇದ್ದಿತು ಮತ್ತು ನಿವ್ವಳ ಉತ್ಪನ್ನವು ರೂ ೩೨,೪೫೪ ಇದ್ದಿತು ೧೮-೧೨-೧೯೫೦ರಂದು ಗದಗ ಮತ್ತು ರೋಣ ತಾಲೂಕುಗಳ ಮೆಕ್ಯಾನಿಕಲ್ ಮತ್ತು ಸಾಗುವಳಿ ಸಂಘವು ನೋಂದಾಯಿಸಲ್ಪಟ್ಟಿದೆ ಅದು ಉತ್ತಮ ರೀತಿಯಲ್ಲಿ ಪ್ರಗತಿ ಹೊಂದುತ್ತಲಿದೆ ಈ ಸಂಘವು ೩,೦೫,೦೦೦ ರೂ ಬೆಲೆಯುಳ್ಳ ಟ್ರ್ಯಾಕ್ಟರ,

ಬುಲ್ ಡೋಜರ ಮತ್ತು ಶೇತ್ಕಿ ಉಪಕರಣಗಳನ್ನು ಇಟ್ಟುಕೊಂಡಿದೆ ಈ ಸಂಘವು ಆ ವರ್ಷದಲ್ಲಿ ೧೦ ಸಾವಿರ ರೂ ಗಳ ಲಾಭ ಪಡೆಯಿತು ಇಂಥದೊಂದು ಸಂಘವನ್ನು ಸ್ಥಾಪಿಸುವ ಬಗ್ಗೆ ಸುರತ ಜಿಲ್ಹೆಯಿಂದ ಒಂದು ಸೂಚನೆಯು ಬಂದಿದ್ದು ಅದನ್ನು ರಜಿಸ್ಟ್ರಾರರು ವಿಚಾರಿಸುತ್ತಲಿದ್ದರು ರೈತರು ಯಾಂತ್ರಿಕ ನಾಗುವಳಿಯನ್ನು ಕೈಕೊಳ್ಳುವದಾದರೆ ಇಂಥ ಸಂಘಗಳಿಗೆ ಹೆಚ್ಚಿನ ಆವಶ್ಯಕತೆ ಇದೆ.

## ೭. ಶೇತ್ಕಿ ಆವಶ್ಯಕತಗಳು ಮತ್ತು ಪೂರೈಕೆ ಸಂಘಗಳು.

## ( Agricultural Requisites & Supply Societies )

೧೯೧೫ರಲ್ಲಿ ಇಂಥ ಸಂಘಗಳು ೧೧ ಇದ್ದವು ಆದರೆ ಈ ಆಂದೋಲನವು ಹೆಚ್ಚಾಗಿ ಬೆಳೆಯಲಿಲ್ಲ ೩೦-೬-೧೯೪೫ಕ್ಕೂ ೧೧ ಸಂಘಗಳೇ ಇದ್ದವು ಆದರೆ ೩೦-೬-೫೧ಕ್ಕೆ ೧೫ ಸಂಘಗಳು ಮತ್ತು ೧೧೨೩ ಸದಸ್ಯರು ಇದ್ದರು ಬೀಜ ಮತ್ತು ಗೊಬ್ಬರ ಪೂರೈಕೆಯ ಕಾರ್ಯವನ್ನು ಶೇತ್ಕಿ ಪತ್ತಿನ ಸಂಘ, ವಿವಿಧೋದ್ದೇಶ ಸಂಘ ಮತ್ತು ಖರೀದಿ-ವಿಕ್ರಿ ಸಂಘಗಳು ಮಾಡುತ್ತವೆ ಹೀಗಾಗಿ ಇಂಥ ಸಂಘಗಳು ಹಾಲಂಡ ಡೆನ್ಮಾರ್ಕ ಗ್ರೇಟಬ್ರಿಟನ್ ಮೊದಲಾದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯ ಸಂಘಗಳಂತೆ ವಿಶಿಷ್ಟತರದ ಕಾರ್ಯವನ್ನು ಕೈಕೊಳ್ಳದಿದ್ದರೆ ಅವುಗಳಿಗ ಹೆಚ್ಚಿನ ಅವಕಾಶವೇ ಇಲ್ಲದಾಗುವದು

## ೮. ಭೂ ಸುಧಾರಣಾ ಸಂಘಗಳು

## ( Land Improvement Societies )

೧೯೨೫ರ ಸುಮಾರಿಗೆ ಭೂ ಸುಧಾರಣಾ ಸಂಘಗಳು ರಜಿಸ್ಟರ ಆಗಿದ್ದವು. ೧೯೩೦ರಲ್ಲಿ ೧೦ ಭೂ ಸುಧಾರಣಾ ಸಂಘಗಳಿದ್ದವು ೩೧-೩-೧೯೩೦ಕ್ಕಿದ್ದ ಈ ಸಂಘಗಳ ಕಾರ್ಯಗಳ ಕಲ್ಪನಯನ್ನು ಕೆಳಗಿನ ಅಂಕೆ-ಸಂಖ್ಯೆಗಳಲ್ಲಿ ಕಾಣಬಹುದು

| ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ಯೋಜನ ಯಲ್ಲಿಯ ಕ್ಷೇತ್ರ | ಸುಧಾರಿಸಿದ ಕ್ಷೇತ್ರ |
|---|---|---|---|
| | | ಎಕರ | ಎಕರೆ |
| ೧೦ | ೩೬೫ | ೧೯೨೧ | ೧೨೭೩ |

| ವೆಚ್ಚ | ಭಾಂಡವಲು | |
|---|---|---|
| | ಸದಸ್ಯರಿಂದ | ಸರಕಾರದ ಸಾಲ |
| ರೂ | ರೂ | ರೂ |
| ೯೫೩೨ | ೯೩೯೯ | ೮೫೮ |

೩೦-೬-೧೯೪೦ಕ್ಕೆ ಸಂಘಗಳ ಸಂಖ್ಯೆ ೯ ಮತ್ತು ಸದಸ್ಯರ ಸಂಖ್ಯೆ ೪೭೮ ಇದ್ದಿತು. ಈ ಯೋಜನೆಯಲ್ಲಿ ೨೭೨೪ ಎಕರೆ ಭೂಮಿ ಸೇರಿದ್ದಿತು ೩೦-೬-೫೧ಕ್ಕೆ ೧೧ ಸಂಘಗಳು ೪೩೧ ಸದಸ್ಯರು ಇದ್ದರು ಆದರೆ ಇತ್ತಿತ್ತಲಾಗಿ ಭೂ ಸುಧಾರಣೆಗಾಗಿ ನೀರಾವರಿ ಬೇಸಾಯ, ಬೆಳೆ ರಕ್ಷಣೆ ಮೊದಲಾದ ಸಂಘಗಳು ಸ್ಥಾಪಿಸಲ್ಪಡುತ್ತಿರುವದರಿಂದ ಭೂ-ಸುಧಾರಣಾ ಸಂಘಗಳಿಗೆ ಈಗ ಹೆಚ್ಚಿನ ಪ್ರೋತ್ಸಾಹವಿಲ್ಲ.

## ೯. ಬೇಲಿಕಟ್ಟುವ ಮತ್ತು ಬೆಳೆರಕ್ಷಣಾ ಸಂಘಗಳು.

## ( Crop Protection & Fencing Societies )

ದನಕರು, ಕಾಡಹಂದಿ, ಮಂಗ, ಮತ್ತು ಕಳ್ಳತನದಿಂದ ಬೆಳೆಗಳು ನಾಶವಾಗಿ ರೈತರು ಬಹಳ ಹಾನಿಗೊಳಗಾಗಬೇಕಾಗುತ್ತದೆ ವೈಯಕ್ತಿಕವಾಗಿ ಈ ಸಮಸ್ಯೆಯನ್ನು ಎದುರಿಸುವದು ರೈತರಿಗೆ ಕಷ್ಟಸಾಧ್ಯವಾಗುವದು ಸಹಕಾರಿ ತತ್ವಗಳ ಮೇಲೆ ಸಾಮೂಹಿಕವಾಗಿ ಪ್ರಯತ್ನಿಸಿದರೆ ಅದು ಹೆಚ್ಚು ಫಲಕಾರಿಯಾಗುವದೆಂದು ಕಂಡುಬಂದಿತು ಗೋಡೆಗಳನ್ನು ಕಟ್ಟಿ ಅಥವಾ ಮುಳ್ಳು ತಂತಿ ಹಚ್ಚಿ ಕಾಡ ಹಂದಿಗಳಿಂದ ಬೆಳೆಗಳಿಗೆ ಹಾನಿ ತಟ್ಟದಂತೆ ಮಾಡುವ ಉದ್ದೇಶದಿಂದ ಧಾರವಾಡ ಮತ್ತು ಉತ್ತರ ಕನ್ನಡಜಿಲ್ಲೆಗಳಲ್ಲಿ ಬೇಲಿಕಟ್ಟುವ ಸಂಘಗಳನ್ನು ( Fencing Societies ) ಸ್ಥಾಪಿಸುವ ಬಗ್ಗೆ ಪ್ರಯತ್ನಗಳು ನಡೆದವು ೩೧-೩-೧೯೨೭ಕ್ಕೆ ಮುಂಬಯಿ ರಾಜ್ಯದಲ್ಲಿ ಇಂಥ ೧೩ ಸಂಘಗಳಿದ್ದವು ಇವುಗಳಲ್ಲಿ ೧೧ ದಕ್ಷಿಣ ವಿಭಾಗದಲ್ಲಿ ಒಂದು ರಾಶಾ ಜಿಲ್ಲೆಯಲ್ಲಿ ಮತ್ತೊಂದು ಪ ್ಚಮ ಖಾನದೇಶ ಜಿಲ್ಲೆಗಳಲ್ಲಿದ್ದವು ೩೧-೩-೧೯೩೦ ಕ್ಕಿದ್ದ ಈ ಸಂಘಗಳ ಪರಿಸ್ಥಿತಿಯನ್ನು ಇಲ್ಲಿ ಕೊಡಲಾಗಿದೆ

| ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ಶೇರ ಭಾಂಡವಲು | ಯೋಜನೆ ಯಲ್ಲಿಯ ಒಟ್ಟು ಕ್ಷೇತ್ರ | ಗೋಡೆಯ ಉದ್ದ | ಬೇಲಿ ಕಟ್ಟುವ ಒಟ್ಟು ವೆಚ್ಚ |
|---|---|---|---|---|---|
| | | ರೂ | ಎಕರೆ | ಯಾರ್ಡ | ರೂ |
| ೧೩ | ೧೧೧೦ | ೧೭೪೭೪ | ೮೬೭೭ | ೪೪೦೦೪ | ೪೫೭೦೨ |

೧೯೩೦ ರ ತರುವಾಯ ಖಾನದೇಶ ಮತ್ತು ಸಾತಾರಾ ಜಿಲ್ಲೆಗಳಲ್ಲಿ ಬೆಳೆ ರಕ್ಷಣಾ ಸಂಘಗಳನ್ನು ( Crop Protection Societies ) ಸಂಘಟಿಸಲು ಪ್ರಯತ್ನಗಳು ನಡೆದವು ೧೯೩೫ರಲ್ಲಿ ಇದ್ದ ೧೪ ಸಂಘಗಳಲ್ಲಿ ೧೩ ಸಂಘಗಳು ಖಾನದೇಶದಲ್ಲಿದ್ದವು ಇವುಗಳ ಕಾರ್ಯ ಕ್ಷೇತ್ರದಲ್ಲಿ ೪೮೮೯೮ ಎಕರೆ ಭೂಮಿ ಇದ್ದಿತು ಈ ಪ್ರದೇಶಗಳಲ್ಲಿ ಬೆಳೆಗಳ ರಕ್ಷಣೆಯ ವೆಚ್ಚವು ರೂ . ೭೩೮೮ ಆಗಿದ್ದಿತು ಬೇಲಿಕಟ್ಟುವ ಸಂಘಗಳ ಸಂಖ್ಯೆಯು ೧೬ ಇದ್ದಿತು ಆದರೆ ಬೆಳೆರಕ್ಷಣೆ ಸಂಘಗಳ ಸಂಖ್ಯೆಯು ೧೯೪೦ರಲ್ಲಿ ೨೭ಕ್ಕೆ ೧೯೪೫ರಲ್ಲಿ ೫೫ಕ್ಕೆ ಏರಿತು ಬೆಳೆರಕ್ಷಣೆ ಸಂಘಗಳ

ಸಂಖ್ಯೆಯು ಹೆಚ್ಚಾಗುತ್ತಿದ್ದರೆ ಬೇಲಿ ಕಟ್ಟುವ ಸಂಘಗಳ ಸಂಖ್ಯೆಯು ಕಡಿಮೆಯಾಗ ತೊಡಗಿದೆ ೧೯೪೪–೪೫ ರಲ್ಲಿದ್ದ ೧೪ ಬೇಲಿ ಕಟ್ಟುವ ಸಂಘಗಳಲ್ಲಿ ೧೧ ಧಾರವಾಡ ಜಿಲ್ಹೆಯಲ್ಲಿಯೇ ಇದ್ದವು ೩೦-೬-೧೯೫೧ಕ್ಕೆ ೧೧೬ ಬೆಳೆ ರಕ್ಷಣಾ ಸಂಘಗಳು ಇದ್ದು ಅವುಗಳ ಸದಸ್ಯರ ಸಂಖ್ಯೆಯು ೨೪೭೭೬ ಇದ್ದಿತು ೩,೩೪,೭೧೪ ಎಕರೆ ಬೆಳೆ ಬೆಳೆದು ಕೊಂಡ ಭೂಮಿಯನ್ನು ರಕ್ಷಿಸಲಾಗಿದ್ದಿತು ೧೯೫೧ರಲ್ಲಿ ಬೇಲಿ ಕಟ್ಟುವ ಸಂಘಗಳ ಸಂಖ್ಯೆಯು ೧೧ ಕ್ಕ ಇಳಿಯಿತು ಇವುಗಳಲ್ಲಿ ೧೦ ಧಾರವಾಡ ಜಿಲ್ಹೆಯಲ್ಲಿದ್ದವು ಈ ಸಂಘಗಳು ಬೇರೊಂದೆಡೆಗ ಹೇಳಿರುವಂತೆ ಕ್ರಿಯಾರಹಿತವಾಗಿವೆ

## ೧೦. ಗೋ–ಸಂಗೋಪನೆ ಸಂಘಗಳು

## ( Cattle Breeding Societies )

ಠಾಣಾ ಜಿಲ್ಹೆಯ ಮೊರೊಲಿಯಲ್ಲಿ ೧೯೧೫ರಲ್ಲಿ ಒಂದು ಗೋ-ಸಂಗೋಪನೆ ಸಂಘವು ಅಸ್ತಿತ್ವದಲ್ಲಿದ್ದಿತು ಅದಕ್ಕೆ ೨೭ ಸದಸ್ಯರಿದ್ದರು ಆ ಸಂಘವು ಒಂದು ಹೋರಿಯನ್ನು ಕೊಂಡು ಹಳ್ಳಿಯ ಆಕಳುಗಳನ್ನು ಅಲ್ಲಿಯ ಹೋರಿಗಳಿಂದ ಬೇರ್ಪಡಿಸಿ ಪ್ರತ್ಯೇಕ ವ್ಯವಸ್ಥೆ ಮಾಡಿತು ಕರ್ನಾಟಕದಲ್ಲಿಯೂ ಮುಂಚಿತ ವಾಗಿಯೇ ಗೋ-ಸಂಗೊಪನೆ ಸಂಘಗಳು ಸ್ಥಾಪಿಸಲ್ಪಟ್ಟಿದ್ದವು ಧಾರವಾಡ ಮತ್ತು ಬೆಳಗಾಂವ ಜಿಲ್ಹೆಯ ಆಲೂರ ಮತ್ತು ಸದಲಗಾಗಳಲ್ಲಿ ಗೋಸಂಗೋಪನೆ ಸಂಘ ಗಳು ಅನುಕ್ರಮವಾಗಿ ೧೯೧೭ ಮತ್ತು ೧೯೧೮ರಲ್ಲಿ ಸ್ಥಾಪಿಸಲ್ಪಟ್ಟವು ೧೯೨೬ರಲ್ಲಿದ್ದ ೧೮ ಸಂಘಗಳಲ್ಲಿ ೧೫ ದಕ್ಷಿಣ ವಿಭಾಗದಲ್ಲಿದ್ದವು ಧಾರವಾಡ ಜಿಲ್ಹೆಯ ಶಿಡೇನೂರ ಮತ್ತು ಆಲೂರ ಸಂಘಗಳು ಗ್ರಾಮದ ಹೊರಗಡೆಯಲ್ಲಿ ತಮ್ಮದೇ ಆದ ಹಕ್ಕೆಗಳನ್ನು ಕಟ್ಟಿಸಿಕೊಂಡಿದ್ದವು ಎರಡೂ ಸಂಘಗಳು ಉತ್ತಮ ರೀತಿಯಲ್ಲಿ ಪ್ರಗತಿ ಹೊಂದಿ ದವು ೧೬೩೦ರಲ್ಲಿದ್ದ ೧೬ ಸಂಘಗಳಲ್ಲಿ ೧೨ ಸಂಘಗಳು ದಕ್ಷಿಣ ವಿಭಾಗದಲ್ಲಿದ್ದವು- ಈ ಸಂಖ್ಯೆಯು ೧೯೩೫ರಲ್ಲಿ ೧೭ಕ್ಕೂ ೧೯೪೦ರಲ್ಲಿ ೧೮ಕ್ಕೂ ಏರಿತು ೩೦-೬-೧೯೪೦ಕ್ಕ ಅಸ್ತಿತ್ವದಲ್ಲಿದ್ದ ಈ ೧೮ ಸಂಘಗಳಲ್ಲಿ ೧೧ ಸಂಘಗಳು ಧಾರವಾಡ ಜಿಲ್ಹೆಯಲ್ಲಿದ್ದವು ೧೯೪೫ರಲ್ಲಿ ಸಂಘಗಳ ಸಂಖ್ಯೆಯು ಕೇವಲ ೧೮ ಇದ್ದಿತು ಮತ್ತು ೩೦–೬–೫೧ಕ್ಕೆ ೩೨ ಸಂಘಗಳು, ೨೩೭೭ ಸದಸ್ಯರು ಮತ್ತು ೨೩ ತಳಿಹೋರಿಗಳಿದ್ದವು. ತಳಿಹೋರಿ ಗಳನ್ನು ಸಾಕುವದು, ದನಗಳ ಮೇವನ್ನು ಹಂಚುವದು, ಹುಲ್ಲುಗಾವಲನ್ನಿಟ್ಟು ಬಾಡಿಗೆ ಕೊಡುವದು ಈ ಮೊದಲಾದ ಕಾರ್ಯಗಳನ್ನು ಈ ಸಂಘಗಳು ಮಾಡುತ್ತವೆ ೩೨ ಸಂಘಗಳಲ್ಲಿ ೧೮ ಸಂಘಗಳು ಧಾರವಾಡ ಜಿಲ್ಹೆಯಲ್ಲಿದ್ದವು ೧೯೧೭ ಮತ್ತು ೧೯೨೦ರಲ್ಲಿ ಸ್ಥಾಪಿಸಲ್ಪಟ್ಟ ಆಲೂರ ಮತ್ತು ಶಿಡೇನೂರ ಸಂಘಗಳು ಇಂದಿಗೂ ತೃಪ್ತಿಕರವಾಗಿ ಕಾರ್ಯಮಾಡುತ್ತಿವೆ

## ೧೧. ಹೈನದ ಸಂಘಗಳು

## ( Dairy Societies )

೩೧–೩–೧೯೧೫ಕ್ಕೆ ಮುಂಬಯಿ ರಾಜ್ಯದಲ್ಲಿ ಠಾಣಾ, ಜಂಬೂಲ, ಅಹಮ್ಮದಾ ಬಾದ ಹತ್ತಿರ ಗೊಂಪಿಪುರ ಮತ್ತು ಪಡ್ಲಿ ಕಂಕಜ ಹೀಗೆ ೪ ಹೈನದ ಸಂಘಗಳಿದ್ದವು

ಇವುಗಳಲ್ಲಿ ೨ ಸಂಘಗಳು ಇನ್ನೂ ಕಾರ್ಯ ಪ್ರಾರಂಭಿಸಿರಲಿಲ್ಲ ಸಹಕಾರಿ ವರ್ಷದ ಅಂತ್ಯಕ್ಕೆ ಬೆಳಗಾಂವ ಮತ್ತು ಅಲಿಬಾಗಗಳಲ್ಲಿ ಹೈನದ ಸಂಘಗಳು ನೋಂದಾಯಿಸಲ್ಪಟ್ಟವು ೩೧-೩-೧೯೩೦ಕ್ಕೆ ೭ ಸಂಘಗಳಿದ್ದವು ಈ ಸಂಘಗಳಲ್ಲಿ ೨೮೦ ಹಿಂಡುವ ದನಳಿಗದ್ದವು ಅವು ೧೯೨೯-೩೦ರಲ್ಲಿ ೪೮೫೪೨ ರೂ ಗಳ ೭೨೩ ೭೧ ಸೇರು ಹಾಲನ್ನು ಮಾರಾಟ ಮಾಡಿದವು ೧೯೩೫-೩೬ರಲ್ಲಿ ೫ ಹೈನದ ಸಂಘಗಳಿದ್ದು ೧೯೩೯-೪೦ಕ್ಕೆ ಆ ಸಂಖ್ಯೆಯು ೧೧ಕ್ಕೆ ಏರಿತು ಆದರೆ ೧೯೪೪-೪೫ರಲ್ಲಿ ೮ಕ್ಕೆ ಇಳಿಯಿತು ಯುದ್ಧೋತ್ತರ ಕಾಲದ ೫೬ ನೆಯ ಯೋಜನೆಯ ಮೇರೆಗೆ ೫ ಮಧ್ಯವರ್ತಿ ಬೆಣ್ಣೆಯ (ಕೆನೆ) ಕೇಂದ್ರಗಳನ್ನು ಬೆಳಗಾಂವ ಸಾತಾರಾ ಪೂ ಖಾನದೇಶ, ಪ ಖಾನದೇಶ ಮತ್ತು ಧಾರವಾಡಗಳಲ್ಲಿ ಸ್ಥಾಪಿಸಬೇಕೆಂದೂ ಮತ್ತು ಇವುಗಳ ಜೊತೆಗೆ ಸುತ್ತುಮುತ್ತಲಿನ ಹಳ್ಳಿಗಳಿಂದ ಹಾಲು ಸಂಗ್ರಹಿಸುವ ಜಿಲ್ಹೆಗಳಲ್ಲಿ ಕೆನೆ ಬೇರ ಮಾಡುವ ಕೇಂದ್ರಗಳನ್ನೂ ತೆರೆಯಬೇಕೆಂದೂ ಸೂಚಿಸಲಾಯಿತು ಅಲ್ಲಿ ಗೋ-ಸಂಗೋಪನೆಯನ್ನು ಈ ಕೇಂದ್ರಗಳಿಗೆ ಜೋಡಿಸಬೇಕೆಂದೂ ಸೂಚಿಸಲಾಗಿದ್ದಿತು ಯುದ್ಧೋತ್ತರ ಕಾಲದ ೫೭ ನೆಯ ಯೋಜನೆಯ ಮೇರೆಗೆ ಅಹಮ್ಮದಾಬಾದ, ಬೆಳಗಾಂವ, ದೇವಲಾಲಿ, ನಾಸಿಕ, ಹುಬ್ಬಳ್ಳಿ ಮತ್ತು ಸೊಲ್ಲಾಪುರಗಳಲ್ಲಿ ಹಾಲಿನ ಕೇಂದ್ರಗಳನ್ನು ತೆರೆಯಬೇಕೆಂದು ತಾತ್ಪೂರ್ತಿಕವಾಗಿ ಸೂಚಿಸಲಾಯಿತು ಗ್ರಾಮಾಂತರ ಪ್ರದೇಶಗಳಲ್ಲಿಯೂ ಮುಂಬಯಿ ಮತ್ತು ಸುತ್ತಲಿನ ಪ್ರದೇಶಗಳಲ್ಲಿಯೂ ಹೈನದ ಉಪದಂಧೆಯನ್ನು ಬೆಳೆಯಿಸಲು ಸರಕಾರವು ಹಲವಾರು ಯೋಜನೆಗಳನ್ನು ಸಿದ್ಧಪಡಿಸಿತು ಈ ಯೋಜನೆಗಳಲ್ಲಿ ಹಾಲಿನ ಸಂಗ್ರಹ, ಪೂರೈಕೆ ಮತ್ತು ವಿತರಣೆಗಳಿಗಾಗಿ ಸಹಕಾರಕ್ಕೆ ಹೆಚ್ಚಿನ ಅವಕಾಶವಿದೆ ಮುಂಬಯಿ ಪ್ರದೇಶ ಮತ್ತು ಕಾಯರಾ ಜಿಲ್ಹೆಗಳಲ್ಲಿ ಹಾಲಿನ ಉತ್ಪಾದಕರ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟವು ಯುದ್ಧೋತ್ತರ ಕಾಲದ ಪುನರ್ವಿಮರ್ಶಿತ ೬೫ ನೆಯ ಯೋಜನೆಯ ಮೇರೆಗೆ ನಾಸಿಕ, ಸುರತ ನಗರಗಳಲ್ಲಿ ಮತ್ತು ಬೆಳಗಾಂವಿಯಲ್ಲಿ ಹಾಲಿನ ಯುನಿಯನ್‌ಗಳನ್ನು ಸ್ಥಾಪಿಸಲು ಸರಕಾರವು ಮನ್ನಣೆಕೊಟ್ಟಿತು. ೧೯೪೬ ರಿಂದ ೧೯೫೦ರ ವರೆಗೆ ಈ ಸಂಘಗಳು ಸಾಧಿಸಿದ ಪ್ರಗತಿಯ ಅಂಕೆ-ಸಂಖ್ಯೆಗಳನ್ನು ಇಲ್ಲಿ ಕೊಡಲಾಗಿದೆ

| ವರ್ಷ | ಸಂಘಗಳ ಸಂಖ್ಯೆ | ಪೌಂಡುಗಳು | ಬೆಲೆ |
|---|---|---|---|
| ೧೯೪೫-೪೬ | ೧೪ | ೧೦೪೩೮೮೧ | ೨೬ ೨ ಲಕ್ಷ ರೂ |
| ೧೯೪೬-೪೭ | ೩೦ | ೧೩೦೭೦೫೯ | ೧೨ ೦೦ ಲಕ್ಷ |
| ೧೯೪೭-೪೮ | ೩೭ | ೩೪೬೦೧೩೬ | ೪೩ ೦೦ ಲಕ್ಷ ರೂ |
| ೧೯೪೮-೪೯ | ೪೬ | ೮೩೭೩೮೧೩ | ೨೧ ೦೦ ಲಕ್ಷ ರೂ |
| ೧೯೪೯-೫೦ | ೬೦ | ೯೬೬೯೪೯೬ | ೩೦ ೯೪ ಲಕ್ಷ ರೂ. |

೩೦—೬—೧೯೫೧ ರಲ್ಲಿ ೭೫ ಸಂಘಗಳಿದ್ದು ಅವುಗಳಲ್ಲಿ ಕೆಳಗಿನ ಸಂಘಗಳು ಸಮಾವೇಶವಾಗುತ್ತವೆ

೧ ಹಾಲು ಉತ್ಪಾದಕರ ಸಂಘಗಳು

೨ ಗ್ರಾಹಕರ-ಉತ್ಪಾದಕರ ಸಂಘಗಳು

೩ ಹಾಲಿನ ಪೂರೈಕ ಯೂನಿಯನ್ನುಗಳು

ಈ ರಾಜ್ಯದಲ್ಲಿಯ ಹಾಲು ಪೂರೈಕೆಯ ಮುಖ್ಯ ಯೋಜನೆಗಳೆಂದರೆ —

೧ ಪುಣೆ, ಹುಬ್ಬಳ್ಳಿ ಮತ್ತು ಅಹಮ್ಮದಾಬಾದ ಮೊದಲಾದ ದೊಡ್ಡ ನಗರಗಳಲ್ಲಿ ಸರಕಾರದ ಮನ್ನಣೆ ಪಡೆದ ಸರಕಾರಿ ಹಾಲಿನ ಪೂರೈಕೆ ಯೋಜನಗಳು

೨ ಮುಂಬಯಿ ಹಾಲಿನ ಪೂರೈಕೆಯ ಯೋಜನೆಯು ಮುಂಬಯಿ ಹಾಲಿನ ಕಮೀಶನರರ ಮೇಲ್ವಿಚಾರಣೆ ಮತ್ತು ನಿಯಂತ್ರಣದಲ್ಲಿದೆ

೩ ಯುದ್ದೋತ್ತರ ಪುನರ್ರಚನೆಯ ೬೨ ನೆಯ ಯೋಜನೆ

೪ ,, ,, ೬೩ ನೆಯ ,,

ಈ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಸಹಕಾರದ ಪಾತ್ರ —

೧ ಸರಕಾರಿ ಹಾಲಿನ ಪೂರೈಕಯ ಯೋಜನೆ —

ಬೇಬಥೋಳದಲ್ಲಿ ಪುಣೆನಗರಕ್ಕೆ ಹಾಲು ಪೂರೈಸುವದಕ್ಕಾಗಿ ಒಂದು ಸಹಕಾರಿ ಸಂಘವನ್ನು ಸ್ಥಾಪಿಸಲಾಯಿತು ಈ ಸಂಘವು ಮೇವನ್ನು ಹಂಚುತ್ತಿದ್ದು ಕ್ರಮೇಣವಾಗಿ ಹಾಲಿನ ಸಂಗ್ರಹ ಮತ್ತು ಪೂರೈಕೆಯ ಕಾರ್ಯವನ್ನು ಕೈಕೊಳ್ಳಬಹುದೆಂದು ಆಶಿಸಲಾಗಿದೆ

೨ ಮುಂಬಯಿ ಹಾಲಿನ ಪೂರೈಕೆ ಯೋಜನೆ —

ಮುಂಬಯಿ ಪ್ರದೇಶದಲ್ಲಿಯ ೧೩ ಸಂಘಗಳು ಮುಂಬಯಿ ಹಾಲಿನ ಯೋಜನೆಗೆ ೬೫,೨೪,೧೦೯ ಪೌಂಡು ಹಾಲನ್ನು ಪೂರೈಸಿದವು ಆನಂದ ಪ್ರದೇಶದಲ್ಲಿ ೩೧ ಹಾಲಿನ ಉತ್ಪಾದಕರ ಸಂಘಗಳು ಮುಂಬಯಿ ಹಾಲಿನ ಯೋಜನೆಗೆ ೨೫ ೩೯ ಲಕ್ಷ ರೂ ಗಳ ೧,೦೮,೯೩,೯೦೦ ಪೌಂಡು ಹಾಲನ್ನು ಪೂರೈಸಿದವು.

೩ ಯುದ್ಧೋತ್ತರ ಪುನರ್ರಚನೆಯ ೫೨ ನೆಯ ಯೋಜನೆ —

ಹೆಚ್ಚು ಹಾಲಿನ ಪೂರೈಕೆ ಇರುವ ಜಿಲ್ಲೆಗಳಲ್ಲಿ ಸಹಕಾರಿ ಕೆನೆ ತೆಗೆಯುವ ಸಂಘಗಳನ್ನು ತೆರೆಯಬೇಕೆಂದು ಈ ಯೋಜನೆಯು ಸೂಚಿಸುತ್ತದೆ ಇಂಥ ಸಂಘಗಳನ್ನು

ಸ್ಥಾಪಿಸುವದಕ್ಕಾಗಿ ಹಾಲಿನ ಉಳಿತಾಯವಿರುವ ಪ್ರದೇಶಗಳನ್ನು ಕಂಡು ಹಿಡಿಯುವದಕ್ಕಾಗಿ ಕೆಳಗಿನ ಜಿಲ್ಹೆಗಳ ಶೀಘ್ರ ಸರ್ವೆ ತೆಗೆದುಕೊಳ್ಳಬೇಕೆಂದು ಸೂಚಿಸಲಾಗಿದೆ

೧. ವಿಜಾಪೂರ ೨ ಬರೋಚ ೩ ಪೂರ್ವ ಖಾನದೇಶ ೪ ಪಶ್ಚಿಮ-ಖಾನದೇಶ ೫ ಸಾತಾರಾ.

## ೧೨. ಸಕ್ಕರೆ ಕಾರಖಾನೆ

## ( Sugar factory )

ಭಾಗಾಯತದಾರರ ಸಹಕಾರಿ ಸಕ್ಕರೆ ಉತ್ಪಾದಕರ ಸಂಘವು ನಗರ ಜಿಲ್ಹೆಯಲ್ಲಿಯ ಲೋಣಿ ಎಂಬಲ್ಲಿ ೧೯೪೮ರಲ್ಲಿ ನೋಂದಾಯಿಸಲ್ಪಟ್ಟಿತು ಈ ಸಂಘವು ಇಡೀ ಭಾರತದಲ್ಲಿಯೇ ಸಹಕಾರಿ ತತ್ವದ ಮೇಲೆ ದೊಡ್ಡ ಪ್ರಮಾಣದ ಚಟುವಟಿಕೆಗಳನ್ನು ಕೈಕೊಂಡ ಮೊದಲನೆಯ ಸಂಸ್ಥೆಯಾಗಿದೆ ೩೦-೬-೧೯೫೧ಕ್ಕೆ ಉತ್ಪಾದಕ ಸದಸ್ಯರ ಸಂಖ್ಯೆಯು ೪೭೭ಕ್ಕೂ ಸಾಮಾನ್ಯ ಸದಸ್ಯರ ಸಂಖ್ಯೆಯು ೧೧ ರಿಂದ ೧೪ಕ್ಕೂ (ಇದರಲ್ಲಿ ೯ ಸಹಕಾರಿ ಸಂಘಗಳು ಇವೆ) ಏರಿದೆ ಈ ಸಂಘವು ಕೂಲಿಕಾರರನ್ನೂ ಸಂಬಳ ಪಡೆಯುವವರನ್ನೂ ಸಹಿತ ತನ್ನ ಸದಸ್ಯರನ್ನಾಗಿ ಮಾಡಿಕೊಳ್ಳುತ್ತದೆ ೩೦-೬-೧೯೫೧ಕ್ಕೆ ಇದ್ದ ಸಂಘದ ಸಂಚಿತ ಮತ್ತು ವಸೂಲಾದ ಶೇರ ಭಾಂಡವಲಿನ ವಿವರವನ್ನು ಕೆಳಗೆ ಕೊಡಲಾಗಿದೆ

| | ಸಂಚಿತ ಭಾಂಡವಲು ( Subscribed ) | ವಸೂಲಾದ ಭಾಂಡವಲು ( Paid up ) |
|---|---|---|
| ಮುಂಬಯಿ ಸರಕಾರ ( ವಿಶೇಷ ಪ್ರಾಶಸ್ತ್ಯ ಶೇರುಗಳು ) | ೬,೦೦,೦೦೦ | ೬,೦೦,೦೦೦ |
| ಉತ್ಪಾದಕ ಸದಸ್ಯರು | ೯ ೯೭ ೦೦೦ | ೮ ೦೦,೩೬೦ |
| ಸಾಮಾನ್ಯ ಸದಸ್ಯರು | ೯೦,೦೦೦ | ೮೮ ೦೦೦ |
| ಒಟ್ಟು | ೧೬,೮೭,೦೦೦ | ೧೪,೮೮ ೩೬೦ |

ರಾಜ್ಯ ಸರಕಾರವು ೬,೦೦,೦೦೦ ರೂಪಾಯಿಗಳ ಶೇರುಗಳನ್ನು ಕೊಂಡಿರುವದರಿಂದ, ಇತರ ಸದಸ್ಯರಿಂದ ೮,೮೮,೦೦೦ ರೂಪಾಯಿಗಳು ಸಂಗ್ರವಾಗಿರುವದರಿಂದ, ಭಾರತದ ಔದ್ಯೋಗಿಕ ಹಣಕಾಸಿನ ಕಾರ್ಪೋರೇಶನದಿಂದ ೨೦,೦೦,೦೦೦ ರೂಪಾಯಿಗಳ ದೀರ್ಘಾವಧಿ ಸಾಲ ದೊರೆತಿರುವದರಿಂದ ಮತ್ತು ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕಿನಿಂದ ರಿಯಾಯತಿ ಸಾಲಗಳನ್ನು ಪಡೆದಿರುವದರಿಂದ ಈ ಸಂಘವು ೪೨,೧೯,೪೦೦ ರೂಪಾಯಿಗಳನ್ನು ಕಾಯಂ ಭಾಂಡವಲದಲ್ಲಿ ತೊಡಗಿಸಲು ಶಕ್ಯವಾಗಿದೆ. ೧೯೫೦-೫೧ರ ಕೊನೆಗೆ ಬ್ಯಾಂಕಿನಿಂದ ಪಡೆದ ಸಾಲದ ಪರಿಸ್ಥಿತಿಯು ಕೆಳಗಿನಂತಿದ್ದಿತು

| | | | |
|---|---|---|---|
| (೧) | ಕ್ಯಾಶ ಕ್ರೆಡಿಟ್ ಸಾಲ | ರೂ | ೧,೫೦,೦೦೦ |
| (೨) | ಬೆಳೆ ಸಾಲ | ರೂ | ೨,೦೦,೦೦೦ |
| (೩) | ಸರುಕುಗಳನ್ನು ಆಡುವಾಗಿಟ್ಟು ಪಡೆದ ಸಾಲ | ರೂ | ೮,೦೦,೦೦೦ |
| (೪) | ಸರಕುಗಳ ಭದ್ರತೆಯು ಮೇಲೆ ಪಡೆದ ಸಾಲ | ರೂ | ೨,೦೦,೦೦೦ |

೩೦-೬-೧೯೫೧ ಕ್ಕೆ ೯,೧೩,೭೦೫ ರೂ ಗಳ ಸಾಲವು ಬರಬೇಕಾಗಿದ್ದಿತು ೧೯೫೦-೫೧ರಲ್ಲಿ ಕಾರಖಾನೆಯ ಸಲುವಾಗಿ ೭೬೬ ಎಕರೆ ಭೂಮಿಯಲ್ಲಿ ಕಬ್ಬನ್ನು ಬಿತ್ತಲಾಗಿದ್ದಿತು ಅದರಿಂದ ೩೨ ೪೭೧ ಟನ್ನು ಕಬ್ಬು ಬಂದಿತು ಕಾರಖಾನೆಯು ಪ್ರತ್ಯಕ್ಷವಾಗಿ ೨೩-೧೨-೧೯೫೦ ರಿಂದ ಸಕ್ಕರೆಯ ಉತ್ಪಾದನೆಯನ್ನು ೧೨-೫-೧೯೫೧ರ ವರೆಗೆ ನಡೆಯಿಸಿತು ಆ ಅವಧಿಯಲ್ಲಿ ೩೩,೦೫೫ ಟನ್ ಕಬ್ಬಿನಿಂದ ಹಾಲನ್ನು ತೆಗೆಯಿತು ಇದರಲ್ಲಿ ೫೭೬ ಟನ್ ಕಬ್ಬು ಮಾತ್ರ ೨೦ ಸದಸ್ಯೇತರರಿಂದ ಬಂದಿದ್ದಿತು ೩೭ ೫೦೨ ಸಕ್ಕರೆ ಚೀಲಗಳನ್ನು ಉತ್ಪಾದಿಸಿ ಒಟ್ಟು ೩ ೫೮ ೧೦೦ ರೂ ಗಳ ಲಾಭ ಪಡೆಯಿತು ಸಂಘವು ಇನ್ನೂ ಬಾಲ್ಯಾವಸ್ಥೆಯಲ್ಲಿದ್ದರೂ ಅತ್ಯದ್ಭುತ ಪ್ರಗತಿಯನ್ನು ಸಾಧಿಸಿ ಉಜ್ವಲ ಭವಿತವ್ಯತೆ ಇದೆಯೆಂದು ತೋರಿಸಿಕೊಟ್ಟಿದೆ ಕೋಪರಗಾಂದಲ್ಲಿ ಸಕ್ಕರೆ ಕಾರಖಾನೆಯನ್ನು ಪ್ರಾರಂಭಿಸುವ ಬಗ್ಗೆ ಪ್ರಯತ್ನಗಳು ನಡೆದಿವೆ ಪಂಚವಾರ್ಷಿಕ ಯೋಜನೆಯಲ್ಲಿ ರೂಪಾಂತರಿಸುವ ಸಂಘಗಳಿಗೆ ಹೆಚ್ಚಿನ ಮಹತ್ವನ್ನು ಕೊಡಲಾಗಿದೆ

## ಡಿ. ಬಿನ್ ಶೇತ್ಕಿ ಸಂಘಗಳು.

### ೧ (ಅ) ಗ್ರಾಹಕರ ಸಂಘಗಳು.

**ಆಂದೋಲನದ ಪೂರ್ವ ಇತಿಹಾಸಃ**-- ೧೯೧೨ರ ಕಾಯದೆಯು ಪಾಸಾಗುವದಕ್ಕಿಂತ ಮುಂಚಿತವಾಗಿಯೇ ಪತ್ತಿನ ಸಂಘಗಳು ಗ್ರಾಹಕರ ಸಂಘಗಳ ಚಟುವಟಿಕೆಗಳನ್ನು ಕೈಕೊಳ್ಳಲು ಪ್ರಾರಂಭಿಸಿದವು ಅವು ಮನೆತನದ ಅವಶ್ಯಕತೆಗಳನ್ನು ಪೂರೈಸುತ್ತಿದ್ದವು ಆದರೆ ಅವುಗಳ ಪ್ರಗತಿಯು ಕುಂಠಿತವಾಗಿತ್ತು ಮುಂಬಯಿ ರಾಜ್ಯದಲ್ಲಿ ಸಹಕಾರಿ ಸಂಘಗಳ ಕಾರ್ಯಾಚರಣೆಯ ಬಗ್ಗೆ ೩೧-೩-೧೯೧೧ಕ್ಕೆ ಮುಕ್ತಾಯವಾಗುವ ವರ್ಷದ ವಾರ್ಷಿಕ ವರದಿಯಲ್ಲಿ ಸಹಕಾರಿ ಸಂಘಗಳ ರಜಿಸ್ಟ್ರಾರರು ಈ ರೀತಿ ಅಭಿಪ್ರಾಯ ಪಟ್ಟಿರುವರು. " ಪೂರೈಕೆ ಸಂಘಗಳು ಮತ್ತು ಸ್ಟೋರುಗಳು ನಿಜಕ್ಕೂ ಹೆಚ್ಚು ಮುಂದೆ ಬರತೊಡಗಿವೆಯಾದರೂ ವಿಫಲವಾದ 'ಧಾರವಾಡ ಸ್ಟೋರ ಸೊಸಾಯಟಿ' ಮತ್ತು ಮನಮಾಡದ ಅಖಿಲ ಭಾರತ ಬಂಧುತ್ವ ಸಂಘವು ಎದುರಿಸುತ್ತಿರುವ ಸಮಸ್ಯೆಗಳನ್ನು ಅನುಲಕ್ಷಿಸಿದರೆ, ನಾವು ಈ ದಿಶೆಯಲ್ಲಿ ಸಾವಧಾನವಾಗಿ ನಡೆಯಬೇಕೆಂದೆನಿಸುತ್ತದೆ ಮುಂಬಯಿ ಶಾಮರಾವ ವಿಠ್ಠಲ ಸಂಘವು ಸ್ಟೋರುಗಳ ರೂಪರೇಷೆಯನ್ನು ಹಾಕಿಕೊಟ್ಟಿದೆ ಆದರೂ ಕಾಲಾಂತರದಲ್ಲಿ ಹೆಚ್ಚು ಉಪಯುಕ್ತವಾದ ಹಾಗೂ ಲಾಭದಾಯಕ

ಮಾದರಿಗಳನ್ನು ರಚಿಸಿಕೊಳ್ಳಬಹುದು ಉತ್ತಮ ಹಳ್ಳಿಯ ಸಂಘವಿರುವ ಸನ್ಸೀಕ (ಸುರತ ಜಿಲ್ಹೆ) ಎಂಬ ಹಳ್ಳಿಯಲ್ಲಿ ಒಂದು ಸಹಕಾರಿ ಅಂಗಡಿ ಇರುತ್ತದೆ ಗಿರೆ – ವಿಜಯದುರ್ಗ (ರತ್ನಾಗಿರಿ ಜಿಲ್ಹೆ) ಸಂಘವು ಈಗಾಗಲೇ 'ಪೂರೈಕೆ' ಶಾಖೆಯನ್ನು ಪ್ರಾರಂಭಿಸಿದೆ. ಸಿರ್ಸಿಯಲ್ಲಿಯೂ (ಕಾರವಾರ ಜಿಲ್ಹೆ) ಇಂಥ ಶಾಖೆಯನ್ನು ಪ್ರಾರಂಭಿಸುವ ಬಗ್ಗೆ ಆಲೋಚನೆ ನಡೆದಿದೆ "ಕರಂಜಕರ ಮತ್ತು ಕಂಪನಿ" (ಸಾತಾರಾ) ಸಂಘವು ಒಂದು ಅಂಗಡಿಯನ್ನು ನಡೆಸುತ್ತಿದೆ ಆದರೆ ಇದೊಂದು ದೊಡ್ಡ ವರ್ಕಶಾಪ್ ಆಗಿದೆಯೇ ಹೊರತು ಬೇರೊಂದಿಲ್ಲ '' ೧೯೧೨ನೆಯ ಕಾಯದೆಯು ಪಾಸಾದನಂತರ ಗ್ರಾಹಕರ ಸಂಘಗಳನ್ನು ಸ್ಥಾಪಿಸಲು ಪ್ರಾರಂಭವಾಯಿತು

ಮೊದಲನೆಯ ಜಾಗತಿಕ ಯುದ್ಧವು ಗ್ರಾಹಕರ ಆಂದೋಲನಕ್ಕೆ ಹೆಚ್ಚು ಪ್ರೋತ್ಸಾಹ ಕೊಟ್ಟಿತು ಯುದ್ಧ ಕಾಲದಲ್ಲಿ ಗ್ರಾಹಕರ ಸಂಘಗಳು ನೋಂದಾಯಿಸಲ್ಪಟ್ಟವು. ೧೯೨೧ರ ವರೆಗೂ ಆಂದೋಲನದ ಪ್ರಗತಿಯು ಸಾಗಿತು ೧೯೧೯ರಿಂದ ೧೯೨೧ರ ವರೆಗೆ ಸಂಘಗಳ ಸಂಖ್ಯೆಯು ಹೆಚ್ಚಾಗುತ್ತಲೇ ಇದ್ದಿತು ೧೯೨೧ರಲ್ಲಿ ಒಟ್ಟು ೮೮ ಸಂಘಗಳಿದ್ದವು ಆವರೆ ೧೯೨೨ರ ತರುವಾಯ ಗ್ರಾಹಕರ ಆಂದೋಲನವು ಹಿಮ್ಮೆಟ್ಟತೊಡಗಿತು ಎಷ್ಟೋ ವರುಷಗಳವರೆಗೆ ಸಂಘಗಳು ಬದುಕುವದು ಸಹಿತ ಕಷ್ಟಕರವಾಯಿತು ೧೯೩೦ಕ್ಕೆ ಸಂಘಗಳ ಸಂಖ್ಯೆಯು ೩೬ಕ್ಕೆ ಬಂದು ನಿಂತಿತು ೧೯೨೨ರ ತರುವಾಯ ಆಂದೋಲನವು ಪ್ರಗತಿ ಹೊಂದಲಿಲ್ಲವೆಂದು ರಜಿಸ್ಟ್ರಾರರು ಒಂದೇ ಸವನೆ ವಾರ್ಷಿಕ ವರದಿಯಲ್ಲಿ ಬರೆಯತೊಡಗಿದರು.

೧೯೩೦ ರಿಂದ ಎರಡನೆಯ ಜಾಗತಿಕ ಯುದ್ಧವು ಪ್ರಾರಂಭವಾಗುವವರೆಗೆ ಅಂದರೆ ೧೯೩೯ರ ವರೆಗಿನ ಗ್ರಾಹಕರ ಆಂದೋಲನದ ಪರಿಸ್ಥಿತಿಯನ್ನು ಈ ಕೆಳಗೆ ಕೊಡಲಾಗಿದೆ

| ವರ್ಷ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ದುಡಿಯುವ ಭಾಂಡವಲು | ಮಾರಾಟ | ಲಾಭ |
|---|---|---|---|---|---|
| ೧೯೩೦–೩೧ | ೩೬ | ೬,೫೫೨ | ೨,೧೦,೭೩೧ | ೬,೧೬,೪೭೮ | ೧೯,೧೪೮ |
| ೧೯೩೧–೩೨ | ೩೭ | ೭,೩೩೮ | ೨,೦೫,೪೭೬ | ೬,೫೪,೪೦೦ | ೧೪,೮೧೯ |
| ೧೯೩೨–೩೩ | ೪೦ | ೮,೯೬೭ | ೨,೨೪,೩೪೦ | ೭,೦೨,೩೭೨ | ೧೯,೮೨೪ |
| ೧೯೩೩–೩೪ | ೪೦ | ೭,೩೨೨ | ೨,೨೨,೪೫೯ | ೭,೧೬,೧೯೨ | ೧೫,೮೪೩ |
| ೧೯೩೪–೩೫ | ೨೯ | ೬,೭೫೯ | ೨,೧೮,೮೧೩ | ೭,೫೬,೯೩೫ | ೧೨,೮೮೮ |
| ೧೯೩೫–೩೬ | ೨೮ | ೬,೩೯೯ | ೨,೨೦,೩೧೫ | ೬,೬೨,೫೧೮ | ೧೦,೬೦೯ |
| ೧೯೩೬–೩೭ | ೨೫ | ೫,೭೭೩ | ೧,೫೩,೭೨೨ | ೫,೬೨,೬೨೪ | ೧೨,೧೨೯ |
| ೧೯೩೭–೩೮ | ೨೫ | ೬,೦೬೮ | ೧,೬೯,೮೨೯ | ೫,೯೬,೩೬೮ | ೮,೮೦೯ |
| ೧೯೩೮–೩೯ | ೨೫ | ೭,೧೨೮ | ೨,೦೯,೧೯೦ | ೫,೯೯,೪೮೩ | ೧೩,೫೪೪ |

೧೯೩೯ರಲ್ಲಿ ಯುದ್ಧವು ಪ್ರಾರಂಭವಾಯಿತಾದರೂ ನಿತ್ಯಾವಶ್ಯಕ ಸರಕುಗಳು ಸಹಜವಾಗಿ ದೊರೆಯುತ್ತಿದ್ದುದರಿಂದ ೧೯೪೨ರ ವರೆಗೆ ಗ್ರಾಹಕರ ಸಂಘಗಳ ಸಂಖ್ಯೆಯು ಅಷ್ಟೊಂದು ಹೆಚ್ಚಾಗಿರಲಿಲ್ಲ ಆದರೆ ೧೯೪೨ರಲ್ಲಿ ಸಿಂಗಾಪೂರದ ಪತನವಾದನಂತರ ಆಹಾರ ಧಾನ್ಯ ಮತ್ತಿತರ ನಿತ್ಯಾವಶ್ಯಕ ಸರಕುಗಳ ತುಟಾಗ್ರತೆಯು ಕಂಡು ಬರತೊಡಗಿತು. ಸರಕುಗಳ ಬೆಲೆಗಳು ಒಂದೇಸವನೆ ಏರತೊಡಗಿದವು ಸರಕುಗಳ ತುಟಾಗ್ರತೆಯ ತೀಕ್ಷ್ಣತೆಯು ಹೆಚ್ಚಾಗತೊಡಗಿತು ಲಾಭಬಡಕತನ ಮತ್ತು ಕಳ್ಳಪೇಟೆಗಳು ಹೆಚ್ಚಾಗತೊಡಗಿದವು ೧೯೪೨ ರತರುವಾಯ ಗ್ರಾಹಕರ ಸಂಘಗಳು ಹೆಚ್ಚೆಚ್ಚಾಗಿ ನೋಂದಾಯಿಸಲ್ಪಡತೊಡಗಿದವು ಕೆಳಗಿನ ಅಂಕೆ ಸಂಖ್ಯೆಗಳಲ್ಲಿ ೧೯೪೦ ರಿಂದ ೧೯೪೬ರ ವರೆಗಿನ ಗ್ರಾಹಕರ ಸಂಘಗಳ ಪ್ರಗತಿಯನ್ನು ಕೊಡಲಾಗಿದೆ

| ವರ್ಷ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ದುಡಿಯುವ ಭಾಂಡವಲು | ಮಾರಾಟ | ಲಾಭ |
|---|---|---|---|---|---|
| ೧೯೪೦-೪೧ | ೩೧ | ೧೦,೩೦೩ | ೨,೬೧,೮೨೭ | ೮,೭೫,೦೮೯ | ೨೪,೧೬೮ |
| ೧೯೪೧-೪೨ | ೩೮ | ೧೧,೦೬೯ | ೨,೮೧,೪೫೧ | ೧೦,೭೧,೪೩೭ | ೩೫,೧೦೫ |
| ೧೯೪೨-೪೩ | ೧೦೬ | ೨೮,೮೫೮ | ೧೧,೧೬,೪೫೨ | ೪೫,೩೪,೬೪೫ | ೧,೪೦,೭೭೪ |
| ೧೯೪೩-೪೪ | ೪೧೦ | ೧,೧೮,೦೬೧ | ೪೦,೬೦,೪೧೬ | ೨,೭೩,೭೬,೮೮೨ | ೩,೧೫,೬೫೪ |
| ೧೯೪೪-೪೫ | ೪೫೬ | ೧,೨೫,೭೮೮ | ೪೮,೨೫,೫೬೬ | ೫,೨೨,೧೩,೧೮೩ | ೯,೩೧,೯೭೮ |
| ೧೯೪೫-೪೬ | ೪೬೫ | ೧,೩೨,೫೯೦ | ೫೫,೧೧,೦೬೨ | ೫,೪೨,೦೭,೪೨೫ | ೮,೪೧,೫೪೩ |

ಯುದ್ಧೋತ್ತರ ಕಾಲದಲ್ಲಿಯೂ ಸಹಿತ ಜೀವನ ನಿತ್ಯಾವಶ್ಯಕ ಸರಕು ಗಳನ್ನು ಪಡೆದುಕೊಳ್ಳುವದು ಸುಲಭ ಸಾಧ್ಯವಿರದೆ ಇದ್ದುದರಿಂದ ಗ್ರಾಹಕರ ಆಂದೋಲನವು ಬೆಳೆಯುತ್ತಲೇ ಇತ್ತು ಸಂಘಗಳ ಸಂಖ್ಯೆ, ಸದಸ್ಯರ ಸಂಖ್ಯೆ, ವ್ಯವಹಾರ ಮೊದಲಾದವುಗಳು ಒಂದೇ ಸವನೆ ಬೆಳೆಯತೊಡಗಿದ್ದವು ಈ ಅವಧಿ ಯಲ್ಲಿಯ ಸಹಕಾರಿ ಸ್ಟೋರುಗಳ ಅಂಕೆ-ಸಂಖ್ಯೆಗಳನ್ನು ಕೆಳಗೆ ಕೊಡಲಾಗಿದೆ

| ವರ್ಷ | ಸಂಘಗಳ ಸಂಖ್ಯೆ | ಸದಸ್ಯರ ಸಂಖ್ಯೆ | ದುಡಿಯುವ ಭಾಂಡವಲು | ಒಟ್ಟು ಮಾರಾಟ | ಒಟ್ಟು ಖರೀದಿ | ಒಟ್ಟು ಲಾಭ |
|---|---|---|---|---|---|---|
| | | | (ರೂಪಾಯಿಗಳು ಲಕ್ಷದಲ್ಲಿ) | | | |
| ೧೯೪೬-೪೭ | ೫೧೫ | ೧,೩೩,೪೦೦ | ೬೨.೭೯ | ೬೦೦ ೧೯ | ೫೯೨.೧೭ | ೭ ೬೬ |
| ೧೯೪೭-೪೮ | ೬೧೨ | ೧,೮೨,೮೭೬ | ೭೦ ೫೨ | ೫೪೦ ೫೫ | ೫೧೭ ೩೧ | ೭ ೭೭ |
| ೧೯೪೮-೪೯ | ೧೦೪೮ | ೨,೪೪,೧೧೦ | ೧೬೨ ೪೫ | ೮೭೮ ೬೭ | ೮೫೧ ೦೬ | ೧೮.೧೮ |
| ೧೯೪೯-೫೦ | ೧೧ ೩ | ೨,೨೫,೫೧೭ | ೧೬೯ ೨೨ | ೧೨೯೦ ೭೨ | ೧೨೯೩ ೪೨ | ೧೮ ೮೬ |
| ೧೯೫೦-೫೧ | ೧೧೫೪ | ೨,೩೬,೩೨೯ | ೧೧೧ ೯೭ | ೧೬೪೮ ೦೨ | ೧೫೧೬ ೬೦ | ೩೧ ೨೭ |

ನಿಯಂತ್ರಿತ ಸರಕುಗಳ ವ್ಯವಹಾರದಲ್ಲಿ ಸಹಕಾರಿ ಸಂಘಗಳಿಗೆ ಪ್ರಾಶಸ್ತ್ಯ ಕೊಡಬೇಕೆಂದು ಸರಕಾರವು ನಿರ್ಧರಿಸಿದ್ದರಿಂದ ಈ ಅವಧಿಯಲ್ಲಿ ಹೆಚ್ಚು ಹೆಚ್ಚು ಸಂಘಗಳು ನೋಂದಾಯಿಸಲ್ಪಡತೊಡಗಿದವು ಆದರೆ ೧೯೫೦ರ ತರುವಾಯ ಹೊಸ ಸಂಘಗಳ ಸಂಘಟನೆಯು ಸಾವಧಾನವಾಗಿದೆ ಏಕೆಂದರೆ ನಿಯಂತ್ರಣಗಳನ್ನು

ಸಡಿಲಿಸಿದ ನಂತರ (Under free economy) ಹೊಸ ಸಂಘವು ಬಾಳಬಹುದೇ ಎಂಬ ಬಗ್ಗೆ ಕೂಲಂಕಷವಾಗಿ ವಿಚಾರಿಸಲಾಗುತ್ತಿದೆ ಹೊಸ ಸಂಘವನ್ನು ಸ್ಥಾಪಿಸುವದಾದರೆ ಸುರಕ್ಷತೆಯ ದೃಷ್ಟಿಯಿಂದ ಕನಿಷ್ಠ ೫ ಸಾವಿರ ರೂಪಾಯಿ ಪ್ರಾರಂಭದ ಭಾಂಡವಲು ಇರಬೇಕೆಂದೂ ಇಂಥ ಸಂಘಗಳನ್ನು ಸಾಧ್ಯವಾದ ಮಟ್ಟಿಗೆ ೧೦ ಸಾವಿರ ಮತ್ತು ಹೆಚ್ಚು ಜನಸಂಖ್ಯೆಯುಳ್ಳ ದೊಡ್ಡ ಊರುಗಳಲ್ಲಿಯೇ ಸ್ಥಾಪಿಸಬೇಕೆಂದೂ, ಸಹಕಾರಿ ಖಾತೆಯು ಸಾಮಾನ್ಯ ನಿಯಮಗಳನ್ನಾಗಿ ಮಾಡಿದೆ ಸ್ಟೋರುಗಳ ಸಂಖ್ಯೆ, ಸದಸ್ಯರ ಸಂಖ್ಯೆ ಮತ್ತು ವ್ಯವಹಾರದ ಪ್ರಮಾಣ ಈ ದೃಷ್ಟಿಯಲ್ಲಿ ಮುಂಬಯಿ ಮತ್ತು ಅಹಮ್ಮದಾಬಾದ ನಗರಗಳು ಮುಂದುವರೆದಿವೆ ಗ್ರಾಹಕರ ಆಂದೋಲನವನ್ನು ಸಂಯೋಜಿಸುವ (Consolidation) ಬಗ್ಗೆ ಈಗ ಹೆಚ್ಚು ಗಮನ ಕೊಡಲಾಗುತ್ತಿದೆ ಗ್ರಾಹಕರ ಸಂಘಗಳ ಮೇಲ್ವಿಚಾರಣೆ ಮತ್ತು ಲೆಕ್ಕ ತಪಾಸಣೆಗಾಗಿ ಈ ಸಂಘಗಳ ಜಿಲ್ಹಾ ಫೆಡರೇಶನ್ನುಗಳನ್ನು ಸ್ಥಾಪಿಸುವ ಬಗ್ಗೆಯೂ ವಿಚಾರಣೆ ನಡೆದಿದೆ ಮುಂಬಯಿ ಮತ್ತು ಸತ್ತುಮುತ್ತಲಿನ ಜಿಲ್ಹೆಗಳ ಗ್ರಾಹಕರ ಸಹಕಾರಿ ಸಂಘಗಳ ಕಾರ್ಯಾಚರಣೆಯ ಮೇಲ್ವಿಚಾರಣೆಗೆಂದು ಅಖಿಲ ಮುಂಬಯಿ ಗ್ರಾಹಕರ ಸಹಕಾರಿ ಸಂಘಗಳ ಫೆಡರೇಶನ್ನು ಮೂರು ವರ್ಷಗಳ ಹಿಂದೆಯೇ ಸ್ಥಾಪಿಸಲ್ಪಟ್ಟಿದೆ. ಈ ಸಂಸ್ಥೆಯು ಭದ್ರವಾದ ಸಂಸ್ಥೆಯಾಗಿ ಪರಿಣಮಿಸತೊಡಗಿದೆ ಗ್ರೇಟಬ್ರಿಟನ್, ಡೆನ್ಮಾರ್ಕ್, ಸ್ವೀಡನ್ ಮತ್ತು ಸ್ವಿಟ್ಸರ್ಲಂಡಗಳಲ್ಲಿಯ ಸಂಸ್ಥೆಗಳಂತೆ ಈ ಸಂಸ್ಥೆಯಾದರೂ ಯೋಗ್ಯ ದರದಲ್ಲಿ ಜೀವನದ ನಿತ್ಯಾವಶ್ಯಕ ಮತ್ತಿತರ ಸರಕುಗಳ ರೋಕ ಖರೀದಿ ವಿಕ್ರಿ ಮತ್ತು ಕಿರುಕಳ ವಿತರಣಾ ಕಾರ್ಯವನ್ನು ಇಷ್ಟರಲ್ಲಿಯೇ ಕೈಕೊಳ್ಳಬಹುದೆಂದು ಆಶಿಸಲಾಗಿದೆ ೧೯೫೦ರಲ್ಲಿ ಮುಂಬಯಿ ರಾಜ್ಯದ ಗ್ರಾಹಕರ ಸಹಕಾರಿ ಸಂಘವು ಸ್ಥಾಪಿಸಲ್ಪಟ್ಟಿತು ರಾಜ್ಯದಲ್ಲೆಲ್ಲ ತನ್ನ ಸ್ಟೋರುಗಳನ್ನು ಪ್ರಾರಂಭಿಸಿ ತನ್ನ ಸದಸ್ಯರಿಗೂ ಮತ್ತು ಸಾರ್ವಜನಿಕರಿಗೂ ಯೋಗ್ಯ ಬೆಲೆಯಲ್ಲಿ ನಿತ್ಯಾವಶ್ಯಕ ಸರಕುಗಳನ್ನು ಪೂರೈಸುವದೇ ಈ ಸಂಘದ ಉದ್ದೇಶವಾಗಿದೆ. ಪೇಟೆಯಲ್ಲಿಯ ಏರಿಳಿತಗಳ ಸಮತೋಲನಕ್ಕಾಗಿಯೂ ಮತ್ತು ಕಾಲಾಂತರದಲ್ಲಿ ನಿಯಂತ್ರಣಗಳನ್ನು ದೂರ ಮಾಡುವದಕ್ಕಾಗಿಯೂ ಈ ಸ್ಟೋರುಗಳು ಸಹಾಯಕಾರಿಯಾಗಬಹುದೆಂದು ಆಶಿಸಲಾಗಿದೆ ಆದರೂ ಸ್ಟೋರುಗಳ ಯಶಸ್ಸಿನ ಬಗ್ಗೆ ಇನ್ನೂ ದಾರಿ ನೋಡಬೇಕಾಗುವದು ನಿಯಂತ್ರಣಗಳನ್ನು ತೆಗೆದು ಹಾಕಿದ ಮೇಲೆ ಅವು ಉಳಿಯಬಹುದೋ ಎಂಬುದನ್ನೂ ನೋಡಬೇಕಾಗುವದು.

ಗ್ರಾಹಕರ ಆಂದೋಲನವು ಈ ಪ್ರಾಂತದಲ್ಲಿಯಾದರೂ ಅಷ್ಟೊಂದು ಯಶಸ್ವಿಯಾಗಿಲ್ಲ ಇದಕ್ಕೆ ಮುಖ್ಯಕಾರಣಗಳೆಂದರೆ:—

೧. ಅನೇಕ ಜನರಿಗೆ ಕೊಳ್ಳುವ ಶಕ್ತಿ ಇಲ್ಲಾ (Purchasing Capacity)

೨. ರೋಖ ವ್ಯವಹಾರ ಮಾಡಬೇಕಾಗುತ್ತದೆ.

೩. ರೋಖು ವ್ಯವಹಾರ ಮಾಡುವ ಸಂಘಗಳಿನ್ನೂ ಸ್ಥಾಪಿಸಲ್ಪಟ್ಟಿಲ್ಲಾ.

೪. ಸಂಘಗಳಿಗೆ ಬೇಕಾಗುವ ಅವಶ್ಯಕತೆಗಳನ್ನು ತಯಾರಿಸುವ ಉತ್ಪಾದಕ ಸಂಘಗಳಿಲ್ಲಾ (Cooperative Factories)

೫. ಆಂದೋಲನದ ಪ್ರಚಾರವು ಜನತೆಯಲ್ಲಿ ಸಾಕಷ್ಟು ಆಗಿಲ್ಲ

೬. ಖಾಸಗಿ ವ್ಯಾಪಾರಸ್ಥರ ಸ್ಪರ್ಧೆಯು ಹೆಚ್ಚಾಗಿದೆ

೭ ಹಳ್ಳಿಯಲ್ಲಿ ವಾಸಿಸುವ ಜನತೆ ಹೆಚ್ಚಾಗಿದೆ ಅವರ ಬೇಡಿಕೆಗಳು ಸಾಕಷ್ಟು ಇರದ್ದರಿಂದ ಅಲ್ಲಿ ಗ್ರಾಹಕರ ಸಂಘವನ್ನು ಸ್ಥಾಪಿಸುವದು ಆರ್ಥಿಕ ದೃಷ್ಟಿಯಿಂದ ಸರಿಯಾಗುವದಿಲ್ಲ

೮ ವ್ಯವಹಾರದಲ್ಲಿ ನಿಪುಣರಿದ್ದ ಕಾರ್ಯದರ್ಶಿಗಳು ಸಿಗುವದು ದುರ್ಲಭವಿದೆ

೯. ಉತ್ಪಾದಕ ಮತ್ತು ಗ್ರಾಹಕರ ಸಂಘಗಳ ನಡುವೆ ಹೆಚ್ಚಿಗೆ ಸಂಬಂಧ ಬೆಳೆದಿಲ್ಲ

ಮೇಲ್ಕಾಣಿಸಿದ ದೋಷಗಳನ್ನು ಹೋಗಲಾಡಿಸಿದರೆ ಗ್ರಾಹಕರ ಸಂಘಗಳು ವಿಶೇಷವಾಗಿ ಪಟ್ಟಣಗಳಲ್ಲಿ ಯಶಸ್ವಿಯಾಗಲು ಶಕ್ಯವಿದೆ ಈ ಬಗ್ಗೆ ಅಧಿಕಾರಿಗಳೂ ಅಧಿಕಾರೇತರರೂ ಪ್ರಯತ್ನ ನಡೆಸಿರುತ್ತಾರೆ.

## ೧ (ಬ) ವಿತರಣಾ ಚಟುವಟಿಕೆಗಳು

ನಿಯಂತ್ರಿತ ಸರಕುಗಳ ವಿತರಣಾ ಕಾರ್ಯವನ್ನು ಪಟ್ಟಣ ಮತ್ತು ಹಳ್ಳಿಗಳಲ್ಲೆಲ್ಲ ಸಾಧ್ಯವಿದ್ದಷ್ಟುಗೆ ಸಹಕಾರಿ ಸಂಘಗಳಿಗೆ ಒಪ್ಪಿಸಬೇಕೆಂದು ಸರಕಾರವು ಧೋರಣೆ ತಾಳಿದ್ದರಿಂದ ಎಷ್ಟೋ ಸಹಕಾರಿ ಸಂಘಗಳು ಬಟ್ಟೆ, ಆಹಾರಧಾನ್ಯ, ನೂಲು, ಉಕ್ಕು ಮತ್ತು ಕಬ್ಬಿಣ ಮೊದಲಾದ ಸರಕುಗಳ ವಿತರಣೆಯನ್ನು ಕೈಕೊಂಡವು ಸಹಕಾರಿ ಸಂಘಗಳು ಕೈಕೊಂಡ ವಿತರಣಾ ಕಾರ್ಯದ ಅಂಕೆ–ಸಂಖ್ಯೆಗಳನ್ನು ಕೆಳಗೆ ಕೊಡಲಾಗಿದೆ

| ವರ್ಷ | ಖರೀದಿ | ವಿಕ್ರಿ |
|---|---|---|
| | ( ಇತರ ಸರಕುಗಳು ) | |
| ೧೯೪೬–೪೭ | ೩,೫೮,೪೦,೭೫೩ | ೩,೩೯,೨೧,೦೭೮ |
| ೧೯೪೭–೪೮ | ೩,೧೮,೭೧,೪೮೨ | ೪,೧೮,೬೧,೯೫೮ |
| ೧೯೪೮–೪೯ | ೮,೨೨,೨೭,೫೧೬ | ೭,೭೪,೭೮,೭೨೩ |
| ೧೯೪೯–೫೦ | ೧೩,೮೬,೭೬,೪೪೫ | ೧೩,೬೩,೬೧,೯೩೩ |
| | ಬಟ್ಟೆ | |
| ೧೯೪೮–೪೯ | ೧,೧೮,೩೬,೫೮೮ | ೧,೮೦,೧೧,೦೬೫ |
| ೧೯೪೯–೫೦ | ೧೨,೮೬,೭೯,೪೪೫ | ೧೩,೬೨,೬೧,೯೩೩ |

೧೯೫೦-೫೧ರಲ್ಲಿ ವಿವಿಧ ಸಹಕಾರಿ ಸಂಘಗಳು ನಿಯಂತ್ರಿತ ಸರಕುಗಳ ಮಾರಾಟಕ್ಕಾಗಿ ನಡೆಯಿಸಿದ ಅಂಗಡಿಗಳ ಸಂಖ್ಯೆಯನ್ನು ಕೆಳಗೆ ಕೊಡಲಾಗಿದೆ

| ಸಂಘಗಳ ಪ್ರಕಾರ | ಬಟ್ಟೆ | | ಇತರೆ ಸರಕುಗಳು | |
|---|---|---|---|---|
| | ರೋಕ – | ಕಿರುಕಳ. | ರೋಕ – | ಕಿರುಕಳ |
| ೧ ಮಧ್ಯವರ್ತಿ ಬ್ಯಾಂಕು | ೨ | ೧೦ | ೬ | ೩೮ |
| ೨. ಬಿನ್ ಶೇತಕಿ ಪತ್ತಿನ ಸಂಘಗಳು | ೧ | ೬೦ | ೧ | ೨೬೫ |
| ೩. ಶೇತ್ಕಿ ಪತ್ತಿನ ಸಂಘಗಳು (ವಿವಿಧೋದ್ದೇಶ ಸಂಘಗಳು ಸಹಿತ) | — | ೫೪೧ | ೮ | ೩೦೦೪ |
| ೪ ಖರೀದಿ ಮತ್ತು ವಿಕ್ರಿ ಯುನಿಯನ್ನುಗಳು | ೭ | ೧೬೧ | ೩೪ | ೫೨೩ |
| ೫ ಗ್ರಾಹಕರ ಸಂಘಗಳು | ೧ | ೩೪೨ | ೩ | ೧೦೮೯ |
| ೬ ಇತರ ಸಂಘಗಳು | ೧ | ೩೦ | ೨ | ೨೫೫ |
| | ೧೨ | ೧೦೪೪ | ೫೪ | ೫೧೭೪ |

## ಆಹಾರ ಧಾನ್ಯ ಮತ್ತು ಇತರ ನಿಯಂತ್ರಿತ ಸರಕುಗಳು

ಮುಂಬೈ ರಾಜ್ಯದಲ್ಲಿ ೩೦-೬-೧೯೫೧ಕ್ಕೆ ೨೬೮೪ ಅಧಿಕೃತ ಕಿರುಕಳ ವ್ಯಾಪಾರಸ್ಥರಲ್ಲಿ ೧೨೦೯ ಸಹಕಾರಿ ಸಂಘಗಳಿದ್ದವು. ೪೪೨೧ ಹಳ್ಳಿಗಳ ವಿತರಣಾ ಕೇಂದ್ರಗಳಲ್ಲಿ ೨೬೧೩ ಕೇಂದ್ರಗಳನ್ನು ಸಹಕಾರಿ ಸಂಘಗಳೇ ನಡೆಯಿಸುತ್ತಿದ್ದವು ಈ ಸಂಘಗಳು ಆಹಾರ ಧಾನ್ಯ ಮತ್ತಿತರ ಸರಕುಗಳ ರೋಕ ಮತ್ತು ಕಿರುಕಳ ವಿತರಣಾ ವ್ಯವಹಾರದಲ್ಲಿ ಅನುಕ್ರಮವಾಗಿ ೩೧.೩೪ ಲಕ್ಷ ರೂಪಾಯಿ ಮತ್ತು ೩.೨೧ ಕೋಟಿ ರೂಪಾಯಿಗಳನ್ನು ತೊಡಗಿಸಿದ್ದವು ರೋಕ ಮತ್ತು ಕಿರುಕಳ ಖರೀದಿಗಳು ಅನುಕ್ರಮವಾಗಿ ೨೦೩೩೧೨೯೭ ರೂಪಾಯಿ ಮತ್ತು ೩೭೧೪೮೦೯೬೪ ರೂಪಾಯಿಗಳಷ್ಟಾಗಿದ್ದವು. ರೋಖ ಮತ್ತು ಕಿರುಕಳ ಮಾರಾಟವು ಅನುಕ್ರಮವಾಗಿ ೧೮೮೯೦೮೪೭ ರೂಪಾಯಿ ಮತ್ತು ೩೮೯೧೨೯೨೬೭ ರೂಪಾಯಿಗಳಷ್ಟಿದ್ದಿತು

## ಬಟ್ಟೆಯ ಮಾರಾಟ

೧೯೫೧ ಜೂನ ೩೦ಕ್ಕೆ ಬಟ್ಟೆಯ ಮಾರಾಟಕ್ಕಾಗಿ ೯೯ ಸರಕಾರಿ ಅಂಗಡಿಗಳು, ೪೬೮ ಕೇಂದ್ರ ಅಂಗಡಿಗಳು (Strategic) ಮತ್ತು ೬೩೮ ಸಾಮಾನ್ಯ ಅಂಗಡಿಗಳು (Non Strategic) ಇದ್ದವು ಈ ಎಲ್ಲ ಅಂಗಡಿಗಳಲ್ಲಿ ಬಹುತರ ಕೇಂದ್ರ ಮತ್ತು ಸಾಮಾನ್ಯ ಅಂಗಡಿಗಳನ್ನೆಲ್ಲ ಸಹಕಾರಿ ಸಂಘಗಳೇ

ನಡೆಯಿಸುತ್ತಿದ್ದವು ಬಟ್ಟೆಯ ಕಿರುಕಳ ಮಾರಾಟಕ್ಕಾಗಿ ಸಹಕಾರಿ ಸಂಘಗಳು ಒಟ್ಟು ೬೮ ೩೮ ಲಕ್ಷ ರೂಪಾಯಿಗಳನ್ನು ತೊಡಗಿಸಿದ್ದವು ಕಿರುಕಳ ಮಾರಾಟ ಮಾಡುವ ಸಹಕಾರಿ ಸಂಘಗಳು ೪ ೬೯ ಕೋಟಿ ರೂಪಾಯಿಗಳ ಬಟ್ಟೆ ಕೊಂಡಿದ್ದವು ಮತ್ತು ೫ ೨೪ ಕೋಟಿ ರೂಪಾಯಿಗಳ ಬಟ್ಟೆಯನ್ನು ಗ್ರಾಹಕರಿಗೆ ಮಾರಾಟಮಾಡಿದವು ೧೯೪೨ರ ತರುವಾಯ ಸಹಕಾರಿ ಸಂಘಗಳು ನಿಯಂತ್ರಿತ ಮತ್ತು ಸೀದಾ ಪದಾರ್ಥಗಳನ್ನು ಹಂಚುವ ಕಾರ್ಯವನ್ನು ಕೈಕೊಂಡು ಕಳ್ಳ ಪೇಟೆ, ಲಾಭಬಡಕತನ ಮೊದಲಾದವುಗಳನ್ನು ತಡೆಹಿಡಿಯಲು ಎಷ್ಟೋ ಸಹಾಯ ಕಾರಿಯಾದವು ಈ ವ್ಯವಹಾರದಲ್ಲಿ ಸಹಕಾರಿ ಸಂಘಗಳು ಎಷ್ಟೋ ಲಾಭವನ್ನು ಪಡೆದವು ಕೆಲವು ಸಂಘಗಳಂತೂ ಬಹಳ ಲಾಭವನ್ನು ಪಡೆದು ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಭದ್ರಪಡಿಸಿಕೊಂಡವು. ಸಹಕಾರಿ ಸಂಘಗಳಬಗ್ಗೆ ಜನತೆಯ ಹೃದಯದಲ್ಲಿ ಉದಾತ್ತಭಾವನೆ ಹುಟ್ಟಿ ಸಂಘಗಳು ತಮ್ಮ ಅಸ್ತಿತ್ವದ ಲಾಭಗಳನ್ನು ಸಾರ್ವಜನಿಕರ ಗಮನಕ್ಕೆ ತಂದು ಕೊಟ್ಟಿವೆ ಇಂದು ಎದುರಿಸಬೇಕಾಗಿರುವ ಎಷ್ಟೋ ಸಮಸ್ಯೆಗಳನ್ನು ಸಹಕಾರಿ ಪದ್ಧತಿಯಿಂದ ನಿವಾರಿಸಿಕೊಳ್ಳಬಹುದೆಂದು ಜನತೆಯು ಭಾವಿಸತೊಡಗಿದೆ

ಇದಲ್ಲದೆ ಸಹಕಾರಿ ಸಂಘಗಳು ವಿಶೇಷತಃ ಔದ್ಯೋಗಿಕ ಸಂಘಗಳು ನೂಲಿನ ವಿತರಣಾ ಕಾರ್ಯದಲ್ಲಿ ರೋಕ ಮತ್ತು ಚಿಲ್ಲರ ವ್ಯವಹಾರವನ್ನು ಕೈಕೊಂಡಿದ್ದವು ಮುಂಬಯಿ ಪ್ರಾಂತೀಯ ಔದ್ಯೋಗಿಕ ಸಹಕಾರಿ ಸಂಘವು ಪ್ರಾದೇಶಿಕ ಹಂಚುವಿಕೆದಾರವೆಂದು "Zonal Distributor" ನೂಲಿನ ವಿತರಣಾ ಕಾರ್ಯವನ್ನು ಕೈಕೊಂಡು ೧.೧/೨ ಕೋಟಿ ರೂಪಾಯಿಗಳಿಗೂ ಮಿಕ್ಕಿದ ನೂಲನ್ನು ೧೯೫೦-೫೧ರಲ್ಲಿ ಹಂಚಿರುತ್ತದೆ ೧೮ ಸಹಕಾರಿ ಸಂಸ್ಥೆಗಳು ಜಿಲ್ಲೆಯ ರೋಕ ಮಾರಾಟ ವ್ಯವಹಾರವನ್ನು ಕೈಕೊಂಡು ೧ ಕೋಟಿ ೪೦ ಲಕ್ಷರೂಗಳಿಗೂ ಮಿಕ್ಕಿದ ನೂಲಿನ ಮಾರಾಟ ಮಾಡಿರುತ್ತವೆ ಈ ೧೮ ರೋಕ ವಿತರಣಾ ವ್ಯವಹಾರ ಮಾಡುವ ಸಹಕಾರಿ ಸಂಸ್ಥೆಗಳಲ್ಲಿ, ಪ್ರಾಂತೀಯ ಔದ್ಯೋಗಿಕ ಸಹಕಾರಿ ಸಂಘ, ಹತ್ತು ಜಿಲ್ಲಾ ಔದ್ಯೋಗಿಕ ಸಂಸ್ಥೆಗಳು ಮತ್ತು ಇನ್ನುಳಿದ ಇಂಥ ಏಳು ಸಂಸ್ಥೆಗಳು, ಅಂದರೆ— ಖರೀದಿ – ವಿಕ್ರಿ ಸಂಘ, ಬ್ಯಾಂಕಿಂಗ ಯೂನಿಯನ್, ನೇಕಾರ ಸಂಘ ಮೊದಲಾದವುಗಳು ಇದ್ದವು ಕಿರುಕಳ ನೂಲಿನ ವಿತರಣಾ ಕಾರ್ಯ ಕೈಕೊಂಡ ನೇಕಾರ ಸಂಘಗಳ ಸಂಖ್ಯೆಯು ೩೩೨ ಇದ್ದು ೨ ೧/೨ ಕೋಟಿ ರೂಪಾಯಿಗಳ ಬೆಲೆಯ ನೂಲಿನ ವ್ಯವಹಾರವನ್ನು ಆ ವರ್ಷದಲ್ಲಿ ಮಾಡಿರುತ್ತವೆ

## ೨. ಸಹಕಾರಿ ಮನೆ ಕಟ್ಟುವ ಸಂಘಗಳು

ಮನೆ ಕಟ್ಟುವ ಸಹಕಾರಿ ಆಂದೋಲನವು ೧೯೧೫ರಲ್ಲಿ ಮುಂಬಯಿಯಲ್ಲಿ ಸಾರಸ್ವತ ಸಹಕಾರಿ ಮನೆಕಟ್ಟುವ ಸಂಘ ಸ್ಥಾಪನೆಯಾದಂದಿನಿಂದ ಪ್ರಾರಂಭವಾಗಿದೆ. ಪ್ರಾರಂಭಕ್ಕೆ ಈ ಆಂದೋಲನವು ಸಾವಧಾನವಾಗಿಯಾದರೂ ಒಂದೇ ರೀತಿಯಲ್ಲಿ ಪ್ರಗತಿಹೊಂದುತ್ತಲಿತ್ತು ೧೯೨೪ ರಲ್ಲಿ ಮನೆಕಟ್ಟುವ ಸಂಘಗಳಿಗೆ

ಸರಕಾರವು ಧನಸಹಾಯ ಮಾಡಬಹುದೆಂದು ಪ್ರಸಿದ್ಧಪಡಿಸಿದಮೇಲೆ ಈ ಆಂದೋಲನಕ್ಕೆ ಹೆಚ್ಚಾಗಿ ಪ್ರಚೋದನೆ ದೊರೆಯಿತು ಆದರೆ ೧೯೩೦ರ ಆರ್ಥಿಕ ಮುಗ್ಗಟ್ಟು ಈ ಆಂದೋಲನವನ್ನು ಮತ್ತೆ ಹಿಮ್ಮೆಟ್ಟಿಸಿತು ಅಸ್ತಿತ್ವದಲ್ಲಿದ್ದ ಸಂಘಗಳೆಲ್ಲವೂ ಅನೇಕಾನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು ಎರಡನೆಯ ಜಾಗತಿಕ ಯುದ್ಧದ ಮತ್ತು ಆ ತರುವಾಯದ ಕಾಲದಲ್ಲಿ ವಸತಿ ಸೌಕರ್ಯದ ಅಭಾವವು ವಿಶೇಷತಃ ಮುಂಬೈ, ಪುಣೆ, ಅಹಮ್ಮದಾಬಾದ, ಸೊಲ್ಲಾಪೂರ ಮತ್ತು ಹುಬ್ಬಳ್ಳಿಗಳಂತಹ ಔದ್ಯೋಗಿಕ ಕೇಂದ್ರಗಳಲ್ಲಿ ಹೆಚ್ಚಾಯಿತು ಪಾಕಿಸ್ತಾನದಿಂದ ನಿರಾಶ್ರಿತರ ತಂಡಗಳು ಬರತೊಡಗಿದ ಮೇಲಂತೂ ವಸತಿ ಸೌಕರ್ಯದ ಅಭಾವವು ಮತ್ತಿಷ್ಟು ಹೆಚ್ಚಿತು ಈ ಸಮಸ್ಯೆಯನ್ನು ನಿವಾರಿಸುವದಕ್ಕಾಗಿ ಸರಕಾರವು ಪ್ರಾಂತಿಕ ಸಹಕಾರಿ ಬೋರ್ಡ ಮತ್ತು ಪ್ರಾಂತಿಕ ಮನೆಕಟ್ಟುವ ಸಮಿತಿಗಳನ್ನು ನೇಮಿಸಿತು. ೧೯೪೮ರಲ್ಲಿ ಸರಕಾರವು ಮನೆ ಕಟ್ಟುವ ಯೋಜನೆಯನ್ನೇ ಸಿದ್ಧಪಡಿಸಿತು ಸರಕಾರದ ಮನೆಕಟ್ಟುವ ಯೋಜನೆಯನ್ವಯ ಮುಂಬೈ ಸುತ್ತುಮುತ್ತಲಿನ ಪ್ರದೇಶಗಳಲ್ಲಿ ಮತ್ತು ಅಹಮ್ಮದಾಬಾದ, ಪುಣೆ, ಸೊಲ್ಲಾಪೂರ, ಹುಬ್ಬಳ್ಳಿಗಳಲ್ಲಿ ನೋಂದಾಯಿಸಲ್ಪಟ್ಟ ಸಹಕಾರಿ ಸಂಘಗಳಿಗೆ ಮಾದರಿಯ ಮನೆಗಳನ್ನು ಕಟ್ಟಲು ಸಾಲಗಳನ್ನು ಕೊಡಲೊಪ್ಪಿತು ಹಿಂದುಳಿದ ವರ್ಗದ ಮನೆಕಟ್ಟುವ ಸಂಘಗಳಿಗೆ ಸಹಿತ ಧನ ಸಹಾಯ ದೊರೆಯುವಂತೆ ಸರಕಾರವು ಮತ್ತೊಂದು ಯೋಜನೆಗೆ ಮನ್ನಣೆ ಕೊಟ್ಟಿತು ಮಹಾಪೂರ ಮತ್ತು ನೆರೆಹಾವಳಿಗೆ ಪೀಡಿತರಾದ ಅಹಮ್ಮದನಗರ ಜಿಲ್ಲೆಯ ರಾಹುರಿ ನಿವಾಸಿಗಳಿಗೆ ಮನೆಕಟ್ಟುವದಕ್ಕಾಗಿ ವಿಶೇಷ ಯೋಜನೆಯೊಂದನ್ನು ತಯಾರಿಸಿ ಮಂಜೂರ ಮಾಡಿತು ನಿರಾಶ್ರಿತ ಜನರಿಗೆ ಮನೆಕಟ್ಟುವ ಯೋಜನೆಯನ್ನೂ ತಯಾರಿಸಿ ಸರಕಾರವು ಮಂಜೂರ ಮಾಡಿತು ಸಹಕಾರಿ ಮನೆ ಕಟ್ಟುವ ಸಂಘಗಳಿಗೆ ಮುಂಬೈ ಪ್ರಾಂತದ ಸಹಕಾರಿ ಮಧ್ಯವರ್ತಿ ಬ್ಯಾಂಕು ದೀರ್ಘಾವಧಿ ಸಾಲಗಳನ್ನು ಕೊಡುವದಕ್ಕಾಗಿ ಸರಕಾರವು ಸಮ್ಮತಿಸಿತು ಸರಕಾರದ ಸಹಾಯದಿಂದ ಈ ಅವಧಿಯಲ್ಲಿ ಹೆಚ್ಚು ಮನೆಕಟ್ಟುವ ಸಂಘಗಳು ನೋಂದಾಯಿಸಲ್ಪಟ್ಟವು ಈ ಅಂಕೆ ಸಂಖ್ಯೆಗಳನ್ನು ಕೆಳಗ ಕೊಡಲಾಗಿದೆ

| | ೧೯೪೫-೪೬ | ೧೯೫೦-೫೧ |
|---|---|---|
| ೧. ಸಂಘಗಳ ಸಂಖ್ಯೆ | ೧೩೬ | ೮೫೭ |
| ೨ ಸದಸ್ಯರ ಸಂಖ್ಯೆ | ೮೫೯೭ | ೪೩೭೨೧ |
| ೩ ಶೇರ ಭಾಂಡವಲು | ೩೧೮೦೬೪೧ | ೧೭೦೦೭೩೦೮ |
| ೪ ಸರಕಾರದ ಸಾಲ | ೫೭೬೦೯೪ | ೮೮೧೦೨೮೨ |
| ೫ ಪಡೆದ ಇತರ ಸಾಲಗಳು | ಅಂಕೆ ದೊರೆತಿಲ್ಲ | ೪೪೧೩೦೨೮೭ |
| ೬ ರಿಝರ್ವ ಮತ್ತಿತರ ಫಂಡು | ೨೦೦೪೭೬೩ | ೩೪೯೭೬೨೪ |
| ೭ ದುಡಿಯುವ ಭಾಂಡವಲು | ೧೨೮೨೪೬೦೦ | ೭೩೪೪೫೫೦೧ |
| ೮. ಕಟ್ಟಿದ ಮನೆಗಳ ಸಂಖ್ಯೆ | ಅಂಕೆ ದೊರೆತಿಲ್ಲ | ೬೦೦೦ |
| ೯. ಕಟ್ಟಲ್ಪಡುತ್ತಿರುವ ಮನೆಗಳ ಸಂಖ್ಯೆ | ” | ೨೩೧೧ |

ಸಂಘಗಳ ಸಂಖ್ಯೆಯ ದೃಷ್ಟಿಯಿಂದ ಈ ಆಂದೋಲನವು ಭರದಿಂದ ಪ್ರಗತಿ ಹೊಂದಿದೆ ಸಂಘಗಳ ಶೇರ ಭಾಂಡವಲು ೧೭೦೦೭೩೦೮ ರೂಪಾಯಿಗಳಷ್ಟಿದ್ದಿತು ಒಟ್ಟು ೭೩೪೪೫೫೦೧ ರೂಪಾಯಿಗಳ ದುಡಿಯುವ ಭಾಂಡವಲದಲ್ಲಿ ೮೮೦೨೮೨ ರೂಪಾಯಿ ಸರಕಾರದ ಸಾಲವಾಗಿದ್ದಿತು ಹಣಕಾಸಿನ ಕೊರತೆಯಿಂದಾಗಿ ಮನೆ ಕಟ್ಟುವ ಕಾರ್ಯದ ಪ್ರಗತಿಯು ಸಾವಧಾನವಾಗಿದ್ದಿತು ಇತ್ತಿತ್ತಲಾಗಿ ನೋಂದಾಯಿಸಲ್ಪಟ್ಟಿರುವ ಬಾಂಬೆ ಕೋ-ಆಪರೇಟಿವ್ಹ ಹೌಸಿಂಗ ಫೈನಾನ್ಸ ಸೋಸಾಯಿಟಿಯು ಈ ಸಮಸ್ಯೆಯನ್ನು ಬಿಡಿಸಬಹುದೆಂದು ಆಶಿಸಲಾಗಿದೆ ಹಿಂದುಳಿದ ವರ್ಗದ ಕುಟುಂಬಗಳು ಸಹಕಾರಿ ತತ್ವದ ಮೇರೆಗೆ ಮನೆಗಳನ್ನು ಕಟ್ಟಿಕೊಳ್ಳುವದಕ್ಕೆ ಸಹಾಯಮಾಡಬೇಕೆಂಬ ಉದ್ದೇಶದಿಂದ ೧೯೪೮ರಲ್ಲಿ ಸರಕಾರವು ಹಿಂದುಳಿದ ವರ್ಗಗಳ ಮನೆಕಟ್ಟುವ ಯೋಜನೆಗೆ ಮನ್ನಣೆ ಕೊಟ್ಟಿತು ಸರಕಾರದ ಜಮೀನ ಇದ್ದ ಜಾಗೆಗಳಲ್ಲಿ ಭೂಮಿಯನ್ನು ಪುಕ್ಕಟೆಯಾಗಿ ಕೊಡಲಾಯಿತು ಸರಕಾರದ ಜಮೀನ ಇಲ್ಲದ ಜಾಗೆಗಳಲ್ಲಿ ವೈಯಕ್ತಿಕ ಜಮೀನುಗಳನ್ನು ವಶಕ್ಕೆ ತಗೆದುಕೊಂಡು ಅದರ ವೆಚ್ಚವನ್ನು ಸರಕಾರವೇ ವಹಿಸಿಕೊಂಡಿತು ಸಾಮಾನ್ಯ ಮತ್ತು ಹಿಂದುಳಿದ ವರ್ಗಗಳ ಪ್ರದೇಶಗಳಲ್ಲಿ ಅನುಕ್ರಮವಾಗಿ ೨೦೦೦ ರೂಪಾಯಿ ಮತ್ತು ೧೫೦೦ ರೂಪಾಯಿಗಳ ಸಾಲವನ್ನು ಸರಕಾರವು ಕೊಡುತ್ತದೆ ಈ ಸಾಲಕ್ಕೆ ಬಡ್ಡಿಯ ಆಕರಣೆ ಮಾಡುವದಿಲ್ಲ ೨೦ ವಾರ್ಷಿಕ ಕಂತುಗಳಿಂದ ಈ ಸಾಲವನ್ನು ತಿರುಗಿ ಕೊಡಬೇಕಾಗುತ್ತದೆ ಆಡಳಿತೆಯ ವೆಚ್ಚಕ್ಕೆಂದು ಈ ಸಂಘಗಳಿಗೆ ಮೊದಲಿನ ೨ ವರ್ಷಗಳಲ್ಲಿ ಪ್ರತಿಯೊಂದು ಮನೆಗೆ ೧೦೦ಕ್ಕೆ ೧೦ ರಂತೆಯೂ ಮತ್ತು ಆ ತರುವಾಯ ಸಾಲವು ತೀರುವವರೆಗೆ ಪ್ರತಿಯೊಂದು ಮನೆಗೆ ೧೦೦ಕ್ಕೆ ೫ ರಂತೆ ಸಹಾಯ ಧನವನ್ನು ಕೊಡಲಾಗುತ್ತದೆ ೧೯೫೧ ಜೂನ ೩೦ಕ್ಕೆ ೧೮೫ ಸಂಘಗಳಿದ್ದವು ಹಿಂದುಳಿದ ವರ್ಗದ ಜನರಿಗಾಗಿ ಮನೆಕಟ್ಟುವ ಸಂಘಗಳನ್ನು ನೋಂದಾಯಿಸಲು ಹೆಚ್ಚಿನ ಬೇಡಿಕೆ ಇದೆ ಇಂಥ ಸಂಘಗಳಿಗೆ ಸರಕಾರವು ಸಾಲವನ್ನು ಕೊಡುತ್ತಲಿದೆ ಸಮಯಕ್ಕೆ ಸರಿಯಾಗಿ ಭೂಮಿಯನ್ನು ವಶಕ್ಕೆ ತೆಗೆದುಕೊಳ್ಳುವದೇ ಈ ಸಂಘಗಳ ಪ್ರಗತಿಪಥದಲ್ಲಿರುವ ಮುಖ್ಯ ಸಮಸ್ಯೆಯಾಗಿದೆ

## ೩ ವಿಮಾ ಸಂಘಗಳು

ಮುಂಬೈ ಸಹಕಾರಿ ವಿಮಾಸಂಘ ಮತ್ತು ಬಿ ಬಿ ಸಿ ಆಯ್ ರೇಲ್ವೆ ನೌಕರರ ಜೀವ ವಿಮಾ ಸಂಘಗಳು ೧೯೩೦ರಲ್ಲಿ ನೋಂದಾಯಿಸಲ್ಪಟ್ಟವೆ ರತ್ನಾಗಿರಿ ಸಹಕಾರಿ ಮೋಟಾರ ವಿಮಾ ಸಂಘವು ೧೯೩೨ರಲ್ಲಿ ನೋಂದಾಯಿಸಲ್ಪಟ್ಟಿದ ಮುಂಬೈ ಅಂಚೆ ನೌಕರರ ವಿಮಾಸಂಘ, ಮೆಸರ್ಸ ಮೆಕಿನ್ನನ ಮತ್ತು ಮೆಕೆಂಜಿ ನೌಕರರ ಸಹಕಾರಿ ಕುಟುಂಬ ಲಾಭಸಂಘ ಮತ್ತು ಮಹಾಗುಜರಾತ ಸಹಕಾರಿ ವಿಮಾ ಸಂಘ ( ಬಡೋದೆ ) ಇವು ಅನುಕ್ರಮವಾಗಿ ೧೯೩೫, ೧೯೩೭ ಮತ್ತು ೧೯೪೮ರಲ್ಲಿ ನೋಂದಾಯಿಸಲ್ಪಟ್ಟವು ಅಖಿಲ ಭಾರತ ಸಹಕಾರಿ ಬೆಂಕಿ ಮತ್ತು ಸಾಮಾನ್ಯ ವಿಮಾ ಸಂಘವು ೧೯೫೦ರಲ್ಲಿ ನೋಂದಾಯಿಸಲ್ಪಟ್ಟಿತು ಹೀಗೆ ಈ ರಾಜ್ಯದಲ್ಲಿ ಸದ್ಯಕ್ಕೆ ೭ ವಿಮಾ ಸಂಘಗಳಿರುತ್ತವೆ. ಇವುಗಳಲ್ಲಿ ೨ ಜೀವ ವಿಮಾ ಸಂಘಗಳು, ೩ ಪ್ರೊವಿ

ಡೆಂಟ್ ವಿಮಾ ಸಂಘಗಳು, ೧ ಮೋಟಾರ ವಿಮಾ ಸಂಘವು ಮತ್ತು ೧ ಬೆಂಕಿ ಮತ್ತು ಸಾಮಾನ್ಯ ವಿಮಾ ಸಂಘಗಳು ಇರುತ್ತವೆ ಒಟ್ಟು ೩೫೧೩೮ ಸದಸ್ಯರಿದ್ದರು ೧೯೫೦-೫೧ರಲ್ಲಿ ೪೮೨ ೭೦ ಲಕ್ಷ ರೂ.ಗಳ ವ್ಯವಹಾರವಿದ್ದು, ೨೩ ೫೬ ಲಕ್ಷ ರೂ ಉತ್ಪನ್ನವಿದ್ದಿತು ಮುಂಬೈ ಸಹಕಾರಿ ವಿಮಾ ಸಂಘದಲ್ಲಿ ಚಾಲತಿಯಲ್ಲಿದ್ದ ಪಾಲಿಸಿಗಳ ಸಂಖ್ಯೆಯು ೩೩೯೪೯ ಇದ್ದಿತು ೨೫೮೪೭ ಸದಸ್ಯರಿದ್ದರು ೯೧೩೨೬೭೦ ರೂಪಾಯಿಗಳ ಚಾಲತಿ ವ್ಯವಹಾರವಿದ್ದಿತು ೩೧-೧೨-೧೯೫೫ಕ್ಕೆ ೯೧೫೩೫೮೧ ರೂಪಾಯಿಗಳ ಜೀವ ವಿಮಾ ಫಂಡು ಇದ್ದಿತು. ಅಖಿಲ ಭಾರತ ಸಹಕಾರಿ ಬೆಂಕಿ ಮತ್ತು ಸಾಮಾನ್ಯ ವಿಮಾ ಸಂಘವು ಇನ್ನೂ ಪ್ರಾರಂಭದ ಸ್ಥಿತಿಯಲ್ಲಿದ್ದು ಪ್ರಗತಿ ಹೊಂದುತ್ತಲಿದೆ

## ೩. ಗೃಹೋದ್ಯೋಗಗಳೂ ಸಹಕಾರವೂ

**ಪೂರ್ವೇತಿಹಾಸ —**

ಯಾಂತ್ರಿಕ ಯುಗವೂ ಬ್ರಿಟಿಶರ ಆಳಿಕೆಯೂ ನಮ್ಮ ಭಾರತದಲ್ಲಿ ಮೈದೋರುವ ಮೊದಲು, ಈ ದೇಶದ ಅರ್ಥರಚನೆಯಲ್ಲಿ ಗೃಹೋದ್ಯೋಗಗಳಿಗೆ ಒಂದು ಹೆಮ್ಮೆಯ ಸ್ಥಾನವಿದ್ದಿತಲ್ಲದೆ, ದೂರದ ವಿದೇಶಗಳಿಂದ ಇವು ಹೆಸರನ್ನೂ ಯಶವನ್ನೂ ನಮ್ಮ ಭಾರತಕ್ಕೆ ಸಂಪಾದಿಸಿ ಕೊಟ್ಟಿದ್ದವು ನಮ್ಮ ದೇಶದ ಪೂರ್ವೇತಿಹಾಸದ ಆರಂಭದಿಂದಲೇ ಇವು ಬೆಳೆಯುತ್ತ ಬಂದವಲ್ಲದೆ, ಇವುಗಳ ಇತಿಹಾಸವು ಅಂದರೆ ಗತಕಾಲವು ದೀರ್ಘವೂ ವೈಭವಪೂರ್ಣವೂ ಆಗಿದೆ ಈಸ್ಟ ಇಂಡಿಯಾ ಕಂಪನಿಯು ನಮ್ಮ ದೇಶದಲ್ಲಿ ಬೇರೂರಿದಂದಿನಿಂದ ಸ್ವಾತಂತ್ರ್ಯ ಸಂಪಾದನೆಯವರೆಗೆ ಅಸಂಖ್ಯ ಜನರನ್ನು ನಿರುದ್ಯೋಗಿಗಳನ್ನಾಗಿಸಿ, ಅವರ ಪಾಡಿಕೆಯ ಜೀವನೋಪಾಯಗಳಿಂದಲೂ ಅವರನ್ನು ಎರವಾಗಿಸಿ, ಭೂಭಾರವನ್ನು ಹೆಚ್ಚಿಸಿ, ಈ ಉದ್ಯೋಗಗಳು ಮೆಲುಮೆಲಕೆ ಅಧೋಗತಿಗಿಳಿದು ನಷ್ಟವಾಗ ತೊಡಗಿದವು

ಕಾಂಗ್ರೇಸ ಮಂತ್ರಿಮಂಡಲವು ೧೯೪೬ರಲ್ಲಿ ಪುನರಧಿಕಾರಾರೂಢವಾದ ಮೇಲೆ ದೇಶದ ಆರ್ಥಿಕ ಸಮತೋಲನವನ್ನು ಕಾಯುವ ದೃಷ್ಟಿಯಿಂದ, ಹಳ್ಳಿಗರನ್ನು ಅವರ ಅವಶ್ಯಕತೆಗಳ ವಿಷಯದಲ್ಲಿ ಶಕ್ಯವಿದ್ದಷ್ಟು ಸ್ವಾವಲಂಬಿಗಳನ್ನಾಗಿಸಿ, ನಿರುದ್ಯೋಗಿಗಳಿಗೂ ನಿಕೃಷ್ಟೋದ್ಯೋಗಿಗಳಿಗೂ ಉದ್ಯೋಗಗಳನ್ನು ಕಲ್ಪಿಸಿ ಕೊಟ್ಟು, ಜನತೆಯು, ವಿಶೇಷವಾಗಿ ಹಳ್ಳಿಗಳಲ್ಲಿಯ ಜನತೆಯ ಜೀವನದ ಮಟ್ಟವನ್ನು ಈ ರೀತಿ ಎತ್ತರಿಸುವ ದೃಷ್ಟಿಯಿಂದ, ಗೃಹೋದ್ಯೋಗಗಳ ಮತ್ತು ಗ್ರಾಮೋದ್ಯೋಗಗಳ ಪುನರುಜ್ಜೀವನಕ್ಕಾಗಿ, ಪ್ರಗತಿಗಾಗಿ, ವಿಕಾಸಕ್ಕಾಗಿ ಹೆಚ್ಚು ಆಸಕ್ತಿ ವಹಿಸಿ, ಪ್ರೋತ್ಸಾಹನವಿತ್ತು, ಆಶ್ರಯ ಧೋರಣೆಯನ್ನು ತಳೆಯಿತು

ಸ್ವಾತಂತ್ರ್ಯಸಂಪಾದನೆಯ ನಂತರ ಗೃಹೋದ್ಯೋಗ, ಗ್ರಾಮೋದ್ಯೋಗಗಳ ಪುನರುಜ್ಜೀವನ ಪ್ರಗತಿಗಳಿಗೆ ಹೆಚ್ಚು ವೈಶಿಷ್ಟ್ಯವೂ ಮಹತ್ವವೂ ಬಂದಿತು

ಭಾರತ ಸರಕಾರವು ಅದರಂತೆಯೇ ಮುಂಬಯಿ ರಾಜ್ಯಸರಕಾರವೂ ತಮ್ಮ ಔದ್ಯೋಗಿಕ ಧೋರಣೆಯನ್ನು ಪ್ರಕಟಗೊಳಿಸಿದವು ೧೯೫೬ರಲ್ಲಿ ಭಾರತ ಸರಕಾರವು ತನ್ನ ಧೋರಣೆಯನ್ನು ವ್ಯಕ್ತಗೊಳಿಸಿತು ರಾಜ್ಯಸರಕಾರವೂ ತನ್ನ ಧೋರಣೆಯನ್ನು ಪ್ರಕಟಗೊಳಿಸಿತು ಭಾರತ ಸರಕಾರದ ಗೊತ್ತುವಳಿಯ ಮಹತ್ವದ ಮುಖ್ಯಾಂಶಗಳು ಕೆಳಗಿನಂತಿವೆ

"ರಾಷ್ಟ್ರದ ಅರ್ಥರಚನೆಯಲ್ಲಿ ಗೃಹೋದ್ಯೋಗಗಳೂ ಸಣ್ಣ ಪ್ರಮಾಣದ ಉದ್ಯೋಗಗಳೂ ಒಂದು ಮಹತ್ವದ ಪಾತ್ರವನ್ನು ವಹಿಸಿವೆ ಯಾಕೆಂದರೆ ಅವು ವೈಯಕ್ತಿಕ ಗ್ರಾಮಗಳ ಅಥವಾ ಸಹಕಾರದ ಸಾಹಸ ಕಾರ್ಯಗಳಿಗೆ ಅವಕಾಶ ನೀಯುವವಲ್ಲದೆ, ನಿರಾಶ್ರಿತರಿಗೆ ಪುನರ್ನಿವೇಶನದ ಸಾಧನೆಯನ್ನು ಒದಗಿಸಿ ಕೊಡುತ್ತವೆ ಸ್ಥಾನಿಕ ಸಂಪತ್ತಿನ ಶ್ರೇಷ್ಠೋಪಯೋಗಕ್ಕೂ, ಆಹಾರ, ಅರಿವೆ ಮತ್ತು ಒಕ್ಕಲುತನದ ಉಪಕರಣಗಳಂತಹ ಕೆಲವೊಂದು ಗ್ರಾಹಕರ ಅವಶ್ಯಕ ವಸ್ತುಗಳ ವಿಷಯದಲ್ಲಿ ಸ್ವಾವಲಂಬನೆಯ ಗುರಿಯನ್ನು ತಲುಪಲಿಕ್ಕೂ ಈ ಉದ್ಯೋಗಗಳು ವಿಶೇಷವಾಗಿ ಅರ್ಹವಾಗಿವೆ!"

೧೯೪೮ ಮೇ ತಿಂಗಳಲ್ಲಿ ಮುಂಬಯಿ ರಾಜ್ಯಸರಕಾರದವರು ಜಾಹೀರುಪಡಿಸಿದ ಔದ್ಯೋಗಿಕ ಧೋರಣೆಯು ಒಡೆದು ಕಾಣುವ ವೈಶಿಷ್ಟ್ಯಗಳೆಂದರೆ ಇವು

(೧) ಸಂಪದಭಿವೃದ್ಧಿಯಾಗಿ ಸರ್ವರೂ ಪೂರ್ಣೋದ್ಯೋಗಿಗಳಾಗಿ ತಮ್ಮ ಜೀವನದ ಯೋಗ್ಯತಟ್ಟಕ್ಕೇರುವಂತೆ ಔದ್ಯೋಗಿಕ ಸರ್ವಾಂಗೀಣ ಮತ್ತು ಶೀಘ್ರ ವಿಕಾಸ

(೨) ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಬೆಳೆಯುತ್ತಿರುವ ಜನದಟ್ಟಣೆ (ಸಂದಣಿ) ಯು ಕಡಿಮೆಯಾಗುವಂತೆ ಮತ್ತು ಉದ್ಯೋಗಗಳ ಪ್ರಾದೇಶಿಕ ಹಂಚುವಿಕೆಯಲ್ಲಿ ಸಮತೋಲನ ಸ್ಥಿತಿಯು ಉಂಟಾಗುವಂತೆ, ಔದ್ಯೋಗಿಕ ವಿಕೇಂದ್ರೀಕರಣ ಅಥವಾ ಹಂಚುವಿಕೆ!

(೩) ಹಳ್ಳಿಯ ಜನತೆಗೆ ಉಪೋದ್ಯೋಗಗಳನ್ನು ಕಲ್ಪಿಸಿಕೊಡುವ ದೃಷ್ಟಿಯಿಂದ ಮತ್ತು ಆರ್ಥಿಕ ಮತ್ತು ರಾಜಕೀಯ ಶಕ್ತಿಯನ್ನು ವಿಕೇಂದ್ರೀಕರಣಗೊಳಿಸುವ ದೃಷ್ಟಿಯಿಂದ ಸಾಧ್ಯವಿದ್ದ, ಲಭ್ಯವಾಗಬಹುದಾದ ಮಾನವ ಶಕ್ತಿಯ ಸದುಪಯೋಗವನ್ನು ಸಂಪೂರ್ಣವಾಗಿ ಮಾಡಿಕೊಳ್ಳಲಿಕ್ಕೆ ಗೃಹೋದ್ಯೋಗಗಳಿಗೂ ಸಣ್ಣಪ್ರಮಾಣದ ಉದ್ಯೋಗಗಳಿಗೂ ಪ್ರೋತ್ಸಾಹನವೀಯುವದು

(೪) ಶ್ರೇಷ್ಠ ಸಾಮರ್ಥ್ಯಪೂರ್ಣ ಉತ್ಪಾದನೆಗಾಗಿ, ಸರಿಸಮಾನ ಹಂಚುವಿಕೆಗಾಗಿ, ದುಡಿಮೆಗಾರರ ಮತ್ತು ಬಳಕೆಗಾರರ ಹಕ್ಕು ಬಾಧ್ಯತೆಗಳ ರಕ್ಷಣೆಗಾಗಿ ಔದ್ಯೋಗಿಕ ನಿಯಂತ್ರಣ ಮತ್ತು ಶಾಸನಕ್ರಮ!

**ದೇಶದ ಸದ್ಯದ ಅರ್ಥರಚನೆಯಲ್ಲಿ ಗೃಹೋದ್ಯೋಗಗಳ ಸ್ಥಾನ!**

ಇಂದಿನ ಯಾಂತ್ರಿಕ ಯುಗದಲ್ಲಿ ಗೃಹೋದ್ಯೋಗಗಳಿಗೇನಾದರೂ ಭವಿಷ್ಯವಿದೆಯೇ, ಮತ್ತವಕ್ಕೆ ನಮ್ಮ ದೇಶದಲ್ಲಿ ಪ್ರೋತ್ಸಾಹನವೀಯಬೇಕೇ? ಎಂಬ ಸಮಸ್ಯೆಗೆ, ಮೇಲ್ಕಂಡ ಭಾರತದ ಮತ್ತು ರಾಜ್ಯಸರಕಾರಗಳು ಪ್ರಕಟಪಡಿಸಿದ ಧೋರಣೆಯು ಪರಿಹಾರವಾಗಿದೆ. ರಾಷ್ಟ್ರೀಯ ಅರ್ಥರಚನೆಯಲ್ಲಿ ಗೃಹೋದ್ಯೋಗಗಳಿಗೆ ಒಂದು ಮಹತ್ವದ ಸ್ಥಾನವಿದೆಯೆಂಬುದು ಕಂಡುಕೊಂಡ ಮಾತಾಗಿದೆ. ಈ ದೇಶದ ಅರ್ಥರಚನೆಯಲ್ಲಿ ಗೃಹೋದ್ಯೋಗಗಳೂ ಗ್ರಾಮೋದ್ಯೋಗಗಳೂ ಪಡೆದಿರುವ ಪ್ರಧಾನವಾದ ಪ್ರಾಮುಖ್ಯವಾದ ಸ್ಥಾನಕ್ಕೆ ಕೆಳಗಿನವು ಮಹತ್ವದ ಆಧಾರಗಳಾಗಿವೆ.

(೧) ದೊಡ್ಡ ಪ್ರಮಾಣದ ಉದ್ಯೋಗಗಳು ರಭಸದಿಂದ ಬೆಳೆಯುತ್ತಿದ್ದಾಗ್ಯೂ, ನಮ್ಮ ದೇಶವು ಇಂದಿಗೆ ಕೃಷಿಪ್ರಧಾನವಾಗಿರುವಂತೆಯೇ, ನಮ್ಮ ಒಕ್ಕಲುತನದ ಕೆಲವೊಂದು ವಿಶಿಷ್ಟ ರೀತಿ-ನೀತಿಗಳ ಪರಿಣಾಮವಾಗಿ, ಸುದೂರ ಭವಿಷ್ಯದಲ್ಲಿ ಸಹ ಕೃಷಿಪ್ರಧಾನ ದೇಶವಾಗಿಯೇ ಉಳಿಯಬಲ್ಲದು. ಹೊಲಗಳು ಸಣ್ಣ ಸಣ್ಣ ಅಥವಾ ಮಧ್ಯಮ ತರಗತಿಯ ಆಕಾರದವಿವೆ. ಮಳೆಗಾಲದ ಮೇಲೆ ಒಕ್ಕಲುತನವು ಅವಲಂಬಿಸಿದೆ. ನೀರಾವರಿಯ ಸೌಕರ್ಯಗಳೂ ಸಾಕಷ್ಟಿಲ್ಲ. ಭೂಮಿಯಮೇಲೆ ಜನಸಂಖ್ಯೆಯ ಒತ್ತಾಯವು ಅತಿಯಾಗಿದೆ. ಒಕ್ಕಲುತನ ಬಂಡವಲ ಕೊರತೆಯ ಅರ್ಥರಚನೆಯಾಗಿದೆ. ಇದು ಸುಗ್ಗಿಯ ಅಥವಾ ಹಂಗಾಮಿನ ಉದ್ಯೋಗವಾಗಿರುವದರಿಂದ, ಒಕ್ಕಲಿಗರು ನಿರುದ್ಯೋಗಿಗಳೂ ನಿಕೃಷ್ಟೋದ್ಯೋಗಿಗಳೂ ಆಗಿರುವರು. ಹಳ್ಳಿಗಳಲ್ಲಿಯ ನಿರುದ್ಯೋಗ ಸಮಸ್ಯೆಯು ಭೀಕರವಾಗಿದೆ. ಜನಸಂಖ್ಯೆಯ ರಭಸಪೂರ್ಣ ಬೆಳವಣಿಗೆಯೊಡನೆ ಈ ಸಮಸ್ಯೆಯು ಇನ್ನೂ ಭೀಕರವಾಗಬಹುದು. ಯೋಗ್ಯ ತಳಹದಿಯಮೇಲೆ ಶಕ್ತಿಪೂರ್ಣವಾದ ಗೃಹೋದ್ಯೋಗಗಳ ಸ್ಥಾಪನೆಯಿಂದ ಹೊಲಗಳಲ್ಲಿ ಕೆಲಕಾಲವನ್ನು ಕಳೆಯುವ ದುಡಿಮೆಗಾರರಿಗೆ ಉದ್ಯೋಗವೊದಗಿ, ಈ ಸಮಸ್ಯೆಗೆ ಎಷ್ಟೋಮಟ್ಟಿಗೆ ಪರಿಹಾರ ದೊರೆತಂತಾಗುವದು.

(೨) ಗೃಹೋದ್ಯೋಗಗಳ ಅವನತಿಯೊಡನೆ ಭೂಭಾರವೂ ಹೆಚ್ಚಿದೆ. ಈ ಪ್ರವೃತ್ತಿಗೆ ತಡೆಹಾಕುವದು ಅತ್ಯಗತ್ಯವಾಗಿದೆ. ಮುಂಬಯಿಯ ಆರ್ಥಿಕ ಮತ್ತು ಔದ್ಯೋಗಿಕ ಸಂಶೋಧನಾ ಸಮಿತಿಯು (ಬೊಂಬೆ ಎಕಾನಾಮಿಕ್ ಆ್ಯಂಡ ಇಂಡಸ್ಟ್ರಿಯಲ್ ಸರ್ವೆ ಕಮಿಟಿ) (೧೯೪೮–೫೦) ರಾಜ್ಯದ ಗ್ರಾಮಾಂತರ ಅರ್ಥರಚನೆಯ ಮೇಲೆ ಸದ್ಯದ ಔದ್ಯೋಗಿಕರಣದ ಆಘಾತದಿಂದುಂಟಾಗುವ ಪರಿಣಾಮವನ್ನು ಕೆಳಗಿನ ಶಬ್ದಗಳಲ್ಲಿ ಸ್ಪಷ್ಟಪಡಿಸಿದೆ. "ಗೃಹೋದ್ಯೋಗಗಳಲ್ಲಿ ಪೂರ್ಣಾವಧಿ ದುಡಿಯುವ ಜನರ ಸಂಖ್ಯೆಯ ಅವನತಿ ಎಂದರೆ ಭೂಭಾರದ ಹೆಚ್ಚಳವೇ ಸರಿ. ಅರ್ಥಾತ್ ಹೊಲಗಳ ಭಾಗೋಪಭಾಗಗಳ ಮೇಲೆಯೂ ಹೆಚ್ಚಿನ ಒತ್ತಡ ಬಿದ್ದಂತೆಯೇ ಸರಿ. ಈ ರೀತಿ ಔದ್ಯೋಗಿಕ ವಿಸ್ತರಣದಿಂದ ಮತ್ತು ಆಧುನಿಕ ಕ್ರಮಾನುಸರಣದಿಂದ ಒಕ್ಕಲು ಸಮಾಜವು ಇಬ್ಬಗೆಯ ಬವಣೆ

ಗೊಳಗಾಗುವದು ಅಂದರೆ ಭೂಮಿಯ ಮೇಲೆ ಹೆಚ್ಚುತ್ತಿರುವ ಒತ್ತಡ ಬೀಳುವ ದಲ್ಲದೆ, ಉಪೋದ್ಯೋಗಗಳ (ಉಪಧಂದೆಗಳ) ನಾಶದಿಂದ ನಿರುದ್ಯೋಗವೂ ನಿಕೃಷ್ಟೋದ್ಯೋಗವೂ ಹೆಚ್ಚುವವು. ಇವೆರಡರ ಅವನತಿಯೆಂದರೆ ಉತ್ಪನ್ನದ ಅವನತಿಯೇ ಸರಿ ಉತ್ಪಾದನೆಯಲ್ಲಿ ಕಡಿತವೇ ಸರಿ

(೩) ಕಳೆದ ಕಲವೊಂದು ವರ್ಷಗಳಲ್ಲಿ ದೊಡ್ಡ ಪ್ರಮಾಣದ ಉದ್ಯೋಗಗಳು ತೀವ್ರಗತಿಯಿಂದ ಬೆಳೆಯುತ್ತಿದ್ದಾಗ್ಯೂ ಆಂಗ್ಲರ ಆಳಿಕೆಯ ಆರಂಭದಿಂದ ಗೃಹೋದ್ಯೋಗ ಗ್ರಾಮೋದ್ಯೋಗಗಳು ಅಳಿಯುತ್ತಿದ್ದಾಗ್ಯೂ ಜನತೆಗೆ, ವಿಶೇಷವಾಗಿ ಹಳ್ಳಿಗಳಲ್ಲಿಯ ಜನತೆಗೆ ಉದ್ಯೋಗವನ್ನು ಕಲ್ಪಿಸಿಕೊಡುವಲ್ಲಿ ಒಕ್ಕಲುತನದ ನಂತರ ಗೃಹೋದ್ಯೋಗಗಳೇ ಪ್ರಧಾನಪಾತ್ರವಹಿಸುತ್ತಿವೆಯೆಂಬ ಮಾತನ್ನು ಯಾರೂ ಅಲ್ಲಗಳೆಯಲಾರರು ಆಧುನಿಕ ದೊಡ್ಡಪ್ರಮಾಣದ ಉದ್ಯೋಗ ಗಳಿಗಿಂತ ಈ ಗೃಹೋದ್ಯೋಗಗಳು ಹೆಚ್ಚು ಜನರಿಗೆ ಉದ್ಯೋಗವನ್ನು ಕಲ್ಪಿಸಿ ಕೊಡಬಲ್ಲವು ಆದುದರಿಂದ ಈ ಉದ್ಯೋಗಗಳಲ್ಲಿ ಆನುವಂಶಿಕವಾಗಿ ತೊಡಗಿರುವ ಅನೇಕ ವರ್ಗಗಳ ಜನತೆಯ ಈ ಉದ್ಯೋಗ ಪರಂಪರೆಯನ್ನು ರಕ್ಷಿಸಿ ಮುಂದು ವರಿಸುವ ದೃಷ್ಟಿಯಿಂದ ಈ ಉದ್ಯೋಗಗಳ ಪುನರುದ್ಧಾರ ಪ್ರೋತ್ಸಾಹನ ಕಾರ್ಯವು ಅತ್ಯಗತ್ಯವಾಗಿದೆ

(೪) ಸ್ಥಾನಿಕ ಧನ ಸಂಪತ್ತಿನ ಸದುಪಯೋಗ ಮಾಡಿಕೊಳ್ಳಲಿಕ್ಕೂ, ಗ್ರಾಹಕರ ಕೆಲವೊಂದು ನಿತ್ಯಾವಶ್ಯಕ ಸರಕು, ಪಡಿ ಪದಾರ್ಥಗಳ ವಿಷಯದಲ್ಲಿ ಸ್ವಾವಲಂಬಿಯಾಗುವದಕ್ಕೂ ಈ ಗೃಹೋದ್ಯೋಗಗಳು ಹೆಚ್ಚು ಅವಶ್ಯಕವಾಗಿವೆ

(೫) ಇಂದಿನ ಪಾಶ್ಚಿಮಾತ್ಯ ದೇಶಗಳು ಅನುಭವಿಸುತ್ತಿರುವ ದೊಡ್ಡ ಪ್ರಮಾಣದ ಉದ್ಯೋಗಗಳ ಅನಿಷ್ಟಗಳನ್ನು ಅಂದರೆ, ಮಿತಿ ಮೀರಿ ಬೆಳೆದ ಜನದಟ್ಟಣಿ, ಕೊಳಚಿ ಕೇರಿಗಳ ಬೆಳವಣಿಗೆ, ಬೆಲೆಗಳಲ್ಲಿ ಇಳಿತ, ಔದ್ಯೋಗಿಕ ಸಂಪು, ಈ ಮೊದಲಾದ ದುಷ್ಪರಿಣಾಮಗಳನ್ನು ತಡೆಯಲಿಕ್ಕೆ ಔದ್ಯೋಗಿಕ ವಿಕೇಂದ್ರೀಕರಣವು ಅಗತ್ಯವು ಗೃಹೋದ್ಯೋಗಗಳ ಸಂಘಟನೆಯಿಂದಲೇ ಇದು ಸುಲಭಸಾಧ್ಯವು ಭರದಿಂದ ಬೆಳೆಯುತ್ತಿರುವ ಜನಸಂಖ್ಯೆಗೆ ಒಕ್ಕಲುತನ ವನ್ನುಳಿದು ಜೀವನೋಪಾಯಗಳ ಬೇರೆ ಬೇರೆ ಉದ್ಯೋಗಗಳನ್ನು ಕೈಕೊಳ್ಳಲು ಸುಸಂಧಿಯನ್ನೊದಗಿಸಿಕೊಟ್ಟರೆ, ಪಟ್ಟಣಗಳಲ್ಲಿ ತಂಡೋಪತಂಡವಾಗಿ ಕೇಂದ್ರೀಕೃತ ವಾಗಿ ನೆಲಸುತ್ತಿರುವ ಮುಂದಿನ ಹಚ್ಚಿನ ಜನಸಂಖ್ಯೆಗೆ ತಡೆಹಾಕಿದಂತಾಗುವದು

(೬) ಆರ್ಥಿಕ ಮತ್ತಿತರ ಸಾಧನ ಸಂಪತ್ತುಗಳ ಮರ್ಯಾದಿತ ಪರಿಸ್ಥಿತಿ ಯಿಂದಾಗಿ, ದೊಡ್ಡಪ್ರಮಾಣದ ಉದ್ಯೋಗಗಳ ಪ್ರಗತಿಯು ಕುಂಠಿತವಾಗುವ ದಲ್ಲದೆ, ಸಮಾಜದ ಅವಶ್ಯಕತೆಗಳನ್ನು ಬೇಡಿಕೆಗಳನ್ನು ಪೂರೈಸುವದು ಕಷ್ಟಸಾಧ್ಯ ವಾಗುವದು ಆದುದರಿಂದ ಸಮಾಜದ ಎಲ್ಲ ಬೇಡಿಕೆಗಳನ್ನು ಪೂರೈಸುವಂತೆ ಉತ್ಪಾದನೆಯನ್ನು ಹೆಚ್ಚಿಸಬೇಕಾದರೆ, ಭದ್ರವಾದ ತಳಹದಿಯಮೇಲೆ, ಶಕ್ತಿ ಪೂರ್ಣ ವಾದ ರೀತಿಯಲ್ಲಿ ಗೃಹೋದ್ಯೋಗಗಳನ್ನು ಬೆಳೆಯಿಸುವದೊಂದೇ ದಾರಿ ಸರಿ

(೭) ಗೃಹೋದ್ಯೋಗವು ವ್ಯಕ್ತಿತ್ವವಿಕಾಸ ಪ್ರಚೋದನೆಗಳಿಗೆ ಅವಕಾಶವನ್ನು ಕಲ್ಪಿಸಿಕೊಡುವದು ತಂತ್ರಜ್ಞಾನದ ಉಚ್ಚಮಟ್ಟವನ್ನು ಪಡೆಯುವಲ್ಲಿ, ಸುಸಂಧಿಯ ಸರಿಸಮಾನತೆಯ ಮೇಲೆ ರಚಿತವಾದ ಸಾಮಾಜಿಕ ಜೀವನದಲ್ಲಿ ಭಾಗವಹಿಸುವಲ್ಲಿ ಕೃಗಾರಿಕೆಯವರಿಗೆ, ಕಸಬುದಾರರಿಗೆ ಅನುಕೂಲತೆಯನ್ನು ಕಲ್ಪಿಸಿಕೊಡುವದು

(೮) ನಮ್ಮ ರಾಷ್ಟ್ರದ ಆನುವಂಶಿಕ ಸೊತ್ತಾಗಿರುವ ಕಲಾಪೂರ್ಣವಾದ ಕೈಗಾರಿಕಯ ಉದ್ಯೋಗಗಳನ್ನು ಉಳಿಸಿಕೊಂಡು, ಬೆಳಿಸಿಕೊಂಡು ಬರುವದೂ ಅತ್ಯಗತ್ಯವಾಗಿದೆ

(೯) ಗೃಹೋದ್ಯೋಗಗಳು ಗ್ರಾಹಕರ ಸೌಂದರ್ಯಾಭಿರುಚಿಯನ್ನು ರಸಿಕತೆಯನ್ನು ಪೂರೈಸುತ್ತವೆ, ತೃಪ್ತಿಗೊಳಿಸುತ್ತವೆ

(೧೦) ಭಾಂಡವಲಗಾರ, ಕೂಲಿಯವರ ನಡುವೆ ಉದ್ಭವಿಸಬಹುದಾದ ತಂಟೆಗಳಿಗೆ ಗೃಹೋದ್ಯೋಗಗಳಲ್ಲಿ ಆಸ್ಪದವಿಲ್ಲ ಯಾಕಂದರೆ ಕೈಗಾರಿಕೆಯ ಕಸಬುದಾರನೇ ಬಂಡವಾಳದ ಒಡೆಯನೂ ಅಹುದು ವಸ್ತುವನ್ನು ತಯಾರಿಸುವ ಕೂಲಿಯೂ ಅಹುದು ಅವನೊಬ್ಬನಲ್ಲಿಯೇ ಆಳೂ ಆಳುವ ಒಡೆಯನೂ ಅಡಕವಾಗಿಹರು ಕೈಗಾರಿಕೆಯ ಉದ್ಯೋಗವು ಉತ್ಪಾದನೆಯ ರಾಜ್ಯದಲ್ಲಿ ಸ್ವಾರಸ್ಯ ಶಾಂತಿಗಳನ್ನು ಮೇಳವಿಸುತ್ತದೆ

ಮೇಲ್ಕಂಡ ಕಾರಣಗಳಿಂದಾಗಿ, ರಾಷ್ಟ್ರಪಿತ ಮಹಾತ್ಮಾಜಿಯವರು, ದೇಶದಲ್ಲಿಯ ಗೃಹೋದ್ಯೋಗಗಳ ಪುನರುಜ್ಜೀವನಕ್ಕೂ ಪ್ರಗತಿಗೂ ಹೆಚ್ಚು ಮಹತ್ವವನ್ನಿತ್ತರು ಮಹಾತ್ಮಾಜಿಯವರ ಅಭಿಪ್ರಾಯದಂತೆ, ಗ್ರಾಮೋದ್ಯೋಗಗಳು ವಿಶೇಷವಾಗಿ ಖಾದಿಯೆಂದರೆ 'ಸಮಗ್ರ ಸ್ವದೇಶೀ ಭಾವನೆ'ಯು, ಭಾರತದಲ್ಲಿಯ ಜೀವನಾವಶ್ಯಕತೆಗಳನ್ನು ಪಡೆಯುವ, ಅದೂ ಹಳ್ಳಿಗರ ಪರಿಶ್ರಮ—ಬುದ್ಧಿಕೌಶಲ್ಯಗಳ ಮುಖಾಂತರವಾಗಿ ಪಡೆಯುವ ದೃಢ ಸಂಕಲ್ಪವು! ಮನೋನಿರ್ಧಾರವು! ಬಡತನ, ಬಳಲಿಕೆ, ಹಸಿವೆಯ ಕಿಚ್ಚು, ನೋವಾರಿತನದ ಹುಚ್ಚು ಈ ಮೊದಲಾದವುಗಳಿಂದ ಅಲಿಪ್ತವಾದ ದೂರವಾದ ನೂತನ ಭಾರತದ ಆದರ್ಶದ ಕನಸಿಗನುಗುಣವಾಗಿ ಇಟ್ಟುಕೊಂಡ, ನಿಜ ರಾಷ್ಟ್ರೀಯ ಮನೋವೃತ್ತಿಯ ಪ್ರತೀಕವು! ಪತಾಕೆಯು!

ಗೃಹೋದ್ಯೋಗಗಳು ದೊಡ್ಡ ಪ್ರಮಾಣದ ಉದ್ಯೋಗಗಳಷ್ಟು ಸಾಮರ್ಥ್ಯಪೂರ್ಣವಲ್ಲವೆಂದೂ, ಅದಕ್ಕಾಗಿ ದೊಡ್ಡಪ್ರಮಾಣದ ಉದ್ಯೋಗಗಳಿಂದ ನಡೆಯುವ ಸ್ಪರ್ಧೆಯನ್ನು ಎದುರಿಸಲು ಈ ಗೃಹೋದ್ಯೋಗಗಳಿಗೆ ಸಾಧ್ಯವಿಲ್ಲವೆಂದೂ ಹೇಳುವ, ವಾದಿಸುವ, ಚರ್ಚಿಸುವ ಜನರೂ ಉಂಟು ದೊಡ್ಡ ಪ್ರಮಾಣದ ಉದ್ಯೋಗಗಳಂತೆ ಈ ಗೃಹೋದ್ಯೋಗಗಳು ಇಡೀ ಸಮಾಜದ ಬೇಡಿಕಗಳನ್ನು ಪೂರೈಸುವಂತೆ ದೊಡ್ಡಪ್ರಮಾಣದ ಮೇಲೆ, ಅಗ್ಗ ದರದಿಂದ ಉತ್ಪಾದನೆಯನ್ನು ಹೆಚ್ಚಿಸಲಾರವೆಂದೂ ಈ ಜನರು ಮತ್ತೆ ವಾದಿಸುವರು ಒಂದು

ವಸ್ತುವನ್ನು, ಕಚ್ಚಾಮಾಲಿನಿಂದ ರೂಪಾಂತರಿಸುವ ವಿಧಾನದಿಂದ ಪಕ್ಕಾ ಮಾಲನ್ನು ಪೂರ್ತಿಯಾಗಿ ಸಿದ್ಧಗೊಳಿಸುವ ವಿಧಾನದವರೆಗೆ, ಒಬ್ಬನೇ ಒಬ್ಬ ಮನುಷ್ಯನು ಚಟುವಟಿಕೆಗಳನ್ನು ಅಥವಾ ವ್ಯವಹಾರವನ್ನು ಕೈಕೊಳ್ಳುವ, ಅಥವಾ ತೊಡಗಿಸಲ್ಪಟ್ಟ ಬಂಡವಾಳಕ್ಕಿಂತ ಮಾನವನ ಕರತಂತ್ರಕೌಶಲ್ಯಸಂಪತ್ತು ಹೆಚ್ಚಿನದೆಂದು ಪರಿಗಣಿಸಲ್ಪಡದಿರುವ, ಸಾಹಸಕಾರ್ಯಗಳು ವ್ಯವಹಾರಗಳು, ಕೇಂದ್ರೀಕೃತ ಅಪಾರ ಬಂಡವಾಳ ಭಾರದ ಉಚ್ಚ ಯಾಂತ್ರಿಕ ಉಪಾಯದ ಉದ್ಯೋಗಗಳ ಬೆಳವಣಿಗೆಯು ಜೊತೆಗೆ ನಶಿಸಿ ಅಳಿಸಿಹೋಗಬಹುದೆಂದೂ ಇಲ್ಲದಿದ್ದರೆ ದೊಡ್ಡಪ್ರಮಾಣದ ಉದ್ಯೋಗಗಳ ಸಾಹಸಕಾರ್ಯಗಳ ನೆರಳಿನಲ್ಲಿ, ಬಹು ಕೊಡಕು ತೊಡಕಾಗಿರುವ ತಮ್ಮ ಅಸ್ತಿತ್ವವನ್ನು ಎಂತೋ ನೂಕಿಕೊಂಡು ಹೋಗಬಹುದೆಂದೂ ಈ ಜನರು ಎಷ್ಟೆಷ್ಟೋ ಸಲ ವಿಚಾರಿಸುವುದುಂಟು. ಔದ್ಯೋಗಿಕ ದೃಷ್ಟಿಯಿಂದ ಮುಂದುವರಿದ ರಾಷ್ಟ್ರಗಳಲ್ಲಿ ಸಹ ಈ ವಿಚಾರಸರಣಿಗನುಗುಣವಾಗಿ ಸಂಗತಿಗಳು ಘಟಿಸಿಲ್ಲ. ಪರಿಸ್ಥಿತಿಯು ಇರುವದಿಲ್ಲ. ಚಿಕ್ಕಪುಟ್ಟ ಉದ್ಯಮಗಳು, ಅವು ಕೈಗಾರಿಕೆಯ ಕೈಮಾಡದವೇ ಇರಲಿ, ಅಥವಾ ಸಣ್ಣ ಪ್ರಮಾಣದ ಉದ್ಯೋಗದ ಪ್ರಕಾರದವೇ ಇರಲಿ ತಮ್ಮ ರಚನೆಗನುಗುಣವಾಗಿ ಕೆಲವೊಂದು ಅನುಕೂಲತೆಗಳನ್ನು ಪಡೆದುಕೊಂಡಿವೆ. ಉತ್ಪಾದನೆಯ ಮಾತ್ರದಲ್ಲಿ ವಿಶೇಷವಾಗಿ ಪಕ್ಕಾ ಮಾಲನ್ನು ಅಥವಾ ವಸ್ತುಗಳನ್ನು ತಯಾರಿಸುವ ವಿಧಾನವು ಸೇವೆ ಅಥವಾ ದುಡಿಮೆಯ ಅನುಕೂಲತೆಗೆ ಮೇಳಯಿಸುವ ಅಥವಾ ಕ್ಷಣಕ್ಷಣಕ್ಕೂ ಮಾರ್ಪಡುವ ಮಾರುಕಟ್ಟೆಯ ( ಪೇಟೆಯ ) ಪರಿಸ್ಥಿತಿಗೂ ಉತ್ಪಾದನೆಯ ಪರಿಸ್ಥಿತಿ ಹೊಂದಿಕೊಳ್ಳುವ ಶಕ್ತಿಗಳು, ಒಗ್ಗುವ ಸ್ಥಿತಿಸ್ಥಾಪಕಗುಣವೂ ಅಗತ್ಯವಿರುವ ಉತ್ಪಾದನೆಯ ಕ್ಷೇತ್ರದಲ್ಲಿ ಸಣ್ಣ ಸಣ್ಣ ಉದ್ಯಮಗಳ ಸಾಹಸಕಾರ್ಯಗಳು ಬದುಕುವದಿಷ್ಟೇ ಅಲ್ಲ, ಭದ್ರವಾದ ವಿಸ್ತೃತವಾದ ತಳಹದಿಯ ಮೇಲೆ ಬದುಕಿ, ಬೆಳೆದು, ಬೆಳಗಬಲ್ಲವು ಅಲ್ಲದೆ ಸಣ್ಣಪ್ರಮಾಣದ, ಅದರಂತೆಯೇ ದೊಡ್ಡಪ್ರಮಾಣದ ಉದ್ಯೋಗಗಳ ಹಿತಸಂಬಂಧಗಳು ತತ್ವಶಃ ಪರಸ್ಪರ ವಿರೋಧವೆಂದು ಭಾವಿಸುವ ಕಾರಣವೇ ಇಲ್ಲ. ದೊಡ್ಡಪ್ರಮಾಣದ ಉದ್ಯೋಗಗಳಲ್ಲಿ ವಿಶಿಷ್ಟಕಾರ್ಯಗಳಿಗಾಗಿ, ತಂತ್ರಕಲೆಯಲ್ಲಿ ಅರಿತ ನುರಿತ ಕಸಬುದಾರರ ಅವಶ್ಯಕತೆಯು ಅತೀವವಾಗಿರುತ್ತದೆ. ಅಲ್ಲದೆ ಔದ್ಯೋಗಿಕ ಉತ್ಪಾದನೆಯು ತೊಡಕಿನದಾದಷ್ಟೂ, ಕಾರ್ಯಕ್ಷಮತೆಯ ದೃಷ್ಟಿಯಿಂದ ಕೇಂದ್ರೀಕೃತ ಉತ್ಪಾದನೆಯ ಸೌಕರ್ಯ ಅಥವಾ ಲಾಭವು ಕಡಿಮೆಯಾಗುವದು. ಔದ್ಯೋಗಿಕ ದೃಷ್ಟಿಯಿಂದ ಮುಂದುವರಿದ ಅನೇಕ ದೇಶಗಳಲ್ಲಿ ಸಣ್ಣಪ್ರಮಾಣದ ಉದ್ಯೋಗಗಳು ದೊಡ್ಡಪ್ರಮಾಣದ ಉದ್ಯೋಗಗಳಿಗೆ ಪೂರೈಕೆಯ ಕಾರ್ಯವನ್ನೆಸಗುವಲ್ಲಿ ಹೆಚ್ಚಿನ ಪಾತ್ರವನ್ನು ವಹಿಸುತ್ತವೆ. ಇಲ್ಲಿ ಮುಖ್ಯವಾಗಿ ಬೇಕಾದುದೆಂದರೆ ದೊಡ್ಡ ಪ್ರಮಾಣದ ಉದ್ಯೋಗ, ಸಣ್ಣಪ್ರಮಾಣದ ಉದ್ಯೋಗ, ಮತ್ತು ಗೃಹೋದ್ಯೋಗಗಳ ನಡುವ ಉಚಿತವಾದ ಸಮಾನತೆ, ನಿಷ್ಕಪಟವಾದ, ಸತ್ಯವಾದ ವ್ಯವಹಾರ, ಹೊಂದಿಕೊಳ್ಳುವ ಸಂಯೋಜನೆ. ಈ ವಿಷಯದಲ್ಲಿ ಜಪಾನದ ಉದಾಹರಣೆಯು ನಮ್ಮ ಕಣ್ಣಿಗೆ ಅಂಜನಹಾಕುವಂತಿದೆ. ಆರ್ಥಿಕ ಚಟುವಟಿಕೆಗಳ ವಿವಿಧರೂಪಗಳಲ್ಲಿ ಆನುವಂಶಿಕ ಉದ್ಯೋಗಗಳು ನಡೆದು ಬಂದಿವೆ. ಗ್ರಾಹಕರ ಸರ್ವಪ್ರಕಾರದ ವಸ್ತುಗಳ ಅಥವಾ ಸರಕುಗಳ ನಿರ್ಮಾಣ,

ಕಟ್ಟಡಗಳ ರಚನೆ, ಖನಿಜಗಳ ಕಾರ್ಯ ಈ ಮೊದಲಾದ ಮಹೋದ್ಯೋಗಗಳು ಜಪಾನಿನ ಆನುವಂಶಿಕ ಉದ್ಯೋಗಗಳಲ್ಲಿ ಸಮಾವೇಶವಾಗುವವು ಗೃಹೋದ್ಯೋಗಗಳೂ ಸಣ್ಣಪ್ರಮಾಣದ ಉದ್ಯೋಗಗಳೂ ಸರಿಯಾದ ರೀತಿಯಲ್ಲಿ, ಸಹಕಾರದ ತಳಹದಿಯ ಮೇಲೆ ಸುವ್ಯವಸ್ಥಿತವಾಗಿ ಸಂಘಟಿಸಲ್ಪಟ್ಟರೆ, ವಿಸ್ಮಯಕಾರಿಯಾದ ಪ್ರಗತಿಯನ್ನು ಸಾಧಿಸಬಲ್ಲವೆಂಬುದನ್ನು, ಯುದ್ಧಕಾಲದಲ್ಲಿ ಚೀನವು ಜಗತ್ತಿಗೇನೇ ತೋರಿಸಿಕೊಟ್ಟಿತು ಕೈಗಾರಿಕೆಯವರು, ಕಸಬುದಾರರು ಸಹಕಾರ ತತ್ವದ ಮೇಲೆ ಸರಿಯಾಗಿ ಸಂಘಟಿತರಾದರೆ, ಅವರ ಪಥದಲ್ಲಿ ಅಡ್ಡಬರುವ ಅನೇಕ ಬಗೆಯ ಅಡೆತಡೆಗಳು ನಿವಾರಿಸಲ್ಪಟ್ಟರೆ, ದೊಡ್ಡಪ್ರಮಾಣದ ಉದ್ಯೋಗಗಳಿಂದ ಸಿದ್ಧವಾಗುವ ವಸ್ತುಗಳ ಬೆಲೆಗಿಂತ ಗೃಹೋದ್ಯೋಗಗಳಿಂದ ಸಿದ್ಧವಾದ ವಸ್ತುಗಳ ಬೆಲೆಯು ತುಟ್ಟಿಯಾಗಲಾರದೆಂದು ನಂಬಲುವಕಾಶವಿದೆ ಅಲ್ಲದೆ ದೊಡ್ಡ ಪ್ರಮಾಣದ ಉದ್ಯೋಗಗಳಿಂದ ತಯಾರಾದ ವಸ್ತುಗಳಿಗಿಂತ ಗೃಹೋದ್ಯೋಗಗಳಿಂದ ಸಿದ್ಧವಾದ ವಸ್ತುಗಳು ವ್ಯಕ್ತಿವ್ಯಕ್ತಿಗಳ ಅಭಿರುಚಿಯನ್ನು ಉತ್ತಮ ರೀತಿಯಿಂದ ತೃಪ್ತಿಗೊಳಿಸಬಲ್ಲವು ಪ್ರಥಮ ಜಾಗತಿಕ ಯುದ್ಧದ ನಂತರ, ಅರ್ಥಿಕ ಸಹಾಯವನ್ನಿತ್ತು ಗ್ರಾಮೋದ್ಯೋಗಗಳನ್ನು ಬೆಳೆಯಿಸುವ ದೃಷ್ಟಿಯಿಂದ ಇಂಗ್ಲಂಡು, ವೇಲ್ಸಗಳಲ್ಲಿ ವಿಶಿಷ್ಟ ಕಾಯದೆಯನ್ನು ಜಾರಿಯಲ್ಲಿ ತಂದು ಸರಕಾರದವರು (೧) ರೂರಲ್ ಇಂಡಸ್ಟ್ರೀಜ ಬ್ಯೂರೋ ಮತ್ತು ಅದರ ಕೌನ್ಸಿಲ್ (ಗ್ರಾಮಾಂತರ ಔದ್ಯೋಗಿಕ ಕಚೇರಿ ಮತ್ತದರ ಶಾಸನಸಭೆ) (೨) ರೂರಲ್ ಇಂಡಸ್ಟ್ರೀಜ ಲೋನ ಫಂಡು (ಗ್ರಾಮಾಂತರ ಔದ್ಯೋಗಿಕ ಸಾಲದ ನಿಧಿ) ಈ ಬಗೆಯ ವಿಶಿಷ್ಟ ರಾಷ್ಟ್ರೀಯ ಸಂಸ್ಥೆಗಳನ್ನು ನಿರ್ಮಿಸಿದರು ಈ ಸಂಸ್ಥೆಗಳ ಜೊತೆಗೆ, ಗ್ರಾಮೋದ್ಯೋಗಗಳ ಕಾರ್ಯಕ್ಕೆ ತಮ್ಮ ಸರ್ವಸ್ವವನ್ನು ಸಲ್ಲಿಸಿದ ಇತರ ರಾಷ್ಟ್ರೀಯ ಸಂಸ್ಥೆಗಳೂ ಉಂಟು ಗ್ರಾಮೀಣ ಶಾಸನ ಸಭೆಗಳು ಗ್ರಾಮೋದ್ಯೋಗಗಳ ಬೆಳವಣಿಗೆಯಲ್ಲಿ ಹೆಚ್ಚು ಆಸಕ್ತಿ ವಹಿಸುತ್ತವೆ ಸ್ಕಾಟಲಂಡ ಆಯರ್ಲಂಡಗಳಲ್ಲಿ ಸರಕಾರವೂ ಸರಕಾರೇತರ ಸಂಸ್ಥೆಗಳೂ ಕೂಡಿಯೇ ಗ್ರಾಮೋದ್ಯೋಗ–ಗೃಹೋದ್ಯೋಗಳ ಬೆಳವಣಿಗೆಯ ಬಗೆಗೆ ಸಾಕಷ್ಟು ಆಸಕ್ತಿ ಅಭಿರುಚಿಗಳನ್ನು ವಹಿಸುವವು ಡೆನ್ಮಾರ್ಕ, ಸ್ವಿತ್ಸರ್ಲಂಡ, ಹಂಗರಿ, ಇಟಲಿ ಈ ಮೊದಲಾದ ಪಾಶ್ಚಿಮಾತ್ಯ ದೇಶಗಳಲ್ಲಿ ಸಹ, ರಾಷ್ಟ್ರದ ಅರ್ಥರಚನೆಯಲ್ಲಿ ಗೃಹೋದ್ಯೋಗಗಳು ಮಹತ್ವದ ಸ್ಥಾನವನ್ನು ಆಕ್ರಮಿಸಿವ

ಹೊಲಗಳಲ್ಲಿ ದಿನದ ಕೆಲವೊಂದು ವೇಳೆ ದುಡಿಯುವ ದುಡಿಮೆಗಾರರಿಗೂ ಮನೆಗಳಲ್ಲಿ ಕೆಲಸವಿಲ್ಲದೆ ಕುಳಿತ ಹೆಣ್ಣು ಮಕ್ಕಳಿಗೂ ಉದ್ಯೋಗಗಳನ್ನು ಕಲ್ಪಿಸಿ ಕೊಡುವ, ಮುಖ್ಯವಾಗಿ ಸುಶಿಕ್ಷಿತ ಮತ್ತು ತರಬೇತಿ ಹೊಂದಿದ ಜನರಿಗೆ ಉದ್ಯೋಗಗಳನ್ನು ಕೊಟ್ಟೇ ತೀರಬೇಕೆನ್ನುವ, ಗೃಹೋದ್ಯೋಗ, ಗ್ರಾಮೋದ್ಯೋಗಗಳ ವಿಕಾಸಕ್ಕೆ, ಒಕ್ಕಲುತನದ ಬೆಳವಣಿಗೆಯಷ್ಟೇ ಯೋಜನಾ ಸಮಿತಿಯು ಮಹತ್ವವನ್ನಿತ್ತಿದೆ ಈ ಗೃಹೋದ್ಯೋಗಗಳ ಬೆಳವಣಿಗೆಗಾಗಿ ಸರಕಾರದವರು ದೊಡ್ಡ ಪ್ರಮಾಣದಲ್ಲಿ ಸಹಾಯ ಸಾಹಾನುಭೂತಿಗಳನ್ನು ನೀಡಬೇಕೆಂದಿರುವರು. ಖಾದಿಯ ಕಾರ್ಯಕ್ರಮಗಳನ್ನು ಜಾರಿಯಲ್ಲಿ ತರುವ ದೃಷ್ಟಿಯಿಂದ, ಮತ್ತು

ಗ್ರಾಮೋದ್ಯೋಗಗಳ ಮತ್ತು ಖಾದಿಯ ಉತ್ಪಾದನೆ ವಿಕಾಸಗಳಿಗಾಗಿ ಕಾರ್ಯ ಕ್ರಮಗಳನ್ನೂ ಯೋಜನಗಳನ್ನೂ ಸಿದ್ಧಪಡಿಸಿ ಸಂಘಟಿಸುವ ದೃಷ್ಟಿಯಿಂದ, ಕೇಂದ್ರ ಸರಕಾರವು ಈಗಾಗಲೇ 'ಖಾದಿ ಮತ್ತು ಗ್ರಾಮೋದ್ಯೋಗ ವಿಕಾಸ ಮಂಡಲ' (ಖಾದಿ ಮತ್ತು ವ್ಹಿಲೇಜ ಇಂಡಸ್ಟ್ರೀಜ ಡೆವ್ಹಲೆವ್‌ಮಂಟ ಬೋರ್ಡು) ವನ್ನು ಸ್ಥಾಪಿಸಿದೆ ಖಾದಿಯ ಬೆಳವಣಿಗೆಯ ಕಾರ್ಯಕ್ರಮಗಳ ಜೊತೆಗೆ, ಹಳ್ಳಿಯಲ್ಲಿಯ ಗಾಣಿಗರ (ಎಣ್ಣೆ ತೆಗೆಯುವ) ಉದ್ಯೋಗ, ಬೇವಿನೆಣ್ಣೆಯಿಂದ ಸಬಕಾರ ತಯಾರಿಸುವದು, ಭತ್ತ ಕುಟ್ಟುವದು ಅಥವಾ ಒಡೆಯುವದು, ತಾಳೆಯ ರಸ (ನೀರಾ) ದಿಂದ ಬೆಲ್ಲ ತಯಾರಿಸುವದು, ಬೆಲ್ಲ ಮತ್ತು ತೊಗಲಿನ ಉದ್ಯೋಗ, ಉಣ್ಣೆಯಿಂದ ಬ್ಲ್ಯಾಂಕಟ್ ಅಂದರೆ ಕಂಬಳಿ ತಯಾರಿಸುವದು, ಕೈಯಿಂದ ಉತ್ತಮ ಕಾಗದ ತಯಾರಿಸುವದು, ಜೇನು ಸಾಕುವದು, ಕಡ್ಡೀ ಪೆಟ್ಟಿಗೆ ತಯಾರಿಸುವದು, ಈ ಹತ್ತು ಗ್ರಾಮೋದ್ಯೋಗಳನ್ನು (ಯೋಜನಾ) ಸಮಿತಿಯವರು ಆರಿಸಿದ್ದು, ಇವುಗಳ ಬೆಳವಣಿಗೆಗಾಗಿ ಯೋಜನೆಗಳನ್ನು ಸಿದ್ಧಪಡಿಸಿರುವರು ಕೇಂದ್ರ ಸರಕಾರದ ಸಹಾಯದ ಅವಶ್ಯಕತೆಯುಳ್ಳ ಗ್ರಾಮೋದ್ಯೋಗಗಳ ಹೊಸ ಹೊಸ ಯೋಜನೆಗಳನ್ನೂ ಸ್ಥಾಪಿತವಾದ ಖಾದಿ ಮತ್ತು ಗ್ರಾಮೋದ್ಯೋಗ ವಿಕಾಸ ಮಂಡಳವು ವಿಚಾರಿಸುವದು ಕೈಗಾರಿಕೆಯ ಉದ್ಯೋಗಗಳ ಸಮಸ್ಯೆಗಳ ವಿಷಯದಲ್ಲಿ ಸರಕಾರಕ್ಕೆ ಸಲಹೆಕೊಡುವ ದೃಷ್ಟಿಯಿಂದ, ಕೇಂದ್ರ ಸರಕಾರದವರು ಒಂದು ಕೈಗಾರಿಕೆಯ ಉದ್ಯೋಗ ಮಂಡಲವನ್ನು (ಹ್ಯಾಂಡಿಕ್ರಾಫ್ಟ್ಸ ಬೋರ್ಡು) ಸ್ಥಾಪಿಸಿರುವರು ಅಲ್ಲದೆ ಗ್ರಾಮೋದ್ಯೋಗಗಳ ಕಾರ್ಯಕ್ರಮಕ್ಕೆ ಅಥವಾ ಯೋಜನೆಗೆ ಸರಕಾರದ ಉಚಿತ ಧೋರಣೆಯು ಅದರಂತೆ ವಿಶಿಷ್ಟ ನಿರ್ದಿಷ್ಟ ಸಹಾಯ ಕ್ರಮಗಳ ಬಂಬಲವಿರಬೇಕೆಂದೂ ಯೋಜನಾ ಸಮಿತಿಯು ಹೇಳುತ್ತದೆ ಸರಕಾರದ ಈ ಧೋರಣೆಯು ಮತ್ತು ಸಹಾಯದ ಮುಖ್ಯ ಉದ್ದೇಶವೆಂದರೆ ಗೃಹೋದ್ಯೋಗವು ಸ್ವಯಂಸಂಘಟಿತವಾಗುವಂತೆ, ಅದಕ್ಕೊಂದು ಕ್ಷೇತ್ರವನ್ನು ಕಲ್ಪಿಸಿ ಕೊಡುವದೇ ಸರಿ ಸರ್ವಸಾಮಾನ್ಯ ಉತ್ಪಾದನೆಯ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುವದು ಈ ಬಗೆಯ ಸಂಘಟನೆಯ ವಿಕಾಸದೊಡನೆ ಗೃಹೋದ್ಯೋಗಗಳ ಕಾರ್ಯಕ್ರಮವನ್ನು ದೊಡ್ಡ ಪ್ರಮಾಣದ ಉದ್ಯೋಗಗಳ ಕಾರ್ಯಕ್ರಮದೊಡನೆ ನಿಕಟವಾಗಿ ಸಮೀಕರಿಸಬಹುದೆಂದು ಯೋಜನಾ ಸಮಿತಿಯು ಆಶಿಸಿದೆ ಈ ಸಮಿತಿಯ ಅಭಿಪ್ರಾಯದಂತೆ, ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಸರಕಾರದ ಮುಂದಿನ ಧೋರಣೆಯು ಕೆಳಗಿನ ವಿಷಯಗಳಲ್ಲಿ ಒಂದನ್ನೋ ಅಥವಾ ಹೆಚ್ಚನ್ನೋ ಒಳಗೊಳ್ಳಬಹುದು

(೧) ಉತ್ಪಾದನೆಯ ಕ್ಷೇತ್ರಗಳನ್ನು ಕಾಯ್ದಿಡುವದು

(೨) ದೊಡ್ಡ ಪ್ರಮಾಣದ ಉದ್ಯೋಗಗಳ ಕಾರ್ಯಶಕ್ತಿಯನ್ನು ವಿಸ್ತೃತಗೊಳಿಸದಿರುವದು

(೩) ದೊಡ್ಡ ಪ್ರಮಾಣದ ಉದ್ಯೋಗಗಳ ಮೇಲೆ ಕರಭಾರ ಹೇರುವದು

(೪) ಕಚ್ಚಾ ಮಾಲಿನ ಅಥವಾ ಸರಕುಗಳ ಪೂರೈಕೆಯ ಏರ್ಪಾಡು

(೫) ಸಂಶೋಧನೆ-ಶಿಕ್ಷಣ ( ತರಬೇತು )ಗಳ ಸಂಯೋಜನೆ

ಸಣ್ಣ ಪ್ರಮಾಣದ ಉದ್ಯೋಗಗಳಿಂದ ಸಿದ್ಧವಾದ ವಸ್ತುಗಳ ಅಥವಾ ಸರಕುಗಳ ಬೇಡಿಕೆಯು ಹೆಚ್ಚಿ ಅವು ಸುಸೂತ್ರವಾಗಿ ಮಾರಾಟವಾಗಬೇಕಾದರೆ ಯೋಜನಾ ಸಮಿತಿಯವರು ಎರಡು ಹಾದಿಗಳನ್ನು ಹೇಳುವರು ಒಂದನೆಯದಾಗಿ ಸರಕುಗಳ ಉಗ್ರಾಣಗಳನ್ನೇ ಕೊಳ್ಳುವದು. ಎರಡನೆಯದಾಗಿ ಆಯಾತಗಳನ್ನು ತಗ್ಗಿಸುವದು ಸಹಕಾರದ ತಳಹದಿಯ ಮೇಲೆ ಗೃಹೋದ್ಯೋಗ ಗ್ರಾಮೋದ್ಯೋಗಗಳ ವಿಕಾಸವಾಗಬೇಕೆಂದು ಯೋಜನೆಯು ಅಭಿಪ್ರಾಯಪಡುವದು ಈ ವಿಷಯದಲ್ಲಿ ಸವಿಸ್ತರ ವಿವರಣೆಯನ್ನು ಪ್ರತ್ಯೇಕವಾಗಿ ಕೊಡಲಾಗಿದೆ.

೧೯೪೬ರಲ್ಲಿ, ಗೃಹೋದ್ಯೋಗಗಳ ಪುನರುದ್ಧಾರ ವಿಕಾಸಗಳಿಗಾಗಿ, ಸರಕಾರವು ಮುಂಬಯಿ ರಾಜ್ಯದಲ್ಲಿ ಒಂದು ನಿಶ್ಚಿತ ಯೋಜನೆಯನ್ನು ಸಿದ್ಧಪಡಿಸಿತು ಈ ರಾಜ್ಯದಲ್ಲಿ ಈಗಾಗಲೇ ಗ್ರಾಮೋದ್ಯೋಗ ಸಮಿತಿಯೂ ರಾಜ್ಯದ ಕೈಮಗ್ಗಗಳ ಸಮಿತಿಯೂ ಅಸ್ತಿತ್ವದಲ್ಲಿವೆ ಪಂಚ ವಾರ್ಷಿಕ ಯೋಜನೆಯಲ್ಲಿ ಕಂಡು ಬರುವ ( ನಮೂದಿಸಲಾದ ) ಎಷ್ಟೋ ಯೋಜನೆಗಳು ಈಗಾಗಲೇ ಕಾರ್ಯಪ್ರವೃತ್ತವಾಗಿವೆ ರಜಿಸ್ಟ್ರಾರ, ಔದ್ಯೋಗಿಕ ಸಹಕಾರಿ ಸಂಘಗಳ ಮತ್ತು ಗ್ರಾಮೋದ್ಯೋಗಗಳ ಜಾಯಿಂಟ ರಜಿಸ್ಟ್ರಾರ, ಡಾಯರೆಕ್ಟರ ಆಫ್ ಇಂಡಸ್ಟ್ರೀಜ, ಗ್ರಾಮೋದ್ಯೋಗ ಸಮಿತಿಯ ಚೇಅರಮನ್ ಮತ್ತು ಪ್ರಾಂತಿಕ ಔದ್ಯೋಗಿಕ ಸಂಸ್ಥೆಯ ಚೇಅರಮನ್ ಇವರನ್ನೊಳಗೊಂಡ ಒಂದು ಸಮಿತಿಯು ಗೃಹೋದ್ಯೋಗ ಗ್ರಾಮೋದ್ಯೋಗಗಳ ವಿಕಾಸಕ್ಕೆ ಸಂಬಂಧಪಟ್ಟ ಯೋಜನೆಗಳನ್ನು ಸಿದ್ಧಪಡಿಸಲಿಕ್ಕೂ ಸಮೀಕರಿಸಲಿಕ್ಕೂ ಸ್ಥಾಪಿತವಾಗಿದೆ. ಈ ಚಟುವಟಿಕೆಗಳ ಬಗೆಗೆ ಸವಿಸ್ತರ ವಿವರಣೆಯನ್ನು ಪ್ರತ್ಯೇಕವಾಗಿ ಕೊಡಲಾಗಿದೆ.

ಈ ರಾಜ್ಯದಲ್ಲಿ ಗೃಹೋದ್ಯೋಗಗಳ ಉನ್ನತಿ ವಿಕಾಸಗಳಿಗೆ ಸರಕಾರದವರ ಪ್ರಯತ್ನಗಳು ನಡೆದಿದ್ದರೂ, ಅನೇಕ ರೀತಿಯಿಂದ ಇವು ಇನ್ನೂ ಪೂರ್ಣವಾಗಿ ಸಂಘಟಿತವಾಗಿಲ್ಲ ಈ ಉದ್ಯೋಗಗಳಲ್ಲಿ ತೊಡಗಿದ ಕೈಗಾರಿಕೆಯ ಕಸಬುದಾರರು, ಹೊಸ ಹೊಸ ಕಚ್ಚಾ ಮಾಲು, ಸರಕು, ಅರ್ಥ ಸಹಾಯ ಈ ಮೊದಲಾದವುಗಳ ವಿಷಯದಲ್ಲಿ ಬಹುಪ್ರಮಾಣದಲ್ಲಿ ಇನ್ನೂ ಮಧ್ಯಸ್ಥರನ್ನೇ—ದಳ್ಳಾಳಿಗಳನ್ನೇ ಅವಲಂಬಿಸಬೇಕಾಗುವದು ಎಷ್ಟೋ ಕಸಬುದಾರರನ್ನು ಈ ಮಧ್ಯಸ್ಥರೇ ಕೆಲಸಕ್ಕೆ ಹಚ್ಚಿದ್ದಾರೆ, ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿದ್ದಾರೆ ಈ ಕಸಬುದಾರರಿಗೆ ಜೀವನಕ್ಕೆ ಅಗತ್ಯವಿರುವ ವೇತನವಾಗಲೀ ಸಾಕಷ್ಟು ಪ್ರತಿಫಲವಾಗಲೀ ದೊರೆಯುವದಿಲ್ಲ ಗೃಹೋದ್ಯೋಗಗಳ ವಸ್ತುಗಳಿಗೆ, ಸರಕುಗಳಿಗೆ ನಿಯಮಿತವಾದ, ಯೋಗ್ಯವಾದ ಪೇಟೆಗಳ ಭರವಸೆಯಿಲ್ಲ ಹೀಗಾಗಿ ಸಿದ್ಧವಾದ ವಸ್ತುಗಳ ಮಟ್ಟವಾಗಲೀ ತರಗತಿಯಾಗಲೀ ಉಚ್ಚವಾಗಿರುವದಿಲ್ಲ ಇಂದಿನ ಪೇಟೆಯ

ಪರಿಸ್ಥಿತಿಯನ್ನು ಎದುರಿಸಿ, ಕೈಗಾರಿಕೆಯ ಸರಕುಗಳು ಅಸ್ತಿತ್ವವನ್ನೂ ಬೆಲೆಯನ್ನೂ ಬೇಡಿಕೆಯನ್ನೂ ಕಾಯ್ದುಕೊಳ್ಳುವಷ್ಟು ಈ ಕೈಗಾರಿಕೆಯವರ ತಂತ್ರಜ್ಞತೆಯೂ ಕಾರ್ಯಶಕ್ತಿಯೂ ಅಷ್ಟು ಉಚ್ಚ ಮುಟ್ಟಿದ್ದಿಲ್ಲ

**ಕೈಗಾರಿಕೆಯವರ ಅವಶ್ಯಕತೆಗಳು :—** ಇವರ ಅವಶ್ಯಕತೆಗಳು ವಾಡಿಕೆಯಾಗಿ ಕೆಳಗಿನಂತಿವೆ.

(೧) ಉಪಕರಣ ಸನ್ನಾಹ

(೨) ಕಚ್ಚಾ ಸರಕು

(೩) ಆರ್ಥ ಸಹಾಯ

(೪) ಮಾರಾಟದ ಏರ್ಪಾಡು

ಶಕ್ಯವಿದ್ದಷ್ಟು ಕಡಿಮೆ ವೇಳೆಯಲ್ಲಿ, ಅಗ್ಗ ದರದಲ್ಲಿ ಉತ್ತಮ ತರಗತಿಯ ವಸ್ತುಗಳನ್ನು ಸಿದ್ಧಗೊಳಿಸಲಿಕ್ಕೂ ಕಾರ್ಯಕ್ಷಮತೆಯನ್ನು ಸಂಪಾದಿಸಲಿಕ್ಕೂ, ಕೈಗಾರಿಕೆಯ ಉದ್ಯಮಿಗಳು ಸಾಧ್ಯವಿದ್ದಷ್ಟು ಶ್ರೇಷ್ಠ ಉಪಕರಣ ಸನ್ನಾಹವನ್ನುಪ ಯೋಗಿಸಬೇಕಲ್ಲದೆ ಉತ್ಪಾದನೆಯ ಅತ್ಯಾಧುನಿಕ ಪದ್ಧತಿಗಳನ್ನು ಅನುಸರಿಸ ತಕ್ಕದ್ದು ಸಾಧನ ಸಂಪದ್ವಿರಹಿತರೂ ದರಿದ್ರರೂ ಆಗಿರುವರೇ ಕೈ ಕಸಬುದಾರರು ! ಮೇಲಾಗಿ ಕೈಗಾರಿಕೆಯ ಉದ್ಯೋಗವನ್ನು ನಡೆಯಿಸಿಕೊಂಡು ಹೋಗಲು ಅವರಿಗೆ ಬರುವ ಅತಿ ಮಹತ್ವದ ತೊಂದರೆಯೆಂದರೆ ಸಾಕಷ್ಟು ಧನಸಹಾಯದ ಕೊರತೆ ! ಈ ದೇಶದಲ್ಲಿಯ ಈ ಕೈಗಾರಿಕೆಯ ಉದ್ಯಮಿಗಳ ಸರ್ವಸಾಮಾನ್ಯವಾದ ಮತ್ತು ಮೂಲಭೂತವಾದ ಅಡಚಣೆಯೆಂದರೆ ಪತ್ತು ! ಆರಂಭದ ಬಂಡವಾಳವು ಎಷ್ಟೇ ಸಣ್ಣಪ್ರಮಾಣದಲ್ಲಿದ್ದರೂ ಅದು ಕೈಗಾರಿಕೆಯ ಉದ್ಯಮಿಗೆ ಕಚ್ಚಾ ಸರಕು, ಉಪಕರಣ ಸನ್ನಾಹ, ಸಲಕರಣೆ ಈ ಮೊದಲಾದವುಗಳನ್ನು ಕೊಳ್ಳಲಿಕ್ಕೂ ತನ್ನ ಮತ್ತು ತನ್ನ ಕುಟುಂಬದ ಉಪಜೀವನವನ್ನು ಸಾಗಿಸಲಿಕ್ಕೂ ಮತ್ತು ಸಿದ್ಧ ಗೊಳಿಸಿದ ವಸ್ತು—ಒಡವೆಗಳನ್ನು ಮಾರಲು ನೆರವಾಗಲಿಕ್ಕೂ ಉಪಯೋಗ ವಾಗುವ ಪ್ರಥಮ ಪ್ರಧಾನ ಅವಶ್ಯಕತೆಯಾಗಿದೆ ಅವನಿಗೆ ಸಣ್ಣ ಮುದ್ದತಿನ ಸಾಲ, ಮಾಧ್ಯಮಿಕ ಮುದ್ದತಿನ ಸಾಲ, ಒಮ್ಮೊಮ್ಮೆ ದೊಡ್ಡ ಮುದ್ದತಿನ ಸಾಲವು ಬೇಕಾಗುವದು ಅವನು ಸಿದ್ಧಗೊಳಿಸಿದ ಸರಕಿಗ ಭರವಸೆಯ ಪೇಟೆಯಿಲ್ಲ ಅವನಿಗೆ ಸರಕುಗಳನ್ನು ಸಂಗ್ರಹಿಸುವ ಶಕ್ತಿಯಿಲ್ಲ ಪೇಟೆಯ ಪರಿಸ್ಥಿತಿಯ ಬಗೆಗೆ ಜ್ಞಾನವಿಲ್ಲ ಸದ್ಯಕ್ಕೆ ಅವನು ಎಲ್ಲ ಅವಸ್ಥೆಗಳಲ್ಲಿಯೂ ಸುಲಿಯಲ್ಪಡುತ್ತಿರುವನು, ಶೋಷಿಸಲ್ಪಡುತ್ತಿರುವನು ಕಚ್ಚಾ ಸರಕುಗಳನ್ನು ಹೆಚ್ಚಿನ ಬೆಲೆಗೆ ಕೊಂಡು ಅವನು ತಯಾರಿಸಿದ ಒಡವೆಗಳನ್ನು ಕಡಿಮೆ ಬೆಲೆಗೆ ಮಾರಬೇಕಾಗುವದು ವಿರುದ್ಧವಿರುವ ಸಂಸ್ಥೆ ( ಎಜನ್ಸಿ ) ಗಳಿಂದ ಅವನು ಶೋಷಿಸಲ್ಪಡುತ್ತಿರುವನು. ಬಂಡವಾಳಶಾಹಿ ಬ್ಯಾಂಕುಗಳಿಂದ ಅಥವಾ ಪತ್ತಿನ ವ್ಯವಹಾರವನ್ನು ಮಾಡುವ ಇನ್ನಿತರ ಯಾವದೇ ಬ್ಯಾಂಕಿನಿಂದ ಅವನಿಗೆ ಸಾಲ ದೊರೆಯುವದು ದುಸ್ತರವು.

ಯಾಕಂದರೆ ಇಂಥ ಸಾಲಕ್ಕಾಗಿ ಅವನು ಕೊಡಬೇಕಾದ, ಎದ್ದು ಕಾಣುವ, ಸುಲಭ ಸಾಧ್ಯವಾದ, ಭದ್ರವಾದ ಹೊಣೆ ( ಆಸ್ತಿ ) ಯೇನೂ ಇರುವದಿಲ್ಲ ಅವನಲ್ಲಿರುವ ಒಂದೇ ಒಂದು ಹೊಣೆ ( ಆಸ್ತಿ ) ಯೆಂದರೆ, ಅವನ ಉತ್ಪಾದನೆಯ ಶಕ್ತಿ ! ಈ ಶಕ್ತಿಯನ್ನು ಸಾಹುಕಾರರು ಅವನಿಗೆ ಕೊಡುವ ಸಾಲಕ್ಕಾಗಿ ಹೊಣೆಯೆಂದು ಸ್ವೀಕರಿಸಲು ಸಿದ್ಧರಿಲ್ಲ ಅಲ್ಲವೆ ಅಗ್ಗ ಅಥವಾ ಕಡಿಮೆ ಬಡ್ಡಿಯ ದರದಿಂದ ಸಾಲ ಸಂಪಾದಿಸುವದು ಕಸಬುದಾರರಿಗೆ ಎಷ್ಟೋ ಸಲ ಕಠಿಣವೂ ಶಕ್ತಿಯಾಚೆಗಿನದೂ ಎನಿಸುವದು ಇವರು ಪಡೆಯಬಹುದಾದ ಸಾಲದ ಮೇಲಿನ ಬಡ್ಡಿಯದರವು ಗೃಹೋದ್ಯೋಗಗಳ ಸಹನೆಯ ಶಕ್ತಿಗಿಂತಲೂ ಹೆಚ್ಚಿಗಿರುವದು ಈ ಮೇರೆಗೆ ಕಚ್ಚಾ ಸರಕು, ಉಪಕರಣಸನ್ನಾಹ, ಅರ್ಥಸಹಾಯ ಈ ಮೊದಲಾದವುಗಳನ್ನು ಸಂಪಾದಿಸುವಲ್ಲಿಯೂ, ದುಡಿತಕ್ಕೆ ತಕ್ಕ ಪ್ರತಿಫಲವನ್ನು ಕಸಬುದಾರನಿಗೆ ತಂದು ಕೊಡುವ ಯೋಗ್ಯ ಬೆಲೆಗೆ, ಅವನು ತಯಾರಿಸಿದ ವಸ್ತುಗಳನ್ನು ಮಾರುವಲ್ಲಿಯೂ ಅನೇಕ ತೊಂದರೆಗಳಿವೆ

**ಸಹಕಾರವೂ ಗೃಹೋದ್ಯೋಗಗಳೂ —**

ನಮ್ಮ ದೇಶದಂತಹ ವಿಕಾಸ ಹೊಂದದ ನಾಡಿನಲ್ಲಿ ಸಣ್ಣ ಸಣ್ಣ ಉತ್ಪಾದಕರಿಗೆ, ಅವರು ಕೃಕಸಬುದಾರರೇ ಇರಲಿ ಅಥವಾ ಒಕ್ಕಲುತನದ ಉತ್ಪಾದಕರೇ ಇರಲಿ, ರಾಷ್ಟ್ರದ ಅರ್ಥರಚನೆಯಲ್ಲಿ ಭದ್ರವಾದ ಅದಕ್ಕಿಂತಲೂ ತುಸು ಮುಂದೆ ಹೋಗಿ ಹೇಳುವದಾದರೆ, ಭದ್ರವೂ ಪ್ರಧಾನವೂ ಮಹತ್ವವೂ ಆದ ಸ್ಥಾನವಿದೆ. ಆದರೆ ತಾಂತ್ರಿಕ ದೃಷ್ಟಿಯಿಂದ ಅವರು ನಿಶ್ಶಕ್ತರೂ ಸಂಘಟನಾ ರಹಿತರೂ ಆಗಿರುವರು ಸಮಾಜದಲ್ಲಿಯ ಬಲಿಷ್ಠ ಪ್ರವೃತ್ತಿಶಕ್ತಿಗಳ ದಾಳಿಯನ್ನು ಎದುರಿಸಲು ಅವರು ಅಸಮರ್ಥರಾಗಿರುವರು ಆರ್ಥಿಕ ದೃಷ್ಟಿಯಿಂದ ದುರ್ಬಲರಾಗಿರುವದರಿಂದ, ಘನ ಉತ್ಪಾದಕರ ಘನವ್ಯವಹಾರದ ಲಾಭವನ್ನು ಅವರು ವೈಯಕ್ತಿಕವಾಗಿ ಪಡೆಯಲಾರರು ಕಸಬುದಾರರಿಗೆ ಮೇಲೆ ವಿವರಿಸಿದಂತೆ ತಮ್ಮವೇ ಆದ ವಿಶಿಷ್ಟ ಅವಶ್ಯಕತೆಗಳು ಅಡಚಣಿಗಳು ಇವೆ ಇವರ ಆರ್ಥಿಕ ಸಮಸ್ಯೆಗಳನ್ನು ಬಿಡಿಸುವಲ್ಲಿ ಸಹಕಾರ ತತ್ವಗಳು ಹೆಚ್ಚು ಉಪಯುಕ್ತವೂ ಉತ್ತಮವೂ ಪರಿಣಾಮಕಾರಿಯೂ ಎಂದು ಕಂಡುಬಂದಿದೆ ಏಶಿಯಾದ ರಾಷ್ಟ್ರಗಳಲ್ಲಿಯಷ್ಟೇ ಅಲ್ಲ, ಉನ್ನತ ಮಟ್ಟದ ಸುಧಾರಣೆಯಲ್ಲಿರುವ ಪಾಶ್ಚಿಮಾತ್ಯ ದೇಶಗಳಲ್ಲಿ ಸಹ, ಶಿಲ್ಪಿಗಳಿಗೆ, ಕಾರಾಗೀರರಿಗೆ ಕೈಗಾರಿಕೆಯವರಿಗೆ, ಗೃಹೋದ್ಯೋಗಗಳಲ್ಲಿ ತೊಡಗಿರುವ ಮತ್ತಿತರ ಸಣ್ಣ ಸಣ್ಣ ಬಡಪರಿಗೆ ನೆರವಾಗುವಲ್ಲಿಯೂ ಅವರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವಲ್ಲಿಯೂ ಸಹಕಾರಿ ಸಂಘಗಳೇ ಹೆಚ್ಚು ಉಪಯುಕ್ತ ಪರಿಣಾಮಕಾರಿಯಾದ ಸಾಧನವೆಂದು, ವಿಶ್ವಮಾನ್ಯವಾದ ಅನುಭವವು ಹೇಳುತಿದೆ ಪ್ರಯೋಗವು ಪ್ರಚಾರಗೈಯುತಿದೆ ಇದಕ್ಕೆ ಕೆಳಗಿನ ಕಾರಣಗಳನ್ನು ಕೊಡಬಹುದು

(೧) ವೈಯಕ್ತಿಕ ಕಸಬುದಾರರು ಸಂಘಟಿತರಾದರೆ, ಸಾಧನ ಸಂಪತ್ತನ್ನು ಕಲೆಹಾಕುವಲ್ಲಿಯೂ ಪತ್ತನ್ನು ಹೆಚ್ಚಿಸುವಲ್ಲಿಯೂ ಸಮರ್ಥ ರಾಗುವರು

(೨) ಒಕ್ಕಟ್ಟೇ ಬಲವೆಂಬಂತೆ, ಅವರು ಸಂಘಟನೆಯಿಂದ ಬಲಶಾಲಿ ಗಳಾಗಿ,ದೊಡ್ಡ ಪ್ರಮಾಣದ ಉದ್ಯೋಗದ ಲಾಭವನ್ನು ಪಡೆಯುವರು

(೩) ಸ್ವಯಂ ಸಂಘಟನೆಗಳೆಂದರೆ ಸಹಕಾರಿ ಸಂಘಗಳು

(೪) ಮಿತವ್ಯಯದ ಚಟವನ್ನು ಬೆಳೆಯಿಸುವಲ್ಲಿ, ಸರ್ವಸಾಮಾನ್ಯ ಜ್ಞಾನೋತ್ಸಾಹವನ್ನು ತುಂಬುವಲ್ಲಿ, ಆರ್ಥಿಕ ವ್ಯವಹಾರವನ್ನು ನಡೆಯಿಸಿಕೊಂಡು ಹೋಗಲು ತಿಳುವಳಿಕೆಯನ್ನು ಕೊಡುವಲ್ಲಿ, ಪ್ರಜಾಸತ್ತಾತ್ಮಕ ಆಢಳಿತೆಗೆ ಅನುಗುಣವಾಗಿ, ಕಾರ್ಯಾರಂಭದ, ಕಾರ್ಯ ತತ್ಪರತೆಯ ಗುಣವನ್ನೂ ಹೊಣೆಯ ಕಲ್ಪನೆಯನ್ನೂ ಹೆಚ್ಚಿಸುವಲ್ಲಿ, ವಿಕಾಸಗೊಳಿಸುವಲ್ಲಿ, ಈ ಸಹಕಾರಿ ಸಂಘಗಳು ಶಿಕ್ಷಣದ ಉಪಯುಕ್ತ ಸಾಧನೆಗಳಾಗಿವೆ

(೫) ಗೃಹೋದ್ಯೋಗಗಳಲ್ಲಿ ತೊಡಗಿರುವ ಕೈಗಾರಿಕೆಯವರನ್ನೂ ಮತ್ತಿ ತರರನ್ನೂ ಮಾರ್ಬಡ್ಡಿಯ ಶೋಷಣೆಯ ವಿವಿಧ ರೂಪಗಳ ಪಾಶದಿಂದ ಮುಕ್ತಗೊಳಿಸುವವೀ ಸಹಕಾರಿ ಸಂಘಗಳು

(೬) ಕಸಬುದಾರರನ್ನು ಆತ್ಮ ವಿಶ್ವಾಸಿಗಳನ್ನಾಗಿ ಮಾಡುವವು

(೭) ವೈಯಕ್ತಿಕವಾಗಿ ಕಸಬುದಾರರು ಪಡೆಯಲಸಾಧ್ಯವಾದ ಪತ್ತನ್ನು ದೊರಕಿಸಿಕೊಡಲು ಇವು ನೆರವಾಗಬಲ್ಲವು

(೮) ಕಚ್ಚಾ ಸರಕುಗಳನ್ನೂ ಮತ್ತಿತರ ಮಾಲನ್ನೂ ದೊಡ್ಡ ಪ್ರಮಾಣದಲ್ಲಿ ಗುತ್ತಿಗೆಯಿಂದ ಕೊಂಡು, ಅವುಗಳನ್ನು ಅಗ್ಗ ದರದಿಂದ ಕಸಬು ದಾರರಿಗೆ ಪೂರೈಸಲು ನೆರವಾಗುತ್ತವೆ.

(೯) ಸಭಾಸದರು ಯಂತ್ರೋಪಕರಣಗಳನ್ನು ಕೊಂಡು, ಸಾಮೂಹಿಕ ರೀತಿಯಿಂದ ಉಪಯೋಗ ಮಾಡಿಕೊಳ್ಳುವ ಸಂಧಿಯನ್ನೂ ಲಾಭ ವನ್ನೂ ಒದಗಿಸಿಕೊಡುತ್ತವೆ

(೧೦) ತಯಾರಾದ ವಸ್ತುಗಳನ್ನು ಮಾರಲಿಕ್ಕೆ ಹೆಚ್ಚಿನ ಸೌಕರ್ಯಗಳನ್ನು ಒದಗಿಸುತ್ತವೆ

(೧೧) ವಿಚಾರಾನುಭವಗಳನ್ನು ಕಲೆಹಾಕಲು ಸುಸಂಧಿಯನ್ನೊದಗಿಸುವವು ತಾಂತ್ರಿಕ ದೃಷ್ಟಿಯಿಂದ ಶ್ರೇಷ್ಠವಾದ ಸಮರ್ಥವಾದ ಪದ್ಧತಿಗಳನ್ನೂ, ಕಲಾಪೂರ್ಣವಾದ ಕುಸರು ಕುಸುರಾಗಿರುವ ನಕ್ಷೆ ಮೊದಲಾದವುಗಳ ಉಚ್ಚ ಮಟ್ಟವನ್ನೂ ಸ್ವೀಕರಿಸಲು ಅನುವು ಮಾಡಿಕೊಡುತ್ತವೆ

(೧೨) ಅಲ್ಲದೆ ಸಿದ್ಧವಾದ ವಸ್ತುಗಳಿಗೆ ಉತ್ತಮ ಪೇಟೆಯನ್ನು ದೊರಕಿಸಿ ಕೊಡುತ್ತವೆ ಅದರಿಂದ ಕಸಬುದಾರರಿಗೆ ತಮ್ಮ ನಿತ್ಯದ ವಾಡಿಕೆಯ ಕೆಲಸದ ಕಡೆಗೆ ಪೂರ್ಣ ಲಕ್ಷ ಕೊಡಲು ಅನುಕೂಲವಾಗುತ್ತದೆ ಯಾಕೆಂದರೆ ಸುಶಿಕ್ಷಿತರಾದ, ನುರಿತ, ಸಂಬಳಪಡೆವ ಜನರ ಮೇಲ್ವಿಚಾರಣೆಯಲ್ಲಿ ನಡೆದ ಸಹಕಾರಿ ಮಾರಾಟದ ಸಂಸ್ಥೆಗಳು ಕಸಬುದಾರರ ಹಿತದ ಕಡೆಗೇನೇ ಸಾಧ್ಯವಿದ್ದಷ್ಟು ದೃಷ್ಟಿಯಿಟ್ಟು ಈ ಸಮಸ್ಯೆಯನ್ನು ಬಿಡಿಸಲು ಯತ್ನಿಸುತ್ತವೆ

(೧೩) ಕೂಲಿಕಾರರ ಕೂಲಿಯ ಹಿತದ ದೃಷ್ಟಿಯಿಂದ, ಸಹಕಾರಿ ಸಂಘಗಳು ಬಹಳೇ ಒಳ್ಳೆಯವು ಬಳಿಯಲ್ಲಿ ಹಣವಿಲ್ಲದ, ಅದಕ್ಕಾಗಿಯೇ ವ್ಯವಹಾರಮಾಡುವ ಶಕ್ತಿಯಿಲ್ಲದ, ಅಶಿಕ್ಷಿತ ಮತ್ತು ಸಣ್ಣ ಸಣ್ಣ ಕೂಲಿಕಾರರು ಸಾಮೂಹಿಕ ಪ್ರಯತ್ನಗಳಿಂದ ಸಂಘಟಿತರಾಗಿ ಕೂಲಿಯ ಗುತ್ತಿಗೆಯ ಸಂಘ (ಲೇಬರ ಕಾಂಟ್ರ್ಯಾಕ್ಟ ಸೊಸಾಯಟಿ) ಗಳನ್ನು ಸ್ಥಾಪಿಸಿಕೊಳ್ಳಬಹುದು

ಗೃಹೋದ್ಯೋಗಿಗಳಿಗೆ, ಭಿನ್ನ ಭಿನ್ನ ಅವಸ್ಥೆಗಳಲ್ಲಿ, ತಮ್ಮವೇ ಆದ ಸಹಕಾರಿ ಸಂಘಗಳ ಅವಶ್ಯಕತೆಯಿದೆ ಯಾಕಂದರೆ —

(೧) ವೆಚ್ಚವನ್ನು ತಗ್ಗಿಸುವದು

(೨) ದೊಡ್ಡ ಪ್ರಮಾಣದಲ್ಲಿ ಕೊಳ್ಳುವ ವ್ಯವಹಾರದಿಂದ ಆಗುವ ಉಳಿತಾಯವನ್ನು ಲಕ್ಷಿಸುವದು

(೩) ಸುಲಭ ಕರಾರು (ನಿರ್ಬಂಧನೆ)ಗಳ ಮೇಲೆ, ಅಗ್ಗ ಬಡ್ಡಿಯ ದರದಿಂದ ಪತ್ತಿನ ಪೂರೈಕೆ

(೪) ಸಿದ್ಧಗೊಳಿಸಲ್ಪಟ್ಟ ವಸ್ತುಗಳ ಮಾರಾಟದ ವ್ಯವಸ್ಥೆ

ತಳದಿಂದ ತುದಿಯುವರೆಗೂ, ಪ್ರತಿಯೊಂದು ಮಟ್ಟದಲ್ಲಿ ನೆಲೆಗೋಪುರಾಕಾರದ ಸಂಘಟನೆಯನ್ನು ನಿರ್ಮಿಸತಕ್ಕದ್ದು. ಅಂದರೆ ಹಳ್ಳಿಯ ಮಟ್ಟದಲ್ಲಿ ತಳಹದಿಯಾಗಿ ಒಂದೇ ಕೈಗಾರಿಕೆಯ ಅಥವಾ ವಿವಿಧ ಕೈಗಾರಿಕೆಯ ಪ್ರಾಥಮಿಕ ಸಂಘವು, ಜಿಲ್ಹೆಯ ಅಥವಾ ಪ್ರಾದೇಶಿಕ ಮಟ್ಟದಲ್ಲಿ ಸಂಯುಕ್ತ ಸಂಸ್ಥೆ ಮತ್ತು

ರಾಜ್ಯದ ಮಟ್ಟದಲ್ಲಿ ಕೊನೆಯ ಘನಸಂಸ್ಥೆ. ಈ ಮೇರೆಗೆ ಸಂಘಗಳ ರಚನೆ ಯಾಗಬೇಕು ಪೂರ್ಣವಾದ ದಿವ್ಯ ಭವನವು ನಿರ್ಮಾಣವಾಗದಿದ್ದರೆ, ಭಿನ್ನ ಭಿನ್ನ ಮಟ್ಟದಲ್ಲಿ ಸಂಘಟನೆಗಳು ಸುವ್ಯವಸ್ಥಿತವಾದ ಆರ್ಥಿಕ ತಳಹದಿಯ ಮೇಲೆ, ಕಾರ್ಯಕ್ಷಮವಾದ ರೀತಿಯಲ್ಲಿ ನಡೆಯದಿದ್ದರೆ, ಸಹಕಾರಿ ತತ್ವಗಳು, ಪದ್ಧತಿಗಳು ಆಂತರಿಕವಾಗಿ ಎಷ್ಟೇ ಉತ್ತಮವಾಗಿದ್ದರೂ, ಉಪಯುಕ್ತವಾಗಿದ್ದರೂ, ಇಷ್ಟ ಪರಿಣಾಮವನ್ನುಂಟು ಮಾಡವು

**ಮುಂಬಯಿ ರಾಜ್ಯದಲ್ಲಿಯ ಔದ್ಯೋಗಿಕ ಸಹಕಾರಿ ಸಂಘಗಳ ಇತಿಹಾಸವು**

ತೀರ ಪೂರ್ವದಲ್ಲಿ ಅಂದರೆ ೧೯೦೬ರಲ್ಲಿ, ರತ್ನಾಗಿರಿ ಜಿಲ್ಹೆಯಲ್ಲಿ ನೇಯ್ಕಾರರ ಸಲುವಾಗಿ ಒಂದು ಪತ್ತಿನ ಸಂಘವು ಸ್ಥಾಪಿತವಾಯಿತು ಆರಂಭದಿಂದಲೂ ಕೈಕಸಬುದಾರರ ಆರ್ಥಿಕ ಪರಿಸ್ಥಿತಿಯ ಸುಧಾರಣೆಯನ್ನು ಮಾಡುವ ಉದ್ದೇಶ ದಿಂದ ಸಹಕಾರಿ ಸಂಘಗಳನ್ನು ಸ್ಥಾಪಿಸಲು ಸರಕಾರೀ ಮತ್ತು ಸರಕಾರೇತರ ಜನರು ಕೂಡಿಯೇ ಪ್ರಯತ್ನ ಮಾಡಿದರು ೧೯೦೯ರ ಸುಮಾರಿಗೆ, ನೇಯ್ಕಾರರು, ಚರ್ಮಕಾರರು, ಒಡಿಗರು ಉತ್ಪಾದನೆಯ ಚಟುವಟಿಕೆಗಳನ್ನು ಕೈಕೊಳ್ಳಲು, ಸಹಕಾರಿ ತತ್ವದ ಮೇಲೆ ಸಂಘಟಿತರಾದರು ಪುಣೆಯಲ್ಲಿ ಒಂದು ಚರ್ಮಕಾರರ ಸಂಘವನ್ನೂ, ಧಾರವಾಡದಲ್ಲಿ ಒಂದು ನೇಯ್ಕಾರರ ಸಂಘವನ್ನೂ ಸ್ಥಾಪಿಸಲು ಕ್ರಮವನ್ನು ಕೈಕೊಳ್ಳಲಾಯಿತು ಚರ್ಮಕಾರರ ಸಂಘಗಳ ಪ್ರಗತಿ ವಿಕಾಸ ಗಳಿಗೆ ಸರಕಾರದವರು ಹೆಚ್ಚು ಲಕ್ಷಪೂರ್ವಕತೊಡಗಿದರು ೧೯೧೨ರ ಕಾಯದೆಯು ಜಾರಿಯಲ್ಲಿ ಬಂದ ನಂತರ ಸರಕಾರದವರು ನೇಯಗಾರ ಸಂಘಗಳ ಮುಖಾಂತರ ನೇಯ್ಕಾರಿಕೆಯ ಉದ್ಯೋಗದ ವಿಕಾಸವನ್ನು ಕೈಕೊಂಡರು. ಮತ್ತು ಹಾರು-ಲಾಳೀ (ಫ್ಲಾಯ್‌ಶಟಲ್) ಮಗ್ಗಗಳ ಪ್ರಾಯೋಗಿಕರನ್ನೂ ವಿಶಿಷ್ಟ ಅಧಿಕಾರಿಗಳನ್ನೂ ಈ ಉದ್ಯೋಗಗಳ ಪ್ರಗತಿಗಾಗಿ ನೇಮಿಸಿದರು ೧೯೧೨-೧೩ ರಲ್ಲಿ ನೇಯ್ಕಾರ ಸಂಘಗಳ ಸಂಖ್ಯೆ ೧೯ ಇದ್ದಿತು ಢೋರ ಮತ್ತು ಚರ್ಮಕಾರರ ಸಂಘಗಳು ಪುಣೆ ಸಾತಾರೆಗಳಲ್ಲಿ ಅಸ್ತಿತ್ವದಲ್ಲಿ ಬಂದವು ತಾ ३೧-३-೧೯೨೪ಕ್ಕೆ ಇರುವ ೬೨ ನೇಯ್ಕಾರ ಸಂಘಗಳನ್ನುಳಿದು, ಇತರ ಔದ್ಯೋಗಿಕ ಸಂಘಗಳು ೨೪ ಇದ್ದವು ಈ ೨೪ ಸಂಘಗಳಲ್ಲಿ ಕೇವಲ ೧೪ ಸಂಘಗಳು ಮಾತ್ರ ಕಾರ್ಯಪ್ರವೃತ್ತವಾಗಿದ್ದವು ಇವುಗಳ ಸಭಾಸದರು ೧,೧೧೫ ಇದ್ದರೆ ದುಡಿಯುವ ಭಾಂಡವಲವು ೨,೨೭,೪೭೪ ರೂ ಇದ್ದಿತು ಕಾಯ್ದಿಟ್ಟ ನಿಧಿಯು ೨೫,೦೦೦ ರೂ ಇದ್ದಿತು ೧೯೨೪ ರಿಂದ ಔದ್ಯೋಗಿಕ ಸಂಘಗಳ ಇತಿಹಾಸವೆಂದರೆ, ಅಳಿಗಾಲದ ಇತಿಹಾಸ ವಿದ್ಧಂಶಿಯೇ ಇಳಿಕೆಯ ದರ, ಮಂದ್ಯ, ಸ್ಥಗಿತಸ್ಥಿತಿ, ಸಂಘಗಳು ರದ್ದಾಗುವದು, ಈ ಮೊದಲಾದ ಅನಿಷ್ಟ ಪರಿಸ್ಥಿತಿಯು ಪ್ರಾಪ್ತವಾಯಿತು ಆದರೂ ಕೆಲವೊಂದು ನೇಯ್ಕಾರ ಸಂಘಗಳು ಉತ್ತಮ ರೀತಿಯಿಂದ ಮುಂದುವರಿದವು ದಿನಾಂಕ ३೧-३-೧೯೨೫ಕ್ಕೆ ೫೯೨ ಸದಸ್ಯರನ್ನೊಳಗೊಂಡ ೧೨ ಉತ್ಪಾದಕ ಸಂಘಗಳಿದ್ದವು ಶೇಅರ ಭಾಂಡವಲವು ರೂ. ೨೧,೯೪೯, ದುಡಿಯುವ ಭಾಂಡವಲವು ೨,೫೭,೯೯೨ ರೂ ಇದ್ದಿತು ನೇಯ್ಕಾರ ಸಂಘಗಳು ೪೦ ಇದ್ದು ಅವುಗಳ ಸಭಾಸದರು ೧,೬೫೧ ಇದ್ದರು ದುಡಿಯುವ ಬಂಡವಾಳವು ರೂ ೨,೦೯,೭೭೨ ಇದ್ದಿತು.

೧೯೩೫ರಲ್ಲಿ ಕೇಂದ್ರ ಸರಕಾರದ ಆರ್ಥಿಕ ಸಹಾಯ ಪಡೆದು ಮುಂಬಯಿ ಸರಕಾರದವರು ಕೈಮಗ್ಗಗಳ ಉದ್ಯೋಗಗಳ ವಿಕಾಸ ಯೋಜನೆಯನ್ನು ಮಂಜೂರ ಮಾಡಿದರು ಕೈಮಗ್ಗಗಳಿಂದ ತಯಾರಾದ ಜವಳಿಯನ್ನು ಮಾರಲು ಅನುಕೂಲತೆಯನ್ನು ಕಲ್ಪಿಸಿಕೊಡುವ ದೃಷ್ಟಿಯಿಂದ ಪುಣೆ, ನಗರ, ಹುಬ್ಬಳ್ಳಿ, ಯುವೋಲಾ, ಮಳೇಗಾಂವ, ಸೊಲ್ಲಾಪುರ, ಬೆಳಗಾವಗಳಂತಹ ಕೈಮಗ್ಗಗಳ ಮಹತ್ವದ ಕೇಂದ್ರಗಳಲ್ಲಿ ನೇಯ್ಕಾರ ಸಂಘಗಳ ಸಲುವಾಗಿ ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸುವ ಎತ್ತುಗಡೆಯನ್ನು ಮಾಡಲಾಯಿತು ಈ ಸಂಸ್ಥೆಗಳ ಉದ್ದೇಶಗಳು ಮುಖ್ಯವಾಗಿ ಇವು —(೧) ಕಚ್ಚಾ ಸರಕುಗಳನ್ನು ಶಕ್ಯವಿದ್ದಷ್ಟು ಅಗ್ಗ ದರದಿಂದ ಮಾರುವದು (೨) ಹೊಸ ಹೊಸ ಜಾತಿಯ ಉತ್ಪತ್ತಿ, ನಕ್ಷೆ ನಮೂನೆಗಳ ವಿಷಯದಲ್ಲಿ ನೇಯ್ಕಾರರಿಗೆ ಸಲಹೆ ಕೊಡುವದು. (೩) ಅವರ ತಯಾರಾದ ಮಾಲನ್ನು ಮಾರಾಟ ಮಾಡುವದು (೪) 'ಹಾಯರ ಪರ್ಚೇಜ' (ಬಾಡಿಗೆ ಖರೀದಿಯ) ಪದ್ಧತಿಯ ಮೇಲೆ, ಅವರಿಗೆ ಸುಧಾರಿಸಿದ ಉಪಕರಣಗಳನ್ನು ಮಾರುವದು ರಜಿಸ್ಟ್ರಾರ ಮತ್ತು ಡಾಯರೆಕ್ಟರ ಆಫ್ ಇಂಡಸ್ಟ್ರೀಜ (ಸಹಕಾರಿ ಸಂಘಗಳ ರಜಿಸ್ಟ್ರಾರ ಮತ್ತು ಉದ್ಯೋಗಗಳ ಡಾಯರೆಕ್ಟರ) ಈ ಈರ್ವರನ್ನೊಳಗೊಂಡ ಒಂದು ಸಂಯುಕ್ತ ಸಮಿತಿಯು ಮುಂಬಯಿ ರಾಜ್ಯದಲ್ಲಿಯ ಈ ಸಂಸ್ಥೆಗಳ ವ್ಯವಹಾರಾಢಳಿತೆಯನ್ನು ನಿಯಂತ್ರಿಸುತ್ತಿದ್ದಿತು ದಿನಾಂಕ ೩೦-೬-೧೯೪೦ಕ್ಕೆ ೧೮೨೭ ಸದಸ್ಯರನ್ನೊಳಗೊಂಡ ೮ ಉತ್ಪಾದಕ ಸಂಘಗಳಿದ್ದವು ಶೇಅರ ಬಂಡವಾಳವು ರೂ ೩೫೬೬೧, ಕಾಯ್ದಿಟ್ಟ ಮತ್ತಿತರ ನಿಧಿಗಳು ರೂ ೧,೭೬ ೮೧೨ ಇದ್ದವು. ೧೮೮೮ ಸದಸ್ಯರಿರುವ ಒಟ್ಟು ೩೯ ನೇಯ್ಕಾರ ಸಂಘಗಳಿದ್ದವು ಅವುಗಳ ದುಡಿಯುವ ಬಂಡವಾಳವು ರೂ ೧,೬೩,೩೮೧ ಇದ್ದಿತು ಮಾರಾಟವು ೬೮,೪೪೬ ರೂಪಾಯಿಯಷ್ಟಾಯಿತು ಕೈಮಗ್ಗಗಳಿಂದ ತಯಾರಾದ ಮಾಲನ್ನು ಮಾರುವ ಯೋಜನೆಯನ್ವಯ, ಕೇಂದ್ರ ಸರಕಾರದಿಂದ ಸಹಾಯಧನ ಪಡೆಯುತ್ತಿದ್ದ, ಏಳು (೭) ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳಿದ್ದವು. ಹುಬ್ಬಳ್ಳಿಯ ಜಿಲ್ಲಾ ಔದ್ಯೋಗಿಕ ಸಂಸ್ಥೆಯನ್ನುಳಿದು, ಉಳಿದವೆಲ್ಲವು ತೃಪ್ತಿಕರವಾಗಿ ಕಾರ್ಯನಿರ್ವಹಣೆ ಮಾಡುತ್ತಿದ್ದವು ದಿನಾಂಕ ೩೦-೬-೧೯೪೫ಕ್ಕೆ ೪೬ ಉತ್ಪಾದಕರ ಸಂಘಗಳಿದ್ದು ಅವುಗಳ ಸಭಾಸದರು ೯೧೨೯ ಇದ್ದರು ದುಡಿಯುವ ಬಂಡವಾಳವು ರೂ ೪,೩೯,೦೦೧ ಇದ್ದಿತು ನೇಯ್ಕಾರ ಸಂಘಗಳ ಸಂಖ್ಯೆ ೯೫ಕ್ಕೇರಿತು ಸಭಾಸದರ ಸಂಖ್ಯೆ ೧೧೪೬೦ರ ವರೆಗೆ ಹೆಚ್ಚಿತು ದುಡಿಯುವ ಬಂಡವಾಳವು ರೂ. ೨೩,೫೮,೭೪೫ ಇದ್ದಿತು ಮಾರಾಟವಾದ ಮಾಲಿನ ಒಟ್ಟು ಬೆಲೆಯು ರೂ ೫೯,೧೫,೩೫೩ ಇದ್ದಿತು ಸರಕಾರದವರು ಸಹಕಾರಿ ಸಂಘಗಳಿಗೆ ನೂಲಿನ ವಿತರಣಾ ಕಾರ್ಯವನ್ನು ಒಪ್ಪಿಸಿದುದರ ಪರಿಣಾಮವಾಗಿ ಈ ಮಾರಾಟದ ಅಂಕೆಯು ದೊಡ್ಡದಾಗಿ ಕಾಣುವದು ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳ ಸಂಖ್ಯೆಯು ಹತ್ತಕ್ಕೇರಿತು. ಇವುಗಳ ಸಭಾಸದರ ಸಂಖ್ಯೆ ೧೩೬೪೭ ಇದ್ದಿತು ದುಡಿಯುವ ಬಂಡವಾಳವು ರೂ ೧೧,೮೨,೬೬೪ ಇದ್ದಿತು ಇವು ರೂ ೧,೪೨,೪೬,೩೯೩ ಬೆಲೆಯ ಕಚ್ಚಾ ಸರಕುಗಳನ್ನೂ ತಯಾರಾದ ವಸ್ತ್ರವಸ್ತುಗಳನ್ನೂ ಮಾರಾಟ ಮಾಡಿದವು ಇವಕ್ಕೆ ದೊರೆತ ಲಾಭವು ರೂ ೪,೦೧,೦೨೯ ಇದ್ದಿತು

ಈ ಮೊದಲೇ ಹೇಳಿದಂತೆ ಕಾಂಗ್ರೇಸ್ ಮಂತ್ರಿಮಂಡಲವು ೧೯೪೬ರಲ್ಲಿ ಅಧಿಕಾರಕ್ಕೆ ಬಂದಮೇಲೆ, ಗೃಹೋದ್ಯೋಗಗಳ ಪುನರುದ್ಧಾರಕ್ಕೂ ವಿಕಾಸಕ್ಕೂ ವಿಶೇಷ ಲಕ್ಷವನ್ನೂ ಉತ್ಸಾಹವನ್ನೂ ಪೂರೈಸಿತು ಗೃಹೋದ್ಯೋಗ ಗ್ರಾಮೋದ್ಯೋಗಗಳಿಗೆ ಸಂಬಂಧಪಟ್ಟ ಕಾರ್ಯವೆಲ್ಲ ಸಹಕಾರಿ ಖಾತೆಗೆ ಒಪ್ಪಿಸಲ್ಪಟ್ಟಿತು ೧೯೪೭ ಸಪ್ಟೆಂಬರ ೧೭ನೇ ತಾರೀಖಿನ ಸರಕಾರೀ ಹುಕುಮಿನನ್ವಯ ಔದ್ಯೋಗಿಕ ಸಹಕಾರೀ ಸಂಘಗಳ ಸಲುವಾಗಿಯೂ ಗ್ರಾಮೋದ್ಯೋಗಗಳ ಸಲುವಾಗಿಯೂ ಜಾಯಿಂಟ ರಜಿಸ್ಟ್ರಾರರವರ ಜಾಗೆಯೊಂದು ನಿರ್ಮಾಣವಾಯಿತು. ಔದ್ಯೋಗಿಕ ಖಾತೆಯಿಂದ ನಿರ್ವಹಿಸಲ್ಪಡುತ್ತಿದ್ದ ಗೃಹೋದ್ಯೋಗಗಳ ಕಾರ್ಯಭಾಗಗಳೆಲ್ಲವೂ ಸಹಕಾರಿ ಖಾತೆಯ ಔದ್ಯೋಗಿಕ ಸಹಕಾರೀ ಸಂಘಗಳ ಮತ್ತು ಗ್ರಾಮೋದ್ಯೋಗಗಳ ವಿಭಾಗಕ್ಕೆ ವರ್ಗಾಯಿಸಲ್ಪಟ್ಟವು ಅವುಗಳ ಜೊತೆಗೆ, ಉಣ್ಣೆಯ ನಿಷ್ಣಾತ, ಕಾತಿಯ ಮೇಲ್ವಿಚಾರಕ, ಬಣ್ಣದ ಶಿಕ್ಷಕ, ನೇಯ್ಗಾರಿಕೆಯ ಸಹಾಯಕ (ವೂಲ ಎಕ್ಸಪರ್ಟ, ಕಾಯರ್ ಸುಪರವಾಯಝರ, ಡಾಯಿಂಗ ಡೆಮಾನ್‌ಸ್ಟ್ರೇಟರ, ವೀವ್ಹಿಂಗ ಅಸಿಸ್ಟಂಟ) ಈ ಮೊದಲಾದ ತಾಂತ್ರಿಕ ನಿಷ್ಣಾತರನ್ನೊಳಗೊಂಡ ಸಿಬ್ಬಂದಿಯೇ ವರ್ಗಾಯಿಸಲ್ಪಟ್ಟಿತು ಪ್ರತ್ಯಕ್ಷ 'ವರ್ಗಾವರ್ಗಿ'ಯು (ಟ್ರಾನ್ಸಫರ) ೧೯೪೭ ಡಿಸೆಂಬರ ೧ಕ್ಕೆ ಜಾರಿಯಲ್ಲಿ ಬಂದಿತು ಶ್ರೇಷ್ಠ ಫಲಪರಿಣಾಮಗಳನ್ನು ಪಡೆಯುವ ದೃಷ್ಟಿಯಿಂದ, ಈ ಕಾರ್ಯವು ಕೇವಲ ಖಾತೆಯ ಮುಖಾಂತರವಾಗಿಯೇ ನಿರ್ವಹಿಸಲ್ಪಡದೆ ಗ್ರಾಮೋದ್ಯೋಗ ಸಮಿತಿ ಮತ್ತು ಔದ್ಯೋಗಿಕ ಸಹಕಾರಿ ಸಂಘಗಳಂತಹ ಎರಡು ಸರಕಾರೇತರ ಪ್ರಮುಖ ಸಂಸ್ಥೆಗಳ ಮುಖಾಂತರವಾಗಿಯೂ ನಿರ್ವಹಿಸಲ್ಪಡಬೇಕೆಂದು ಸರಕಾರದವರು ಹುಕುಮನ್ನು ಹೊರಡಿಸಿದರು ಗ್ರಾಮೋದ್ಯೋಗ ಸಮಿತಿಯು ಗ್ರಾಮೋದ್ಯೋಗ–ಗೃಹೋದ್ಯೋಗಗಳ ವಿಕಾಸಕ್ಕೆ ಯೋಜನೆಗಳನ್ನು ಸಿದ್ಧಪಡಿಸಿ ಅವುಗಳನ್ನು ಜಾರಿಯಲ್ಲಿ ತರುವದು ಔದ್ಯೋಗಿಕ ಸಹಕಾರಿ ಸಂಘಗಳು ಕೈಕಸಬಿನವರಿಗೂ, ಮಿತವ್ಯಯ, ಸ್ವಾವಲಂಬನ, ಮತ್ತು ಪರಸ್ಪರ ಸಹಾಯದ ಆಧಾರದ ಮೇಲೆ ನಡೆಯುತ್ತಿರುವ ಉಪೋದ್ಯೋಗ (ಉಪಧಂದೆ) ಗಳನ್ನೊಳಗೊಂಡ ಗೃಹೋದ್ಯೋಗ ಗ್ರಾಮೋದ್ಯೋಗಗಳಲ್ಲಿ ತೊಡಗಿದ ಇನ್ನಿತರರಿಗೂ, ಹೆಚ್ಚುಕಡಿಮೆಯಾಗಿ ಒಂದು ಶಾಶ್ವತ ಸಂಘಟನೆಯಾಗಿ ಪರಿಣಮಿಸುವವು ಇವು ಅವರ ಸರ್ವಸಾಮಾನ್ಯವಾದ ಆರ್ಥಿಕ ಅಡಚಣಿಗಳನ್ನು ಪೂರೈಸಿ, ಅವರು ತಮ್ಮ ಉದ್ಯೋಗಗಳನ್ನು ಶಕ್ಯವಿದ್ದಷ್ಟು ಉತ್ತಮ ರೀತಿಯಿಂದ ನಡೆಯಿಸಲು, ಮತ್ತು ತಮ್ಮ ಜಾಣ್ಮೆಗೂ, ಕಲೆಗೂ, ಕೂಲಿಗೂ ಯೋಗ್ಯ ಪ್ರತಿಫಲವನ್ನು ಪಡೆಯಲು ಸಮರ್ಥರಾಗುವಂತೆ ನೆರವಾಗುವವು ಪ್ರತ್ಯೇಕವಾದ ಒಂದು ಆಢಳತೆಯ ವರ್ಗವನ್ನು ಏರ್ಪಡಿಸುವದರ ಜೊತೆಗೆ, ಸರಕಾರದವರು ಕೆಳಗಿನ ಯೋಜನೆಗಳಿಗೆ ಮಂಜೂರಿಯನ್ನಿತ್ತರು ಈ ಯೋಜನೆಗಳಿಂದ ಔದ್ಯೋಗಿಕ ಸಹಕಾರಿ ಸಂಘಗಳಿಗೆ ಸಾಲ, ಮತ್ತು ಸಹಾಯ ಧನದ ರೂಪದಲ್ಲಿ ನೆರವು ಸಿಗುವದು

(೧) ಸಹಕಾರಿ ಸಂಘಗಳಿಗೂ, ವಿಶ್ವಾಸಾರ್ಹ ಶಿಲ್ಪಿಗಳಿಗೂ ಉಪಕರಣ ಸನ್ನಾಹವನ್ನು ಕೊಳ್ಳುವ ಸಲುವಾಗಿ, ಸಾಲವನ್ನೂ ಸಹಾಯ ಧನವನ್ನೂ ಕೊಡುವ ಯೋಜನೆಯು.

(೨) ಹಿಂದುಳಿದ ವರ್ಗದ ಕೈಗಾರಿಕೆಯುವರಿಗೂ ಸಂಘಗಳಿಗೂ ಉಪಕರಣ ಸನ್ನಾಹಗಳ ಖರೀದಿಗಾಗಿ ಸಾಲು, ಸಹಾಯಧನಗಳನ್ನು ನೀಡುವ ಯೋಜನೆಯು

(೩) ಗೃಹೋದ್ಯೋಗಗಳನ್ನು ಆರಂಭಿಸಲು, ಅಥವಾ ಬೆಳೆಯಿಸಲು, ಅಥವಾ ಅವಕ್ಕೆ ಸಂಬಂಧಿಸಿದ ಹೊಸ ವ್ಯವಹಾರವನ್ನು ಆರಂಭಿಸಲು ನಿರುದ್ಯೋಗಿಗಳಿಗೂ ಶಿಕ್ಷಣ ಪಡೆದವರಿಗೂ ನೆರವು ನೀಡುವ ಯೋಜನಯು

ಶಿಲ್ಪಿಗಳ ಅಥವಾ ಕೈಗಾರಿಕೆಯುವರ ತಾಂತ್ರಿಕ ಜ್ಞಾನಶಕ್ತಿಗಳನ್ನು ಬೆಳೆಯಿಸುವ ದೃಷ್ಟಿಯಿಂದ ಸರಕಾರದವರು ಅನೇಕ ಪ್ರಾಯೋಗಿಕ ಶಾಲೆಗಳನ್ನು ನಡೆಯಿಸಲು ಸಮ್ಮತಿ ಇತ್ತಿರುವರು ಈ ಶಾಲೆಗಳು ಉತ್ಕೃಷ್ಟ ಶಿಲ್ಪಿಗಳಾಗಬೇಕೆನ್ನುವವರ ಮನೆ ಮನೆಗೆ ಹೋಗಿ, ಅವರನ್ನು ಸುಧಾರಿಸಿದ ಉಪಕರಣಗಳನ್ನು ಉಪಯೋಗಿಸುವಲ್ಲಿ ಮತ್ತು ಉತ್ಪಾದನೆಯ ಸುಧಾರಿಸಿದ ಪದ್ಧತಿಯನ್ನು ಸ್ವೀಕರಿಸುವಲ್ಲಿ, ತರಬೇತಿಗೊಳಿಸುವವು ಸರಕಾರದವರು ಗ್ರಾಮೋದ್ಯೋಗಗಳ ಉತ್ಪಾದನೆಯ ಅನೇಕ ಕೇಂದ್ರಗಳನ್ನು ಸ್ಥಾಪಿಸಲು ಮಂಜೂರಿಯಿತ್ತಿರುವರು ಈ ಕೇಂದ್ರಗಳ ಸದುಪಯೋಗವನ್ನು ಪಡೆಯಲಿಚ್ಛಿಸುವ ಹಳ್ಳಿಗಳಲ್ಲಿಯ ಜನರನ್ನು ಇವು ತರಬೇತಿಗೊಳಿಸುವವಲ್ಲದೆ, ಇವರಿಗೆ ಪೂರ್ಣೋದ್ಯೋಗಗಳ ಸುಸಂಧಿಯನ್ನು ಕಲ್ಪಿಸಿಕೊಡುವವು ಕಟ್ಟಿಗೆಯ ಕೆಲಸಗಾರರು (ಬಡಿಗರು) ಬಿದಿರಿನ ಕೆಲಸಗಾರರು (ಮೇದಾರರು) ಉರವಲ ಕೆಲಸಗಾರರು (ಕಟ್ಟಿಗೆ ಕಡಿವವರು) ತೊಗಲು ಹದಗೊಳಿಸುವವರು ಈ ಮೊದಲಾದವರಿಗೆ ರಾಜ್ಯ ಸರಕಾರದ ನಿಯಂತ್ರಣದಲ್ಲಿರುವ ಕಚ್ಚಾ ಸರಕುಗಳನ್ನು, ಅವರ ಅನೇಕ ಬಗೆಯ ಉದ್ಯೋಗಗಳಿಗೆ ಸವಲತ್ತಿನ ದರಗಳಿಂದ ಪಡೆಯಲು ಸೌಕರ್ಯಗಳು ಒದಗಿಸಲ್ಪಟ್ಟಿವೆ ಸರಕಾರದವರಿಂದ ಸ್ಥಾಪಿತವಾದ 'ಸೇಲ ಡೀಪೋ' (ಅಂದರೆ ಮಾರಾಟದ ಉಗ್ರಾಣ) ಗಳ ಮುಖಾಂತರವಾಗಿ ಮತ್ತು ಜಿಲ್ಹಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳಂತಹ ಸರಕಾರದವರಿಂದ ಸಹಾಯ ಧನ ಪಡೆಯುವ ಸಂಸ್ಥೆಗಳ ಮುಖಾಂತರವಾಗಿ ಗ್ರಾಮೋದ್ಯೋಗಗಳ ಸರಕುಗಳನ್ನು ಮಾರುವ ಸೌಕರ್ಯಗಳು ಒದಗಿಸಲ್ಪಟ್ಟಿವೆ ಸರಕಾರದ ಅವಶ್ಯಕತೆಗಳ ವಿಷಯದಲ್ಲಿ ಗೃಹೋದ್ಯೋಗಗಳಿಗೆ ಕೆಲವೊಂದು ಪ್ರಮಾಣದಲ್ಲಿ ಪ್ರಾಶಸ್ತ್ಯವು ಕೊಡಲ್ಪಟ್ಟಿದೆ ಈ ರಾಜ್ಯದಲ್ಲಿಯ ಗೃಹೋದ್ಯೋಗಗಳ ಪ್ರಗತಿವಿಕಾಸಗಳಿಗೆ ಪೋಷಕವಾಗುವ ಸರ್ವಗ್ರಾಹಿ ಧೋರಣೆಯ ಅಂಗಗಳಾಗಿರುವ ಇನ್ನಿತರ ಉಪಾಯಗಳೂ ಉಂಟು ಇವುಗಳ ಜೊತೆಗೆ ಸಾಮಾಜಿಕ ಕಾರ್ಯಕರ್ತರ ಅಭಿವರ್ಧಿಸುವ ಆಸಕ್ತಿಯೂ ಕೂಡಿ ಔದ್ಯೋಗಿಕ ಸಹಕಾರಿ ಸಂಘಗಳ ಸಂಘಟನೆಯ ಗತಿಯನ್ನು ತ್ವರಿತಗೊಳಿಸಿತು.

೧೯೪೬ ರಿಂದ ೧೯೫೧ರವರೆಗೆ ಆದ ಔದ್ಯೋಗಿಕ ಸಹಕಾರಿ ಸಂಘಗಳ ಪ್ರಗತಿ ಪತ್ರಿಕೆಯು ಕೆಳಗಿನಂತಿದೆ

| ವರುಷ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ದುಡಿಯುವ ಬಂಡವಾಳವು | ಒಟ್ಟು ಖರೀದಿ | ಒಟ್ಟು ಲಾಭ. |
|---|---|---|---|---|---|
| ೧೯೪೬-೪೭ | ೩೧೪ | ೪೦,೦೪೫ | ೪೮,೪೮,೩೫೪ | ೨,೮೨,೬೮,೮೨೨ | ೭,೩೫,೧೬೯ |
| ೧೯೪೭-೪೮ | ೪೫೪ | ೫೯,೨೩೩ | ೮೨,೭೩,೭೪೮ | ೪,೬೮,೫೯,೮೬೯ | ೮,೦೮,೦೫೮ |
| ೧೯೪೮-೪೯ | ೬೬೧ | ೮೧,೮೬೫ | ೩,೩೦,೩೬,೮೭೬ | ೧೧,೩೪,೦೨,೩೯೩ | ೮,೪೭,೮೨೩ |
| ೧೯೪೯-೫೦ | ೯೦೩ | ೮೯,೩೬೯ | ೧,೭೨,೮೨,೯೩೫ | ೬,೦೫,೫೫,೫೧೧ | ೧೧,೧೦,೪೮೧ |
| ೧೯೫೦-೫೧ | ೧೨೧೨ | ೧,೨೨,೯೨೧ | ೩,೫೮,೮೩,೫೩೧ | ೯,೦೩,೫೨,೩೪೭ | ೨೧,೩೦,೧೩೮ |

ಮೇಲಿನ ಅಂಕಿಗಳು ಸಭಾಸದರು, ದುಡಿಯುವ ಬಂಡವಾಳ, ಒಟ್ಟು ವ್ಯವಹಾರ ಇವುಗಳ ವಿಷಯದಲ್ಲಿ ಆದ ಪ್ರಗತಿಯನ್ನು ವ್ಯಕ್ತಪಡಿಸುತ್ತವೆ ನೂಲಿನ ರೋಕ ಮತ್ತು ಚಿಲ್ಲರ ಹಂಚುವಿಕೆಯ ಕಾರ್ಯವನ್ನು ಸಂಘಗಳಿಗೆ ಒಪ್ಪಿಸಿದುದರಿಂದ, ಎಷ್ಟೋ ಸಂಘಗಳಿಗೆ ಅಪಾರ ಲಾಭವಾಯಿತು. ಕೆಲವೊಂದು ಸಂಘ

ಗಳಿಗೆ ೧೯೪೯-೫೦ ಮತ್ತು ೧೯೫೦-೫೧ರಲ್ಲಿ ಅನುಕ್ರಮವಾಗಿ ೭,೩೯,೨೩೧ ರೂಪಾಯಿಗಳ ಮತ್ತು ೪,೨೫,೪೦೯ ರೂಪಾಯಿಗಳ ಹಾನಿಯಾಯಿತು.

೧೯೫೧ ಜೂನ ೩೦ಕ್ಕೆ ಇದ್ದ ಔದ್ಯೋಗಿಕ ಸಂಘಗಳ ಪರಿಸ್ಥಿತಿಯನ್ನು ಕೆಳಗಿನ ಪತ್ರಿಕೆಯು ಸ್ಪಷ್ಟಪಡಿಸುವದು

| ಸಂಘಗಳ ಪ್ರಕಾರ | ಸಂಘಗಳ ಸಂಖ್ಯೆ | ಸಭಾಸದರ ಸಂಖ್ಯೆ | ಒಟ್ಟು ಖರೀದಿ ವಿಕ್ರಿ | ದುಡಿಯುವ ಭಾಂಡವಲು | ಲಾಭ | ಹಾನಿ |
|---|---|---|---|---|---|---|
| ನೇಯ್ಕಾರ ಸಂಘಗಳನ್ನು ಳಿದು ಇತರ ಔದ್ಯೋಗಿಕ ಸಂಘಗಳು | ೭೧೨ | ೪೯,೩೦೭ | ೧,೪೭,೮೨,೫೬೭ | ೮೮,೬೦,೫೨೫ | ೧೨,೩೨,೪೦೬ | ೩,೧೪,೭೮೯ |
| ನೇಯ್ಕಾರ ಸಂಘಗಳು | ೪೭೯ | ೬೧,೨೪೬ | ೪,೧೫,೬೫,೧೦೩ | ೧,೩೯,೮೯,೦೧೦ | ೬,೨೦,೭೨೭ | ೩೮,೯೧೫ |
| ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆ | ೧೬ | ೧೦,೫೬೬ | ೧,೭೩,೪೫,೧೭೦ | ೪೨,೬೪,೪೯೧ | ೨,೪೬,೯೭೫ | ೬೬,೬೩೩ |
| ಪ್ರಾಂತಿಕ ಸಹಕಾರಿ ಸಂಸ್ಥೆ | ೧ | ೫೩೪ | ೧,೬೬,೫೯,೫೦೭ | ೭೧,೮೪,೪೫೦ | ೨೯,೨೫೭ | — |
| ಪ್ರಾದೇಶಿಕ ಜಿಲ್ಲಾ ಔದ್ಯೋಗಿಕ ಬ್ಯಾಂಕುಗಳು | ೪ | ೧,೨೬೮ | — | ೧೫,೮೫,೦೫೫ | ೭೭೩ | ೫,೧೩೨ |
| ಒಟ್ಟು | ೧,೨೧೨ | ೧,೨೨,೯೨೧ | ೯,೦೩,೫೨,೩೪೭ | ೩,೫೮,೮೩,೫೩೧ | ೨೧,೩೦,೧೩೮ | ೪,೨೫,೪೬೯ |

ಔದ್ಯೋಗಿಕ ಸಂಘಗಳಲ್ಲಿ ನೇಯ್ಗಾರರ ಸಂಘಗಳೇ ಸಂಖ್ಯೆಯಲ್ಲಿ ಹೆಚ್ಚಾಗಿರುವವು ನೇಯ್ಗಾರ ಸಂಘಗಳೂ ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳೂ ಮತ್ತು ಪ್ರಾಂತಿಕ ಔದ್ಯೋಗಿಕ ಸಂಸ್ಥೆಯೂ ಮಾಡಿದ ವ್ಯವಹಾರದ ಬಹುಭಾಗವು ನೂಲಿನ ಕಿರುಕಳ ಮತ್ತು 'ರೋಕ' (ಗುತ್ತಿಗೆಯ) ವಿತರಣೆಗೆ (ಹಂಚುವಿಕೆಗೆ) ಸಂಬಂಧಿಸಿರುತ್ತದೆ ಕೆಲವೊಂದು ಔದ್ಯೋಗಿಕ ಸಂಸ್ಥೆಗಳೂ ನೇಯ್ಗಾರ ಸಂಘಗಳೂ ನೂಲಿನ ಹಂಚುವಿಕೆಯ ವ್ಯವಹಾರದಲ್ಲಿ ಹಾನಿಗೊಳಗಾದವು ೧೯೫೧ನೆಯ ವರ್ಷದ ತರುವಾಯು, ಕೆಲವೊಂದು 'ರೋಕ' ವ್ಯವಹಾರಸ್ಥರ ಬಳಿಯಲ್ಲಿ, ಮಾರಾಟವಾಗದೇ ಉಳಿದ ನೂಲಿನ ಪ್ರಮಾಣವು ಬಹುದೊಡ್ಡದಿದ್ದಿತು ನೂಲಿನ ದರವು ಇಳಿದುದರ ಪರಿಣಾಮವಾಗಿ, ಸಂಸ್ಥೆಗಳು ಅಪಾರ ಹಾನಿಗೀಡಾದವು. ಸರಕಾರದ ಸಹಾಯವಿಲ್ಲದಿದ್ದರೆ, ಈ ಸಂಸ್ಥೆಗಳು ತಲೆಯೆತ್ತುವದೇ ಕಠಿಣವು

ತಾರೀಖು ೩೦-೬-೧೯೪೬ ಮತ್ತು ೩೦-೬-೧೯೫೧ಕ್ಕೆ ಇದ್ದ ಔದ್ಯೋಗಿಕ ಸಂಘಗಳ ಪರಿಸ್ಥಿತಿಯ ತುಲನಾತ್ಮಕ ಚಿತ್ರವನ್ನು ಕೆಳಗಿನ ಪತ್ರಿಕೆಯಲ್ಲಿ ಕಾಣಬಹುದು

| ಅ.ನಂ | ಉದ್ಯೋಗದ ಹೆಸರು. | ೩೦-೬-೪೬ಕ್ಕೆ ಇದ್ದ ಸಂಘಗಳ ಸಂಖ್ಯೆ | ೩೦-೬-೫೧ಕ್ಕೆ ಇದ್ದ ಸಂಘಗಳ ಸಂಖ್ಯೆ |
|---|---|---|---|
| ೧ | ಪ್ರಾಂತಿಕ ಔದ್ಯೋಗಿಕ ಸಹಕಾರಿ ಸಂಸ್ಥೆ | — | ೧ |
| ೨ | ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳು | ೧೦ | ೧೬ |
| ೩ | ಪ್ರಾದೇಶಿಕ ಮತ್ತು ಜಿಲ್ಲಾ ಔದ್ಯೋಗಿಕ ಸಹಕಾರಿ ಬ್ಯಾಂಕುಗಳು | — | ೪ |
| ೪ | ನೇಯ್ಗಾರರ ಸಂಘಗಳು | ೧೩೯ | ೪೭೯ |
| ೫ | ತೊಗಲು ಹದಗೊಳಿಸುವವರ ಸಂಘಗಳು | ೨೦ | ೧೮೪ |
| ೬ | ಅರಣ್ಯ ಕೂಲಿಕಾರರ ಸಂಘಗಳು | — | ೧೦೦ |
| ೭ | ಬಡಿಗರ ಮತ್ತು ಕಮ್ಮಾರರ ಸಂಘಗಳು | ೨ | ೬೩ |
| ೮ | ಎಣ್ಣೆಯ ಗಾಣದ ಸಂಘಗಳು | ೧ | ೪೮ |
| ೯ | ಕೂಲಿಕಾರರ ಗುತ್ತಿಗೆಯ ಸಂಘಗಳು | ೨ | ೩೫ |
| ೧೦ | ಬೆತ್ತ ಮತ್ತು ಬಿದಿರುಗಳಲ್ಲಿ ಕೆಲಸ ಮಾಡುವವರ ಸಂಘಗಳು | ೧ | ೨೮ |

| | | | |
|---|---|---|---|
| ೧೧ | ಕಂಚುಗಾರರ ಸಂಘಗಳು | ೧ | ೧೩ |
| ೧೨ | ಕುಂಬಾರರ ಸಂಘಗಳು | ೨ | ೧೨ |
| ೧೩ | ಜೇನು ಸಾಕುವವರ ಸಂಘಗಳು | ೪ | ೧೦ |
| ೧೪ | ಚಂದನ ಕಟ್ಟಿಗೆಯಲ್ಲಿ ನಕ್ಷೆ ತೆಗೆವವರ ಮತ್ತು ದುಡಿವವರ ಸಂಘಗಳು | ೨ | ೩ |
| ೧೫ | ಇತರ | ೧೭ | ೨೧೬ |
| | ಒಟ್ಟು | ೨೦೧ | ೧೨೧೨ |

ಕೆಲವೊಂದು ಅಸಾಮಾನ್ಯ ಪ್ರಸಂಗಗಳ ಮೂಲಕ, ಮತ್ತು ನೇಯ್ಕಾರ ಸಂಘಗಳ ವಿಷಯದಲ್ಲಿಯೂ ಮತ್ತು ನಿಯಂತ್ರಣದ ಕಾರ್ಯವನ್ನು ವಹಿಸಿಕೊಂಡ ಸಂಘಗಳ ವಿಷಯದಲ್ಲಿಯೂ ಸರಕಾರನವರು ತೋರಿದ ಉದಾರಾಶ್ರಯದ ಫಲವಾಗಿ ಈ ಪ್ರಗತಿಯಾಗಿರುವದೆಂದು ಸ್ಪಷ್ಟ ಪರೀಕ್ಷಣದ ನಂತರ ನಮಗ ಕಂಡುಬರುವದು ಸರಕಾರದವರು ಸಾಲ ಮತ್ತು ಸಹಾಯ ಧನದ ರೂಪದಲ್ಲಿ ನೀಡಿದ ನೆರವಿನ ಪರಿಣಾಮವಾಗಿ ಈ ಔದ್ಯೋಗಿಕ ಸಹಕಾರಿ ಸಂಘಗಳ ಪ್ರಗತಿಯು ಗತಿಯು ತೀವ್ರವಾಯಿತು ನೆಲಗೋಪುರಾಕಾರದಲ್ಲಿ ಔದ್ಯೋಗಿಕ ಶಾಸನಬದ್ಧವಾದ ಸಂಘಗಳ ಕಟ್ಟಡವು ರಚಿತವಾಯಿತು ತಳಹದಿಯಲ್ಲಿ ಅಸಂಖ್ಯ ಪ್ರಾಥಮಿಕ ಔದ್ಯೋಗಿಕ ಸಹಕಾರಿ ಸಂಘಗಳಿವೆ ಅವುಗಳ ಮೇಲೆ, ಜಿಲ್ಹೆಯ ಮಟ್ಟದಲ್ಲಿ ಜಿಲ್ಹಾ ಔದ್ಯೋಗಿಕ ಸಂಸ್ಥೆ ಜಿಲ್ಹಾ ಔದ್ಯೋಗಿಕ ಸಹಕಾರಿ ಬ್ಯಾಂಕುಗಳಂತಹ ಸಂಯುಕ್ತ ಸಂಸ್ಥೆಗಳಿವೆ ತುದಿಯಲ್ಲಿ ಪ್ರಾಂತಿಕ ಔದ್ಯೋಗಿಕ ಸಹಕಾರಿ ಸಂಸ್ಥೆಯಿದೆ ಉಳಿದ ಜಿಲ್ಹೆಗಳಲ್ಲಿಯೂ ಜಿಲ್ಹಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳನ್ನು ಸಂಘಟಿಸಿ, ಔದ್ಯೋಗಿಕ ಅರ್ಥ ಸಹಾಯದ ಶಾಸನಬದ್ಧ ಸಂಸ್ಥೆಯನ್ನು ( ಅಂದರೆ ಇಂಡಸ್ಟ್ರಿಯಲ್ ಫಾಯನಾನ್ಸ ಕಾರ್ಪೋರೇಶನ್ ) ನಿರ್ಮಿಸಿದರೆ, ಈ ದಿವ್ಯ ಭವನದ ರಚನೆಯು ಪೂರ್ತಿಯಾಗುವದು ಈ ರೀತಿ ಕಟ್ಟಡವು ಪೂರ್ತಿಯಾದರೂ, ಇದರಲ್ಲಿ ಗಟ್ಟಿಗತನವಿಲ್ಲವೆಂಬುದನ್ನು ನಾವು ಲಕ್ಷಿಸಬೇಕು ಔದ್ಯೋಗಿಕ ಸಹಕಾರೀ ಆಂದೋಲನವು ರಾಜ್ಯದಲ್ಲೆಲ್ಲ, ಸಮ ಪ್ರಮಾಣದಲ್ಲಿ ಪ್ರಸಾರವಾಗಿಲ್ಲ ನೇಯ್ಕಾರ ಸಂಘ, ಚರ್ಮಕಾರರ ಸಂಘ, ತೊಗಲು ಹದಗೊಳಿಸುವವರ ಸಂಘ, ಬಡಿಗರ ಸಂಘ, ಕಮ್ಮಾರ ಪತ್ತಾರರ ಸಂಘ, ಮೇದಾರರ ಸಂಘ, ಗಾಣಿಗರ ಸಂಘ, ಚಿತ್ತ ಹೆಣೆವವರ ಸಂಘ, ಈ ಮೊದಲಾದ ಔದ್ಯೋಗಿಕ ಸಂಘಗಳನ್ನುಳಿದರೆ, ಇನ್ನಿತರ ಚಿಕ್ಕಪುಟ್ಟ ಉದ್ಯೋಗಗಳ ಸಂಘಗಳ ಸಂಖ್ಯೆ ಅತ್ಯಲ್ಪ' ಇವುಗಳ ಪ್ರಗತಿಯೂ ಅಷ್ಟು ಸರಿಯಾಗಿಲ್ಲ ಎಷ್ಟೋ ಸಂಘಗಳು ಪೋಟನಿಯಮಗಳಿಗನುಸರಿಸಿ ಮಾಡಬೇಕಾದ ಕಾರ್ಯದ ಕೆಲವೊಂದು ಭಾಗವನ್ನೇ ನಿರ್ವಹಿಸುತ್ತಿರುವದು ಕಂಡುಬರುವದು. ಈ ಸಂಘಗಳು ಮಾಡಿದ ಕಾರ್ಯವೆಂದರೆ,

ತಮ್ಮ ಸಭಾಸದರ ಸಲುವಾಗಿ—ವಿಶೇಷವಾಗಿ ನೇಯ್ಕಾರ ಸಂಘಗಳು ತಮ್ಮ ಸಭಾಸದರ ಸಲುವಾಗಿ ಸಾಮೂಹಿಕ ರೀತಿಯಿಂದ ಮಾಲು ಕೊಂಡದ್ದು ಸಾಮೂಹಿಕ ಮಾರಾಟದ ಉದಾಹರಣೆಯು ಅತಿವಿರಳ ವ್ಯವಹಾರದಲ್ಲಿ ಅನುಭವದ ಅಭಾವ, ಶ್ರದ್ಧೆಯ ಕೊರತೆ, ಪರಸ್ಪರ ವಿಶ್ವಾಸದ ಲೋಪ, ಇವೇ ಇದಕ್ಕ ಕಾರಣ ಮಾಲಿನ ತರಗತಿಯ ಸುಧಾರಣೆಯ ಬಗೆಗೂ, ಅದರ ಮಾರಾಟದ ಬಗೆಗೂ ಸರ್ವಸಾಮಾನ್ಯವಾದ ವಿಚಾರವಿನಿಮಯವೂ ಶೂನ್ಯ! ನೇಯ್ಕಾರ ಸಂಘಗಳನ್ನುಳಿದು, ಇತರ ಸಂಘಗಳ ಪಾಲು (ಶೇಅರು) ಬಂಡವಾಳವು ತೀರ ಸಣ್ಣದು ಎಷ್ಟೋ ಸಂಘಗಳು ಆರ್ಥಿಕ ದೃಷ್ಟಿಯಿಂದ ಕೊರತೆಯ ಅಂಗಗಳಾಗಿ ವ್ಯವಹಾರ ಸಾಗಿಸಿವೆ! ಕೆಲವೊಂದು ಸಂಘಗಳ—ವಿಶೇಷವಾಗಿ ಹಿಂದುಳಿದ ವರ್ಗದವರ ಸಲುವಾಗಿ ರಚಿತವಾದ ಸಂಘಗಳ—ಲೆಕ್ಕಪತ್ರಗಳು ಸರಿಯಾಗಿ ಇಡಲ್ಪಟ್ಟಿಲ್ಲ ಜಿಲ್ಲಾ ಔದ್ಯೋಗಿಕ ಸಂಸ್ಥೆಗಳ ವಿಷಯದಲ್ಲಿ ಹೇಳಬೇಕಾದರೆ, ಅವು ತಮ್ಮ ಸಭಾಸದರರ ಸಂಘಗಳಿಂದ ಸಾಕಷ್ಟು ಬೆಂಬಲವನ್ನೂ ಶ್ರದ್ಧೆಯನ್ನೂ ಸಂಪಾದಿಸಲು ಸಮರ್ಥವಾಗಿಲ್ಲ ಉದ್ಯೋಗಗಳ ವಿಕಾಸಕ್ಕಾಗಿ ಯೋಜನೆಗಳನ್ನು ಹಾಕಲು, ಅವಕ್ಕೆ ಇನ್ನೂ ಸಾಧ್ಯವಾಗಿಲ್ಲ. ಒಂದು ಪ್ರಾದೇಶಿಕ ಮತ್ತು ಮೂರು ಜಿಲ್ಲಾ ಔದ್ಯೋಗಿಕ ಸಹಕಾರಿ ಬ್ಯಾಂಕುಗಳ ಪ್ರಗತಿಯು ಅಷ್ಟು ಎದ್ದು ಕಾಣುವದಿಲ್ಲ ಬಹುಕಾಲದ ಮೊದಲೇ ಸ್ಥಾಪಿತವಾದ ಮತ್ತು ಸುವ್ಯವಸ್ಥಿತವಾದ ರೀತಿಯಲ್ಲಿ ವ್ಯವಹಾರ ಸಾಗಿಸುತ್ತ ಪ್ರಗತಿ ಪಥದಲ್ಲಿರುವ ಜಿಲ್ಲಾ ಕೇಂದ್ರ ಬ್ಯಾಂಕು, ನಗರ ಸಹಕಾರಿ ಬ್ಯಾಂಕುಗಳ ಮುಂದೆ, ಜಿಲ್ಲಾ ಔದ್ಯೋಗಿಕ ಸಹಕಾರಿ ಬ್ಯಾಂಕಿನ ಬೆಳವಣಿಗೆಯೆಂದರ ಹೆಳವನು ಹಿಮಗಿರಿಯನ್ನ ಹತ್ತಿದಂತೆಯೇ ಸರಿ ಅಲ್ಲದೆ, ಭದ್ರವಾದ ಹೊಣೆಯನ್ನು ಕೊಡಲು ಅಸಮರ್ಥರಾದ ಕೈಗಾರಿಕೆಯವರಿಗೆ ಪೂರೈಸುವ ಸಾಲದ ಸುರಕ್ಷಿತತೆಯು ದುಸ್ಸಾಧ್ಯವಾಗುವದರಿಂದ ಜಿಲ್ಲಾ ಔದ್ಯೋಗಿಕ ಬ್ಯಾಂಕಿನ ಪ್ರಗತಿಯು ಮತ್ತೂ ಕಠಿಣವೆನಿಸುವದು. ಅರ್ಥಸಹಾಯ, ಮಾಲ ಮಾರಾಟ, ದೊಡ್ಡ ಪ್ರಮಾಣದಲ್ಲಿ ಸಾಮೂಹಿಕ ಖರೀದಿ, ಹುಟ್ಟುವಳಿಯ ಚಟುವಟಿಕೆಗಳನ್ನು ಕೈಕೊಳ್ಳುವದು, ಸುವ್ಯವಸ್ಥಿತವಾದ ರೀತಿಯಲ್ಲಿ ಲೆಕ್ಕಪತ್ರಗಳನ್ನಿಡುವದು, ಅರ್ಹತೆಯುಳ್ಳ ಕಾರ್ಯದರ್ಶಿ (ಸೆಕ್ರೇಟರಿ) ಗಳ ನೇಮಣುಕಿ,—ಈ ಮೊದಲಾದವುಗಳು ಔದ್ಯೋಗಿಕ ಸಂಸ್ಥೆಗಳು ಎದುರಿಸಬೇಕಾದ ಪ್ರಮುಖ ಸಮಸ್ಯೆಗಳಾಗಿವೆ ಭದ್ರತೆಯ ಕ್ರಮಗಳೂ ಅವಶ್ಯವಾಗಿವೆ.

ಕೆಲವೊಂದು ಮಹತ್ವದ ಔದ್ಯೋಗಿಕ ಸಂಘಗಳ ಕಾರ್ಯಕಲಾಪಗಳ ಸಂಕ್ಷಿಪ್ತ ವಿವರಣೆಯನ್ನು ತಾ ೩೦-೬-೫೧ಕ್ಕಿದ್ದಂತೆ ಇಲ್ಲಿ ಕೊಡಲಾಗಿದೆ.

**ನೇಯ್ಕಾರ ಸಂಘಗಳು**

ಇವು ೪೭೭ ಇದ್ದು ಇವುಗಳ ಸಭಾಸದರ ಸಂಖ್ಯೆ ೬೧೨೪೬ ಇದೆ ಪಾಲು (ಶೇಅರು) ಬಂಡವಾಳ, ಕಾಯ್ದಿಟ್ಟ ಮತ್ತಿತರ ನಿಧಿ ಮತ್ತು ದುಡಿಯುವ ಬಂಡವಾಳಗಳು ಅನುಕ್ರಮವಾಗಿ ರೂ ೨೫,೪೭,೬೩೭ ರೂ ೨೩,೯೦,೮೧೩ ರೂ. ೧,೩೯,೮೯,೦೧೦ ಇವೆ. ಇವು ಸಭಾಸದರಿಗೂ ಬಿನ್ ಸಭಾಸದರಿಗೂ

ಹಂಚಿದ ನೂಲು, ಪೂರೈಸಿದ ಇನ್ನಿತರ ಕಚ್ಚಾಮಾಲು ಕೂಡಿ ೩,೬೯,೭೨,೬೯೬ ರೂಪಾಯಿ ಬೆಲೆಯುದಾಗುತ್ತದೆ ಈ ಸಂಘಗಳು ತಯಾರಿಸಿದ ಸರಕುಗಳನ್ನು ಮಾರಿದ ಬೆಲೆಯು ಒಟ್ಟು ರೂ ೪೫,೯೨,೪೦೭ ಆಗುತ್ತದೆ. ಇವುಗಳ ಮಗ್ಗಗಳ ಸಂಖ್ಯೆ ೧೨೯,೯೧೬ ಇದ್ದಿತು ಈ ಸಂಘಗಳ ಮುಖ್ಯ ಚಟುವಟಿಕೆಗಳೆಂದರೆ ನೂಲಿನ ವಿತರಣೆ, ನೇಯ್ಗಾರಿಕೆಗೆ ಅವಶ್ಯವಿರುವ ಉಪಕರಣಗಳ ಪೂರೈಕೆ, ತಯಾರಿಸಿದ ಸರಕುಗಳ ಮಾರಾಟ– ಈ ಮೊದಲಾದವುಗಳು ನಿಯಂತ್ರಣವು ತೆಗೆಯಲ್ಪಟ್ಟ ಮೇಲೆ, ಎಷ್ಟೋ ಸಂಘಗಳು ತಮ್ಮ ವ್ಯವಹಾರವನ್ನು ನಿಲ್ಲಿಸ ಬೇಕಾಯಿತು ತಯಾರಾದ ಮಾಲಿನ ಮಾರಾಟವು ಅಷ್ಟು ದೊಡ್ಡ ಪ್ರಮಾಣ ದಲ್ಲಿಲ್ಲ ಕೆಲವೊಂದು ಸಂಘಗಳು ತಮ್ಮ ಹೊಣೆಯ ಮೇಲೆ ತಾವೇ ಉತ್ಪಾದನೆ ಯನ್ನು ಸಂಘಟಿಸಿ ತಮ್ಮ ಸಭಾಸದರು ಮಾಡಿದ ಕೆಲಸಕ್ಕೆ ಕೂಲಿಯನ್ನು ಅಥವಾ ಸಂಬಳವನ್ನು ಕೊಟ್ಟಿವೆ

**ಚರ್ಮಕಾರರ ಮತ್ತು ಮೊಚ್ಚೆಗಾರರ ( ಅಂದರೆ ಹದಗೊಳಿಸಿದ ತೊಗಲಿನಲ್ಲಿ ದುಡಿವವರ ) ಸಂಘಗಳು :—**

ಈ ಸಂಘಗಳ ಸಂಖ್ಯೆ ೧೮೪ ಇದ್ದು ಸಭಾಸದರು ೪೮೦೫ ಇದ್ದರು. ವಸೂಲಾದ ಪಾಲು ಬಂಡವಾಳ, ಕಾಯ್ದಿಟ್ಟ ಮತ್ತಿತರ ನಿಧಿಗಳು, ಮತ್ತು ದುಡಿಯುವ ಬಂಡವಾಳಗಳು ಅನುಕ್ರಮವಾಗಿ ರೂ. ೩,೬೬ ೦೯೬ ರೂ ೬೯,೦೩೩ ರೂ ೧೦,೧೪,೧೬೯ ಇವೆ ಕೆಲವೊಂದು ಸಂಘಗಳು ಪಡೆದ ಲಾಭವು ೪೦ ೬೪೫ ರೂಪಾಯಿ ಇದ್ದರ, ಕೆಲವೊಂದು ಸಂಘಗಳಿಗೆ ಒಟ್ಟು ೩೦,೬೮೮ ರೂಪಾಯಿ ಗಳಷ್ಟು ಹಾನಿಯಾಯಿತು ಕೆಲವೊಂದು ಸಂಘಗಳು ಚೊಕ್ಕಟವಾಗಿ ವ್ಯವಹಾರ ಸಾಗಿಸಿದವು ಈ ಸಂಘಗಳು ತಮ್ಮ ಉತ್ಪಾದನೆಯ ಚಟುವಟಿಕಗಳಲ್ಲಿ ಬಳಸಿದ ಕಚ್ಚಾ ಸರಕುಗಳ ಒಟ್ಟು ಬೆಲೆಯು ರೂ ೫,೮೪,೬೭೪ ಆಯಿತು ಇವು ತಯಾರಿಸಿದ ಸರಕುಗಳ ಬೆಲೆಯು ರೂ ೭,೭೭,೪೬೪ ಇದ್ದಿತು

**ಅರಣ್ಯ ಕೂಲಿಕಾರರ ಸಂಘಗಳು :—**

ಆದಿವಾಸಿಗಳ ಮತ್ತು ಹಿಂದುಳಿದ ವರ್ಗದವರ ಸರ್ವಾಂಗೀಣ ಉನ್ನತಿಯ ಸರ್ವಗ್ರಾಹಿ ಕಾರ್ಯಕ್ರಮದ ಒಂದಂಗವೆಂದು, ಅವರಿಗೆ ಯೋಗ್ಯ ಕರಾರುಗಳ ಮೇಲೆ ಅರಣ್ಯ 'ಕೂಪು' ಗಳನ್ನು ಕೊಡುವ ದೃಷ್ಟಿಯಿಂದ ಸಾಮಾಜಿಕ ಕಾರ್ಯಕರ್ತರ ಸಹಾಯದಿಂದ ಅವರನ್ನು ಸಂಘಟಿಸಿ ಅರಣ್ಯ ಕೂಲಿಕಾರರ ಸಂಘಗಳನ್ನು ಸ್ಥಾಪಿಸುವ ಒಂದು ಪ್ರಯೋಗವು ೧೯೪೭ರಲ್ಲಿ ಮಾಡಲ್ಪಟ್ಟಿತು ಸಾಮಾಜಿಕ ಕಾರ್ಯಕರ್ತರಿಂದ ಆದಿವಾಸಿಗಳಿಗೆ ಸಾಕಷ್ಟು ಸಂಬಳವೂ ( ಕೂಲಿಯೂ ) ಮತ್ತು ಲಾಭವೂ ಸಿಗುವದೊಂದೇ ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿರದೆ, ಅವರು ಬೌದ್ಧಿಕ ಮತ್ತು ಶಾರೀರಿಕ ಸಾಮೂಹಿಕ ಪ್ರಯತ್ನ ಗಳಿಂದ ಈ ವ್ಯವಹಾರವನ್ನು ನಡೆಯಿಸುವ ಹೊಣೆಯನ್ನು ವಹಿಸುವಲ್ಲಿ ಕ್ರಮಕ್ರಮ ವಾಗಿ ಸುಶಿಕ್ಷಿತರಾಗಬೇಕೆಂಬುದೂ ಇದೆ. ಈ ಆಂದೋಲನವು ಆದಿವಾಸಿಗಳಿಗೆ

ಹೆಚ್ಚು ಪ್ರಿಯವೂ ಹಿತಕರವೂ ಆಗಿದೆ ಮುಂಬಯಿ ರಾಜ್ಯದಲ್ಲಿಯ ಸುಮಾರು ಇಪ್ಪತ್ತು ಜಿಲ್ಹೆಗಳನ್ನು ಈ ಆಂದೋಲನವು ಆವರಿಸಿದೆ ಅರಣ್ಯ ಕೂಲಿಕಾರರ ಸಂಘಗಳ ಸಂಖ್ಯೆ ೧೦೦ಕ್ಕೆ ತಲುಪಿದೆ ೧೯೫೦-೫೧ರಲ್ಲಿ ಈ ನೂರು ಸಂಘಗಳಲ್ಲಿ ೭೮ ಸಂಘಗಳಿಗೆ 'ಕೂಪು'ಗಳ ವ್ಯವಹಾರವು ಒಪ್ಪಿಸಲ್ಪಟ್ಟಿತು. ಒಟ್ಟು ಸಭಾಸದರ ಸಂಖ್ಯೆ ೧೬,೯೯೬ ಇದ್ದಿತು ಪಾಲು ( ಶೇರ ) ಬಂಡವಾಳ, ಕಾಯ್ದಿಟ್ಟ ಮತ್ತಿತರ ನಿಧಿಗಳು ಅನುಕ್ರಮವಾಗಿ ರೂ ೧,೪೧,೯೯೭ ಮತ್ತು ರೂ ೪ ೦೧,೮೮೮ ಇದ್ದವು ಸರಕಾರದವರು ೧೪೩ ಕೂಪುಗಳನ್ನು ಒಪ್ಪಿಸಿದರು ಅವುಗಳ ಮಧ್ಯಸ್ತಿಕೆಯ ಬೆಲೆಯು ( ಪಂಚಮತಿ ಕಿಮ್ಮತ್ತು ) ರೂ ೨೧,೬೭,೫೧೫ ಇದ್ದಿತು. ಸಂಘಗಳು ಕೇಂದ್ರ ಬ್ಯಾಂಕುಗಳಿಗೆ ಕೊಡಬೇಕಾದ ಸಾಲವು ರೂ ೨೦,೫೭,೧೬೫ ಇದ್ದಿತು ದುಡಿಯುವ ಬಂಡವಾಳವು ರೂ ೩೦,೮೮,೦೫೩ ಇದ್ದಿತು ಸದರೀ ವರ್ಷದಲ್ಲಿ ೬೧ ಸಂಘಗಳಿಗೆ ಒಟ್ಟು ರೂ ೯,೧೫,೪೮೯ ಲಾಭವಾಯಿತು ೨೦ ಸಂಘಗಳಿಗೆ ಒಟ್ಟು ೧,೮೮,೭೪೩ ರೂಪಾಯಿಗಳ ಹಾನಿಯಾಯಿತು ಈ ಸಂಘಗಳಲ್ಲಿ ಹಿಂದುಳಿದ ವರ್ಗದವರೇ ಹಚ್ಚಾಗಿ ಸಭಾಸದರಾಗಿರುವದರಿಂದ ಪಾಲು ( ಶೇಅರು ) ಬಂಡವಾಳವು ತೀರ ಸಣ್ಣ ಪ್ರಮಾಣದಲ್ಲಿದೆ ಅಲ್ಲದೆ ಸಭಾಸದರೂ ಸಾಧನ-ಸಂಪದ್ವಿರಹಿತರು ಇಂಥ ಪರಿಸ್ಥಿತಿಯಲ್ಲಿ ವಾಡಿಕೆಯ ಕರಾರು ಶರ್ತುಗಳನ್ವಯ ಕೇಂದ್ರ ಬ್ಯಾಂಕುಗಳು ಇಂಥ ಸಂಘಗಳಿಗೆ ಸಾಲ ಪೂರೈಸಲು ಸ್ವಾಭಾವಿಕವಾಗಿ ಅಸಂತೋಷವನ್ನು ವ್ಯಕ್ತಪಡಿಸುತ್ತವೆ ಇಂಥ ಸಂಘಗಳಿಗೆ ಕೇಂದ್ರ ಬ್ಯಾಂಕುಗಳು ಪೂರೈಸಿದ ಸಾಲದಲ್ಲಿ ನೂರಕ್ಕೆ ೪೦ರಷ್ಟು ಸರಕಾರದವರು ಭರವಸೆ ( ಗ್ಯಾರಂಟಿ ) ಯನ್ನಿತ್ತಿರುವರು ಈ ಬಗೆಯ ಆಂದೋಲನದ ಪ್ರಗತಿಗೆ ಕೆಳಗಿನವುಗಳು ಅಡೆತಡೆಯಾಗಿವೆ

(೧) ಇಂಥ ಸಂಘಗಳಿಗೆ ದೊಡ್ಡ ಪ್ರಮಾಣದಲ್ಲಿ ಹಣಕಾಸಿನ ಅವಶ್ಯಕತೆಯಿರುವದರಿಂದ, ಕೇಂದ್ರ ಬ್ಯಾಂಕುಗಳು ಇವುಗಳ ಅಡಚಣಿ ಅವಶ್ಯಕತೆಗಳನ್ನು ಪೂರೈಸುವಷ್ಟು ಸಾಲವನ್ನು ಕೊಡುವದಿಲ್ಲ. ಇವು ತಮ್ಮ ಕೈಯಲ್ಲಿಯ ಮಾಲಿನ ಸಂಗ್ರಹವನ್ನು ಕೂಡಲೇ ಮಾರದಿದ್ದರೆ, ಇವುಗಳ ಅಡಚಣಿಗಳು ಇನ್ನೂ ಪರಮಾವಧಿಯ ಮಟ್ಟಕ್ಕೆ ಮುಟ್ಟುವವು

(೨) ಅರಣ್ಯ ಸಂಪತ್ತಿನ ಹುಟ್ಟುವಳಿಯನ್ನು, ಸರಕುಗಳನ್ನು ಮಾರುವ ಯೋಗ್ಯ ವ್ಯವಸ್ಥೆಯು ಇನ್ನೂ ಆಗಿಲ್ಲ.

(೩) ಅರಣ್ಯ 'ಕೂಪು'ಗಳ ಬೆಲೆಯನ್ನು ಗೊತ್ತುಪಡಿಸುವ ಪ್ರಶ್ನೆಯು ಇನ್ನೂ ಬಿಡಿಸಲ್ಪಟ್ಟಿಲ್ಲ.

**ಕೂಲಿಕಾರರ ಗುತ್ತಿಗೆಯ ಸಂಘಗಳು ( ಲೇಬರ ಕಾಂಟ್ರ್ಯಾಕ್ಟ ಸೊಸಾಯಿಟಿಗಳು ) —**

ಇಂಥ ಸಂಘಗಳು ೩೫ ಇದ್ದು, ಇವುಗಳ ಸಭಾಸದರು ೩,೭೧೧ ಇದ್ದರು ಪಾಲು ಬಂಡವಾಳ, ಕಾಯ್ದಿಟ್ಟ ಮತ್ತಿತರ ನಿಧಿಗಳು ಅನುಕ್ರಮವಾಗಿ ರೂ ೪೯,೩೪೨ ಮತ್ತು ರೂ ೪೩,೨೫೨ ಇವೆ ಈ ಸಂಘಗಳು ಸಭಾಸದರಿಗೂ ಬಿನ್ ಸಭಾಸದರಿಗೂ ಕೊಟ್ಟ ಕೂಲಿಯ ಒಟ್ಟು ಹಣವು ಅನುಕ್ರಮವಾಗಿ ರೂ ೬,೭೨,೬೦೮ ಮತ್ತು ರೂ ೨೩,೭೩೪ ಇದ್ದಿತು ಕೆಲವೊಂದು ಸಂಘಗಳಿಗೆ ಆದ ಒಟ್ಟು ಲಾಭವು ೪೦,೪೧೪ ರೂಪಾಯಿ ಆದರೆ, ಕೆಲವೊಂದು ಸಂಘಗಳಿಗೆ ೭,೪೫೨ ರೂಪಾಯಿಗಳ ಹಾನಿಯಾಯಿತು ನೀರಾವರಿ, ಕಟ್ಟಡ, ಮಾರ್ಗಗಳ ರಚನೆ, ಅರಣ್ಯ 'ಕೂಪು'ಗಳ ಕಾರ್ಯನಿರ್ಹಹಿಸುವದು– ಈ ಮೊದಲಾದ ಚಟುವಟಿಕೆಗಳನ್ನು ಕೈಕೊಳ್ಳಲು ಕೂಲಿಕಾರರ ಗುತ್ತಿಗೆಯ ಸಂಘಗಳನ್ನು ಸ್ಥಾಪಿಸಬೇಕೆಂದು ಯೋಜನಾ ಸಮಿತಿಯು ಸೂಚಿಸಿದೆ ಗ್ರಾಮಾಂತರ ನಿರುದ್ಯೋಗ ಸಮಸ್ಯೆಯ ಪರಿಹಾರಕ್ಕೆ ಈ ಕೂಲಿಕಾರರ ಗುತ್ತಿಗೆಯ ಸಂಘಗಳ ಸಂಘಟನೆಯು ಒಂದು ಮಹತ್ವದ ಸಾಧನವಾಗಿದೆ ಈ ಸಂಘಗಳ ಸಂಘಟನೆಯ ವಿಷಯದಲ್ಲಿ ದೊರೆತ ಯಶಸ್ಸು, ರಾಜ್ಯದಲ್ಲಿಯ ಸಹಕಾರಿ ಆಂದೋಲನದ ಹೆಚ್ಚಿನ ಪ್ರಗತಿಗೆ ಒಂದು ಮಹಾ ಪ್ರೋತ್ಸಾಹನವಾಗಿದೆ

**ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳು.—**

ಇವು ಹದಿನಾರು ಇದ್ದವು ಕೈಮಗ್ಗದ ನೇಯ್ಕಾರರಿಗೆ ತಮ್ಮ ತಯಾರಾದ ಮಾಲನ್ನು ಮಾರುವ ಸೌಕರ್ಯಗಳನ್ನು ಒದಗಿಸುವ ದೃಷ್ಟಿಯಿಂದ ಭಾರತ ಸರಕಾರದ ಯೋಜನೆಯನ್ವಯ, ಇವುಗಳಲ್ಲಿ ಏಳು ಸಂಸ್ಥೆಗಳು ನೋಂದಿಸಲ್ಪಟ್ಟವು ಯುದ್ಧೋತ್ತರ ಪುನರ್ರಚನೆಯ ಯೋಜನೆಯನ್ವಯ ನಂತರ ಮತ್ತೆ ಐದು ಸಂಸ್ಥೆಗಳು ನಿರ್ಮಿತವಾದವು ಉಳಿದವುಗಳು ಖಾತೆಯ ಸ್ವಾಭಾವಿಕ ಚಟುವಟಿಕೆಗಳಿಗೊಳಪಟ್ಟು ನೋಂದಿಸಲ್ಪಟ್ಟವು ಯುದ್ಧೋತ್ತರ ಪುನರ್ರಚನೆಯ ಯೋಜನೆಯನ್ವಯ ಮತ್ತು ಖಾತೆಯ ಸಹಜ ಚಟುವಟಿಕಗಳಿಗನುಗುಣವಾಗಿ ರಚಿತವಾದ ಸಂಸ್ಥೆಗಳಿಗೆ ಸರ್ವಗ್ರಾಹಿಯಾದ ಪೋಟನಿಯಮಗಳಿದ್ದು ತಮ್ಮ ತಮ್ಮ ಜಿಲ್ಹೆಗಳಲ್ಲಿಯ ಗೃಹೋದ್ಯೋಗಗಳ ಅವಶ್ಯಕತೆಗಳನ್ನು ಪೂರೈಸುತ್ತವೆ ಅಲ್ಲದೆ ತಮ್ಮ ತಮ್ಮ ಜಿಲ್ಹೆಗಳಲ್ಲಿಯ ಅಂದರೆ ಕಾರ್ಯಕ್ಷೇತ್ರದಲ್ಲಿಯ ಔದ್ಯೋಗಿಕ ಸಂಘಗಳ ಪ್ರತಿನಿಧಿಗಳೂ ಆಗಿವೆ ಆದರೆ ಭಾರತ ಸರಕಾರದ ಯೋಜನೆಯನ್ವಯ ನೋಂದಿಸಲ್ಪಟ್ಟ ಕೆಲವೊಂದು ಹಳೆಯ ಸಂಸ್ಥೆಗಳು ತಮ್ಮ ಕ್ಷೇತ್ರದಲ್ಲಿಯ ಎಲ್ಲ ಉದ್ಯೋಗಗಳ ಅವಶ್ಯಕತೆಗಳನ್ನು ಪೂರೈಸುವಂತೆ ತಮ್ಮ ಚಟುವಟಿಕಗಳನ್ನು ವಿಸ್ತೃತಗೊಳಿಸಬೇಕಾಗಿದೆ ಸ್ಥಾನಿಕ ಗೃಹೋದ್ಯೋಗಗಳ ಪ್ರಗತಿ, ವಿಕಾಸ, ಉಪಕರಣ ಸನ್ನಾಹ, ಕಚ್ಚಾಸರಕು ಈ ಮೊದಲಾದವುಗಳನ್ನು ಸಮಾವೇಶವಾದ ಸಂಘಗಳಿಗೂ ಕೈಗಾರಿಕೆಯವರಿಗೂ ಪೂರೈಸುವದು, ಸಭಾಸದರು ತಯಾರಿಸಿದ ಸರಕುಗಳನ್ನು ಅಡವಾಗಿಟ್ಟುಕೊಂಡು ಅವರಿಗೆ ಸಾಲ ಕೊಡುವದು, ಗೃಹೋದ್ಯೋಗಗಳ

ಸರಕುಗಳನ್ನು, ಸಾಮಾನುಗಳನ್ನು ಜನಪ್ರಿಯ ಮಾಡುವಂತೆ, ಪ್ರಸಾರಗೊಳಿಸು ನಂತೆ ಪ್ರದರ್ಶನಗಳಲ್ಲಿ ಭಾಗವಹಿಸುವದು ಇವೇ ಮೊದಲಾದ ಚಟುವಟಿಕಗಳು ಈ ಸಂಸ್ಥೆಗಳ ಉದ್ದೇಶಗಳಾಗಿವೆ ಅಲ್ಲದೆ ಈ ಸಂಸ್ಥೆಗಳು ಉತ್ಪಾದನೆಯ ಚಟು ವಟಿಕೆಗಳನ್ನು ಹೊಸ ಹೊತ್ತು ಸಂಘಟಿಸಬಹುದು ಅಥವಾ ದಕ್ಷತೆಯ ಪ್ರಚಾರ ವಿಕಾಸಕ್ಕಾಗಿ ಸಮಾವೇಶವಾದ ಕಲವೊಂದು ಸಂಘಗಳನ್ನು ಆರಿಸಬಹುದು ಅಸ್ತಿತ್ವದಲ್ಲಿರುವ ಎಷ್ಟೋ ಸಂಸ್ಥೆಗಳು ಇಲ್ಲಿಯವರೆಗೆ ತಮ್ಮ ಉದ್ದೇಶಗಳಲ್ಲಿ ಅಡಕ ವಾದ ಅನೇಕ ಚಟುವಟಿಕೆಗಳಲ್ಲಿ ಕೆಲವನ್ನೇ ಕೈಕೊಂಡಿರುವವು ಅವು ಜಿಲ್ಲೆ ಗಳಲ್ಲಿಯ ನೂಲಿನ ರೋಕ (ಗುತ್ತಿಗೆಯ) ವಿತರಣೆಯ ವ್ಯವಹಾರವನ್ನು ನಾಗಿಸುತ್ತಿರುವದೇ ಇದಕ್ಕೆ ಮುಖ್ಯ ಕಾರಣವು ಮನುಷ್ಯರ ಮತ್ತು ಹಣದ ಸಾಧನ ಸಂಪತ್ತೆಲ್ಲವೂ ಪೂರ್ಣವಾಗಿ ಇದೇ ವ್ಯವಹಾರದಲ್ಲಿ ತೊಡಗಿಸಲ್ಪಟ್ಟಿತು ಆದುದರಿಂದ ಇನ್ನಿತರ ಚಟುವಟಿಕಗಳಿಗೆ ಲಕ್ಷ್ಯ ಪೂರೈಸಲು ಅವಕ್ಕ ಸಾಧ್ಯವಾಗಿಲ್ಲ ನಿಯಂತ್ರಣಗಳನ್ನು ತೆಗೆದೊಡನೆಯೇ ಇವು ಮೇಲೆ ವಿವರಿಸಿದ ಇನ್ನಿತರ ಚಟುವಟಿಕೆಗಳ ಕಡೆಗೆ ಕಾರ್ಯಪ್ರವೃತ್ತವಾಗಲು ಸಮರ್ಥವಾಗುವವು ಇವುಗಳಿಗೆ ಸಮಾವೇಶವಾದ ಪ್ರಾಥಮಿಕ ಔದ್ಯೋಗಿಕ ಸಂಘಗಳ ಸಂಖ್ಯೆ ೪೩೨ ಇದ್ದಿತು ಪಾಲು ಬಂಡವಾಳ, ಕಾಯ್ದಿಟ್ಟ ಮತ್ತಿತರ ನಿಧಿಗಳು, ಮತ್ತು ದುಡಿ ಯುವ ಬಂಡವಾಳಗಳು ಅನುಕ್ರಮವಾಗಿ ರೂ ೨,೯೭,೪೮೭, ರೂ ೮,೭೦,೯೩೬, ರೂ ೪೨,೬೪೯೯೧ ಇವೆ ಇವು ಸಂಘಗಳಿಗೂ ಕೈಗಾರಿಕೆಯವರಿಗೂ ಮಾರಿದ ನೂಲಿನ ಮತ್ತು ಕಚ್ಚಾ ಸರಕುಗಳ ಒಟ್ಟು ಬೆಲೆಯು ರೂ ೧,೫೯,೧೫,೪೮೫ ಇದ ಈ ಸಂಸ್ಥೆಗಳು ವ್ಯವಹರಿಸಿದ ಒಟ್ಟು ಮಾಲಿನ ಬೆಲೆಯು ರೂ ೧೦,೫೬ ೫೪೬ ಇದೆ ಉತ್ಪಾದನೆಯ ಚಟುವಟಿಕೆಗಳನ್ನು ಕೈಕೊಂಡ ಕೆಲವೊಂದು ಸಂಸ್ಥೆಗಳು ೩,೭೩,೦೯೯ ರೂಪಾಯಿ ಬೆಲೆಯ ನೂಲನ್ನೂ ಕಚ್ಚಾ ಸರಕುಗಳನ್ನೂ ನುರಿಸಿದವು

## ಪ್ರಾಂತಿಕ ಔದ್ಯೋಗಿಕ ಸಹಕಾರಿ ಸಂಸ್ಥೆ :—

ಸರಕಾರದವರು ರೇಖಿಸಿದ ಕಾರ್ಯಕ್ರಮಕ್ಕನುಗುಣವಾಗಿ ಈ ಸಂಸ್ಥೆಯು ತಾ ೨೮-೧೦-೧೯೪೬ ದಿನ ನೋಂದಿಸಲ್ಪಟ್ಟಿತು ಔದ್ಯೋಗಿಕ ಸಹಕಾರಿ ಸಂಘಗಳು, ಗೌರವ ಕಾರ್ಯಕರ್ತರು, ಸಂಸ್ಥೆಯ ನೌಕರದಾರರು, ಸಹಕಾರಿ ಸಂಘಗಳು, ಸಹಾನುಭೂತಿಪರ ಇನ್ನಿತರ ಸಂಸ್ಥೆಗಳು ವ್ಯಕ್ತಿಗಳು ಇವರೆಲ್ಲರಿಗೂ ಈ ಸಂಸ್ಥೆಯ ಸಭಾಸದತ್ವವನ್ನು ವಹಿಸಲು ಬರುವದು ಆರಂಭದಲ್ಲಿ ಈ ಸಂಸ್ಥೆ ನಿಯುಕ್ತ ಮಂಡಲದ ಕೆಳಗೆ ಅಭಿವೃದ್ಧಿಕರ ಸಂಸ್ಥೆಯಂತೆ ಕಾರ್ಯವನ್ನು ನಿರ್ವಹಿಸಿತು ಈಗ ವ್ಯವಹಾರ, ಉತ್ಪಾದನೆಯ ಚಟುವಟಿಕೆ, ಮತ್ತು ರಾಜ್ಯದಲ್ಲಿಯ ಜಿಲ್ಲಾ ಔದ್ಯೋಗಿಕ ಸಹಕಾರಿ ಸಂಸ್ಥೆಗಳೊಡನೆ ಸಮೀಕರಣಗಳ ಕಡೆಗೆ ತನ್ನ ಶಕ್ತಿಯನ್ನು ಏಕಾಗ್ರಗೊಳಿಸಿದೆ. ಅಲ್ಲದೆ ಸಂಘಗಳಿಗೆ ಆರ್ಥಿಕ ಮತ್ತು ತಾಂತ್ರಿಕ ಸಹಾಯ ವನ್ನು ನೀಡುತ್ತದೆ. ೧೯೪೭ ರಿಂದ ನೂಲಿನ ವಿತರಣೆಯ ಕಾರ್ಯವನ್ನು ಕೈಕೊಂಡಿದೆ ೧೯೪೮ ಸಪ್ಟೆಂಬರ ತಿಂಗಳಲ್ಲಿ ಪ್ರಾದೇಶಿಕ ವಿತರಣೆಯ ಕಾರ್ಯವನ್ನು ಕೈಕೊಂಡಿತು ಮುಂಬಯಿ ರಾಜ್ಯದಲ್ಲಿ ಇದು ಪ್ರಾದೇಶಿಕ ಹಂಚುವಿಕೆಯ

ವ್ಯವಹಾರವನ್ನೂ ಮುಂಬಯಿಯಲ್ಲಿ ರೋಕ ಹಂಚುವಿಕೆಯ ವ್ಯವಹಾರವನ್ನೂ ಕೈಕೊಂಡಿತು ಅವಶ್ಯವಿದ್ದ ಪ್ರಮಾಣದಲ್ಲಿ ನೂಲಿನ ವ್ಯವಹಾರವನ್ನು ಕೈಕೊಳ್ಳಲು, ಬೇಕಾದ ಸಾಲವನ್ನು, ಸಾಲ ಪೂರೈಸುವ ಬ್ಯಾಂಕಿನಿಂದ ಪಡೆಯುವಷ್ಟು, ಇದರ ನಿಧಿಗಳು ದೊಡ್ಡ ಪ್ರಮಾಣದಲ್ಲಿರಲಿಲ್ಲ ಆದುದರಿಂದ ಸರಕಾರದವರು ಔದ್ಯೋಗಿಕ ಸಹಕಾರಿ ಸಂಘಗಳ ಮತ್ತು ಗ್ರಾಮೋದ್ಯೋಗಗಳ ಜಾಯಿಂಟ ರಜಿಸ್ಟ್ರಾರರವರಿಗೆ, ತಮ್ಮ ಪರವಾಗಿ, ೨೫ ಲಕ್ಷ ರೂಪಾಯಿಗಳ ವರೆಗೆ, ಈ ಸಂಸ್ಥೆಯು ಅಡವಾಗಿಟ್ಟ ನೂಲಿನ ಬಲೆಯಲ್ಲಿ ನೂರಕ್ಕೆ ೨೦ರವರೆಗೆ, ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕಿಗೆ ಅಥವಾ ಸರಕಾರದಿಂದ ಮಾನ್ಯತೆಯನ್ನು ಪಡೆದ ಇನ್ನಿತರ ಬ್ಯಾಂಕು ಗಳಿಗೆ, ಒದಗಬಹುದಾದ ಹಾನಿಗಳಿಗೆ ಪರಿಹಾರವೆಂದು ಭರವಸೆ ಅಂದರೆ ಗ್ಯಾರಂಟಿಯನ್ನು ಕೊಟ್ಟು, ಈ ಸಂಸ್ಥೆಯು ಒಂದು ಕೋಟಿ ಇಪ್ಪತ್ತೈದು ಲಕ್ಷ ರೂಪಾಯಿಗಳವರೆಗೆ ಬಂಡವಾಳವನ್ನು ಎತ್ತಲಿಕ್ಕೆ ಸಮರ್ಥವಾಗುವಂತೆ ಮಾಡ ಬೇಕೆಂದು ತಿಳಿಸಿ, ಅಧಿಕಾರಕೊಟ್ಟರು ಅಲ್ಲದೆ ಸರಕಾರದವರೇ ಈ ಸಂಸ್ಥೆಯ ಕೆಲ ಪಾಲು (ಶೇಅರು)ಗಳನ್ನು ಕೊಂಡರು. ಮತ್ತು ೧೯೪೭--೪೮ ಮತ್ತು ೧೯೪೮-೪೯ ಹೀಗೆ ಎರಡು ವರ್ಷಗಳ ಸಲುವಾಗಿ ಅನುಕ್ರಮವಾಗಿ ರೂ ೪೭,೪೨೫, ರೂ ೬೮,೦೮೦ಗಳ ಧನ ಸಹಾಯವನ್ನು ಮಂಜೂರ ಮಾಡಿದರು ವ್ಯವಹಾರಿಂದ ಚಟುವಟಿಕೆಗಳ, ವಿಶೇಷವಾಗಿ ನೂಲು ಹಂಚುವ ವ್ಯವಹಾರದ ಮೂಲಕವಾಗಿ ೧೯೪೮-೪೯ ಮತ್ತು ೧೯೪೯-೫೦ರಲ್ಲಿ ಈ ಸಂಸ್ಥೆಯು ಅಪಾರ ಲಾಭವನ್ನು ಸಂಪಾ ದಿಸಿತು ೧೯೫೦ರಲ್ಲಿ ಇದಕ್ಕೆ ೨೯,೨೫೬ ರೂಪಾಯಿಯ ಲಾಭವಾಯಿತು ಆದುದ ರಿಂದ, ಈ ವರ್ಷಗಳಲ್ಲಿ ಇದು ಸರಕಾರಕ್ಕ ಧನ ಸಹಾಯದ ಬಗೆಗೆ ಮಾತನ್ನೇ ಎತ್ತಲಿಲ್ಲ ಚರ್ಮಕಾರರ ಮತ್ತು ಮೊಚ್ಚೆಗಾರರ ಸಂಘಗಳ ಮತ್ತು ಕಬ್ಬಿಣ, ತಾಮ್ರ, ಹಿತ್ತಾಳಿ ಮೊದಲಾದ ಧಾತುಗಳಲ್ಲಿ ದುಡಿಯುವ ಜನರ ಸಂಘಗಳ ತೀವ್ರ ವಿಕಾಸಕ್ಕಾಗಿ ಈ ಸಂಸ್ಥೆಯು ರಚಿಸಿದ ಎರಡು ಯೋಜನೆಗಳಿಗೆ ಸರಕಾರದವರು ಒಪ್ಪಿಗೆಯನ್ನಿತ್ತರು ಅಲ್ಲದೆ ಸಾಲದ ರೂಪದಲ್ಲಿ ರೂ ೨,೫೬,೧೨೦ ಮತ್ತು ಸಹಾಯಧನದ ರೂಪದಲ್ಲಿ ರೂ ೧೯,೧೮೦ ಗಳ ಹಣವನ್ನು ಮಂಜೂರ ಮಾಡಿದರು

೩೦-೬-೧೯೫೧ ಕ್ಕ ಈ ಸಂಸ್ಥೆಯ ಒಟ್ಟು ಸಭಾಸದರ ಸಂಖ್ಯೆ ೫೩೪ ಇದ್ದಿತು ಇವುಗಳಲ್ಲಿ ೨೮೯ ಔದ್ಯೋಗಿಕ ಸಂಘಗಳು, ೨೮ ಇತರ ಸಂಘಗಳು ಇದ್ದವು ಉಳಿದವುಗಳಲ್ಲಿ ಇತರ ನೋಂದಿಸಲ್ಪಟ್ಟ ಸಂಸ್ಥೆಗಳು, ವ್ಯಕ್ತಿಗಳು ಅಡಕವಾಗಿರುವರು ವಸೂಲಾದ ಪಾಲು ಬಂಡವಾಳವು ರೂ ೨,೪೨,೫೨೦ ಇದ್ದಿತು ಇದರಲ್ಲಿ ಸರಕಾರದವರು ಕೊಟ್ಟ ಹಣವು ೩೮,೧೩೦ ರೂಪಾಯಿ ಇದ್ದಿತು ಕಾಯ್ದಿಟ್ಟ ಮತ್ತಿತರ ನಿಧಿಗಳು ಕೂಡಿ ೨೮೯,೩೮೫ ರೂಪಾಯಿ ಇದ್ದವು ದುಡಿಯುವ ಬಂಡವಾಳವು ೭೧,೮೪,೪೫೦ ರೂಪಾಯಿ ಇದ್ದಿತು ಈ ಸಂಸ್ಥೆಯ ಮುಖ್ಯ ಚಟುವಟಿಕೆಗಳೆಂದರೆ ಸರಕಾರದ ಪರವಾಗಿ ನೂಲನ್ನು ಕೊಂಡು ಹಂಚುವದೇ ಸರಿ ! ಇದು ಮುಂಬಯಿ ರಾಜ್ಯದಲ್ಲಿ ಪ್ರಾದೇಶಿಕ ವಿತರಣೆಯ ವ್ಯವಹಾರ ವನ್ನು, ಮುಂಬಯಿಯಲ್ಲಿ ರೋಕ ( ಗುತ್ತಿಗೆಯ ) ವ್ಯವಹಾರವನ್ನು ಮುಂದು ವರಿಸಿತು ಇದು ಒಂದೂವರೆ ಕೋಟಿ ಬೆಲೆ ಬಾಳುವ ೧೨,೧೭೭ ಗಂಟುಗಳನ್ನು,

ಇ೬೫೪ ನೂಲಿನ ಪೆಟ್ಟಿಗೆಗಳನ್ನು ಹಂಚಿತು ನೂಲು, ಚಿನುಕಾ ರೇಶ್ಮೆ, ಕಚ್ಚಾ ರೇಶಿಮೆ ಈ ಮೊದಲಾದವುಗಳ ಕೆಲವೊಂದು ಪ್ರಮಾಣದ ಆಯಾತಕ್ಕೆ ಇದು ಲಾಯಸೆನ್ಸನ್ನು (ಸನದು) ಪಡೆದಿದೆ ಇದು ಸೆಂಟ್ರಲ್ ಸ್ಟೋಅರ್ಸ ಪರ್ಚೇಜ ಆರ್ಗನಾಯಝೇಶನಿನಿಂದ (ಕೇಂದ್ರ ಉಗ್ರಾಣಗಳ ಖರೀದಿಯ ಸಂಸ್ಥೆಯಿಂದ) ಕೆಲವೊಂದು ಸರಕುಗಳ ಪೂರೈಕೆಗಾಗಿ ಆರ್ಡರುಗಳನ್ನು (ಹುಕುಮು) ಸ್ವೀಕರಿಸಿ, ಅವುಗಳ ಅಮಲಬಜಾವಣಿಗಾಗಿ ಅಂದರೆ ಅವನ್ನು ಕೃತಿಗಿಳಿಸಲು ಬೇರೆ ಬೇರೆ ಸಂಘಗಳಿಗೆ ಕಳಿಸಲಾಯಿತು ೧೯೫೦-೫೧ರಲ್ಲಿ ಆರೂವರ ಲಕ್ಷ ರೂಪಾಯಿ ಬೆಲೆಯ ಸರಕುಗಳನ್ನು ಪೂರೈಸಲು ಈ ಸಂಸ್ಥೆಯು 'ಆರ್ಡರು'ಗಳನ್ನು ಪಡೆಯಿತು ಗೃಹೋದ್ಯೋಗ ಮತ್ತು ಸಣ್ಣ ಪ್ರಮಾಣದ ಉದ್ಯೋಗಗಳ ಡಿಪೋ (ಸರಕುಗಳ ಅಂಗಡಿ ಅಥವಾ ಉಗ್ರಾಣ) ಒಂದನ್ನು ಈ ಸಂಸ್ಥೆಯು ಮುಂಬಯಿಯಲ್ಲಿ ನಡೆಸುತ್ತಿರುವದು ೧,೧೩,೧೭೨ ರೂಪಾಯಿ ಬೆಲೆಯ ಸರಕುಗಳನ್ನು ಕೊಂಡು ೨೩೬,೨೩೮ ರೂಪಾಯಿ ಬೆಲೆಯ ಸರಕುಗಳನ್ನು ಮಾರಿತು ಠಾಣಾ ಮತ್ತು ಕುಲಾಬಾ ಜಿಲ್ಲೆಗಳಲ್ಲಿಯ ಏಳು ಅರಣ್ಯ ಕೂಲಿ ಕಾರರ ಸಂಘಗಳಿಗ ಚೇತಸಯನ್ನು ನೀಡಿದಲ್ಲದ, ಅವುಗಳ ಇಮಾರತಿಯ ಕಟ್ಟಿಗೆ ಯನ್ನೂ ಕಲ್ಲಿದ್ದಲಯನ್ನೂ ಮಾರಲು ನೆರವಾಯಿತು ಕಚ್ಚಾ ಸರಕುಗಳನ್ನು ಕೊಳ್ಳುವಲ್ಲಿ ಇದು ಎಷ್ಟೋ ಔದ್ಯೋಗಿಕ ಸಂಘಗಳಿಗೆ ಸಹಾಯಮಾಡಿತು ಅಲ್ಲದೆ ಉತ್ಪಾದನೆಯ ಕೇಂದ್ರಗಳಿಗೆ ಬೇಕಾಗುವ ಸರಕುಗಳನ್ನು ಖರೀದಿ ಮಾಡುವಲ್ಲಿ ಮತ್ತು ಅವು ತಯಾರಿಸಿದ ಸರಕುಗಳನ್ನು, ಸಾಮಾನುಗಳನ್ನು ಮಾರುವಲ್ಲಿ ನೆರವಾಗಿ ಅವುಗಳನ್ನು ಮೊದಲಿನ ಊರ್ಜಿತ ಸ್ಥಿತಿಗೆ ತರಲು ಯತ್ನಿಸಿದೆ

## ಪ್ರಾದೇಶಿಕ ಮತ್ತು ಜಿಲ್ಲಾ ಔದ್ಯೋಗಿಕ ಬ್ಯಾಂಕುಗಳು :—

ಈ ಮೊದಲೇ ವಿವರಿಸಿದಂತೆ ನಾಲ್ಕು ಔದ್ಯೋಗಿಕ ಸಹಕಾರಿ ಬ್ಯಾಂಕುಗಳು ನೋಂದಿಸಲ್ಪಟ್ಟಿವೆ ಇವುಗಳಲ್ಲಿ ಒಂದು ಪ್ರಾದೇಶಿಕ ಬ್ಯಾಂಕು ಇದ್ದು ಇದರ ಪ್ರಧಾನ ಕಚೇರಿಯು ಸುರತದಲ್ಲಿರುವದು ಉಳಿದ ಜಿಲ್ಲಾ ಔದ್ಯೋಗಿಕ ಬ್ಯಾಂಕುಗಳ ಪ್ರಧಾನ ಕಚೇರಿಗಳು ಬೆಳಗಾವಿಯಲ್ಲೊಂದು, ಬಾಗಲಕೋಟೆಯಲ್ಲೊಂದು ಮತ್ತು ಸೊಲ್ಲಾಪುರದಲ್ಲೊಂದು ಇವೆ ಈ ಬ್ಯಾಂಕುಗಳನ್ನು ಸ್ಥಾಪಿಸುವ ಕಾರಣಗಳ ಬಗೆಗೆ, ಇವುಗಳ ವ್ಯವಹಾರಕಾರ್ಯಕಲಾಪಗಳ ಬಗೆಗೆ ಪ್ರತ್ಯೇಕವಾಗಿ ಕೊಡಲಾಗಿದೆ ಸಂಘಗಳನ್ನೂ ವ್ಯಕ್ತಿಗಳನ್ನೂ ಹಿಡಿದು ಇವುಗಳ ಸಭಾಸದರ ಸಂಖ್ಯೆ ೧೨೬೮ ಇದ್ದಿತು ತಾರೀಖು ೩೦-೬-೧೯೫೧ಕ್ಕೆ ಇವುಗಳ ಪಾಲು ಬಂಡವಾಳವೂ ದುಡಿಯುವ ಬಂಡವಾಳವೂ ಅನುಕ್ರಮವಾಗಿ ರೂ ೪,೦೩,೮೨೫ ಮತ್ತು ರೂ ೧೫,೮೫,೦೫೫ ಇದ್ದವು ಈ ಎಲ್ಲ ಬ್ಯಾಂಕುಗಳು ಇನ್ನೂ ಶೈಶವಾವಸ್ಥೆ ಯಲ್ಲಿವೆ ಇವುಗಳ ಪ್ರಗತಿಗಾಗಿ ನಾವು ಇನ್ನೂ ಕಾಯಬೇಕಾಗಿದೆ

ಹಣದ ಸಹಾಯ, ಶಕ್ತಿ, ಉಪಕರಣ, ಸನ್ನಾಹ, ಕಚ್ಚಾಸರಕು, ತಾಂತ್ರಿಕ ಸಲಹೆ, ಮತ್ತು ಮಾರಾಟದ ಸೌಕರ್ಯ— ಈ ಮೊದಲಾದವುಗಳ ವಿಷಯದಲ್ಲಿ ಶಿಲ್ಪಿಗಳಿಗೂ, ಕೈಗಾರಿಕೆಯವರಿಗೂ, ಗ್ರಾಮೋದ್ಯೋಗ–ಗೃಹೋದ್ಯೋಗಗಳಲ್ಲಿ ತೊಡಗಿದ ಇನ್ನಿತರರಿಗೂ ಸಹಾಯ ನೀಡುವ ದೃಷ್ಟಿಯಿಂದ ಹಳ್ಳಿಯ ಮಟ್ಟದಿಂದ ರಾಜ್ಯದ ಮಟ್ಟದವರೆಗೆ ಔದ್ಯೋಗಿಕ ಸಹಕಾರಿ ಸಂಘಗಳನ್ನು ಸ್ಥಾಪಿಸುವ ಬಗೆಗೆ ಪ್ರಯತ್ನಿಸಲಾಗಿದೆ ಈ ಔದ್ಯೋಗಿಕ ಸಂಘಗಳು ಯಶಸ್ವಿಯಾಗಿ ಕಾರ್ಯನಿರ್ವಹಿಸಬೇಕಾದರೆ, ಅನುಕೂಲ ಸಹಕಾರಿ ವಾತಾವರಣ, ಪರಿಸ್ಥಿತಿಗಳನ್ನು ನಿರ್ಮಾಣಮಾಡಬೇಕೆಂಬುದು ಯೋಜನಾ ಸಮಿತಿಗೆ ಕಂಡುಬಂದ ಮಾತಾಗಿದೆ ದೊಡ್ಡ ಪ್ರಮಾಣದ ಉದ್ಯೋಗಗಳು ಆಕ್ರಮಿಸದಂತಹ ಎದ್ದು ಕಾಣುವ ಕ್ಷೇತ್ರಗಳನ್ನು ಗೃಹೋದ್ಯೋಗಗಳೂ ಸಣ್ಣ ಪ್ರಮಾಣದ ಉದ್ಯೋಗಗಳೂ ತಮ್ಮಷ್ಟಕ್ಕೆ ತಾವೇ ನಿರ್ಮಿಸಿಕೊಳ್ಳಬಹುದೆಂದ ಯೋಜನಾ ಸಮಿತಿಯ ಆಶೆಯಷ್ಟೇ ಅಲ್ಲ, ತೀವ್ರವಾದ ಇಚ್ಛೆಯೂ ಇದೆ ಸಣ್ಣ ಪ್ರಮಾಣದ ಉದ್ಯೋಗಗಳಿಗೂ, ಗೃಹೋದ್ಯೋಗಗಳಿಗೂ ನೆರವಾಗಲು ರಾಜ್ಯ ಸರಕಾರಗಳು ತೆಗೆದಿಟ್ಟ ೧೨ ಕೋಟಿ ರೂಪಾಯಿಗಳ ಜೊತೆಗೆ ಯೋಜನೆಯು ೧೫ ಕೋಟಿ ರೂಪಾಯಿಗಳ ವ್ಯವಸ್ಥೆ ಮಾಡುತ್ತದೆ ಸಹಕಾರ ತತ್ವಗಳ ಮೇಲೆ ಸಂಘಟಿತವಾದ ಉದ್ಯೋಗಗಳಿಗೆ ಪ್ರಾಶಸ್ತ್ಯ ಕೊಡುವ ದೃಷ್ಟಿಯಿಂದ ರಾಜ್ಯ ಸರಕಾರಗಳಿಂದ ಸ್ಥಾಪಿತವಾಗಬಹುದಾದ ಇಂಡಸ್ಟ್ರಿಯಲ್ ಫಾಯನಾನ್ಸಿಂಗ ಕಾರ್ಪೋರೇಶನ್ನಿನಿಂದ ಮತ್ತು ಈ ರೀತಿ ತೆಗೆಯಲ್ಪಟ್ಟ ೧೫ ಕೋಟಿ ಹಣದೊಳಗಿಂದ ಆರ್ಥಿಕ ಸಹಾಯವನ್ನು ನೀಡಬಹುದು ಯೋಜನಾ ಸಮಿತಿಯ ಶಿಫಾರಸುಗಳು ಪ್ರೋತ್ಸಾಹನಕರವಿದ್ದು, ಗ್ರಾಮೋದ್ಯೋಗ–ಗೃಹೋದ್ಯೋಗಗಳ ವಿಕಾಸಕ್ಕಾಗಿ ಸಹಕಾರ ತತ್ವಗಳ, ಪದ್ಧತಿಯ ಅಂತಸ್ಸತ್ವದ, ಸಾಮರ್ಥ್ಯದ ಪ್ರಯೋಗ ಮಾಡಲಿಕ್ಕೆ, ಸಹಕಾರಿಗಳಿಗೂ ಮತ್ತು ಗೃಹೋದ್ಯೋಗ–ಗ್ರಾಮೋದ್ಯೋಗ ವಿಕಾಸದಲ್ಲಿ ತೊಡಗಿರುವ ಇನ್ನಿತರ ಕಾರ್ಯಕರ್ತರಿಗೂ ಒಂದು ಒಳ್ಳೇ ಸುಸಂಧಿಯು ಬಂದಿದೆ ಈ ಸುಸಂಧಿಯ ಸದುಪಯೋಗವನ್ನು ಸಹಕಾರಿಗಳಾದ ನಾವು ಮಾಡಬೇಕಲ್ಲವೇ !

**ಮೀನಗಾರರ ಸಂಘಗಳು :—**

ಕರಾವಳಿ ಪ್ರದೇಶದಲ್ಲಿ ಹೆಚ್ಚು ಜನರು ಮೀನ ಹಿಡಿಯುವ ಉದ್ಯೋಗವನ್ನು ಕೈಕೊಂಡಿದ್ದು ಮೀನು ಹಿಡಿಯುವ ಉದ್ಯೋಗದ ಮೇಲೆಯೇ ಅವರು ತಮ್ಮ ಉಪಜೀವನವನ್ನು ಸಾಗಿಸುತ್ತಾರೆ ಮೀನುಗಾರರು ಬಹಳೇ ಬಡವರು ಮತ್ತು ಅಶಿಕ್ಷಿತರು ಇರುತ್ತಾರೆ ಹಿಡಿದ ಮೀನುಗಳಿಗೆ ಯೋಗ್ಯ ಬೆಲೆ ಸಿಗುವದಿಲ್ಲ ಜಾಳಿಗ, ಡೋಣಿ ಮೊದಲಾದವುಗಳನ್ನು ಕೊಳ್ಳಲು ಅವರು ಸಮರ್ಥರಿಲ್ಲ ಅವರು ಮಧ್ಯಸ್ಥರಿಂದ ಶೋಷಿಸಲ್ಪಡುತ್ತಾರೆ ಮೀನುಗಾರರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವದಕ್ಕಾಗಿ ಕೆಲವು ಕಡೆಗಳಲ್ಲಿ ಮೀನಗಾರರ ಸಹಕಾರಿ ಸಂಘಗಳನ್ನು ಸ್ಥಾಪಿಸಲಾಗಿತ್ತು ಆದರ ೧೯೪೮ರಲ್ಲಿ ಸರಕಾರದವರು ಮೀನಗಾರರ ಉದ್ಯೋಗವನ್ನು ಸಹಕಾರಿ ತತ್ವಗಳ ಮೇಲೆ ಬೆಳೆಯಿಸುವ ಉದ್ದೇಶದಿಂದ

ಯೋಜನೆಯೊಂದನ್ನು ತಯಾರಿಸಿ ಮಂಜೂರ ಮಾಡಿದರು ಈ ಯೋಜನೆಯ ಮೇರೆಗೆ ವಿಶೇಷತಃ ಕಾರವಾರ ಜಿಲ್ಹೆ ಮತ್ತು ಸಾಮಾನ್ಯವಾಗಿ ಠಾಣಾ,ಕುಲಾಬಾ, ರತ್ನಾಗಿರಿ ಮತ್ತು ಭಡೋಚ ಜಿಲ್ಹೆಗಳಲ್ಲಿ ಹೆಚ್ಚುಚ್ಚು ಮೀನಗಾರ ಸಂಘಗಳನ್ನು ಸಂಘಟಿಸಬೇಕೆಂದಿದೆ ಈ ಸಂಘಗಳ ಮೇಲ್ವಿಚಾರಣೆಗಾಗಿ ೧೯೪೯ ಫೆಬ್ರುವಾರಿಯಿಂದ ೧೯೫೦ ಜುಲೈ ೧ರ ವರೆಗೆ ಒಬ್ಬ ಅಸಿಸ್ಟಂಟ ರಜಸ್ಟ್ರಾರನನ್ನು ನಿಯಮಿಸಲಾಗಿತ್ತು ಈ ಯೋಜನೆಯ ಮೇರಗೆ ಮೀನಗಾರರಿಗೆ ಜಾಳಿಗೆ, ಮೋಟರ ಟ್ರಕ್ ಮೊದಲಾದವುಗಳನ್ನು ಕೊಳ್ಳಲು ಸಾಲದ ರೂಪದಲ್ಲಿ ಧನಸಹಾಯ ಮತ್ತು ಡೋಣಿಗಳನ್ನು ಕೊಂಡುಕೊಳ್ಳಲು ಸಾಲ ಮತ್ತು ಸಹಾಯ ಧನಗಳನ್ನು ಬೇಡಿಕ ಮತ್ತು ಅರ್ಹತೆಗಳನ್ವಯ ಕೂಡಲಾಗುವದು

ಈ ಉದ್ದಿಮೆಯಲ್ಲಿ ತೊಡಗಿರುವ ಜನರ ಸಾಮಾಜಿಕ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವದೇ ಮೀನಗಾರ ಸಂಘಗಳ ಮುಖ್ಯ ಉದ್ದೇಶವಾಗಿದ ಅದಕ್ಕಾಗಿ ಕೆಳಗಿನ ಕ್ರಮಗಳನ್ನು ಅನುಸರಿಸಲಾಗಿದ

(೧) ಮೀನ ಹಿಡಿಯುವ ಸುಧಾರಿಸಿದ ಕ್ರಮಗಳನ್ನು ಅನುಸರಿಸುವದು

(೨) ಮೀನಗಾರರಿಗೆ ಬೇಕಾಗುವ ದಾರ, ನೌಕಾಪಟ, ಗಾಳ, ಹಗ್ಗ ಮೊದಲಾದ ಸಲಕರಣೆಗಳನ್ನು ಪೂರೈಸುವದು

(೩) ಹಿಡಿದ ಮೀನಗಳ ಮಾರಾಟದ ವ್ಯವಸ್ಥೆ ಮಾಡುವದು

(೪) ಮೀನಗಾರರಲ್ಲಿ ಉಳಿತಾಯ ಸ್ವಸಹಾಯ ಮತ್ತು ಪರಸ್ಪರ ಸಹಾಯದ ತತ್ವಗಳನ್ನು ಬೋಧಿಸುವದು

ಕಳೆದ ಎರಡು ವರ್ಷಗಳಲ್ಲಿ ಮೀನಗಾರರ ಸಂಘಗಳು ಸಾಧಿಸಿದ ಪ್ರಗತಿಯ ಚಿತ್ರವನ್ನು ಕೆಳಗೆ ಕೊಡಲಾಗಿದೆ

| | ವಿವರಗಳು. | ೧೯೪೯–೫೦ | ೧೯೫೦–೫೧ |
|---|---|---|---|
| ೧ | ಸಂಘಗಳ ಸಂಖ್ಯೆ | ೬೦ | ೬೬ |
| ೨ | ಸದಸ್ಯರ ಸಂಖ್ಯೆ | ೧೪,೭೬೬ | ೧೬,೨೧೫ |
| ೩ | ಶೇರ ಭಾಂಡವಲು | ೪,೬೬,೯೨೪ | ೪,೭೫,೮೪೩ |
| ೪ | ದುಡಿಯುವ ಭಾಂಡವಲು | ೧೨,೪೯,೬೭೫ | ೧೩,೮೪,೪೦೭ |
| ೫ | ಖರೀದಿ | ೩೩,೦೦,೩೫೨ | ೩೯,೩೮,೭೦೮ |
| ೬ | ಮಾರಾಟ | ೩೪,೫೩,೭೦೦ | ೩೯,೩೮,೮೪೫ |
| ೭ | ಲಾಭ | +೧,೦೩,೪೪೭ | +೧,೦೯,೬೧೦ |
| | | —೩೬,೬೪೨ | —೪,೨೦೭ |
| ೮ | ಸರಕಾರದ ಸಾಲ | ೨,೪೭,೭೪೯ | ೪,೨೩,೨೦೨ |

೬೬ ಸಂಘಗಳು, ೧೬,೨೧೫ ಸದಸ್ಯರು ಮತ್ತು ೧೩.೮೪ ಲಕ್ಷ ರೂ ಯ ದುಡಿಯುವ ಭಾಂಡವಲು ಇದ್ದಿತೆಂದು ಮೇಲಿನ ಅಂಕೆ ಸಂಖ್ಯೆಗಳಿಂದ ಗೊತ್ತಾಗುತ್ತದೆ ಈ ಸಂಘಗಳ ಖರೀದಿ ಹಾಗೂ ವಿಕ್ರಿಗಳು ೩೯.೩೮ ಲಕ್ಷ ರೂ ಗಳಷ್ಟಿದ್ದವು ೧೯೫೦–೫೧ ನೆಯ ವರ್ಷದಲ್ಲಿ ೭ ಮೀನಗಾರ ಸಂಘಗಳಿಗೆ ೧.೬೩ ಲಕ್ಷ ರೂ ಸಾಲ, ೯೪ ಸಾವಿರ ರೂ ಸಹಾಯ ಧನವನ್ನು ಕೊಡಲಾಗಿದ್ದಿತು ಸಾತಪತಿ ಮೀನಗಾರ ಸರ್ವೋದಯ ಸಹಕಾರಿ ಸಂಘಕ್ಕೆ ಆಯಿಸ ಫ್ಯಾಕ್ಟರಿಯನ್ನು ಕಟ್ಟಲು ಮತ್ತು ತಂಪನ್ನು ಕಾಯ್ದುಕೊಳ್ಳುವ ಯಂತ್ರ ಸಾಮಗ್ರಿಗಳನ್ನು ಕೊಂಡುಕೊಳ್ಳಲು ೪೩,೬೮೭ ರೂ ಗಳನ್ನು ಮಂಜೂರ ಮಾಡಲಾಗಿದ್ದಿತು ಮುಂಬಯಿ ಪ್ರಾಂತೀಯ ಮಚ್ಛಿಮಾರ ಸಹಕಾರಿ ಸಂಸ್ಥೆ ಮುಂಬಯಿ ಎಂಬ ಫೆಡರಲ್ ಸಂಸ್ಥೆಯು ೧೯೫೦ರಲ್ಲಿ ನೋಂದಾಯಿಸಲ್ಪಟ್ಟಿದೆ ಸದಸ್ಯ ಸಂಘಗಳ ಮತ್ತು ಮೀನಗಾರರ ಮೀನಗಳನ್ನು ಮಾರಾಟ ಮಾಡುವ ಮತ್ತು ಅವರಿಗೆ ಯೋಗ್ಯ ಸಲಕರಣೆಗಳನ್ನು ಒದಗಿಸುವ ಹಾಗು ಮಾರ್ಗದರ್ಶನ ಮತ್ತು ಸಹಾಯ ಮಾಡುವದೇ ಈ ಸಂಸ್ಥೆಯ ಮುಖ್ಯ ಉದ್ದೇಶವಾಗಿದೆ

ಮಳೆಗಾಲದ ೪ ತಿಂಗಳುಗಳಲ್ಲಿ ಮೀನಗಾರರಿಗೆ ಬೇಕಾಗುವ ಅಲ್ಪಾವಧಿ ಸಾಲವನ್ನು ಕೊಡುವದಕ್ಕಾಗಿ ಈ ಸಂಘಗಳಿಗೆ ಹಣ ಪೂರೈಸುವದು ಒಂದು ಮುಖ್ಯ ಸಮಸ್ಯೆಯೇ ಆಗಿದೆ ಮೀನಗಳ ಮಾರಾಟದ ಮತ್ತು ಸಂಘಗಳ ಪ್ರಗತಿಯು ಮುಖ್ಯವಾಗಿ ಮೀನಗಾರ ಸಂಘಗಳಿಗೆ ಯೋಗ್ಯ ದರದಲ್ಲಿ ಕೊಡಲಾಗುವ ಅಲ್ಪಾವಧಿ ಸಾಲದ ಸೌಲಭ್ಯತೆಯನ್ನು ಅವಲಂಬಿಸಿದೆ ಈ ಸಂಘಗಳಿಗೆ ಬೇಕಾಗುವ ಅಲ್ಪಾವಧಿ ಸಾಲವನ್ನು ಪೂರೈಸುವ ಮತ್ತು ಆ ಉದ್ದೇಶಕ್ಕಾಗಿ ಬೇಕಾಗುವ ಹಣಕಾಸಿನ ಸಂಸ್ಥೆಯ ಬಗ್ಗೆ ಸಹಕಾರಿ ಖಾತೆಯು ಈಗ ವಿಚಾರಿಸುತ್ತಲಿದೆ. ಅಲ್ಲದೆ ಈ ಸಂಘಗಳ ಕಾರ್ಯರೂಪಗಳ ಮೇಲ್ವಿಚಾರಣೆಗಾಗಿ ಜಿಲ್ಹಾವಾರ ಫೆಡರಲ್ ಸಂಸ್ಥೆಗಳನ್ನು ಸ್ಥಾಪಿಸುವ ಬಗ್ಗೆಯೂ ಸರಕಾರವು ವಿಚಾರಿಸುತ್ತಲಿದೆ

**ಸ್ತ್ರೀಯರು ಮತ್ತು ಸಹಕಾರ —**

ಸಹಕಾರಿ ಆಂದೋಲನದಲ್ಲಿ ಸ್ತ್ರೀಯರು ಹೆಚ್ಚಾಗಿ ಭಾಗವಹಿಸುವ ಬಗ್ಗೆ ಆಂದೋಲನವು ಲಕ್ಷ್ಯವಿತ್ತಿಲ್ಲವೆಂದು ಸಹಕಾರದ ಯೋಜನಾ ಸಮಿತಿಯು ತನ್ನ ವರದಿಯಲ್ಲಿ ಅಭಿಪ್ರಾಯ ಪಟ್ಟಿದೆ ಇಲ್ಲಿಯ ವರೆಗೆ ಆಂದೋಲನವು ಕೇವಲ ಪತ್ತಿನ ಆಂದೋಲನವಾಗಿದ್ದುದೇ ಇದಕ್ಕೆ ಮುಖ್ಯ ಕಾರಣವಾಗಿದೆ ಎಂದು ಆ ವರದಿಯಲ್ಲಿ ಅಭಿಪ್ರಾಯಪಡಲಾಗಿದೆ ಆದರೆ ಈಗ ಆಂದೋಲನವು ಎಲ್ಲ ಆರ್ಥಿಕ ರಂಗಗಳಿಗೆ ಅನ್ವಯಿಸುವಂತೆ ಬದಲಾವಣೆಯಾಗಿದ್ದು, ದೇಶದ ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಸ್ತ್ರೀಯರು ಆಂದೋಲನದಲ್ಲಿ ಭಾಗವಹಿಸುವಂತೆ ಮನಒಲಿಸುವ ಕಾಲವು ಸನ್ನಿಹಿತವಾಗಿದೆ ಎಂದೂ ಅರ್ಧ ಜನಸಂಖ್ಯೆಯು ಹೊರಗುಳಿದಿರುವದರಿಂದ ಅರ್ಥ ಸಾಮರ್ಥ್ಯ ಮತ್ತು ಉತ್ಸಾಹಗಳು ಕಡಿಮೆಯಾಗಿವೆ ಎಂದೂ

ಆದುದರಿಂದ ಸ್ತ್ರೀಯರು ಆಂದೋಲನದಲ್ಲಿ ಭಾಗವಹಿಸುವಂತೆ ಮಾಡಬೇಕೆಂದೂ ಸಮಿತಿಯು ಶಿಫಾರಸು ಮಾಡಿದೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಗಂಡಸರೊಡನೆ ಅನೇಕ ಸಂಘಗಳ ಸದಸ್ಯರಾಗಿಯೂ ಮತ್ತು ತಮಗಾಗಿಯೇ ಸಂಘಗಳನ್ನು ಸಂಘಟಿಸಿಕೊಂಡು ಸ್ತ್ರೀಯರು ಆಂದೋಲನದಲ್ಲಿ ಹೆಚ್ಚಿಗಾಗಿ ಭಾಗವಹಿಸುತ್ತಾರೆ ಸಾಮಾಜಿಕ ಪುನರ್ಘಟನೆ ಮತ್ತು ಬೆಳವಣಿಗೆಯ ಸಲುವಾಗಿ ಸ್ತ್ರೀ ಕಾರ್ಯಕರ್ತರು ಸಹಕಾರಿ ಆಂದೋಲನಕ್ಕೆ ಉತ್ತಮ ಸಾಧನಗಳಾಗಿದ್ದಾರೆ ಆದುದರಿಂದ ಸ್ತ್ರೀಯರ ಸಹಕಾರಿ ಸಂಘಗಳನ್ನು ಸಂಘಟಿಸಲು ಮತ್ತು ಕೆಲವು ಪ್ರಕಾರಗಳ ವಿಶೇಷತಃ ಗ್ರಾಹಕರ ಸಂಘಗಳಲ್ಲಿ ಸ್ತ್ರೀಯರು ಭಾಗವಹಿಸುವಂತೆ ಮಾಡಬೇಕೆಂದೂ ಯೋಜನಾ ಸಮಿತಿಯು ಶಿಫಾರಸು ಮಾಡಿದೆ

ಉಳಿತಾಯದ, ಗ್ರಾಹಕರ ಮತ್ತು ಔದ್ಯೋಗಿಕ ಈ ಮೂರು ಪ್ರಕಾರದ ಸಂಘಗಳ ಚಟುವಟಿಕೆಗಳನ್ನು ಸಾಗಿಸಿಕೊಂಡು ಹೋಗಲು ಸ್ತ್ರೀಯರು ಹೆಚ್ಚು ಅರ್ಹರಾಗಿದ್ದಾರೆ ಸ್ತ್ರೀಯರಲ್ಲಿಯ ಸಹಕಾರಿ ಆಂದೋಲನಕ್ಕೆ ಪ್ರೋತ್ಸಾಹನವನ್ನೀಯಬೇಕೆಂಬ ದೃಷ್ಟಿಯಿಂದ ಪ್ರಯೋಗವೆಂದು ಮುಂಬಯಿ, ಅಹಮ್ಮದಾಬಾದ ಪುಣೆ ಮತ್ತು ಸೊಲ್ಲಾಪೂರ ಮೊದಲಾದ ಔದ್ಯೋಗಿಕ ನಗರಗಳಲ್ಲಿ ಸ್ತ್ರೀಯರನ್ನು ಗೌರವ ಸಂಘಟಕರನ್ನಾಗಿ ಸರಕಾರವು ನಿಯಮಿಸಿದೆ ಆ ತರುವಾಯ ಸ್ತ್ರೀ ಆಂದೋಲನವನ್ನು ಬೆಳೆಯಿಸುವ ದೃಷ್ಟಿಯಿಂದ ಸ್ತ್ರೀಯರನ್ನು ಗೌರವ ಸಂಘಟಕರನ್ನಾಗಿ ನಿಯಮಿಸುವದನ್ನು ನಗರ, ಧುಲಿಯಾ ಮತ್ತು ಜಳಗಾಂವಗಳಿಗೆ ವಿಸ್ತರಿಸಲಾಯಿತು ಈ ಕ್ರಮದಿಂದ ಗ್ರಾಹಕರ ಆಂದೋಲನದ ಕಕ್ಷೆಯಲ್ಲಿ ಸ್ತ್ರೀಯರು ಭಾಗವಹಿಸುವಂತೆ ಮಾಡಲು ಅನುಕೂಲವಾಯಿತು ಸ್ತ್ರೀಯರ ಸಲುವಾಗಿ ಔದ್ಯೋಗಿಕ ಸಹಕಾರಿ ಸಂಘಗಳನ್ನು ಸಂಘಟಿಸಲಾಗಿದೆ ಈ ಸಂಘಗಳ ಮುಖ್ಯ ಚಟುವಟಿಕೆಗಳೆಂದರೆ ಹೊಲೆಯುವದು, ಹೆಣೆಯುವದು ಕಸೂತಿ ತೆಗೆಯುವದು, ಆಟಿಗೆಸಾಮಾನು ತಯಾರಿಸುವದು ಸಿಹಿಪದಾರ್ಥ, ಹಪ್ಪಳ, ಉಪ್ಪಿನಕಾಯಿ ತಯಾರಿಸಿ ಮಾರುವದು ಇವೇ ಆಗಿರುತ್ತವೆ ಕೆಲವು ಸಂಘಗಳು ತಮ್ಮ ಸದಸ್ಯರಿಗೆ ಹೊಲಿಗೆಯ ಮತ್ತು ಕಸೂತಿಯ ಶಿಕ್ಷಣವನ್ನು ಕೊಡುತ್ತವೆ

ಮುಂಬಯಿ ರಾಜ್ಯದಲ್ಲಿ ೩೦–೬–೧೯೫೧ಕ್ಕೆ ೩೬ ಸ್ತ್ರೀ ಸಹಕಾರಿ ಸಂಘಗಳಿದ್ದವು ಅವುಗಳ ಸದಸ್ಯರ ಸಂಖ್ಯೆ ೪೯೧೩ ಇದ್ದಿತು ಸ್ತ್ರೀಯರಲ್ಲಿ ಉಳಿತಾಯದ ಹವ್ಯಾಸವನ್ನು ಹೆಚ್ಚಿಸುವದಕ್ಕೆ ಹಳೆಯ ಬಡೋದೆ ಸಂಸ್ಥಾನದಲ್ಲಿ ಸಂಘಟಿಸಲ್ಪಟ್ಟಿರುವ ಸಹಕಾರಿ ಸಂಘಗಳು ಗಮನಾರ್ಹವಾಗಿವೆ ೩೦–೬–೧೯೫೧ಕ್ಕೆ ಬಡೋದೆಯಲ್ಲಿ ಇಂಥ ೨೩ ಸಂಘಗಳಿದ್ದವು

## (ಫ) ಮುಂಬಯಿ ಪ್ರಾಂತಿಕ ಸಹಕಾರಿ ಸಂಸ್ಥೆ

## (ಬಾಂಬೆ ಪ್ರಾವ್ಹಿನ್ಸಿಯಲ್ ಕೋ-ಆಪರೇಟಿವ್ಹ ಇನ್ಸ್ಟಿಟ್ಯೂಟ)

ಆಂದೋಲನದ ಪ್ರಾರಂಭದಿಂದಲೂ ಸರಕಾರೇತರ ಜನರ ಕಳಕಳಿಯ ಸಹಾಯ ಸಹಕಾರಗಳು ದೊರಯುತ್ತಿರುವದು ಮುಂಬಯಿ ರಾಜ್ಯದ ಆಂದೋಲನದ ಒಂದು ವೈಶಿಷ್ಟ್ಯವಾಗಿದೆ ಸಹಕಾರಿ ಆಂದೋಲನದ ಮಹತ್ವದ ಸಮಸ್ಯೆಗಳ ಬಗೆಗೆ ಸರಕಾರೇತರ ಜನರ ಅಭಿಪ್ರಾಯದ ಬೆಳಕನ್ನು ಚೆಲ್ಲುವ ಇಂದಿನ ಸಹಕಾರಿ ಸಂಸ್ಥೆಗಳಲ್ಲಿ ಪ್ರಾಂತಿಕ ಸಹಕಾರಿ ಸಂಸ್ಥೆಯು ಒಂದು ಮಹತ್ವದ ಸ್ಥಾನವನ್ನು ಪಡೆದಿದೆ ಮುಂಬಯಿ ಕ್ರಾನಿಕಲ್ ಪತ್ರಿಕಯ ಕೀರ್ತಿಸಂಪನ್ನ ಸಂಪಾದಕರಾದ ದಿ ಶ್ರೀ ಸಯ್ಯದ ಅಬ್ದುಲ್ಲಾ ಬ್ರೆಳ್ವಿ ಅವರು ೧೯೧೭ನೆಯ ಸಪ್ಟೆಂಬರ ಮುಂಬಯಿ ಸಹಕಾರಿ ತ್ರೈಮಾಸಿಕ ಸಂಚಿಕೆಯಲ್ಲಿ "ಪ್ಲಂಕೆಟರ ಅವಶ್ಯಕತೆ" ಎಂಬ ಶಿರೋನಾಮೆಯ ಕಳಗೆ ಪ್ರಕಟಿಸಿದ ಲೇಖನವು ಪ್ರಾಂತಿಕ ಸಹಕಾರಿ ಸಂಸ್ಥೆಯ ಸ್ಥಾಪನೆಗೆ ಸ್ಫೂರ್ತಿಯನ್ನಿತ್ತಿತು ೧೯೧೭ರಲ್ಲಿ ನೆರೆದ ಪ್ರಾಂತಿಕ ಸಹಕಾರಿ ಪರಿಷತ್ತಿನಲ್ಲಿ ದಿ ರಾವಬಹಾದ್ದೂರ ಎಸ್ ಎಸ್ ತಾಳಮುಕ್ಕಿ ಅವರು "ಸಹಕಾರಿ ಸಂಘಗಳ ಸಾಮಾಜಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳು" ಎಂಬ ಪ್ರಬಂಧವನ್ನು ಓದಿ ಹೇಳಿದರು ರಾವಬಹಾದ್ದೂರ ಎಸ್ ಎಸ್ ತಾಳಮುಕ್ಕಿ ಅವರ ಪ್ರಬಂಧದ ಮೇರೆಗೆ ಇನ್ಸ್ಟಿಟ್ಯೂಟನ್ನು ಸ್ಥಾಪಿಸಲು ಪರಿಷತ್ತು ಒಪ್ಪಿಗೆ ಕೊಟ್ಟಿತು ಇನ್ಸ್ಟಿಟ್ಯೂಟಿನ ಘಟನೆ ಮತ್ತು ಪೋಟನಿಯಮಗಳನ್ನು ಸಿದ್ಧ ಪಡಿಸಲು ಒಂದು ಉಪಸಮಿತಿಯನ್ನು ನಿಯಮಿಸಲಾಯಿತು ಪೋಟನಿಯಮಗಳನ್ನು ಸಿದ್ಧಪಡಿಸುವ ಕಾರ್ಯವನ್ನು ಆಗ ಸಹಕಾರಿ ಸಂಘಗಳ ರಜಿಸ್ಟ್ರಾರರಾಗಿದ್ದ ಶ್ರೀ ಆರ್ ಬಿ ಯೂಬ್ಯಾಂಕ್ ಅವರಿಗೆ ಒಪ್ಪಿಸಲಾಗಿತ್ತು ಆನಂತರ ೧೯೧೮ ಜುಲೈ ೧೩ಕ್ಕೆ ಬಾಂಬೆ ಸೆಂಟ್ರಲ್ ಕೋ-ಆಪರೇಟಿವ್ಹ ಇನ್ಸ್ಟಿಟ್ಯೂಟ ಎಂಬ ಹೆಸರಿನಲ್ಲಿ ಈ ಸಂಸ್ಥೆಯು ನೋಂದಾಯಿಸಲ್ಪಟ್ಟಿತು ೧೯೨೫ರಲ್ಲಿ ಈ ಹೆಸರನ್ನು ಬಾಂಬೆ ಪ್ರಾವ್ಹಿನ್ಸಿಯಲ್ ಕೋ-ಆಪರೇಟಿವ್ಹ ಇನ್ಸ್ಟಿಟ್ಯೂಟ ಎಂದು ಬದಲಾಯಿಸಲಾಯಿತು ಮೊದಲನೆಯ ಸಾಧಾರಣ ಸಭೆಯು ೨ ಅಕ್ಟೋಬರ ೧೯೧೮ಕ್ಕೆ ನೆರೆದಿದ್ದಿತು ಹಳೆಯ ಪೋಟನಿಯಮಗಳ ಮೇರೆಗೆ ರಾಜ್ಯದ ಗವ್ಹರ್ನರರೇ ಈ ಸಂಸ್ಥೆಯ ಅಧ್ಯಕ್ಷರಾಗುತ್ತಿದ್ದರು ಅದರಂತೆ ಸರ್ ಲಲ್ಲುಭಾಯಿ ಶಾಮಲದಾಸ ಅವರು ಪ್ರಥಮ ಉಪಾಧ್ಯಕ್ಷರಾಗಿಯೂ ಮತ್ತು ದಿ ರಾವಬಹಾದ್ದೂರ ತಾಲಮುಕ್ಕಿ ಅವರು ಪ್ರಥಮ ಗೌರವ ಕಾರ್ಯದರ್ಶಿಗಳಾಗಿಯೂ ನಿಯಮಿಸಲ್ಪಟ್ಟಿದ್ದರು ಬೇರೆ ಬೇರೆ ಪ್ರದೇಶಗಳ ಪ್ರತಿನಿಧಿಗಳನ್ನೊಳಗೊಂಡ ೫೧ ಜನರ ಕಾರ್ಯಕಾರಿ ಮಂಡಳವನ್ನು ನಿಯಮಿಸಲಾಯಿತು ಇನ್ಸ್ಟಿಟ್ಯೂಟಿನ ವಿವಿಧ ಕಾರ್ಯಕಲಾಪಗಳನ್ನು ನಿರ್ವಹಿಸಿಕೊಂಡು ಹೋಗಲು ಕಾರ್ಯಕಾರಿ ಮಂಡಲವು ಏಳು ಉಪಸಮಿತಿಗಳನ್ನು ನಿಯಮಿಸಿತು ಪ್ರತಿಯೊಂದಕ್ಕೆ ಒಬ್ಬೊಬ್ಬ ಚೇಅರಮನ್‌ನು ಮತ್ತು ಕಾರ್ಯದರ್ಶಿಯು ಇರುತ್ತಿದ್ದರು

**ಇನ್ಸ್ಟಿಟ್ಯೂಟಿನ ಉದ್ದೇಶಗಳು —**

ಈ ಸಂಸ್ಥೆಯ ಸಂಸ್ಥಾಪನೆಯ ಮುಖ್ಯ ಉದ್ದೇಶಗಳು ಕೆಳಗಿನಂತಿವೆ

(೧) ಸಹಕಾರ ಪ್ರಚಾರ, ಸಹಕಾರ ಸಾಹಿತ್ಯ ವಾಚನಾಲಯ, ಸಹಕಾರವನ್ನು ಕುರಿತು ಪುಸ್ತಕಗಳ ಪ್ರಕಟನ, ಸಹಕಾರಿಗಳ ಸಭೆ, ಸಮ್ಮೇಲನ, ಪರಿಷತ್ತುಗಳ ಏರ್ಪಾಟು, ಸಹಕಾರದ ವಿಷಯದಲ್ಲಿ ವ್ಯಾಖ್ಯಾನಗಳ ಏರ್ಪಾಟು, ಆಂದೋಲನದಲ್ಲಿಯ ಕಾರ್ಯಕರ್ತರನ್ನು ತರಬೇತುಗೊಳಿಸುವದು

(೨) ಸಹಕಾರಿ ಪ್ರದೇಶಗಳಲ್ಲಿ ಸಾಮಾಜಿಕ ಮತ್ತು ಶೈಕ್ಷಣಿಕ ಪ್ರಗತಿಯ ಚಟುವಟಿಕಗಳನ್ನು ಕೈಕೊಳ್ಳುವದು

(೩) ಮುಂಬಯಿ ನಗರದಲ್ಲಿ ಸಹಕಾರಿ ಸಂಘಗಳನ್ನು ಸಂಘಟಿಸಿ ಅವುಗಳ ಮೇಲ್ವಿಚಾರಣೆ ಮಾಡುವದು

(೪) ಸಹಕಾರಿ ವಿಷಯಗಳ ಬಗ್ಗೆ ಅವಶ್ಯವಿದ್ದಾಗ ಸಲಹೆ ಸೂಚನೆ, ಮಾರ್ಗದರ್ಶನಗಳನ್ನೀಯುವದು

ಇನ್ಸ್ಟಿಟ್ಯೂಟಿನ ಘಟನೆಯಲ್ಲಿ ಮೂರು ಸಲ ಮಹತ್ವದ ಬದಲಾವಣೆಯಾಗಿದ್ದರೂ ಅದರ ಉದ್ದೇಶಗಳು ಮಾತ್ರ ಸ್ಥಾಪಿತವಾದಂದಿನಿಂದ ಮೊದಲಿನಂತೆಯೇ ಇರುತ್ತವೆ

**ಘಟನೆ :—**

ಸದಸ್ಯತ್ವ – ಇನ್ಸ್ಟಿಟ್ಯೂಟಿನ ಮೂಲ ಪ್ರೋಟಸಿಯಮಗಳ ಮೇರೆಗೆ ಎಲ್ಲತರದ ಸಹಕಾರಿ ಸಂಘಗಳಿಗೂ ಮತ್ತು ವ್ಯಕ್ತಿಗಳಿಗೂ ಸದಸ್ಯತ್ವಕ್ಕೆ ಮುಕ್ತ ದ್ವಾರವಿದ್ದಿತು ವ್ಯಕ್ತಿ ಸದಸ್ಯತ್ವದಲ್ಲಿ ಮೂರು ಪ್ರಕಾರಗಳಿವೆ ೧) ಸಾಮಾನ್ಯ ೨) ಆಜೀವ ಸಭಾಸದ ಮತ್ತು ೩) ಪೋಷಕರು ಸಂಘಗಳ ಸದಸ್ಯತ್ವದ ಬಗ್ಗೆ ೧೯೪೨ರಲ್ಲಿ ಮಹತ್ವದ ಬದಲಾವಣೆಯನ್ನು ಮಾಡಲಾಯಿತು ಕೆಲವೊಂದು ಪ್ರಕಾರಗಳ ಸಂಘಗಳು ಮಾತ್ರ ಸದಸ್ಯರಾಗಬೇಕಾಯಿತು ೧, ನವ್ಹೆಂಬರ ೧೯೫೨ಕ್ಕೆ ಸೇರಿದ ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ಸ್ವಿಕೃತವಾದ ಸದ್ಯದ ಘಟನೆಯ ಮೇರೆಗ ಕೆಳಗಿನ ಪ್ರಕಾರದ ಸಂಘಗಳಿಗೆ ಮಾತ್ರ ಸದಸ್ಯತ್ವಕ್ಕ ಮಾನ್ಯತೆ ಇದೆ

(೧) ಎಲ್ಲ ವಿಭಾಗ ಸಹಕಾರಿ ಸಂಸ್ಥೆಗಳು (ಡಿವ್ಹಿಜನಲ್ ಕೋ-ಆಪರೇಟಿವ್ಹ ಬೋರ್ಡ್ಸ)

(೨) ಎಲ್ಲ ಜಿಲ್ಹಾ ಸಹಕಾರಿ ಸಂಸ್ಥೆಗಳು ( ಡಿಸ್ಟ್ರಿಕ್ಟ ಕೋ-ಆಪರೇಟಿವ್ಹ ಬೋರ್ಡ್ಸ )

(೩) ಕಾರ್ಯಕ್ಷೇತ್ರದ ವಿಸ್ತಾರವು ಜಿಲ್ಹೆಗಿಂತ ಕಡಿಮೆ ಇಲ್ಲದ ಮಧ್ಯವರ್ತಿ ಹಣಕಾಸಿನ ಸಂಸ್ಥೆಗಳು

(೪) ಇಡೀ ರಾಜ್ಯವೇ ಕಾರ್ಯಕ್ಷೇತ್ರವಾಗಿರುವ ಸಹಕಾರಿ ಸಂಘಗಳು

(೫) (ಅ) ೫೦ ಸಾವಿರ ಅಥವಾ ಅದಕ್ಕಿಂತಲೂ ಹೆಚ್ಚಿಗೆ ಕಾಯ್ದಿಟ್ಟ ನಿಧಿ ಮತ್ತು ಭಾಂಡವಲವುಳ್ಳ ಯಾವದೇ ಸಂಘವು ಅಥವಾ ಸಂಯುಕ್ತ ಸಂಸ್ಥೆಯು (ಬ) ಜಿಲ್ಹೆಗಿಂತ ಕಡಿಮೆ ಕಾರ್ಯಕ್ಷೇತ್ರವಿಲ್ಲದ ಸಹಕಾರಿ ಸಂಘಗಳು

**ಸಂಸ್ಥೆಯು ನಿಧಿಗಳು —**

ಸದಸ್ಯತ್ವವನ್ನು ವಹಿಸಿದ ಸಂಘಗಳೂ ಮತ್ತು ವ್ಯಕ್ತಿಗಳೂ ಕೊಡುವ ವರ್ಗಣಿಯೇ (ಫೀ) ಇನ್ಸ್ಟಿಟ್ಯೂಟಿನ ಉತ್ಪನ್ನದ ಮುಖ್ಯಮಾರ್ಗವು ಕಳೆದ ವಾರ್ಷಿಕ ಸರ್ವಸಾಧಾರಣ ಸಭೆಯಲ್ಲಿ ಸ್ವೀಕೃತವಾದ ವರ್ಗಣಿಯ ಅವರೋಹಣ ಕ್ರಮದ ಮೇರೆಗೆ ಪೋಷಕರು ಕೊಡಬೇಕಾದ ವರ್ಗಣಿಯು ಪರಮಾವಧಿಯು ೧೫೦೦ ರೂ ಇದ್ದರೆ ಸಾಮಾನ್ಯ ಸದಸ್ಯರು ಕೊಡಬೇಕಾದ ವರ್ಗಣಿಯು ಬರಿ ೧೦ ರೂ ಇದ ಸದಸ್ಯರಾಗುವ ಸಂಘಗಳಲ್ಲಿ ಇಡೀ ರಾಜ್ಯವೇ ಕಾರ್ಯಕ್ಷೇತ್ರವಾಗಿರುವ ಸಂಘಗಳು ೨೫೦ ರೂ ಮತ್ತು ಜಿಲ್ಹೆಯು ಕಾರ್ಯಕ್ಷೇತ್ರವಾಗಿರುವ ಸಂಘಗಳು ೨೫ ರೂ ಕೊಡಬೇಕಾಗುವದು

ನೂರಕ್ಕ ೪ ರಂತೆ ಅಥವಾ ಅದಕ್ಕೂ ಮಿಕ್ಕಿ ಡಿವ್ಹಿಡೆಂಡು ಮತ್ತು ಬೋನಸ್ಸುಗಳನ್ನು ಹಂಚುವ ಸಂಸ್ಥೆಗಳು ಕಡ್ಡಾಯವಾಗಿ ಕೊಡಬೇಕಾಗುವ ಶಿಕ್ಷಣ ಫಂಡು ಇನ್ಸ್ಟಿಟ್ಯೂಟಿನ ಉತ್ಪನ್ನದ ಎರಡನೆಯ ಮಾರ್ಗವು ಶಿಕ್ಷಣ ಫಂಡು ಕೊಡುವ ಬಗ್ಗೆ ೧೯೨೭ ನೆಯ ಮುಂಬಯಿ ಸಹಕಾರಿ ಸಂಘಗಳ ಕಾನೂನು ನಂ ೨೬ (ಅ) ದಲ್ಲಿ ಉಲ್ಲೇಖಿತವಾಗಿದೆ ಈ ಕಾನೂನು ೧, ಜುಲೈ ೧೯೪೯ರಿಂದ ಜಾರಿಯಲ್ಲ ಬಂದಿದೆ

ಇನ್ನು ವಿವಿಧ ಉದ್ದೇಶಗಳ ಸಲುವಾಗಿ ಸರಕಾರದಿಂದ ಇದು ಪಡೆಯುವ ಸಹಾಯಧನವು ಉತ್ಪನ್ನದ ಮೂರನೆಯ ಮಾರ್ಗವು ೧೯೫೧–೫೨ರಲ್ಲಿ ಈ ರೀತಿಯಾಗಿ ೨,೬೫ ೫೦೦ ರೂಪಾಯಿಯ ಗ್ರ್ಯಾಂಟು ದೊರೆತಿದ

**ಅಧಿಕಾರಿಗಳು —**

ಇನ್ಸ್ಟಿಟ್ಯೂಟಿನ ಘಟನೆಯು ಕಾಲಕಾಲಕ್ಕ ಬದಲಾವಣೆಯಾಗುತ್ತಲಿದ್ದು ೧, ನವೆಂಬರ ೧೯೫೨ ರಂದು ಸೇರಿದ ವಾರ್ಷಿಕ ಸಾಧಾರಣ ಸಭೆಯಲ್ಲಿ ಸ್ವೀಕೃತವಾದ ಘಟನೆಯ ಮೇರೆಗೆ ಕೆಳಕಂಡ ೧೬ ಸದಸ್ಯರನ್ನೊಳಗೊಂಡ ಕಾರ್ಯಕಾರಿ ಮಂಡಳವು ಇರುತ್ತದೆ

(೧) ಗುಜರಾತ, ಮಹಾರಾಷ್ಟ್ರ ಮತ್ತು ಕರ್ನಾಟಕ ಡಿವ್ಹಿಜನಲ್ ಬೋರ್ಡುಗಳಲ್ಲಿ ಪ್ರತಿಯೊಂದರ ಪರವಾಗಿ ಇಬ್ಬರು ಪ್ರತಿನಿಧಿಗಳು ಈ ೧೯೫೦ರಲ್ಲಿ ಡಿವ್ಹಿಜನಲ್ ಬೋರ್ಡಿನ ವ್ಯವಸ್ಥಾಪಕ ಸಮಿತಿಯಲ್ಲಿ ಜಿಲ್ಹಾ ಬೋರ್ಡುಗಳ ಪರವಾಗಿ ಇರತಕ್ಕ ಒಬ್ಬ ಪ್ರತಿನಿಧಿಯಾದರೂ ಇರಲೇಬೇಕು

(೨) ಬೃಹನ್ ಮುಂಬಯಿ ಸಹಕಾರಿ ಬೋರ್ಡಿನ ಪರವಾಗಿ ಒಬ್ಬ ಪ್ರತಿನಿಧಿ

(೩) ಪ್ರಾಂತಿಕ ಹಣಕಾಸಿನ ಸಂಸ್ಥೆಗಳನ್ನು ಬಿಟ್ಟು ಜಿಲ್ಹೆಗಿಂತ ಕಡಿಮೆ ಅಲ್ಲದ ಕಾರ್ಯಕ್ಷೇತ್ರವಿರುವ ಮಧ್ಯವರ್ತಿ ಹಣಕಾಸಿನ ಸಂಸ್ಥೆಗಳ ಪರವಾಗಿ ಒಬ್ಬ ಪ್ರತಿನಿಧಿ

(೪) ಇತರ ಸಂಘಗಳ ಪರವಾಗಿ ಒಬ್ಬ ಪ್ರತಿನಿಧಿ

(೫) ವೈಯಕ್ತಿಕ ಸದಸ್ಯರ ಪರವಾಗಿ ಇಬ್ಬರು ಪ್ರತಿನಿಧಿಗಳು

(೬) ಫೆಲೋ, ಪೋಷಕರು ಮತ್ತು ಆಜೀವ ಸಭಾಸದರ ಪರವಾಗಿ ಒಬ್ಬ ಪ್ರತಿನಿಧಿ

(೭) ಸರಕಾರೀ ನಿಯುಕ್ತ ಒಬ್ಬ ಪ್ರತಿನಿಧಿ

(೮) ಸಹಕಾರಿ ಸಂಘಗಳ ರಜಿಸ್ಟ್ರಾರರು

(೯) ಇಡೀ ರಾಜ್ಯವೇ ಕಾರ್ಯಕ್ಷೇತ್ರವಾಗಿರುವ ಸಂಘಗಳ ಪರವಾಗಿ ಇಬ್ಬರು ಪ್ರತಿನಿಧಿಗಳು

ಇನ್ಸ್ಟಿಟ್ಯೂಟಿನ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಗೌರವ ಕಾರ್ಯದರ್ಶಿಗಳನ್ನು ಕಾರ್ಯಕಾರಿ ಮಂಡಲವು ಆರಿಸುತ್ತದ

**ಇನ್ಸ್ಟಿಟ್ಯೂಟಿನ ಶಾಖೆಗಳು :—**

ಪ್ರಾರಂಭದಲ್ಲಿ ಇನ್ಸ್ಟಿಟ್ಯೂಟು ಕೇವಲ ಒಂದು ಅಖಂಡ ಸಂಸ್ಥೆಯಾಗಿದ್ದು ತನ್ನ ಕೇಂದ್ರದಿಂದಲೇ ಎಲ್ಲ ಚಟುವಟಿಕೆಗಳನ್ನು ಹರಡುತ್ತಲಿದ್ದಿತು ಆದರ ಆ ತರುವಾಯ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಅಂದರೆ ಮುಂಬಯಿ, ಪುಣೆ, ಭಡೋಚ, ಅಲಿಬಾಗ ಮತ್ತು ನಾಸಿಕಗಳಲ್ಲಿ ಪ್ರಾದೇಶಿಕ ಶಾಖಗಳನ್ನು ತೆರದು ಕಾರ್ಯವನ್ನು ವಿಕೇಂದ್ರೀಕರಿಸಲಾಯಿತು ೧೯೨೭ರಲ್ಲಿ ಸ್ವೀಕರಿಸಲ್ಪಟ್ಟ ಘಟನೆಯ ಮೇರೆಗೆ ಜಿಲ್ಹಾ ಶಾಖೆಗಳನ್ನು ತೆರೆಯಲಾಯಿತು ಆದರೆ ೧೯೩೩ರಲ್ಲಿ ಎಲ್ಲ ಪ್ರಾದೇಶಿಕ ಮತ್ತು ಜಿಲ್ಹಾ ಶಾಖೆಗಳನ್ನು ಮುಚ್ಚಿಬಿಡಲಾಯಿತು ಅನಂತರ

೧೯೪೪ರಲ್ಲಿ ಮೇಲ್ವಿಚಾರಣಾ ನೌಕರಿ ವರ್ಗವನ್ನು ಸರಕಾರವು ತನ್ನ ವಶಕ್ಕೆ ತೆಗೆದುಕೊಂಡಮೇಲೆ ಸುಪರ್ವಾಯಿಜಿಂಗ ಯೂನಿಯನ್ನುಗಳ ಜಿಲ್ಹಾ ಬೋರ್ಡುಗಳಿಗೆ ಯಾವ ಕಾರ್ಯವೂ ಉಳಿಯದಂತಾಯಿತು ಆದುದರಿಂದ ಸಹಕಾರಿ ಶಿಕ್ಷಣದ ವಿಚಾರಣೆಯ ಬಗೆಗೆ ನಿಯಮಿಸಲ್ಪಟ್ಟ ಮದನ ಸಮಿತಿಯು ಜಿಲ್ಹಾ ಯುನಿಯನ್ ಬೋರ್ಡುಗಳು ಜಿಲ್ಹಾ ಸಹಕಾರಿ ಬೋರ್ಡುಗಳಿಗೆ ಪರಿವರ್ತಿತವಾಗಿ ಇನ್ಸ್ಟಿಟ್ಯೂಟಿನ ಶಾಖೆಗಳಂತೆ ಕಾರ್ಯನಿರ್ವಹಣೆ ಮಾಡಬೇಕೆಂದೂ ಶಿಫಾರಸು ಮಾಡಿತು ಹೀಗೆ ೩೦-೬-೧೯೫೨ಕ್ಕೆ ರಾಜ್ಯದಲ್ಲಿ ೨೭ ಜಿಲ್ಹಾ ಸಹಕಾರಿ ಬೋರ್ಡುಗಳಿದ್ದವು ಪ್ರತಿಯೊಂದು ಜಿಲ್ಹೆಗೆ ಒಬ್ಬ ಕೋ-ಆಪರೇಟಿವ್ಹ ಟ್ರೇನಿಂಗ ಇನ್ಸಪೆಕ್ಟರರು ಇರುವರು ಜಿಲ್ಹಾ ಸಹಕಾರಿ ಬೋರ್ಡುಗಳನ್ನು ಪುನರ್ಘಟಿಸಿದ ಮೇಲೆ ಪ್ರಾದೇಶಿಕ ಸಹಕಾರಿ ಬೋರ್ಡುಗಳನ್ನು ನಿರ್ಮಿಸಲು ಪ್ರಯತ್ನಗಳು ನಡೆದವು ಆ ಮೇರೆಗೆ ೧೯೫೨ರಲ್ಲಿ ಅಹಮ್ಮದಾಬಾದ, ಪುಣೆ ಮತ್ತು ಧಾರವಾಡಗಳಲ್ಲಿ ಗುಜರಾತ, ಮಹಾರಾಷ್ಟ್ರ, ಮತ್ತು ಕರ್ನಾಟಕ ಪ್ರಾದೇಶಿಕ ಸಹಕಾರಿ ಬೋರ್ಡುಗಳನ್ನು ಸ್ಥಾಪಿಸಲಾಯಿತು

**ಇನ್ಸ್ಟಿಟ್ಯೂಟಿಗೆ ಶಾಸನಬದ್ಧ ಮನ್ನಣೆ :—**

೧೯೨೫ನೆಯ ಇಸ್ವಿಯ ಮುಂಬಯಿ ಸಹಕಾರಿ ಕಾಯಿದೆಯ ೪೨ ನೆಯ ಕಲಮು ಧರ್ಮಾರ್ಥ ಉದ್ದೇಶಗಳಿಗಾಗಿ ತೆಗೆದಿಡಲ್ಪಟ್ಟ ನಿಧಿಯ ವಿನಿಯೋಗದ ಬಗ್ಗೆ ಮಂಜೂರಿ ಕೊಡುವ ಅಧಿಕಾರವನ್ನು ಇನ್ಸ್ಟಿಟ್ಯೂಟಿಗೆ ಒದಗಿಸಿಕೊಟ್ಟದ್ದರಿಂದ ಅದು ಒಂದು ನಿಶ್ಚಿತ ಶಾಸನಬದ್ಧವಾದ ಮನ್ನಣೆಯನ್ನು ಪಡೆಯಿತು ೩೯ (ಅ) ಕಲಮಿನನ್ವಯ ಇನ್ಸ್ಟಿಟ್ಯೂಟಿಗೆ ಶಿಕ್ಷಣ ಫಂಡನ್ನು ಕೊಡುವದು ಕಡ್ಡಾಯದ್ದಾಗಿದೆ ಸಹಕಾರಿ ಕಾಯದೆಯ ೫೨ ನೆಯ ಕಲಮಿನನ್ವಯ ರದ್ದಾದ ಸಂಘಗಳ ಹೆಚ್ಚಿನ ಆಸ್ತಿಯನ್ನು ಕಲವೊಂದು ವಿಶಿಷ್ಟ ಪ್ರಸಂಗಗಳಲ್ಲಿ ಇನ್ಸ್ಟಿಟ್ಯೂಟಿಗೆ ಒಪ್ಪಿಸಬೇಕಾಗುವದು ೫೩ನೆಯ ಕಲಮಿನನ್ವಯ ಗೃಹ ನಿರ್ಮಾಣ ಸಂಘಗಳ ಲಿಕ್ವಿಡೇಟರರಲ್ಲಿ ಒಬ್ಬನನ್ನು ನಿಯಮಿಸುವ ಅಧಿಕಾರವು ಇನ್ಸ್ಟಿಟ್ಯೂಟಿಗಿರುವದು ೪೫ (ಅ) ಕಾನೂನಿನನ್ವಯ ಯಾವದೇ ವ್ಯಕ್ತಿಗ ಸಹಕಾರಿ ಗ್ರಾಹಕರ ಸಂಘದ ಸದಸ್ಯತ್ವವು ನಿರಾಕರಿಸಲ್ಪಟ್ಟಿದ್ದರೆ ಅವನು ಇನ್ಸ್ಟಿಟ್ಯೂಟಿನ ಅಧ್ಯಕ್ಷರಿಗೆ ಅಪೀಲು ಮಾಡಿಕೊಳ್ಳಬಹುದು ಅದರಂತೆ ಗ್ರಾಹಕರ ಸಂಘಗಳು ಮಾಡುವ ವ್ಯವಹಾರವನ್ನೇ ಕೈಕೊಂಡಿರುವ ಯಾವನೇ ವ್ಯಕ್ತಿಯು ಇಂಥ ಸಂಘಗಳ ಕಾರ್ಯಕಾರಿ ಮಂಡಲದಲ್ಲಿ ಸದಸ್ಯವಾಗಬೇಕಾದರೆ ೪೭ (ಅ) ಕಲಮಿನನ್ವಯ ಇನ್ಸ್ಟಿಟ್ಯೂಟಿನ ಅಧ್ಯಕ್ಷರ ಸಮ್ಮತಿಬೇಕಾಗುವದು

**ಕಾರ್ಯಕಲಾಪ ಮತ್ತು ಚಟುವಟಿಕೆಗಳು :—**

(೧) **ಶೈಕ್ಷಣಿಕ ಚಟುವಟಿಕೆಗಳು :—** ಜಿಲ್ಹಾ ಇನ್ಸಪೆಕ್ಟರರ ಮುಖಾಂತರ ತರಬೇತಿವರ್ಗಗಳನ್ನು ತೆರೆದು ಮತ್ತು ಪ್ರಾದೇಶಿಕ ಸಹಕಾರಿ ಶಾಲೆ ಹಾಗೂ ಸಹಕಾರಿ ಕಾಲೇಜ ಮುಖಾಂತರ ಇನ್ಸ್ಟಿಟ್ಯೂಟು ಮಾಡುತ್ತಿರುವ ಸಹಕಾರಿ ಶಿಕ್ಷಣದ ಚಟುವಟಿಕಗಳ ಬಗೆಗೆ ಬೇರೊಂದಡೆಗೆ ವಿವರಿಸಲಾಗಿದೆ

(೨) **ಪ್ರಕಟನೆಗಳು :—** ಸಹಕಾರಿ ಶಿಕ್ಷಣಾಭಿಲಾಷಿಗಳಿಗೆ ಉಚಿತವಾದ ಸಾಹಿತ್ಯದ ಪ್ರಕಟನೆಗೂ ತರಬೇತಿಯ ವಿಷಯಕ್ಕೂ ಒಂದು ಆಂತರಿಕ ನಿಕಟ ಸಂಬಂಧವಿದೆ ಇಂಗ್ಲೀಷ ಮತ್ತು ಪ್ರಾದೇಶಿಕ ಭಾಷೆಗಳಲ್ಲಿಯ ಪ್ರಕಟನೆಗಳ ಬಗ್ಗೆ ಒಂದು ಯೋಜನೆಯೇ ಸಿದ್ಧವಾಗಿದ್ದು ಈಗಾಗಲೇ ೧೬ ಪುಸ್ತಕಗಳನ್ನು ಇನ್ಸ್ಟಿಟ್ಯೂಟು ಪ್ರಕಟಗೊಳಿಸಿದೆ ಸರಕಾರದ ಸೂಚನೆಯ ಮೇರೆಗೆ ಪ್ರಾದೇಶಿಕ ಭಾಷೆಯಲ್ಲಿ ಸಹಕಾರದ ಕೈಪಿಡಿಯನ್ನು ಭಾಷಾಂತರಿಸಿ ಪ್ರಕಟಿಸಲು ಇನ್ಸ್ಟಿಟ್ಯೂಟು ಒಪ್ಪಿಕೊಂಡಿದೆ ಅಲ್ಲದೆ ಸಹಕಾರಿ ಯೋಜನಾ ಸಮಿತಿಯ ವರದಿಯನ್ನು ಪ್ರಾದೇಶಿಕ ಭಾಷೆಗಳಲ್ಲಿ ಈಗಾಗಲೇ ಪ್ರಕಟಿಸಲಾಗಿದೆ

(೩) **ಪತ್ರಿಕೆಗಳು :—** ಪಾಕ್ಷಿಕ, ಮಾಸಿಕ ನಿಯತಕಾಲಿಕ, ವಾರಪತ್ರಿಕ ಈ ಮೊದಲಾದ ಪತ್ರಿಕಗಳ ಪ್ರಕಟನಯ ಮುಖಾಂತರವಾಗಿ ಸಾರ್ವಜನಿಕರ ಹೃದಯವನ್ನು ತಲುಪುವದೊಂದು ಹಾದಿ ಇನ್ಸ್ಟಿಟ್ಯೂಟು ಇಂಗ್ಲಿಷಿನಲ್ಲ ಸಹಕಾರಿ ಮಾಸಿಕ ವಾರ್ತಾಪತ್ರಿಕಯನ್ನೂ, ತ್ರೈಮಾಸಿಕವನ್ನೂ ಗುಜರಾತಿಯಲ್ಲ ಸ್ವರಾಜ್ಯ ಪತ್ರಿಕೆಯನ್ನೂ ಕನ್ನಡದಲ್ಲಿ ಸಹಕಾರವನ್ನೂ ಮತ್ತು ಮರಾಠಿಯಲ್ಲಿ ಸಹಕಾರಿ ಜಗತ್ತನ್ನೂ ಪ್ರಕಟಿಸುತ್ತದ

(೪) **ಪರಿಷತ್ತುಗಳು :—** ತಾಲುಕಾ, ಜಿಲ್ಹಾ, ಪ್ರಾದೇಶಿಕ ಮತ್ತು ಪ್ರಾಂತಿಕ ಸಹಕಾರಿ ಪರಿಷತ್ತುಗಳು ಇನ್ಸ್ಟಿಟ್ಯೂಟಿನ ಪರವಾಗಿಯೇ ನಡಯ ಬೇಕೆಂದು ಗೊತ್ತುಪಡಿಸಲಾಗಿದ ಅದರಂತಯೇ ಮೇಲಿಂದಮೇಲೆ ಅನೇಕಾನೇಕ ಪರಿಷತ್ತುಗಳು ಜರುಗುತ್ತಲಿವೆ ಅಲ್ಲದೆ ಅರಣ್ಯ ಕೂಲಿಕಾರ ಸಂಘಗಳ ಮತ್ತು ಔದ್ಯೋಗಿಕ ಸಂಘಗಳ ವಿಶೇಷ ಪರಿಷತ್ತುಗಳು ಸಹಿತ ಮೇಲಿಂದ ಮೇಲೆ ಜರುಗುತ್ತಲಿವ

(೫) **ವಾಚನಾಲಯ :—** ಇನ್ಸ್ಟಿಟ್ಯೂಟಿನಲ್ಲಿ ಉಪಯುಕ ಪುಸ್ತಕಗಳ ಒಂದು ದೊಡ್ಡ ವಾಚನಾಲಯವೇ ಇದ್ದು ಪುಸ್ತಕಗಳ ಜೊತೆ। ಅಸಂಖ್ಯ ವರದಿಗಳು, ನಿಯತಕಾಲಿಕಗಳು, ಮತ್ತಿತರ ಉಪಯುಕ್ತ ಸಾಹಿತ್ಯಕ್ಕೆ ಸಂಬಂಧಪಟ್ಟ ಪುಸ್ತಕಗಳು ಇವೆ ಪ್ರತಿವರ್ಷವೂ ಪುಸ್ತಕಗಳ ಸಂಗ್ರಹವು ಬೆಳೆಯುತ್ತಲೇ ಇದ

(೬) **ಆರ್ಥಿಕ ವಿಚಾರಣೆ .—** ಸಹಕಾರದ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಸಂಶೋಧನೆಯ ಅಭ್ಯಾಸಕ್ಕೆ ಪ್ರೋತ್ಸಾಹ ಕೊಡಬೇಕೆಂದೂ ಇನ್ಸ್ಟಿಟ್ಯೂಟಿನ ಒಂದು ಗುರಿಯಾಗಿದೆ ಕೆಳಕಂಡ ವಿಷಯಗಳ ವಿಚಾರಣ ಯನ್ನು ಅದು ನಡೆಯಿಸಿರುವದಲ್ಲದೆ ಅದರ ವೆಚ್ಚದ ಭಾರವನ್ನು ಸಹಿತ ವಹಿಸಿ ಕೊಂಡಿದೆ

**(ಅ) ಕೊಂಕಣ ಹಳ್ಳಿಗಳ ಆರ್ಥಿಕ ಪರಿಸ್ಥಿತಿ**

**(ಬ) ಕಡಲತಡೆಯ ಗುಜರಾತದ ಹಳ್ಳಿಗಳ ಆರ್ಥಿಕ ಪರಿಸ್ಥಿತಿ**

(ಕ) ಕೊಂಕಣ ವಿಚಾರಣಾ ಸಮಿತಿಯ ವರದಿ

(ಡ) ಸುರತ ಜಿಲ್ಹೆಯಲ್ಲಿಯ ಬೆಳ್ಳಿ ಬಂಗಾರದ ಜರದ ಉದ್ದಿಮೆ

(ಇ) ಪರಡಿ ತಾಲೂಕಾ ವಿಚಾರಣಾ ಸಮಿತಿಯ ವರದಿ

(ಫ) ೧೯೪೫ರಲ್ಲಿ ಇನ್ಸ್ಟಿಟ್ಯೂಟು ಸಹಕಾರಿ ಸಂಘಗಳ ಸದಸ್ಯರ ಒಕ್ಕಲುತನದ ಸಾಲದ ಮೇಲೆ ಆದ ಎರಡನೆಯ ಜಾಗತಿಕ ಯುದ್ಧದ ಪರಿಣಾಮಗಳ ಬಗ್ಗೆ ವಿಚಾರಣೆ ನಡೆಸಿತು ಪ್ರೋ ಡಿ ಆರ್ ಗಾಡಗೀಳ ಅವರ ನೇತೃತ್ವದಲ್ಲಿ ಈ ವಿಚಾರಣೆಯು ನಡೆದು, ಇನ್ಸ್ಟಿಟೂಟು ನಿಯಮಿಸಿದ ಎಣಿಕೆಗಾರರು ಸಂಗ್ರಹಿಸಿದ ವಿಷಯದಿಂದ ಪ್ರೋ ಡಿ ಆರ್ ಗಾಡಗೀಳ ಅವರು ವರದಿಯನ್ನು ಸಿದ್ಧಪಡಿಸಿದರು ೧೯೪೮ ಜುಲೈ ತಿಂಗಳ ಮುಂಬಯಿ ಸಹಕಾರಿ ತ್ರೈಮಾಸಿಕದಲ್ಲಿ ಅವರು ಆ ಬಗ್ಗೆ ಒಂದು ವಿವರಣೆಯನ್ನು ಪ್ರಕಟ ಮಾಡಿದರು

(೭) **ಪ್ರಚಾರ** —ಪುಸ್ತಕ ಪ್ರಕಟಿಸುವ ಪತ್ರಿಕೆಗಳನ್ನು ಹೊರಡಿಸುವ ಮತ್ತು ಪರಿಷತ್ತುಗಳನ್ನು ಏರ್ಪಡಿಸುವ ಕಾರ್ಯಗಳನ್ನಲ್ಲದೆ ಇನ್ಸ್ಟಿಟ್ಯೂಟು, ಸಹಕಾರಿ ಶಿಕ್ಷಣ ಮತ್ತು ತರಬೇತಿ ಸಮಿತಿಯ ಶಿಫಾರಸುಗಳ ಮೇರೆಗೆ, ಅಖಿಲ ಭಾರತ ಮುಂಬಯಿ ಆಕಾಶವಾಣಿ ಕೇಂದ್ರದಿಂದ ಗ್ರಾಮಾಂತರ ವಿಭಾಗದಲ್ಲಿ ೧೯೪೭ ರಿಂದ ಸಹಕಾರ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಭಾಷಣಗಳನ್ನು ಬಿತ್ತರಿಸುವ ವ್ಯವಸ್ಥೆಯನ್ನು ಕೈಕೊಂಡಿದೆ ೧೯೪೭-೪೮ರಲ್ಲಿ ಮೂರೂ ಪ್ರಾದೇಶಿಕ ಭಾಷೆಗಳಲ್ಲಿ ಇಂಥ ಒಟ್ಟು ೩೫ ಭಾಷಣಗಳು ಬಿತ್ತರಿಸಲ್ಪಟ್ಟವು ೧೯೪೮-೪೯ರಲ್ಲಿ ೧೯, ೧೯೪೯-೫೦ರಲ್ಲಿ ೧೨ ಮತ್ತು ೧೯೫೦-೫೧ರಲ್ಲಿ ೮ ಭಾಷಣಗಳು ಸಹಕಾರದ ವಿವಿಧ ವಿಷಯಗಳ ಬಗ್ಗೆ ಬಿತ್ತರಿಸಲ್ಪಟ್ಟಿರುವವು ಗ್ರಾಮಾಂತರ ಜೀವನದ ಪುನರ್ಘಟನೆಯ ಬಗ್ಗೆ ಭಾಷಣಗಳೊಂದಿಗೆ ಯೋಗ್ಯ ಸಹಕಾರದ ಚಿತ್ರ ಫಲಕ (ಸ್ಲಾಯಿಡ್ಸ)ಗಳನ್ನು ಹಳ್ಳಿಗಳಲ್ಲಿ ಪ್ರದರ್ಶಿಸುವದು, ಪ್ರಚಾರದ ಇನ್ನೊಂದು ಉತ್ತಮ ಸಾಧನವಾಗಿದೆ ಕೆಳಗೆ ಕಂಡ ವಿಷಯಗಳ ಚಿತ್ರ ಫಲಕಗಳನ್ನು ಶಾಖೆಗಳಿಗೆ ಪೂರೈಸಲಾಗಿದೆ

(೧) ಸಹಕಾರಿ ಪತ್ತು
(೨) ಸಹಕಾರಿ ಉಗ್ರಾಣ
(೩) ಮಿತವ್ಯಯ
(೪) ಗ್ರಾಮಾಂತರ ಪುನರ್ಘಟನೆ

(೮) **ಸಾಮಾಜಿಕ ಚಟುವಟಿಕೆಗಳು :—**

**(ಅ) ರಾತ್ರಿಯ ಶಾಲೆಗಳು :—** ಸರ್ ವಿಠ್ಠಲದಾಸ ಡಿ ಥ್ಯಾಕರ್ಸೆ ಅವರ ಸತತ ಪ್ರಯತ್ನದಿಂದ ಇನ್ಸ್ಟಿಟ್ಯೂಟು ನಡೆಸುತ್ತಿರುವ ರಾತ್ರಿಯ ಶಾಲೆಗಳ ಬಗ್ಗೆ ಬೇರೊಂದೆಡೆಗೆ ವಿವರಿಸಲಾಗಿದೆ

**(ಬ) ಗ್ರಾಮಾಂತರ ಪುನರ್ಘಟನೆ :—** ಗ್ರಾಮಾಂತರ ಪುನರ್ರಚನೆಯ ಕಾರ್ಯದಲ್ಲಿ ಪ್ರಾರಂಭಕ್ಕ ಜನತೆಯ ಉತ್ಸುಕತೆಯನ್ನು ಹೆಚ್ಚಿಸಿದ ಶ್ರೇಯಸ್ಸು ಇನ್ಸ್ಟಿಟ್ಯೂಟಿಗೆ ಸಲ್ಲುತ್ತದೆ ಜಿಲ್ಹಾ ಸಂಸ್ಥೆಗಳು ಸ್ಥಾಪಿತವಾದ ಮೇಲೆ ಅವುಗಳಲ್ಲಿ ಕೆಲವು ಮುಖ್ಯವಾಗಿ ಸಹಕಾರ ಸಂಘಗಳಿಂದ ಆವರಿಸಲ್ಪಟ್ಟ ನಿರ್ದಿಷ್ಟ ಗ್ರಾಮಗಳಲ್ಲಿ ಸಾಮಾಜಿಕ ಕಲ್ಯಾಣ ಮತ್ತು ಒಕ್ಕಲುತನದ ಸುಧಾರಣೆಯ ಚಟುವಟಿಕೆಗಳ ಬಗ್ಗೆ ಹೆಚ್ಚು ಲಕ್ಷ್ಯ ಪೂರೈಸತೊಡಗಿದವು

**(೯) ಗುಜರಾತ ಮಹಾಪುರ ಪರಿಹಾರ :—** ೧೯೨೭ರಲ್ಲಿ ಗುಜರಾತದ ಕೆಲವು ಭಾಗಗಳ ಹಳ್ಳಿಗಳು ನೆರೆಹಾವಳಿ ಮತ್ತು ಮಹಾಪೂರಗಳಿಂದ ಸಂಕಷ್ಟಕ್ಕೀಡಾದಾಗ ನ್ಸ್ಟಿಟ್ಯೂಟು ನೀಡಿದ ನೆರವು ಅದು ಮಾಡುವ ಸಾಮಾಜಿಕ ಕಾರ್ಯಗಳಲ್ಲಿ ಮುಖ್ಯವಾದುದಾಗಿದೆ ಈ ಪ್ರದೇಶಗಳಲ್ಲಿಯ ಜನರ ಸಂಕಟ ಪರಿಹಾರಕ್ಕೆಂದು ಇನ್ಸ್ಟಿಟ್ಯೂಟು ವಿನಂತಿ ಪತ್ರವನ್ನು ಹೊರಡಿಸಿ ಸಾರ್ವಜನಿಕರಿಂದ ೨೯,೬೨೩ ರೂ ಗಳನ್ನು ಸಂಗ್ರಹಿಸಿದ್ದಿತು ಅದರಂತೆಯೇ ಗುಜರಾತ ಮತ್ತು ಸಿಂಧಗಳಲ್ಲಿಯ ಜನರ ಸಂಕಟ ಪರಿಹಾರಕ್ಕಂದು ೧೭,೦೧೧ ರೂ ಗಳನ್ನು ಕೊಟ್ಟತಲ್ಲದೆ ೧೯೪೦ರಲ್ಲಿ ರಾಣಾ ಜಿಲ್ಹೆಯ ಜನರು ಬಿರುಗಾಳಿಗೆ ಸಿಲುಕಿ ಸಂಕಷ್ಟಕ್ಕೀಡಾದಾಗ ೨,೦೦೦ ರೂ ಗಳ ಸಹಾಯುವನ್ನು ನೀಡಿತು

ಭದ್ರನಾದ ನುತ್ತು ಪ್ರಗತಿಪರ ಆಂದೋಲನದ ವಿಕಾಸಕ್ಕಾಗಿ ಇನ್ಸ್ಟಿಟ್ಯೂಟು ವಿವಿಧ ಮುಖವಾಗಿ ಕೈಕೊಂಡ ನುತ್ತು ಕೈಕೊಳ್ಳುತ್ತಿರುವ ಕಾರ್ಯಕಲಾಪಗಳ ಚಟುವಟಿಕಗಳ ಸಂಕ್ಷಿಪ್ತ ಸಿಂಹಾವಲೋಕನ ಎಂದರೆ ಇದು

## (ಗ) ಸೇವಾ ಸಹಕಾರಿ ಸಂಘಗಳು.

**ಶಿಕ್ಷಣ ಸಂಘಗಳು:—**

ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಾಥಮಿಕ ಅಥವಾ ಮಾಧ್ಯಮಿಕ ಶಾಲೆಗಳನ್ನು ತೆರೆದು ಶಿಕ್ಷಣ ಪ್ರಸಾರಮಾಡುವದು, ಪುಕ್ಕಟೆ ವಾಚನಾಲಯ ತೆರೆಯುವದು, ಪ್ರೌಢ ಶಿಕ್ಷಣ ವರ್ಗಗಳನ್ನು ತೆರೆಯುವದು, ಶಾರೀರಿಕ ಶಿಕ್ಷಣಕ್ಕ ಪ್ರೋತ್ಸಾಹ ಕೊಡುವದು ಮೊದಲಾದ ಕಾರ್ಯಗಳಿಗೆ ಶಿಕ್ಷಣ ಸಂಘಗಳನ್ನು ಸಂಘಟಿಸಲಾಗುತ್ತಿದೆ ಬಹಳ ದಿನಗಳ ಹಿಂದೆಯೇ ಶಿಕ್ಷಣ ಸಂಘಗಳನ್ನು ಸ್ಥಾಪಿಸಲಾಗಿದ್ದಿತು **ಮುಂಬಯಿ ಪೂರ್ವ ಹಿಂದುಸ್ಥಾನ ಶಿಕ್ಷಣ ಸಹಕಾರಿ ಪತ್ತಿನ ಸಂಘವು** (ಬಾಂಬೆ ಈಸ್ಟ ಇಂಡಿಯನ್ ಎಜ್ಯುಕೇಶನಲ್ ಕೋ ಕ್ರೆ ಸೊಸಾಯಟಿ) ೧೯೧೯ ರಲ್ಲಿ ಸ್ಥಾಪಿಸಲ್ಪಟ್ಟಿತು ೧೯೨೧ ರಲ್ಲಿ ಹುಲಕೋಟೆ ಶಿಕ್ಷಣ ಸಂಘವು ಸ್ಥಾಪಿಸಲ್ಪಟ್ಟಿತು ೧೯೪೦ ರ ತರುವಾಯ ಕೆಲವು ಜಿಲ್ಹೆಗಳಲ್ಲಿ ಶಿಕ್ಷಣ ಸಂಘ ಮತ್ತು ಪುಕ್ಕಟೆ ವಾಚನಾಲಯಗಳನ್ನು ತೆರೆಯಲು ಶೀಘ್ರ ಪ್ರಯತ್ನಗಳು ನಡೆದವು ೨ ವಿಕಾಸ ಮಂಡಲಗಳನ್ನೊಳಗೊಂಡು ೩೦–೬–೧೯೫೧ ಕ್ಕೆ ೩೮ ಶಿಕ್ಷಣ ಸಂಘಗಳಿದ್ದವು ಅವುಗಳ ಜಿಲ್ಹಾವಾರ ಪರಿಸ್ಥಿತಿಯನ್ನು ಕೆಳಗೆ ಕೊಡಲಾಗಿದೆ.

| ಜಿಲ್ಹೆ. | ಸಂಘಗಳ ಸಂಖ್ಯೆ |
|---|---|
| ಅಹಮ್ಮದಾಬಾದ. | ೫ |
| ಪೂ ಖಾನದೇಶ. | ೭ |
| ಪ ಖಾನದೇಶ. | ೨ |
| ಬಡೋದೆ. | ೨ |
| ಭಡೋಚ. | ೧ |
| ಸುರತ. | ೪ |
| ಮುಂಬಯಿ | ೮ |
| ಬ್ರಹನ್ ಮುಂಬಯಿ | ೧ |
| ಉತ್ತರ ಸಾತಾರಾ | ೨ |
| ದಕ್ಷಿಣ ಸಾತಾರಾ | ೧ |
| ಸೊಲ್ಲಾಪೂರ | ೧ |
| ವಿಜಾಪೂರ | ೧ |
| ಒಟ್ಟು | ೩೪ |

ಈ ಸಂಘಗಳ ಸದಸ್ಯರ ಸಂಖ್ಯೆಯು ೮೪೭೩ ಇದ್ದು ದುಡಿಯುವ ಭಾಂಡವಲು ರೂ ೧೯ ೮೮ ಲಕ್ಷವಿದ್ದಿತು

೧೯೫೧ ಜೂನ ೩೦ ಕ್ಕೆ ೪ ಸಹಕಾರಿ ವಾಚನಾಲಯಗಳಿದ್ದವು ಅವುಗಳ ಸದಸ್ಯರ ಸಂಖ್ಯೆ ೨೦೧ ಇದ್ದು ಅವು ೨೫೩೯ ಪುಸ್ತಕಗಳನ್ನು ಸಂಗ್ರಹಿಸಿದ್ದವು ಅಲ್ಲದೆ ದಿನ ಪತ್ರಿಕೆ, ವಾರಪತ್ರಿಕೆ, ಮಾಸಿಕ ಮೊದಲಾದ ಪತ್ರಿಕೆಗಳನ್ನೂ ವಾಚನಾಲಯಕ್ಕೆ ತರಿಸುತ್ತಿದ್ದವು

**ವಿದ್ಯುತ್ ಪೂರೈಕೆ ಸಂಘಗಳು —**

೧೯೫೧ ಜೂನ ೩೦ ಕ್ಕೆ ೧೦ ವಿದ್ಯುತ್ ಪೂರೈಕೆಯ ಸಂಘಗಳಿದ್ದವು ಸರಕಾರದಿಂದ ಅಥವಾ ಸಾರ್ವಜನಿಕ ಕಂಪನಿಗಳಿಂದ ವಿದ್ಯುತ್ತನ್ನು ಕೊಂಡು ಗ್ರಾಹಕರಿಗೆ ಪೂರೈಸುವ ಇಲ್ಲವೆ ವಿದ್ಯುತ್ತ ಶಕ್ತಿಯನ್ನೇ ಉತ್ಪಾದಿಸಿ ವಿತರಣ ಮಾಡುವದೇ ಈ ಸಂಘಗಳ ಮೂಲ ಉದ್ದೇಶವಾಗಿದೆ ಕಾಯಂ ನೊತ್ತಾಗಿ ಉಳಿಯಬಹುದಾದ ಯಂತ್ರ ಸಾಮುಗ್ರಿ ಮೊದಲಾದ ಉಪಕರಣಗಳ ಸಲುವಾಗಿ ಸಂಘವು ಬಹಳಷ್ಟು ಭಾಂಡವಲನ್ನು ಹಾಕಬೇಕಾಗುವದು ಈ ಸಂಘಗಳು ಸ್ವಲ್ಪ ಭಾಂಡವಲದಿಂದಲೇ ಕಾರ್ಯ ಪ್ರಾರಂಭಿಸಿವೆ ಹೀಗಾಗಿ ಎಷ್ಟೋ ಸಂಘಗಳು ಹಣಕಾಸಿನ ಕೊರತೆಯಿಂದಾಗಿ ಕೆಲಸವನ್ನು ಭರದಿಂದ ಸಾಗಿಸಿಲ್ಲ

**ಮೋಟರ ಸಾಗಾಟ ಸಂಘಗಳು —**

೩೦-೬-೧೯೫೧ ಕ್ಕೆ ೩೪ ಮೋಟರ ಸಾಗಾಟ ಸಂಘಗಳಿದ್ದವು ಆದರೆ ಈ ಉದ್ದಿಮೆಯನ್ನು ರಾಷ್ಟ್ರೀಕರಿಸುವ ಧೋರಣೆಯನ್ನು ತಾಳಿದ್ದರಿಂದ ಈ ಎಲ್ಲ ಸಂಘಗಳಿಗೆ ಹೆಚ್ಚು ಪರಿಣಾಮವಾಗಿದೆ

ಸುಮಾರು ೬ ಆರೋಗ್ಯ ಸಂಘಗಳು ಇದ್ದವಲ್ಲದೆ ಪ್ರಚಾರ ಮತ್ತು ಔಷಧ ಗಳನ್ನು ಹಂಚುವ ಕಾರ್ಯವನ್ನು ಈ ಸಂಘಗಳು ಮಾಡುತ್ತಿದ್ದವು. ೩೦-೬-೫೧ಕ್ಕೆ ೪೮ ಉತ್ತಮ ಜೀವನ ಸಂಘಗಳಿದ್ದವು ಸಾರ್ವಜನಿಕ ಆರೋಗ್ಯದ ಪ್ರೋತ್ಸಾಹ, ಶಿಕ್ಷಣ ಪ್ರಸಾರ, ಔಷಧ ಪೂರೈಕೆ, ನೀರಿನ ಪೂರೈಕೆಯ ವ್ಯವಸ್ಥೆ, ರಸ್ತೆಗಳ ರಚನೆ, ಸದಸ್ಯರ ತಂಟೆ ಬಗೆಹರಿಸುವದು, ಉತ್ಸವ ಸಮಾರಂಭಗಳ ವೆಚ್ಚವನ್ನು ಕಡಿಮೆ ಮಾಡಲು ಪ್ರಚಾರಮಾಡುವದು ಈ ಮೊದಲಾದ ಕಾರ್ಯಗಳನ್ನು ಈ ಸಂಘಗಳು ಮಾಡುತ್ತವೆ ೩೦—೬—೧೯೫೧ ಕ್ಕೆ ಈ ಸಂಘಗಳ ಸದಸ್ಯರ ಸಂಖ್ಯೆಯು ೩೮೯೦ ಇದ್ದಿತು ಆದರೆ ಇತ್ತಿತ್ತಲಾಗಿ ಗ್ರಾಮಾಂತರ ಪತ್ತಿನ ಸಂಘಗಳು ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮೊದಲಾದ ವಿವಿಧ ಉದ್ದೇಶಗಳ ಚಟುವಟಿಕೆಗಳನ್ನು ಕೈಕೊಳ್ಳುತ್ತಿರುವದರಿಂದ ಇಂಥ ಸಂಘಗಳನ್ನು ನೋಂದಾಯಿಸುವ ಬಗ್ಗೆ ಬೇಡಿಕೆಯು ಕಡಿಮೆಯಾಗಿದೆ ಗುಜರಾತದಲ್ಲಿ ಗ್ರಾಮಾಂತರ ಪುನರ್‌ರಚನೆಯ ಸಹಕಾರಿ ಸಂಘ ಮತ್ತು ಗ್ರಾಮವಿಕಾಸ ಸಮಿತಿಗಳು ಇರುತ್ತವೆ

ಸೇವಾ ಸಹಕಾರಿ ಸಂಘಗಳು ಇನ್ನೂ ಈ ರಾಜ್ಯದಲ್ಲಿ ಬೆಳವಣಿಗೆ ಹೊಂದ ಬೇಕಾಗಿದೆ ಹಿಂದುಳಿದ ಪ್ರದೇಶಗಳನ್ನು ಬಿಟ್ಟು ಗ್ರಾಮಾಂತರ ಪ್ರದೇಶಗಳಲ್ಲಿ ಸಹಕಾರಿ ಸಂಘಗಳು ಹೆಚ್ಚಾಗಿ ಇವೆ ಈ ಸಂಘಗಳು ವಿಶೇಷತಃ ಸದಸ್ಯರ ಮತ್ತು ಸಾಮಾನ್ಯವಾಗಿ ಸಾರ್ವಜನಿಕರ ಸೇವಾ ಕಾರ್ಯವನ್ನು ಹೆಚ್ಚಾಗಿ ಮಾಡಬಹುದು ಅಮೇರಿಕಾ, ಕಾನಡಾ ಮೊದಲಾದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸೇವಾ ಸಹಕಾರಿ ಸಂಘಗಳು ಚೆನ್ನಾಗಿ ಬೆಳವಣಿಗೆ ಹೊಂದಿವೆ.

## (ಹ) ಲೆಕ್ಕ ಪರಿಶೋಧನೆ, ಮೇಲ್ವಿಚಾರಣೆ, ತಪಾಸಣೆ ಮತ್ತು ಸಹಕಾರಿ ಶಿಕ್ಷಣ.

### ೧. ಲೆಕ್ಕ ಪರಿಶೋಧನೆ ( ಆಡಿಟ್ )

**ಲೆಕ್ಕ ಪರಿಶೋಧನೆಗಾಗಿ ಮಾಡಿದ ವ್ಯವಸ್ಥೆ —**

೧೯೦೪ ರ, ಸಹಕಾರಿ ಸಂಘಗಳ ಕಾಯದೆಯ ೨೧ (1) ನೆಯ ಕಲಮಿನ ಮೇರೆಗೆ ರಜಿಸ್ಟ್ರಾರನು ಪ್ರತಿ ಸಂಘಗಳ ಲೆಕ್ಕ ಪರಿಶೋಧನೆಯನ್ನು ವರ್ಷಕ್ಕೆ ಒಮ್ಮೆಯಾದರೂ ಮಾಡಬೇಕಾಗುವದು ಈ ಮೇರೆಗೆ ಸಂಘಗಳ ಸಂಖ್ಯೆ ಕಡಿಮೆ ಇದ್ದುದರಿಂದ ಮತ್ತು ಅವು ಸಾಮಾನ್ಯ ಪತ್ತಿನ ಸಂಘಗಳಾಗಿದ್ದರಿಂದ ಸಂಘಗಳ

ಲೆಕ್ಕ ಪರಿಶೋಧನೆಯನ್ನು ಪ್ರಾರಂಭಕ್ಕೆ ರಜಿಸ್ಟ್ರಾರನೇ ಮಾಡುತ್ತಲಿದ್ದನು ಆ ಹಳೆಯ ಕಾಲದಲ್ಲಿಯ ಲೆಕ್ಕ ಪರಿಶೋಧನೆಯಲ್ಲಿ ಲೆಕ್ಕ ತಪಾಸಣೆ ಮತ್ತು ಮೇಲ್ವಿಚಾರಣೆಗಳು ಸಮಾವೇಶವಾಗಿದ್ದವು ಸಂಘಗಳ ಸಂಖ್ಯೆಯು ಹೆಚ್ಚಾಗತೊಡಗಿದಂತೆ ಕಾಯದೆಯಲ್ಲಿ ಹೇಳಿದಂತೆ ಸಂಘಗಳ ಲೆಕ್ಕ ಪರಿಶೋಧನೆಯು ರಜಿಸ್ಟ್ರಾರನಿಗೆ ಸಾಧ್ಯವಾಗದೇ ಹೋಯಿತು. ಆದುದರಿಂದ ಆ ಕಾಯದೆಯಲ್ಲಿ ೧೯೦೮ ರಲ್ಲಿ ತಿದ್ದುಪಡೆಯಾಗಿ ರಜಿಸ್ಟ್ರಾರ ಅಥವಾ ಅವನಿಂದ ಅಧಿಕಾರ ಪಡೆದ ಬೇರೊಬ್ಬರು ಸಂಘಗಳ ಲೆಕ್ಕ ಪರಿಶೋಧನೆ ಮಾಡಲು ಅನುಕೂಲವಾಯಿತು ಹೀಗೆ ಆಡಿಟರನನ್ನು ಮೊದಲಬಾರಿಗೆ ೧೯೦೮ ರಲ್ಲಿ ನಿಯಮಿಸಲಾಯಿತು

೧೯೧೨ ರ II ಕಾಯದೆಯು ಪಾಸಾದಮೇಲೆ ಸಹಕಾರದ ಕ್ಷೇತ್ರವು ಬೆಳೆಯತೊಡಗಿತು, ಹಳ್ಳಿಯ ಪ್ರಾಥಮಿಕ ಸಂಘಗಳಿಗೆ ಪತ್ತು ಪೂರೈಸಲು ಮಧ್ಯವರ್ತಿ ಬ್ಯಾಂಕುಗಳು ಅಸ್ತಿತ್ವದಲ್ಲಿ ಬಂದವು ಅದೇ ಮೇರೆಗೆ ಬಿನ್‌ಪತ್ತಿನ ಸಂಘ, ಸಹಕಾರಿ ಉಗ್ರಾಣಗಳು, ಖರೀದಿ ಮತ್ತು ವಿಕ್ರಿ ಸಂಘ ಮೊದಲಾದ ಪ್ರಕಾರಗಳ ಸಂಘಗಳು ಅಸ್ತಿತ್ವದಲ್ಲಿ ಬಂದವು ಇದಲ್ಲದೆ ನಗರ ಪತ್ತಿನ ಆಂದೋಲನವು ಸಹಿತ ಹೆಚ್ಚಾಗಿ ಬೆಳೆಯತೊಡಗಿತು ಈ ಬೆಳವಣಿಗೆಯನ್ನನುಲಕ್ಷಿಸಿ, ಬಹಳ ವ್ಯವಹಾರವುಳ್ಳ ಇಂಥ ದೊಡ್ಡ ಸಂಸ್ಥೆಗಳ ಲೆಕ್ಕ ಪರಿಶೋಧನೆಯು ಆಡಿಟರನಿಗೆ ಕಷ್ಟಸಾಧ್ಯವಾಗುವದರಿಂದ, ಈ ಉದ್ದೇಶಕ್ಕಾಗಿ ಸ್ಪೇಶಲ್ ಆಡಿಟರರನ್ನು ನಿಯಮಿಸುವ ಕ್ರಮ ಕೈಕೊಳ್ಳಲಾಯಿತು ಹೀಗೆ ಮೊದಲನೆಯ ಸ್ಪೇಶಲ್ ಆಡಿಟರರನ್ನು ೧೯೨೦ ರಲ್ಲಿ ನಿಯಮಿಸಲಾಯಿತು ಈ ರೀತಿಯಾಗಿ ಸಹಕಾರಿ ಸಂಘಗಳ ಲೆಕ್ಕ ಪರಿಶೋಧನೆಯನ್ನು ಖಾತೆಯ ಸ್ಪೇಶಲ್ ಆಡಿಟರ, ಆಡಿಟರ ಮತ್ತು ಸಬ್ ಆಡಿಟರರು ಮಾಡತೊಡಗಿದರು ಈ ಪದ್ಧತಿಯು ಯಾವ ಬದಲಾವಣೆಯೂ ಇಲ್ಲದೆ ೧೯೩೮ ರ ವರೆಗೆ ಮುಂದುವರೆಯಿತು ಮುಂಬಯಿ ಪ್ರದೇಶದಲ್ಲಿಯ 'ಅ' ಮತ್ತು 'ಬ' ವರ್ಗದ ಅರ್ಬನ್ ಬ್ಯಾಂಕುಗಳ, ಸಂಬಳ ಪಡೆವವರ ಸಂಘಗಳ ಮತ್ತು ಸರಕಾರಕ್ಕೆ ಸಾಲ ಕೊಡಬೇಕಾಗಿರದ ಮುಂಬಯಿ ಮತ್ತು ಸುತ್ತುಮುತ್ತಲಿನ ಪ್ರದೇಶದಲ್ಲಿಯ 'ಅ' ಮತ್ತು 'ಬ' ವರ್ಗದ ಮನೆಕಟ್ಟುವ ಸಂಘಗಳ ಲೆಕ್ಕ ಪರಿಶೋಧನೆಯ ಕಾರ್ಯವನ್ನು "ಸರ್ಟಿಫಾಯಿಡ ಆಡಿಟರರಿಗೆ" ಒಪ್ಪಿಸಬೇಕೆಂದು ೧೯೩೮ ರಲ್ಲಿಯ ಬನಸಾಲಿ ಮೆಹತಾ ಸಮಿತಿಯ ವರದಿಯಲ್ಲಿ ಶಿಫಾರಸು ಮಾಡಲಾಯಿತು ಇಂಥ ಯೋಜನೆಯನ್ನು ದೊಡ್ಡಸಂಸ್ಥೆಗಳು ಅವ್ಯಾಹತವಾಗಿ ಬೇಡುತ್ತಲಿದ್ದವು ಸರಕಾರವು ಈ ಸೂಚನೆಗಳನ್ನು ಮಾನ್ಯಮಾಡಿ ಆ ರೀತಿ ಆಜ್ಞೆಗಳನ್ನು ಹೊರಡಿಸಿತು. ಅಲ್ಲದೆ ಈ ಸಂಯುಕ್ತ ವರದಿಯು, ಸಂಘಗಳಲ್ಲಿ ಶೇರುಭಾಂಡವಲಿನ ತಳಹದಿಯಮೇಲೆ ಸಣ್ಣ ಮತ್ತು ದೊಡ್ಡ ಎಂಬ ಎರಡು ವಿಭಾಗಗಳನ್ನು ಮಾಡಬೇಕಂದು ಶಿಫಾರಸು ಮಾಡಿತು ರೂ ೨೦೦೦ ಮತ್ತು ಕಡಿಮೆ ಶೇಅರು ಭಾಂಡವಲು ಇರುವ ಸಂಘಗಳು ಸಣ್ಣ ಸಂಘಗಳೆಂದೂ ರೂ. ೨೦೦೦ ಮತ್ತು ರೂ ೨೦೦೦೦ ಗಳ ನಡುವೆ ಶೇಅರು ಭಾಂಡವಲು ಇರುವ ಸಂಘಗಳನ್ನು ದೊಡ್ಡ ಸಂಘಗಳೆಂದೂ ಪರಿಗಣಿಸಿ ಲೆಕ್ಕ ಪರಿಶೋಧನೆಯನ್ನು ಆಡಿಟರರಿಗೆ ಒಪ್ಪಿಸಲಾಯಿತು ೨೦ ಸಾವಿರ ರೂ

ಗಳಿಗೆ ಮಿಕ್ಕ ಶೇಅರು ಭಾಂಡವಲು ಇರುವ ಸಂಸ್ಥೆಗಳ ಲೆಕ್ಕ ಪರಿಶೋಧನೆಯನ್ನು ಸ್ಪೇಶಲ್ ಆಡಿಟರರಿಗೆ ಒಪ್ಪಿಸಲಾಯಿತು. ೨೦೦೦ ರೂ ಗಳಿಗಿಂತ ಕಡಿಮೆ ಶೇಅರು ಭಾಂಡವಲು ಇರುವ ಸಂಘಗಳ ಲೆಕ್ಕ ಪರಿಶೋಧನೆಯ ಕಾರ್ಯವನ್ನು ಸಬ್‌ಆಡಿಟರರಿಗೆ ಒಪ್ಪಿಸಲಾಯಿತು ಅಲ್ಲದೆ ವರ್ಷದ ಅಂತ್ಯದೊಳಗಾಗಿ ಈ ಎಲ್ಲ ಸಂಘಗಳ ಲೆಕ್ಕ ಪರಿಶೋಧನೆಯನ್ನು ತಪ್ಪದೇ ಮಾಡಬೇಕೆಂಬುದನ್ನು ಆಡಿಟರರಿಗೆ ವಿಧಿಸಲಾಯಿತು ಸರ್ಟಿಫಾಯಿಡ ಆಡಿಟರ, ಸ್ಪೇಶಲ್ ಆಡಿಟರ, ಆಡಿಟರ ಮತ್ತು ಸಬ್‌ಆಡಿಟರ ಇವರಿಗೆ ಒಪ್ಪಿಸಬಹುದಾದ ಸಂಘಗಳಲ್ಲಿ ಕಾಲಮಾನಕ್ಕನುಗುಣವಾಗಿ ಹಲಕೆಲವು ಮಾರ್ಪಾಡುಗಳಾಗಿವೆ ಈಗ ಬೇರೆ ಬೇರೆ ಲೆಕ್ಕ ಪರಿಶೋಧಕರು ಲೆಕ್ಕ ಪರಿಶೋಧನೆ ಮಾಡುವ ಸಂಘಗಳನ್ನು ಕೆಳಗೆ ಕೊಡಲಾಗಿದೆ

**೧ ಸ್ಪೇಶಲ್ ಆಡಿಟರರು —**

(ಅ) ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕಿನ ಮುಖ್ಯ ಕಚೇರಿ, ಮುಂಬಯಿ ಪ್ರಾಂತಿಕ ಮಾರ್ಕೆಟಿಂಗ ಸಂಘ ಮತ್ತು ವಿಮಾ ಸಂಘಗಳನ್ನು ಬಿಟ್ಟು ಇತರ ಅಪೆಕ್ಸ ಸಂಸ್ಥೆಗಳು

(ಬ) ಮುಂಬಯಿ ಪ್ರಾಂತಿಕ ಸಹಕಾರಿ ಬ್ಯಾಂಕಿನ ಎಲ್ಲ ಶಾಖಾ ಕಚೇರಿಗಳು

(ಕ) ಎಲ್ಲ ಮಧ್ಯವರ್ತಿ ಹಣ ಪೂರೈಕೆ ಸಂಸ್ಥೆ ಮತ್ತು ಅವುಗಳ ಶಾಖೆಗಳು

(ಡ) ಪರ್ಚೇಜ ಮತ್ತು ಸೇಲ ಯೂನಿಯನ್ ಮತ್ತು ಅವುಗಳ ಶಾಖೆಗಳು

(ಇ) ಜಿಲ್ಹಾ ಔದ್ಯೋಗಿಕ ಸಂಘಗಳು ಮತ್ತು ಅವುಗಳ ಶಾಖೆಗಳು.

(ಫ) ೨೦ ಸಾವಿರಕ್ಕೆ ಮಿಕ್ಕಿ ದುಡಿಯುವ ಭಾಂಡವಲು ಇರುವ 'ಕ' ಮತ್ತು 'ಡ' ವರ್ಗದ ಅರ್ಬನ್ ಬ್ಯಾಂಕುಗಳು

**೨. ಸಬ್ ಆಡಿಟರರು:--**

(ಅ) ಎಲ್ಲ ಶೇತ್ಕಿ ಪತ್ತಿನ ಮತ್ತು ವಿವಿಧ ಉದ್ದೇಶಗಳ ಸಂಘಗಳು (ರೂ ೫೦ ಸಾವಿರಕ್ಕೆ ಮಿಕ್ಕಿ ವ್ಯವಹಾರವಿರುವ ಯೋಗ್ಯದರದ ಕಾಳಿನ ಅಂಗಡಿಯನ್ನು ನಡಿಸುವ ವಿವಿಧ ಉದ್ದೇಶದ ಸಂಘಗಳನ್ನು ಬಿಟ್ಟು)

**೩. ಸರ್ಟಿಫಾಯಿಡ ಆಡಿಟರರು —**

(ಅ) ೫೦ ಸಾವಿರ ರೂ ಗಳಿಗೆ ಮಿಕ್ಕಿ ವ್ಯವಹಾರವಿರುವ ಗ್ರಾಹಕರ ಸಂಘ

(ಬ) ಕಳೆದ ಲೆಕ್ಕ ಪರಿಶೋಧನೆಯ ಕಾಲಕ್ಕೆ 'ಅ' ಅಥವಾ 'ಬ' ವರ್ಗದಲ್ಲಿ ಬಂದ ಮತ್ತು ೫೦ ಸಾವಿರ ರೂ- ಗಳಿಗೆ ಮಿಕ್ಕಿ ದುಡಿಯುವ ಭಾಂಡವಲು ಇರುವ ಅರ್ಬನ್ ಬ್ಯಾಂಕುಗಳು

(ಕ) ಸರಕಾರಕ್ಕೆ ಕೊಡಬೇಕಾದ ಸಾಲವಿಲ್ಲದ ಮನೆ ಕಟ್ಟುವ ಸಂಘಗಳು

(ಡ) ರಜಿಷ್ಟ್ರಾರರಿಂದ ತಿಳಿಸಲ್ಪಟ್ಟ ಮತ್ತಿತರ ಸಂಘಗಳು

೪ **ಆಡಿಟರರು:—**

ಸರ್ಟಿಫಾಯಿಡ ಆಡಿಟರ, ಸ್ಪೇಶಲ್ ಆಡಿಟರ ಮತ್ತು ಸಬ್ ಆಡಿಟರರಿಗೆ ಒಪ್ಪಿಸದ ಇತರ ಯಾವದೇ ಸಂಘಗಳು

ಸರ್ಟಿಫಾಯಿಡ ಆಡಿಟರರನ್ನು ರಜಿಷ್ಟ್ರಾರನು ಎರಡು ವರ್ಷಕ್ಕೊಮ್ಮೆ ನಿಯಮಿಸುತ್ತಾನೆ ಪ್ರಾರಂಭದಲ್ಲಿ ಲೆಕ್ಕ ತಪಾಸಣೆಯು ಪುಕ್ಕಟೆಯಾಗಿದ್ದಿತು ಆದರೆ ಸಂಘಗಳ ಸಂಖ್ಯೆಯು ಹೆಚ್ಚಾಗತೊಡಗಿದಂತೆ ಮತ್ತು ಅವುಗಳ ಆರ್ಥಿಕ ಪರಿಸ್ಥಿತಿಯು ಸುಧಾರಿಸಿದಂತೆ ೧೯೩೦ ರಿಂದ ನಿರ್ದಿಷ್ಟ ಪಡಿಸಿದ ಪದ್ಧತಿಯ ಮೇರೆಗೆ ಲೆಕ್ಕ ಪರಿಶೋಧನೆಯ ಶುಲ್ಕವನ್ನು ಹಾಕಲಾಯಿತು ಆದರೆ ಸುಪರವಾಯಿಝಿಂಗ ಯೂನಿಯನ್, ತಾಲೂಕಾ ಅಭಿವೃದ್ಧಿ ಮಂಡಲ, ಜಿಲ್ಹಾ ಸಹಕಾರಿ ಬೋರ್ಡು ಮತ್ತು ಶಿಕ್ಷಣ ಸಂಘಗಳನ್ನು ಲೆಕ್ಕ ಪರಿಶೋಧನೆಯ ಶುಲ್ಕದಿಂದ ಹೊರತು ಪಡಿಸಲಾಯಿತು ಅಲ್ಲದೆ ರಜಿಸ್ಟ್ರಾರನು ಆರ್ಥಿಕ ಪರಿಸ್ಥಿತಿಯು ಸರಿ ಇರದ ಸಂಘಗಳನ್ನು ಈ ಶುಲ್ಕದಿಂದ ಹೊರತು ಪಡಿಸಬಹುದು

ಸ್ಪೇಶಲ್ ಆಡಿಟರ, ಆಡಿಟರ ಮತ್ತು ಸಬ್ ಆಡಿಟರ ಈ ಎಲ್ಲ ನೌಕರ ವರ್ಗವನು ಚೀಫ ಆಡಿಟರ ಮತ್ತು ಸಹಕಾರಿ ಖಾತೆಯ ಆರ್ಥಿಕ ಸಲಹಾಗಾರನು ನಿಯಂತ್ರಿಸುತ್ತಾನೆ ಇವರ ಕಚೇರಿಯು ಪುಣೆಯಲ್ಲಿರುತ್ತದೆ ರಜಿಷ್ಟ್ರಾರರ ನಿಯಂತ್ರಣಕ್ಕೊಳಪಟ್ಟು ಇವರು ಕೆಲಸ ಮಾಡುತ್ತಾರೆ

**ಲೆಕ್ಕ ಪರಿಶೋಧನೆಯ ಉದ್ದೇಶ —**

ಖಾತೆಗೆ ಒಪ್ಪಿಸಿದ ನಿಯಮಬದ್ಧ ಲೆಕ್ಕ ಪರಿಶೋಧನೆಯ ಉದ್ದೇಶಗಳು ಕೆಳಗಿನಂತಿವೆ

(ಅ) ಸಂಘದ ಚಾಲಕರ ದುರ್ವರ್ತನೆಯಿಂದ ಸಂಘದ ನಿತ್ಯದ ಆಡಳಿತೆಯಲ್ಲಿಯ ದೋಷಗಳನ್ನು ಅರಿತುಕೊಳ್ಳಲು ಸಮರ್ಥರಾಗದ ಸಾಮಾನ್ಯ ಸದಸ್ಯರನ್ನು ರಕ್ಷಿಸುತ್ತದೆ.

(ಬ) ಸರಕಾರಿ ನಿಯಂತ್ರಿತ ಲೆಕ್ಕ ಪರಿಶೋಧನೆಯು ಸಂಘಗಳು ಸರಿಯಾದ ರೀತಿಯಲ್ಲಿ ಸಾಗುವಂತೆ ಮಾಡುತ್ತದೆ

(ಕ) ಅಧಿಕೃತ ಲೆಕ್ಕ ಪರಿಶೋಧನೆಯು ಹಣ ತೊಡಗಿಸುವ ಸಾರ್ವಜನಿಕರ ಹಣವನ್ನು ರಕ್ಷಿಸುವದಲ್ಲದೆ ಅವರ ನಂಬುಗೆಯನ್ನು ಹೆಚ್ಚಿಸುತ್ತದೆ.

ಡ) ಸಂಘಗಳಲ್ಲಿಯ ದುರುಪಯೋಗ, ದುರ್ವ್ಯವಹಾರಗಳನ್ನು ತಡ ಯುತ್ತದ

ಇ) ನೌಕರ ವರ್ಗವು ಮಾಡಬಹುದಾದ ಅವ್ಯವಹಾರದಿಂದ ಕಾರ್ಯ ಕಾರಿ ಮಂಡಳದ ಸದಸ್ಯರನ್ನು ರಕ್ಷಿಸುವದಲ್ಲದೆ ಉತ್ತಮ ಚಾಲನೆ ಯಾಗುವಂತೆ ಮಾಡುತ್ತದ

ಫ) ಲೆಕ್ಕಪತ್ರಗಳನ್ನು ಇಡುವ ಬಗ್ಗೆ ನೌಕರ ವರ್ಗಕ್ಕೆ ತಜ್ಞ ಸಲಹೆ ದೊರೆಯುತ್ತದೆ.

ಗ) ಕೊನೆಯದಾಗಿ, ಶ್ರೀ ವೂಲ್ಫ ಇವರು ಅಭಿಪ್ರಾಯಪಟ್ಟಂತೆ ಮತ್ತಿತರ ಶಿಕ್ಷಣ ಸಾಧನಗಳಂತೆ, ಲೆಕ್ಕ ಪರಿಶೋಧನೆಯು ಒಂದು ಆರ್ಥಿಕ ಶಿಕ್ಷಣ ಕ್ರಮವಾಗಿದೆ

**ಲೆಕ್ಕ ಪರಿಶೋಧನೆಯ ಅವಕಾಶ :—**

ರಜಿಷ್ಟ್ರಾರ ಅಥವಾ ಅವರ ಪ್ರತಿನಿಧಿಯು ಪ್ರತಿ ಸಂಘದ ಲೆಕ್ಕ ಪರಿಶೋಧ ನೆಯನ್ನು ಪ್ರತಿ ವರ್ಷಕ್ಕೆ ಒಂದು ಬಾರಿಯಾದರೂ ಮಾಡಬೇಕೆಂದು ಸಹಕಾರಿ ಸಂಘ ಗಳ ಕಾಯಿದೆಯ ೨೨ ನೆಯ ಕಲಮಿನಲ್ಲಿ ಹೇಳಲಾಗಿದೆ ಈ ಲೆಕ್ಕ ಪರಿಶೋಧನೆ ಯಲ್ಲಿ, ಮುದ್ದತು ಮೀರಿದ ಸಾಲಗಳಿದ್ದರೆ ಅವುಗಳ ಪರಿಶೀಲನೆ, ರೋಖ ಹಣ ಮತ್ತು ಸೆಕ್ಯುರಿಟಿಗಳ ವಿವೇಚನೆ, ಮತ್ತು ಸಂಘದ ಸಾಲ ಜಿಂದಗಿಗಳನ್ನು ಪರೀಕ್ಷಿ ಸುವದು ಮೊದಲಾದವು ಸಮಾವೇಶವಾಗುತ್ತವೆ

ಹೀಗೆ ಸಹಕಾರಿ ಆಡಿಟರನ ಕರ್ತವ್ಯಗಳು ಸಾರ್ವಜನಿಕ ಆಡಿಟರನ ಕರ್ತ ವ್ಯಗಳಿಂದ ಭಿನ್ನವಾಗಿಲ್ಲವೆಂದು ಮೇಲಿನ ವಿವರಣೆಯಿಂದ ಕಂಡುಬರುತ್ತದೆ ಸಹ ಕಾರಿ ಲೆಕ್ಕ ಪರಿಶೋಧನೆಯ ಮೂಲ ಸ್ವರೂಪಗಳು ಕೆಳಗಿನಂತಿವೆ

ಅ) ಸಹಕಾರಿ ಲೆಕ್ಕ ಪರಿಶೋಧನೆಯು ತಾಂತ್ರಿಕ ಸ್ವರೂಪದಲ್ಲಿ ಎಲ್ಲ ಲೆಕ್ಕ ಪರಿಶೋಧನೆಯನ್ನು ಒಳಗೊಳ್ಳುತ್ತದ

ಬ) ಸಹಕಾರಿ ಲೆಕ್ಕ ಪರಿಶೋಧನೆಯ ಕಾಲಕ್ಕೆ ಆಡಿಟರನು ಕಾರ್ಯಕಾರಿ ಮಂಡಳದ ಸದಸ್ಯರ ವರ್ತನೆ ಮತ್ತು ಕಾರ್ಯದ ವರದಿಯನ್ನು ತೆಗೆದುಕೊಳ್ಳುತ್ತಾನೆ

ಕ) ಸಹಕಾರದ ದೃಷ್ಟಿಯಿಂದ ಆಡಿಟರನು ಸಾಮಾನ್ಯ ಸದಸ್ಯರ ಪರಿಸ್ಥಿತಿ ಮತ್ತು ವರ್ತನೆಯನ್ನು ವಿಮರ್ಶಿಸಿ ನೋಡುತ್ತಾನೆ

ಡ) ಅಲ್ಲದೆ ಸಹಕಾರಿ ಲೆಕ್ಕ ಪರಿಶೋಧನೆಯು ಸುಧಾರಣೆಯ ಮತ್ತು ಶೈಕ್ಷಣಿಕ ಸ್ವರೂಪವನ್ನು ಒತ್ತಿಹೇಳಬಹುದು ಇದು ತಪ್ಪಿದೆ

ಎಂದು ಹೇಳಿದ ಮಾತ್ರಕ್ಕೆ ಆಡಿಟರನ ಕರ್ತವ್ಯವು ಪೂರ್ತಿಯಾಗ ಲಿಲ್ಲ ಅದನ್ನು ಹೇಗೆ ತಿದ್ದಿಕೊಳ್ಳಬೇಕು ಮತ್ತು ಸಂಘವು ಸರಿ ಯಾಗಿ ಸಾಗಬೇಕಾದರೆ ಯಾವ ಸುಧಾರಣೆಯ ಕ್ರಮಗಳನ್ನು ಅನು ಸರಿಸಬೇಕು ಎಂಬ ಬಗ್ಗೆ ಸೂಚನೆಗಳನ್ನೂ ಆಡಿಟರನು ತಿಳಿಸಬೇ ಕಾಗುವದು

ಸುಪ್ರಸಿದ್ಧ ರಜಿಸ್ಟ್ರಾರ ಶ್ರೀ. ಯುಬ್ಯಾಂಕ್ ಅವರ ಮಾತಿನಲ್ಲಿ ಹೇಳು ವದಾದರೆ ಸಹಕಾರಿ ಆಡಿಟರನ ಕರ್ತವ್ಯಗಳು ಸುಧಾರಣೆ ಮತ್ತು ವಿಮರ್ಶಾತ್ಮಕ ವಾಗಿವೆ ಉತ್ತಮ ಅಧಿಕಾರಿಯು ಕೇವಲ ತಪ್ಪುಗಳನ್ನು ತೋರಿಸದೆ ಸಂಘವು ಸರಿಯಾಗಿ ನಡೆಯುವ ಮಾರ್ಗಗಳನ್ನು ಸೂಚಿಸಬೇಕು, ಕಾರ್ಯದರ್ಶಿ ಮತ್ತು ಸಮಿತಿಯ ಸದಸ್ಯರಿಗೆ ಅವರ ಕರ್ತವ್ಯಗಳನ್ನು ತಿಳಿಸಿಕೊಡಬೇಕು, ಮತ್ತು ಸಂಘ ಗಳು ಭಿನ್ನಾಭಿಪ್ರಾಯಗಳನ್ನು ಬಿಟ್ಟು ಸಾಮೂಹಿಕ ಸಹಕಾರಿ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡಬೇಕು ಸಹಕಾರಿ ಲೆಕ್ಕ ಪರಿಶೋಧಕನು ತನ್ನ ಕರ್ತವ್ಯ ದಲ್ಲಿ ಯಶಸ್ವಿಯಾಗಬೇಕಾದರೆ ಲೆಕ್ಕಪತ್ರಗಳಲ್ಲಿ ಬಲ್ಲವನೂ, ಉತ್ತಮ ಲೆಕ್ಕ ಪರಿಶೋಧ ತಜ್ಞನೂ ಆದರಿಷ್ಟೇ ಸಾಲದು ಇದರ ಜೊತೆಗೆ ಸಹಕಾರದ ಹಿತಪ ಸ್ಪೃಷ್ಟಿಯಿಂದ ಉತ್ತಮ ಉಪದೇಶಕನೂ ಆಗಿರುವದವಶ್ಯವು

## ೨. ಮೇಲ್ವಿಚಾರಣೆ

ಮೇಲ್ವಿಚಾರಣೆ, ಲೆಕ್ಕ ತಪಾಸಣಿ ಮತ್ತು ಲೆಕ್ಕ ಪರಿಶೋಧನೆಗಳು ಸಹಕಾರಿ ರಚನೆಯ ಮೂರು ಆಯುಧಗಳೆಂದು ಹೇಳಲಾಗುತ್ತದೆ ಪ್ರಾರಂಭಕ್ಕೆ ಸಹಕಾರಿ ಸಂಘಗಳ ಸಂಖ್ಯೆ ಕಡಿಮೆ ಇದ್ದಾಗ ಮೇಲ್ವಿಚಾರಣೆಯ ಕಾರ್ಯವನ್ನು ಸಹಕಾರಿ ಖಾತೆಯ ನೋಕರರು ಮತ್ತು ಗೌರವ ಸಂಘಟಕರು ಮಾಡುತ್ತಿದ್ದರು ಆದರೆ ಆಂದೋಲನವು ಬೆಳೆದಂತೆ ಮತ್ತು ಸಂಘಗಳ ಸಂಖ್ಯೆ ಹೆಚ್ಚಾದಂತೆ ಮೇಲ್ವಿ ಚಾರಣೆಯ ಸ್ವತಂತ್ರ ವಿಭಾಗವೇ ಇರಬೇಕಂದು ಅನಿಸತೊಡಗಿತು ೧೯೧೨ರಲ್ಲಿ ಪ್ರಾಂತಿಕ ಸಹಕಾರಿ ಪರಿಷತ್ತು ಶಿಫಾರಸು ಮಾಡಿದ ಮೇರೆಗೆ ಮೂರು ಬ್ಯಾಂಕು ಗಳನ್ನು ಬ್ಯಾಂಕಿಂಗ ಯುನಿಯನ್ನುಗಳನ್ನಾಗಿ ಪರಿವರ್ತಿಸಿ ಮೇಲ್ವಿಚಾರಣೆಯ ಕಾರ್ಯವನ್ನು ಈ ಯುನಿಯನ್ನುಗಳಿಗೆ ಒಪ್ಪಿಸಲಾಯಿತು ಆದರೆ ಕ್ರಮೇಣವಾಗಿ ಸಂಘಗಳಿಗೆ ಪ್ರಾವ್ಹಿನ್ಸಿಯಲ್ ಬ್ಯಾಂಕಿನಿಂದ ಸಾಲವನ್ನು ಪೂರೈಸುವ ಮತ್ತು ಆ ಸಾಲವನ್ನು ತಿರುಗಿ ಕೊಡುವ ಹೊಣೆಯನ್ನು ಮೇಲ್ವಿಚಾರಣೆಯ ಸಂಸ್ಥೆಗಳು ಮಾಡಬಲ್ಲವೆಂದು ಭಾವಿಸಿ ೧೯೨೪ ತರುವಾಯ ಬ್ರಹ್ಮದೇಶದ ಮಾದರಿಯ ಗ್ಯಾರಂಟಿಂಗ ಯುನಿಯನ್ನುಗಳನ್ನು ಸ್ಥಾಪಿಸಲಾಯಿತು ಈ ಯುನಿಯನ್ನುಗಳು ಹಣ ಪೂರೈಸುವ ಬ್ಯಾಂಕು ಮತ್ತು ಪ್ರಾಥಮಿಕ ಸಂಘಗಳ ಮಧ್ಯಸ್ಥಿಕೆಯ ಸಂಸ್ಥೆ ಗಳಂತೆ ವರ್ತಿಸತೊಡಗಿದವು ಯುನಿಯನ್ನಿಗೆ ಸಮಾವೇಶವಾದ ಎಲ್ಲ ಸಂಘಗಳು ಸದಸ್ಯ ಸಂಘಗಳಿಗೆ ಕೊಟ್ಟ ಸಾಲದ ಬಗ್ಗೆ ಪರಸ್ಪರ ಹೊಣೆಯನ್ನು ವಹಿಸಿದವು ಮೇಲ್ವಿಚಾರಣೆಯ ನಿತ್ಯದ ಕಾರ್ಯಕ್ಕಾಗಿ ಯುನಿಯನ್ನುಗಳು ಮೇಲ್ವಿಚಾರಕರನ್ನು

( ಸುಪರವಾಯಿರ್ಝಿಂಗ್ ) ನಿಯಮಿಸಿಕೊಂಡವು ಈ ಏರ್ಪಾಡಿನಿಂದ ಸಹಕಾರಿ ಖಾತೆಗೆ ಅನುಕೂಲವಾದ ಆಡಳಿತೆಯು ಘಟಿಸಬಹುದೆಂದೂ, ಸಾಲ ಪೂರೈಸುವ ಬ್ಯಾಂಕುಗಳಿಗೆ ಪತ್ತನ್ನು ಪರೀಕ್ಷಿಸಿ ನಿರ್ಣಯಿಸುವ ಒಂದು ಯೋಗ್ಯ ಸಾಧನವು ಲಭಿಸಬಹುದೆಂದೂ ಮತ್ತು ಹಳ್ಳಿಯ ಕಾರ್ಯಕರ್ತರಿಗೆ ಒಂದು ಉಚ್ಚವಾದ ಶಿಕ್ಷಣ ಕ್ಷೇತ್ರವು ದೊರೆಯಬಹುದೆಂದೂ ನಿರೀಕ್ಷಿಸಲಾಗಿದ್ದಿತು ಆದರೆ ಪರಸ್ಪರ ಆರ್ಥಿಕ ಹೊಣೆ ಹೊತ್ತುಕೊಳ್ಳುವ ತತ್ವವು ಫಲಕಾರಿಯಾಗಲಿಲ್ಲ ಹೊಣೆಯನ್ನು ಅರಿಯದ ಸಮಿತಿಯ ಸದಸ್ಯರು ತಮ್ಮ ಅಧಿಕಾರದ ದುರುಪಯೋಗ ಮಾಡತೊಡಗಿದರು ಮತ್ತು ಹಣ ಪೂರೈಕೆಯ ಸಂಸ್ಥೆಗಳ ಹಣವು ಸದುಪಯೋಗ ವಾಗದೆ ಉಳಿದು ಮುದ್ದತು ಮೀರಿದ ಸಾಲಗಳ ಪ್ರಮಾಣವು ಬೆಳೆಯತೊಡಗಿ ಕಳವಳಕ್ಕೆ ಎಡೆಗೊಟ್ಟಿತು ಅಲ್ಲದ ಜಿಲ್ಹೆಗಳಲ್ಲಿ ಜಿಲ್ಹಾ ಮಧ್ಯವರ್ತಿ ಸಹಕಾರಿ ಬ್ಯಾಂಕುಗಳು ನೋಂದಾಯಿಸತೊಡಗಿ, ಇವುಗಳು ಮುಂಬಯಿ ಮಧ್ಯವರ್ತಿ ಸಹಕಾರಿ ಬ್ಯಾಂಕಿನಿಂದ ಪ್ರಾಥಮಿಕ ಸಂಘಗಳಿಗೆ ಹಣಪೂರೈಸುವ ಕಾರ್ಯವನ್ನು ತೆಗೆದುಕೊಂಡವು ಹೀಗಾಗಿ ಗ್ಯಾರಂಟಿಂಗ್ ಯೂನಿಯನ್ನುಗಳ ಅಸ್ತಿತ್ವದ ಅವಶ್ಯಕತೆಯು ಕಡಿಮೆಯಾಗತೊಡಗಿತು

೧೯೨೬ರಲ್ಲಿ ಪ್ರಾಂತಿಕ ಸಹಕಾರಿ ಪರಿಷತ್ತು ಮೇಲ್ವಿಚಾರಣೆಯ ಬಗ್ಗೆ ಮತ್ತು ಗ್ಯಾರಂಟಿಂಗ್ ಯೂನಿಯನ್ನುಗಳನ್ನು ಮುಂದುವರಿಸುವ ಬಗ್ಗೆ ವಿಚಾರಿಸಿ ಈ ಸಮಸ್ಯೆಯನ್ನು ವಿಶೇಷ ಸಮಿತಿಗೆ ಒಪ್ಪಿಸಬೇಕೆಂಬ ನಿರ್ಣಯಕ್ಕೆ ಬಂದಿತು ಈ ಸಮಿತಿಯು ಈ ಸಮಸ್ಯೆಯನ್ನು ಸಮಗ್ರವಾಗಿ ವಿಚಾರಿಸಿ ಕೆಳಗಿನ ಶಿಫಾರಸುಗಳನ್ನು ಮಾಡಿತು

೧ ಲೆಕ್ಕ ತಪಾಸಣೆ ಮತ್ತು ಮೇಲ್ವಿಚಾರಣೆಗಳು ಪ್ರತ್ಯೇಕ ಸ್ವತಂತ್ರ ಕಾರ್ಯಗಳಾಗಿರುವದರಿಂದ ಇವೆರಡನ್ನೂ ಒಂದೇ ಸಂಸ್ಥೆಗೆ ಒಪ್ಪಿಸಬಾರದು

೨ ಗ್ಯಾರಂಟಿಂಗ್ ಯೂನಿಯನ್ನುಗಳು, ಅವು ಸಂಘಟಿಸಲ್ಪಟ್ಟ ಉದ್ದೇಶಗಳನ್ನು ಪೂರೈಸದೆ ಹೋಗಿವೆ ಆದುದರಿಂದ ಇವುಗಳನ್ನು ಸುಪರವಾಯಿರ್ಝಿಂಗ್ ಯೂನಿಯನ್ನಿನಂತೆ ಪರಿವರ್ತಿಸಬೇಕು ಇಲ್ಲವೆ ಅವುಗಳನ್ನು ಮುಕ್ತಾಯಗೊಳಿಸಬೇಕು

೩ ಮೇಲ್ವಿಚಾರಣಾ ಸಂಯುಕ್ತ ಸಂಸ್ಥೆಗಳ ಆಡಳಿತೆಯ ಖರ್ಚನ್ನು ಫೀ ( ಅಥವಾ ಶುಲ್ಕದ ) ರೂಪದಿಂದ ಮೇಳಗೂಡಿಸಲು ಪಸೂಲಾಗುವಂತೆ ಸಂಘಗಳ ಒಂದೊಂದು ಉಚಿತ ಗುಂಪನ್ನು ಆವರಿಸುವಂತೆ ಮೇಲ್ವಿಚಾರಣಾ ಸಂಯುಕ್ತ ಸಂಸ್ಥೆಗಳು ರಚಿಸಲ್ಪಡಬೇಕು

ಈ ಶಿಫಾರಸುಗಳನ್ನು ರಜಿಸ್ಟ್ರಾರರು ಒಪ್ಪಿಕೊಂಡರು ಆ ಮೇರೆಗೆ ರಾಜ್ಯದಲ್ಲೆಲ್ಲ ಸುಪರವಾಯಝಿಂಗ್ ಯೂನಿಯನ್ನುಗಳು ಸ್ಥಾಪಿಸಲ್ಪಡತೊಡಗಿದವು ಸದಸ್ಯ ಸಂಘಗಳ ದುಡಿಯುವ ಭಾಂಡವಲಿನ ೧೦೦ಕ್ಕೆ ೧/೨ ದಷ್ಟು ಆಕರಣೆಯು ಸುಪರವಾಯಝಿಂಗ್ ಯೂನಿಯನ್ನುಗಳ ಮುಖ್ಯ ಉತ್ಪನ್ನವಾಗಿದ್ದಿತು ಕೊರತೆಯ ಹಣವನ್ನು ಸರಕಾರವು ಗ್ರ್ಯಾಂಟುಗಳ ಮುಖಾಂತರವಾಗಿ ಮತ್ತು ಮಧ್ಯವರ್ತಿ ಹಣ ಪೂರೈಕೆಯ ಸಂಸ್ಥೆಗಳು ಹಣವನ್ನು ಕೂಡಿಸಿ ತುಂಬಿ ಕೊಡುತ್ತಿದ್ದವು

೧೯೫೨ರಲ್ಲಿ ಪ್ರಾಂತಿಕ ಸಹಕಾರಿ ಪರಿಷತ್ತು ಕೆಳಕಂಡ ಶಿಫಾರಸುಗಳನ್ನು ಮಾಡಿದ ಮೇಲೆ, ಮೇಲ್ವಿಚಾರಣೆ ವ್ಯವಸ್ಥೆಯಲ್ಲಿ ಮೊದಲು ಬಾರಿಗೆ ಬದಲಾವಣೆಗಳು ಕಂಡುಬಂದವು

೧ ಪುಕ್ಕಟ ಲೆಕ್ಕ ಪರಿಶೋಧನೆಯನ್ನು ಮುಂದುವರಿಸಬೇಕು

೨ ೧೦೦ಕ್ಕೆ ೧/೨ ದಂತೆ ಮೇಲ್ವಿಚಾರಣೆಯ ಕರವೆಂದು ಕಡ್ಡಾಯದಿಂದ ಹಾಕಬೇಕು

೩ ಜಿಲ್ಹೆ ಜಿಲ್ಹೆಗೆ ಮೇಲ್ವಿಚಾರಣೆಯ ನಿಧಿಯನ್ನು ಕೂಡಿಹಾಕಿ ಜಿಲ್ಹಾ ಬೋರ್ಡುಗಳ ನಿಯಂತ್ರಣಕ್ಕೆ ಒಪ್ಪಿಸಬೇಕು

೪ ಪ್ರಾಂತಿಕ ಸಹಕಾರಿ ಇನ್ಸ್ಟಿಟ್ಯೂಟದೊಡನೆ ಸಮಾಲೋಚಿಸಿ ರಜಿಸ್ಟ್ರಾರರು ಸುಪರವಾಯಝರರ ವಿಸ್ತೃತವಾದ ಮಧ್ಯವರ್ತಿ ಪಡೆಯನ್ನು ನಿರ್ಮಿಸಬೇಕು

ಈ ಶಿಫಾರಸುಗಳ ಮೇರೆಗೆ ಪ್ರತಿಯೊಂದು ಜಿಲ್ಹೆಯಲ್ಲಿ ತಾತ್ಪೂರ್ತಿಕ್ ಸಮಿತಿಗಳನ್ನು ( Adhoc Committee ) ನೇಮಿಸಲಾಯಿತು ಈ ಸಮಿತಿಯಲ್ಲಿ ಜಿಲ್ಹೆಯ ಅಸಿಸ್ಟಂಟ ರಜಿಸ್ಟ್ರಾರರು, ಬ್ಯಾಂಕ್, ಇನ್ಸ್ಟಿಟ್ಯೂಟ ಮತ್ತು ಸದಸ್ಯ ಸಂಘಗಳ ಪ್ರತಿನಿಧಿಗಳು ಇರುತ್ತಿದ್ದರು ಅಸಿಸ್ಟಂಟ ರಜಿಸ್ಟ್ರಾರರು ಈ ಸಮಿತಿಯ ಚೇರಮನ್ನರಾಗುತ್ತಿದ್ದರು ಈ ಸಮಿತಿಗಳು ಸುಪರವಾಯಝರರ ಕಾರ್ಯದ ವರದಿಗಳನ್ನು ಪರೀಕ್ಷಿಸುತ್ತಿದ್ದವು ಅವರನ್ನು ನೇಮಿಸುವ, ವರ್ಗಾಯಿಸುವ, ಶಿಕ್ಷಿಸುವ ಮತ್ತು ನೌಕರಿಯಿಂದ ಕಿತ್ತೊಗೆಯುವ ಅಧಿಕಾರವು ಈ ಸಮಿತಿಗೆ ಇದ್ದಿತು

ಜಿಲ್ಹೆಯಲ್ಲಿಯ ಲೆಕ್ಕ ತಪಾಸಣೆಯ ಕಾರ್ಯವು ದ್ವಿಗುಣಿತವಾಗುತ್ತಿರುವದನ್ನು ನೋಡಿ ಮುಂಬೈ ಪುನರ್ಘಟನಾ ಸಮಿತಿಯು ತನ್ನ ವರದಿಯಲ್ಲಿ ಪ್ರತಿಕೂಲ ಅಭಿಪ್ರಾಯವನ್ನು ವ್ಯಕ್ತಪಡಿಸಿತು ಸುಪರವಾಯಿಝರರ ಬದಲು ಕೆಲವು ಸಬ್ ಆಡಿಟರರನ್ನಿಡುವದರಿಂದ ಲೆಕ್ಕಪರಿಶೋಧನೆ ಮತ್ತು ಮೇಲ್ವಿಚಾರಣೆ ಕಾರ್ಯ

ಗಳೆರಡೂ ನಡೆಯುವವೆಂದೂ ಈ ಸಮಿತಿಯು ಶಿಫಾರಸು ಮಾಡಿತು ಅಲ್ಲದೆ ಹೀಗೆ ಮಾಡುವದರಿಂದ ಯೋಗ್ಯ ಮೇಲ್ವಿಚಾರಣೆಯೂ ಉತ್ತಮ ಲೆಕ್ಕ ಪರಿಶೋಧನೆಯೂ ಆಗಬಹುದಲ್ಲದೆ ಪ್ರತಿವರುಷವೂ ಈ ಯೂನಿಯನ್ನುಗಳಿಗೆ ಸಹಾಯ ಧನವೆಂದು ಕೊಡಬೇಕಾಗಿರುವ ಹಣವು ಸಹಿತ ಸರಕಾರಕ್ಕೆ ಉಳಿಯ ಬಹುದೆಂದು ಈ ಸಮಿತಿಯು ಅಭಿಪ್ರಾಯಪಟ್ಟಿತು ಆದರೆ ಈ ಶಿಫಾರಸುಗಳನ್ನು ಆಂದೋಲನದಲ್ಲಿಯ ಅಧಿಕಾರೇತರ ಜನರು ಈ ಶಿಫಾರಸುಗಳು ಪ್ರತಿಗಾಮೀ ಎಂದು ಮುಂತಾಗಿ ಉಗ್ರವಾಗಿ ಟೀಕಿಸಿದರು ಅಲ್ಲದೆ ಲೆಕ್ಕ ಪರಿಶೋಧನೆ ಮತ್ತು ಮೇಲ್ವಿಚಾರಣೆಯನ್ನು ಒಂದುಗೂಡಿಸುವದರಿಂದ ಹೆಚ್ಚಿನ ಗಂಡಾಂತರ ಗಳಿವೆಯೆಂದು ಅಧಿಕಾರೇತರ ಜನರು ಅಭಿಪ್ರಾಯಪಟ್ಟರು ೧೯೩೩ರಲ್ಲಿ ಥಾಮಸ್ ಸಮಿತಿಯ ಶಿಫಾರಸುಗಳ ವಿಚಾರಣೆಗೆಂದು ಸರಕಾರವು ದುಂಡುಮೇಜಿನ ಪರಿಷತ್ತೊಂದನ್ನು ಕರೆಯಿತು ಆದರೆ ಈ ಪರಿಷತ್ತು ಈ ಪ್ರಶ್ನೆಯ ವಿಚಾರಕ್ಕೆ ಸಮಿತಿಯೊಂದನ್ನು ನೇಮಿಸಬೇಕೆಂದು ಅಭಿಪ್ರಾಯಪಟ್ಟಿತು ಆ ಮೇರೆಗೆ ಸರಕಾರವು ಒಂದು ಸಮಿತಿಯನ್ನು ನೇಮಿಸಿತು ಆಗಿನ ರಜಿಸ್ಟ್ರಾರರಾಗಿದ್ದ ಶ್ರೀ ಕೆ ಎಲ್ ಪಂಜಾಬಿಯವರು ಈ ಸಮಿತಿಯ ಚೇರಮನ್ನರಾಗಿದ್ದರು ಈ ಸಮಿತಿಯು ಮೇಲ್ವಿಚಾರಣಾ ಸಮಸ್ಯೆಯನ್ನು ಎಲ್ಲ ದೃಷ್ಟಿಯಿಂದಲೂ ವಿಚಾರಿಸಿ ಕೆಳಗಿನ ಶಿಫಾರಸುಗಳನ್ನು ಮಾಡಿತು —

(೧) ಲೆಕ್ಕ ಪರಿಶೋಧನೆ ಮತ್ತು ಮೇಲ್ವಿಚಾರಣೆಗಳೆರಡನ್ನೂ ಕೂಡಿಸ ಬಾರದು

(೨) ಮಧ್ಯವರ್ತಿ ಬ್ಯಾಂಕುಗಳ ಲೆಕ್ಕ ತಪಾಸಣೆ ಮತ್ತು ಮೇಲ್ವಿಚಾರಣೆ ಗಳೆರಡನ್ನೂ ಕೂಡಿಸಬಾರದು

(೩) ಮೇಲ್ವಿಚಾರಣೆಯ ವೆಚ್ಚಕ್ಕೆಂದು ತಗಲುವ ೧/೪ % ದಷ್ಟು ಹಣ ವನ್ನು ಮಧ್ಯವರ್ತಿ ಹಣ ಪೂರೈಕೆಯ ಸಂಸ್ಥೆಗಳು ಕೊಡಬೇಕು

(೪) ಯೂನಿಯನ್ನುಗಳ ಫಂಡುಗಳನ್ನು ಜಿಲ್ಹೆಯ ತಳಹದಿಯ ಮೇಲೆ ಕೂಡಿಹಾಕಬೇಕು

(೫) ಬಿನ್ ಪತ್ತಿನ ಮತ್ತು ಬಿನ್ ಶೇತ್ಕೀ ಸಂಘಗಳೆಲ್ಲವೂ ಸುಪರ ವಾಯಝಿಂಗ್ ಯೂನಿಯನ್ನುಗಳ ಸದಸ್ಯರಾಗುವಂತೆ ಮಾಡಬೇಕು

(೬) ಮುಂಬೈ ಸಹಕಾರಿ ಕಾಯ್ದೆಯ ಮೇರಗೆ ಜಿಲ್ಹಾ ಬೋರ್ಡನ್ನು ಸ್ಥಾಪಿಸಿ ಶಿಕ್ಷಣ ಕೊಡುವದು ಮತ್ತು ಪರಿಷತ್ತುಗಳನ್ನು ಕರಯುವದು ಮೊದಲಾದ ಕಾರ್ಯಗಳನ್ನು ಈ ಬೋರ್ಡಿಗೆ ಒಪ್ಪಿಸಬೇಕು

(೭) ಎಲ್ಲ ಸುಪರವಾಯಝರರಿಗೆ ಒಂದೇರೀತಿಯ ಸಂಬಳವನ್ನು ನಿರ್ದಿಷ್ಟ ಗೊಳಿಸಿ ಪ್ರಾವ್ಹಿಡೆಂಟ ಫಂಡಿನ ಲಾಭವನ್ನು ಅವರಿಗೆ ಅನ್ವಯಿಸಬೇಕು

ಸರಕಾರವು ೬ ನೆಯ ಶಿಫಾರಸೊಂದನ್ನು ಬಿಟ್ಟು ಎಲ್ಲ ಶಿಫಾರಸುಗಳನ್ನು ಒಪ್ಪಿಕೊಂಡಿತು ಆರನೆಯ ಸೂಚನೆಯ ಬಗ್ಗೆ ಮಾತ್ರ ಇನ್ಸ್ಟಿಟ್ಯೂಟ ಮತ್ತು ಸರಕಾರ ಇವುಗಳ ನಡುವೆ ಬಹುದಿನಗಳವರೆಗೆ ಕಲಹವುಳಿಯಿತು

ರಜಿಸ್ಟ್ರಾರರು ಚೇರಮನ್ನರಾಗಿದ್ದುಕೊಂಡ ಪ್ರಾಂತಿಕ ಮೇಲ್ವಿಚಾರಣೆಯ ಬೋರ್ಡ್, ಯೋಜನೆಯನ್ನು ನಿಯಂತ್ರಿಸುವದಕ್ಕಾಗಿಯೂ, ಯೂನಿಯನ್ನುಗಳ ಆಯವ್ಯಯ ಪತ್ರಿಕೆಯನ್ನು ಪರೀಕ್ಷಿಸುವದಕ್ಕಾಗಿಯೂ, ಮತ್ತು ಸರಕಾರ ಮತ್ತು ಪ್ರಾಂತಿಕ ಸಹಕಾರಿ ಬ್ಯಾಂಕಿನಿಂದ ಸ್ವೀಕರಿಸಲ್ಪಟ್ಟ ಗ್ರಾಂಟನ್ನು ಹಂಚುವದಕಾಗಿಯೂ ಸ್ಥಾಪಿಸಲ್ಪಟ್ಟಿತು ಈ ವ್ಯವಸ್ಥೆಯು ೧೯೪೪ರ ವರೆಗ ಮುಂದೊರೆಯಿತು ಆದರೆ ೮-೭-೧೯೪೪ಕ್ಕೆ ಪ್ರಾಂತಿಕ ಮೇಲ್ವಿಚಾರಣಾ ಸಮಿತಿಯು ಈ ವ್ಯವಸ್ಥೆಯು ತೃಪ್ತಿಕರವಾಗಿಲ್ಲವೆಂದು ಮನಗಂಡು ಮೇಲ್ವಿಚಾರಣೆಯ ನೌಕರರ ಹಣಕಾಸಿನ ಜವಾಬ್ದಾರಿಯನ್ನು ಸರಕಾರವು ವಹಿಸಿಕೊಳ್ಳಬೇಕೆಂದೂ ಮತ್ತು ಸುಪರವಾಯಝರರಿಗೆ ಸಹಕಾರಿ ಖಾತೆಯಲ್ಲಿಯ ಇತರ ಸರಕಾರಿ ನೌಕರರಂತೆ ಸ್ಥಾನಮಾನಗಳಿರಬೇಕೆಂದೂ ಶಿಫಾರಸುಮಾಡಿತು ಸರಕಾರವು ಈ ಶಿಫಾರಸುಗಳನ್ನು ಒಪ್ಪಿಕೊಂಡಿತು ಆ ಮೇರೆಗೆ ೧-೪-೧೯೪೬ರಿಂದ ಸುಪರವಾಯಝರರನ್ನು ನೇಮಿಸುವದು, ವರ್ಗಾಯಿಸುವದು, ಮೊದಲಾದ ಅಧಿಕಾರಗಳನ್ನು ಸಹಕಾರಿ ಖಾತೆಗೆ ಕೊಟ್ಟಿತು ಮಧ್ಯವರ್ತಿ ಹಣ ಪೂರೈಕೆಯ ಸಂಸ್ಥೆಗಳು ಮತ್ತು ಪ್ರಾಥಮಿಕ ಪತ್ತಿನ ಸಂಘಗಳು ಮೇಲ್ವಿಚಾರಣೆ ಫಂಡಿಗಾಗಿ ಕೊಡಬೇಕಾದ್ದ ವರ್ಗಣಿಯನ್ನು ನಿಲ್ಲಿಸಲಾಯಿತು ಈ ಪುನರ್ಘಟನೆಯ ಮೇರೆಗೆ ಸುಪರವಾಯಝಿಂಗ್ ಯೂನಿಯನ್ನುಗಳ ಜಿಲ್ಲಾ ಬೋರ್ಡುಗಳು ಅನವಶ್ಯಕವೆಂದು ಭಾವಿಸಿ ಇವುಗಳನ್ನು ಪ್ರಾವಿನ್ಸಿಯಲ್ ಕೋ-ಆಪರೇಟಿವ್ಹ ಇನ್ಸ್ಟಿಟ್ಯೂಟದ ಜಿಲ್ಲಾ ಶಾಖೆಗಳಾಗಿ ಡಿಸ್ಟ್ರಿಕ್ಟ ಕೋ-ಆಪರೇಟಿವ್ಹ ಬೋರ್ಡುಗಳಿಗೆ ಪರಿವರ್ತಿಸಲಾಯಿತು ಸಹಕಾರಿ ಶಿಕ್ಷಣ ಮತ್ತು ಪ್ರಚಾರ ಇವುಗಳು ಈ ಬೋರ್ಡುಗಳ ಕಾರ್ಯಗಳಾದವು ಮೇಲ್ವಿಚಾರಣೆ ಕಾರ್ಯದ ಮಾರ್ಗದರ್ಶನಕ್ಕಾಗಿ ಪ್ರತ್ಯೇಕ ಜಿಲ್ಲಾ ಸಮಿತಿಗಳನ್ನು ನಿಯಮಿಸಲಾಗಿದೆ

೧೯೫೦ ಜೂನ ೩೦ಕ್ಕೆ ಒಟ್ಟು ೧೯೨ ಸುಪರವಾಯಝಿಂಗ್ ಯೂನಿಯನ್ನುಗಳು ಇದ್ದು ಅವುಗಳ ಸದಸ್ಯ ಸಂಘಗಳ ಸಂಖ್ಯೆ ೪೧೦೭ ಇದ್ದಿತು ಈ ಯೂನಿಯನ್ನುಗಳಲ್ಲಿ ೨೫೮ ಸುಪರವಾಯಝರರು ಕೆಲಸಮಾಡುತ್ತಿದ್ದರು ಮತ್ತು ಈ ಯೂನಿಯನ್ನುಗಳಿಗೆ ೧೪೫೬೩೦ ರೂ ಗಳ ಗ್ರಾಂಟು ಕೊಡಲ್ಪಟ್ಟಿದ್ದಿತು ಈ ರಾಜ್ಯದಲ್ಲಿ ೨೨ ಜಿಲ್ಲಾ ಮೇಲ್ವಿಚಾರಣಾ ಸಮಿತಿಗಳಿದ್ದು ಈ ಯೂನಿಯನ್ನುಗಳಲ್ಲದೆ ಸದಸ್ಯ ಸಂಘಗಳ ಮೇಲ್ವಿಚಾರಣೆ ವ್ಯವಸ್ಥೆ ಮತ್ತು ಆಂತರಿಕ ಲೆಕ್ಕ ಪರಿಶೋಧನೆಗಾಗಿ ಸಂಘಟಿಸಲ್ಪಟ್ಟಿದ್ದ ಖರೀದಿ ಮತ್ತು ವಿಕ್ರಿ ಸಂಘಗಳ ಮತ್ತು ವಿವಿಧೋದ್ದೇಶ ಸಂಘಗಳ ಆರು ಫೆಡರೇಶನ್ನುಗಳಿದ್ದವು ಅಲ್ಲದೆ ಗುಜರಾಥದಲ್ಲಿ ಅರ್ಬನ್

ಬ್ಯಾಂಕುಗಳ ಒಂದು ಸುಪರವಾಯರಿಝಿಂಗ್ ಯೂನಿಯನ್ನಿದ್ದು ಅದಕ್ಕ ೭ ಬ್ಯಾಂಕುಗಳು ಸಮಾವೇಶವಾಗಿವೆ ಇತ್ತಿತ್ತಲಾಗಿ ಸರಕಾರವು ಸುಪರವಾಯರಝರರ ನೌಕರ ವರ್ಗವನ್ನು ಸಹಕಾರಿ ಖಾತೆಯ ಕಾಯಂ ನೌಕರ ವರ್ಗವೆಂದು ಪರಿಗಣಿಸಿದೆ ಈ ರಾಜ್ಯದಲ್ಲಿಯ ಮೇಲ್ವಿಚಾರಣೆಯ ಇತಿಹಾಸದ ಮೇಲ್ಕಂಡ ವಿಮರ್ಶೆಯಿಂದ ಕಂಡುಬರುವದೇನಂದರೆ, ಪ್ರತಿ ೫ ವರ್ಷಕ್ಕೊಮ್ಮೆ ೧ ಸಮಿತಿಯು ನೇಮಿಸಲ್ಪಟ್ಟಿದ್ದು ಆ ಸಮಿತಿಯು ಮೇಲ್ವಿಚಾರಣೆಯ ಯೋಜನೆಯ ಸುಧಾರಣೆಯ ಬಗ್ಗ ಒಂದಿಲ್ಲೊಂದು ಬಗೆಯ ಸೂಚನೆಯನ್ನು ಮಾಡಿದ

## ಮೇಲ್ವಿಚಾರಣೆಯ ಸದ್ಯದ ಪರಿಸ್ಥಿತಿ :—

ಸದ್ಯಕ್ಕೆ ಅಸ್ತಿತ್ವದಲ್ಲಿರುವ ಮೇಲ್ವಿಚಾರಣೆಯ ವ್ಯವಸ್ಥೆಯು, ಕಾಳಸ ಬ್ಯಾಂಕು ಮತ್ತು ವಿವಿಧೋದ್ದೇಶ ಸಂಘಗಳನ್ನೊಳಗೊಂಡ ಶೇತ್ಕೀ ಪತ್ತಿನ ಸಂಘಗಳಿಗೆ ಮಾತ್ರ ಅನ್ವಯಿಸುತ್ತದೆ ಕಳೆದ ಕಲವು ವರ್ಷಗಳಲ್ಲ ಸಂಘಗಳ ಸಂಖ್ಯೆಯು ಹೆಚ್ಚಾಗತೊಡಗಿರುವದರಿಂದ ಸುಪರವಾಯರಿಝಿಂಗ್ ಯೂನಿಯನ್ನುಗಳಿಗೆ ಸಂಬಂಧಿಸಿದ ಸಂಘಗಳ ಯೋಗ್ಯ ಮೇಲ್ವಿಚಾರಣೆಯ ಕಾರ್ಯಕ್ಕಾಗಿ ಸದ್ಯದ ಮೇಲ್ವಿಚಾರಣೆಯ ನೋಕರ ವರ್ಗವು ಸಾಕಾಗುವಂತಿಲ್ಲ ಇತ್ತಿತ್ತಲಾಗಿ ಸರಕಾರವು ಮೇಲ್ವಿಚಾರಣೆಯ ನೌಕರ ವರ್ಗವನ್ನು ಹಚ್ಚಿಸಿರುವದು ಆದರೂ ಪಂಚವಾರ್ಷಿಕ ಯೋಜನೆಯ ಮೇರೆಗೆ ೧೦೦ಕ್ಕ ೭೫ ರಷ್ಟು ಹಳ್ಳಿಗಳನ್ನು ೧೦೦ಕ್ಕ ೬೦ ರಷ್ಟು ಹಳ್ಳಿಯ ಜನಸಂಖ್ಯೆಯನ್ನು ಸಹಕಾರಿ ಆಂದೋಲನದಲ್ಲಿ ಒಳಮಂತ ಮಾಡಬೇಕಂದು ನಿರ್ಧರಿಸಿರುವದರಿಂದ ಸಂಘಗಳ ಸಂಖ್ಯೆ ಮತ್ತು ಅವುಗಳ ಚಟುವಟಿಕೆಗಳು ಹೆಚ್ಚಾಗುವದರಿಂದ ಈಗ ಹೆಚ್ಚಿಗೆ ಕೊಟ್ಟಿರುವ ಮೇಲ್ವಿಚಾರಣೆಯ ನೋಕರ ವರ್ಗವು ಕಡಿಮೆಬೀಳಬಹುದು ಸಂಘಗಳು ಯೋಗ್ಯ ಹಾಗೂ ಕಾರ್ಯಕ್ಷಮ ರೀತಿಯಲ್ಲಿ ಸಾಗಬೇಕಾದರೆ ವೇಳೆಗೆ ಸರಿಯಾಗಿ ಉತ್ತಮ ಮೇಲ್ವಿಚಾರಣೆಯು ಅತ್ಯವಶ್ಯ ಮೇಲ್ವಿಚಾರಣೆಯ ನೋಕರ ವರ್ಗವು ಹೆಚ್ಚು ಕಾರ್ಯಕ್ಷಮತೆಯುಳ್ಳದ್ದಾಗಬೇಕಾದರೆ ಯೋಗ್ಯ ತರಬೇತಿಯನ್ನು ಕೊಡುವದು ಅತ್ಯವಶ್ಯ

## ೩. ತಪಾಸಣೆ ( ಇನ್ಸ್ಪೆಕ್ಶನ್ )

ತಪಾಸಣೆಯೆಂದರೆ ರಜಿಸ್ಟ್ರಾರರು ಮತ್ತು ಅವರ ನೌಕರ ವರ್ಗವು, ಮಧ್ಯವರ್ತಿ ಬ್ಯಾಂಕು, ಯುನಿಯನ್ ಮತ್ತು ಸ್ಥಾನಿಕ ಸಂಘಟಕರು ಸಹಕಾರೀ ಸಂಘಗಳ ಮೇಲ್ವಿಚಾರಣೆ ಮಾಡುವ ಒಂದು ಸಾಧನವು. ಬೇರೊಂದೆಡೆಗೆ ಹೇಳಿದಂತೆ ಆಂದೋಲನದ ಪ್ರಾರಂಭಕ್ಕೆ ರಜಿಸ್ಟ್ರಾರರು ಮತ್ತು ಅಸಿಸ್ಟಂಟ ರಜಿಸ್ಟ್ರಾರರು ಕಾಲಕಾಲಕ್ಕೆ ಸಂಘಗಳ ಲೆಕ್ಕಪತ್ರಗಳ ತಪಾಸಣೆ ಮಾಡಿ ಅವುಗಳ ಮೇಲ್ವಿಚಾರಣೆಯನ್ನು ಮಾಡುತ್ತಿದ್ದರು ಆ ತರುವಾಯ ಸಂಘಗಳ ಸಂಘಟನೆಗೆ ಹೊಣೆಗಾರರಾಗಿದ್ದ ಗೌರವ ಸಂಘಟಕರ ಮುಖಾಂತರ ಅವರ ಕಾರ್ಯಕ್ಷೇತ್ರದಲ್ಲಿಯ ಸಂಘಗಳ

ಲೆಕ್ಕ ತಪಾಸಣೆಯು ಸಾಗತೊಡಗಿತು. ಆದರೆ ಆಂದೋಲನವು ಬೆಳೆಯು ತೊಡಗಿದಂತೆ, ಸಹಕಾರಿ ಸಂಘಗಳು ನಿಯಮಿಸಿದ ಅಥವಾ ಆ ಉದ್ದೇಶಕ್ಕಾಗಿ ಸಂಘಟಿಸಲ್ಪಟ್ಟ ಫೆಡರಲ್ ಸಂಸ್ಥೆಗಳು ನಿಯಮಿಸಿದ ವಿಶೇಷ ನೌಕರ ವರ್ಗದಿಂದ ಲೆಕ್ಕ ತಪಾಸಣೆಯಾಗಬೇಕೆಂದು ಅನಿಸತೊಡಗಿತು. ಆ ತರುವಾಯ ಮೇಲ್ವಿಚಾರಣೆಯೆಂಬ ಮೂಲ ಶಬ್ದವು, ನೌಕರವರ್ಗವು ಮಾಡುತ್ತಿದ್ದ ಕಾರ್ಯದ ಸ್ವರೂಪದ ಮೇರೆಗೆ "ಮೇಲ್ವಿಚಾರಣೆ" ಮತ್ತು "ಲೆಕ್ಕ ತಪಾಸಣೆ" ಎಂದು ವಿಭಾಗಿಸಲ್ಪಟ್ಟಿತು. ಮೇಲ್ವಿಚಾರಣೆಯ ಕಾರ್ಯವನ್ನು ಹಣಕಾಸಿನ ಸಂಸ್ಥೆಯ ನೌಕರ ವರ್ಗವು ಮಾಡಿದರೆ ಅದಕ್ಕೆ "ಲೆಕ್ಕ ತಪಾಸಣೆ" ಎಂದೂ, ಸುಪರವಾಯ ಝಿಂಗ್ ಯೂನಿಯನ್ನದ ನೌಕರ ವರ್ಗವು ಮಾಡಿದರೆ ಅದಕ್ಕೆ ಮೇಲ್ವಿಚಾರಣೆಯೆಂದೂ ಕರೆಯಲಾಯಿತು. ಸುಪರವಾಯಜಿಂಗ ಯೂನಿಯನ್ನುಗಳನ್ನು ಈ ಉದ್ದೇಶಕ್ಕಾಗಿಯೇ ಸ್ಥಾಪಿಸಲಾಗಿದೆ. ರಜಿಸ್ಟ್ರಾರ ಅಥವಾ ಅವರ ನೌಕರ ವರ್ಗದಿಂದ ಲೆಕ್ಕ ಪರಿಶೋಧನೆಯು ನಡೆಯಬೇಕೆಂದು ಕಾಯ್ದೆಯಲ್ಲಿ ಹೇಳಲಾಗಿದ್ದರೂ ಈ ಕಾರ್ಯವನ್ನು ವರ್ಷಕ್ಕೆ ಒಂದು ಬಾರಿ ಮಾಡಲಾಗುತ್ತಿದೆ. ರಜಿಸ್ಟ್ರಾರ ಮತ್ತು ಅವರ ನೌಕರ ವರ್ಗವು ಮಾಡುತ್ತಿದ್ದ ಲೆಕ್ಕ ತಪಾಸಣೆಯು ಕೂಡ ನಿಯತ ಕಾಲಿಕವಾಗಿದ್ದಿತು. ಆದರೆ ಆಂದೋಲನವು ಭರದಿಂದ ಬೆಳೆಯತೊಡಗಿದಂತೆ, ಸಂಘಗಳ ನಿಯತಕಾಲಿಕ ಲೆಕ್ಕ ತಪಾಸಣೆಯು ಸಹಿತ ರಜಿಸ್ಟ್ರಾರ ಮತ್ತು ಅವರ ನೌಕರ ವರ್ಗಕ್ಕೆ ಸಾಧ್ಯವಾಗದ ಹೋಯಿತು. ಹೀಗಾಗಿ ಈ ಸಂಘಗಳಿಗೆ ಸಾಲ ಕೊಡುವ ಮಧ್ಯವರ್ತಿ ಹಣಕಾಸಿನ ಸಂಸ್ಥೆಗಳು, ಸಂಘಗಳ ಚಾಲನೆಯ ಬಗ್ಗೆ ಯೋಗ್ಯ ಮೇಲ್ವಿಚಾರಣೆಯಾಗುವ ಬಗ್ಗೆ ಬೇರೊಂದು ವ್ಯವಸ್ಥೆಯನ್ನು ಮಾಡಬೇಕೆಂದು ವಿಚಾರಿಸತೊಡಗಿದವು. ಮಧ್ಯವರ್ತಿ ಬ್ಯಾಂಕುಗಳು ಈ ಸಂಘಗಳಿಗೆ ಕೊಟ್ಟ ಸಾಲ ಹೆಚ್ಚಾಗತೊಡಗಿದಂತೆ, ತಮ್ಮ ಸ್ವಂತ ನೌಕರ ವರ್ಗದಿಂದಲೇ ಸಾಲಪಡೆದುಕೊಂಡ ಸಂಘಗಳ ಲೆಕ್ಕ ತಪಾಸಣೆ ಮಾಡುವ ವ್ಯವಸ್ಥೆಯನ್ನು ತಾವೇ ಮಾಡಿಕೊಂಡವು. ಆದುದರಿಂದ ಈ ಸಂಸ್ಥೆಗಳು ತಮ್ಮ ಸದಸ್ಯ ಸಂಘಗಳ ಲೆಕ್ಕ ತಪಾಸಣೆಗಾಗಿ ವಿಶೇಷ ನೌಕರ ವರ್ಗವನ್ನೇ ನಿಯಮಿಸಿಕೊಂಡವು. ಇಂಥ ಲೆಕ್ಕ ತಪಾಸಣೆಯಿಂದ ತಾವು ಹಣ ಪೂರೈಸಿದ ಸದಸ್ಯ ಸಂಘಗಳ ಆರ್ಥಿಕ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಮಧ್ಯವರ್ತಿ ಹಣ ಪೂರೈಕೆಯ ಸಂಸ್ಥೆಗಳಿಗೆ ಅನುಕೂಲವಾಯಿತು. ಅಲ್ಲದೆ ಸಂಘಗಳಿಗೆ ತಾವು ಕೊಟ್ಟ ಸಾಲದ ಹಣವು ಸುರಕ್ಷಿತವಾಗಿರುವದೋ ಇಲ್ಲವೋ ಮತ್ತು ನಿಯಮಿತವಾಗಿ ಸಂಘಗಳು ಸಾಲವನ್ನು ತಿರುಗಿಕೊಡಬಹುದೋ ಇಲ್ಲವೋ ಎಂಬುದನ್ನು ಲೆಕ್ಕ ತಪಾಸಣೆಯಿಂದ ಅರಿತುಕೊಳ್ಳಲು ಅನುವಾಯಿತು. ಸಾಲದ ವಸೂಲಿ ಕಾರ್ಯಕ್ಕೆ ಹೆಚ್ಚು ಲಕ್ಷ್ಯಕೊಡಲು ಶಕ್ಯವಾಯಿತು.

ರಜಿಸ್ಟ್ರಾರ್, ಜಾಯಿಂಟ ರಜಿಸ್ಟ್ರಾರ್, ಡಪ್ಯುಟಿ ರಜಿಸ್ಟ್ರಾರ್, ಅಸಿಸ್ಟಂಟ ರಜಿಸ್ಟ್ರಾರ್, ಡಿಸ್ಟ್ರಿಕ್ಟ ಕೋ-ಆಪರೇಟಿವ್ಹ ಆಫೀಸರರು, ಮತ್ತು ಅಸಿಸ್ಟಂಟ್ ಡಿಸ್ಟ್ರಿಕ್ಟ ಕೋ-ಆಪರೇಟಿವ್ಹ ಆಫೀಸರರು, ಸಂಘಗಳ ತಪಾಸಣೆ ಮಾಡಿ ಅವುಗಳ ವರದಿಗಳನ್ನು ಕಳಿಸಿಕೊಡುತ್ತಾರೆ. ಆದರೆ ಕಾರ್ಯ ಬಾಹುಲ್ಯದ ಮೂಲಕ

ರಜಿಸ್ಟ್ರಾರ್ ಮತ್ತು ಜಾಯಿಂಟ್ ರಜಿಸ್ಟ್ರಾರರಿಗೆ ಸಂಘಗಳ ತಪಾಸಣೆಗಾಗಿ ಹೆಚ್ಚು ವೇಳೆಯು ಸಿಗುವಂತಿಲ್ಲ ಆದರೆ ಡೆಪ್ಯುಟಿ ರಜಿಸ್ಟ್ರಾರರು, ಅಸಿಸ್ಟಂಟ್ ರಜಿಸ್ಟ್ರಾರರು ಮತ್ತು ಇತರ ಜಿಲ್ಹಾ ನೌಕರ ವರ್ಗದವರು ಸಂಘಗಳ ತಪಾಸಣೆಯನ್ನು ಮಾಡುತ್ತಾರೆ ಈ ಅಧಿಕಾರಿಗಳು ತಪಾಸಣೆಗಾಗಿ ಪ್ರತಿ ತಿಂಗಳು ಪ್ರವಾಸ ಕೈಕೊಳ್ಳುತ್ತಾರೆ ಹೀಗೆ ತಪಾಸಣೆ, ಸಂದರ್ಶನ, ಲೆಕ್ಕ ತಪಾಸಣೆಯ ವರದಿಯನ್ನು ಓದುವದು ಮೊದಲಾದ ಕಾರ್ಯಗಳಿಂದ ಸಹಕಾರಿ ಖಾತೆಯ ಆಡಳಿತೆಯ ನೌಕರ ವರ್ಗವು ಆಂದೋಲನದ ಪರಿಸ್ಥಿತಿಯನ್ನು ಅರಿತುಕೊಳ್ಳುವದಲ್ಲದೆ ಸಂಘಗಳ ಚಾಲನೆಯನ್ನೂ ನಿಯಂತ್ರಿಸುತ್ತದೆ

## ೪. ಸಹಕಾರಿ ಶಿಕ್ಷಣ.

ಸಹಕಾರಿ ಆಂದೋಲನದ ಬೆಳವಣಿಗೆಯ ಕಾರ್ಯವಲ್ಲಿ ಸಹಕಾರಿ ಶಿಕ್ಷಣಕ್ಕೆ ಮಹತ್ವದ ಪಾತ್ರವಿದೆ ಸಹಕಾರವು ಜನತೆಯ ಆಂದೋಲನವಾಗಿದೆ ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ ಅಂದಬಳಿಕ ಆಂದೋಲನದ ಯಶಸ್ಸು ಸಾಮಾನ್ಯವಾಗಿ ಅದರಲ್ಲಿಯ ಜನರ ಶಿಕ್ಷಣ ಮಟ್ಟವನ್ನವಲಂಬಿಸಿದ ಜಾಯಿಂಟ ಸ್ಟಾಕ್ ಕಂಪನಿಗಳ ಪರಿಸ್ಥಿತಿಯು ಬೇರೆಯಾಗಿದೆ ಆದರೆ ಸಹಕಾರಿ ಆಂದೋಲನವು ಮಾತ್ರ ಅದರ ಸದಸ್ಯರಿಗೆ ಸಹಕಾರ ಅಂದರೇನು, ಅದರ ಉದ್ದೇಶಗಳಾವವು ಎಂಬ ಕಲ್ಪನೆ ಇರದೆ ಇದ್ದರೆ, ಎಂದಿಗೂ ಯಶಸ್ವಿಯಾಗಲಾರದು

ಸ್ಥೂಲವಾಗಿ, ಕೆಳಗೆ ತೋರಿಸಿರುವಂತೆ ಸಹಕಾರಿ ಶಿಕ್ಷಣ ಸಂಘಗಳಿರುತ್ತವೆ

೧ ಸಂಘಗಳ ಸದಸ್ಯರಿಗೆ ಶಿಕ್ಷಣ ಕೊಡುವದು

೨ ಸಂಘಗಳ ನೌಕರ ವರ್ಗಕ್ಕೆ ಶಿಕ್ಷಣ ಕೊಡುವದು

೩ ಸಾಮಾನ್ಯ ಸಾರ್ವಜನಿಕರಿಗೆ ಶಿಕ್ಷಣ ಕೊಡುವದು

೪ ಅಧಿಕಾರಿಗಳಿಗಾಗಿ ಶಿಕ್ಷಣ

೫ ಸಹಕಾರಿ ಕಾರ್ಯಕರ್ತರ ಶಿಕ್ಷಣ

ಮೊದಲನೆಯ ತತ್ವದಂತೆ, ಸದಸ್ಯರೆಲ್ಲರೂ ತಮ್ಮ ಸಂಘವು ಸ್ಥಾಪಿಸಲ್ಪಟ್ಟ ಉದ್ದೇಶದ ಮೂಲಭೂತ ತತ್ವಗಳನ್ನು ಅರಿತಿರಬೇಕು. ಅಲ್ಲದೆ ಅವರು ಸಂಘದ ಆಂತರಿಕ ಆಡಳಿತೆಯ ಜ್ಞಾನವನ್ನೂ ಮಾಡಿಕೊಳ್ಳಬೇಕು, ಅಂದರೆ ಅವರಿಗೆ ಸಂಘದ ಸಂಚಾಲನೆಯಲ್ಲಿ ಹೆಚ್ಚಿನ ಆಸ್ಥೆವಹಿಸಲು ಅನುಕೂಲವಾಗುತ್ತದ

ಎರಡನೆಯದಾಗಿ, ಸಹಕಾರವು ಈಗ ಮೊದಲಿನಂತೆ ಸಾಮಾನ್ಯ ಆಂದೋಲನವಾಗಿಲ್ಲ ಈಗ ಅದು ಅನೇಕ ಸ್ವರೂಪಗಳಲ್ಲಿ ಬೆಳವಣಿಗೆ ಹೊಂದಿದ್ದು ಸಂಘಗಳು ಅನೇಕಾನೇಕ ಶಾಸನಗಳನ್ನೂ ನಿಯಮಗಳನ್ನೂ ಅನುಸರಿಸಬೇಕಾಗುವದು ಸಂಘದ ಕಾರ್ಯಕಲಾಪಗಳಿಗಾಗಿ ಅನೇಕಾನೇಕ ಪುಸ್ತಕ ಮತ್ತು ರಜಿಷ್ಟರುಗಳನ್ನು ಇಡಬೇಕಾಗುವದು, ಮತ್ತು ಮೇಲಿಂದ ಮೇಲೆ ಬೇರೆ ಬೇರೆ ಅಧಿಕಾರಿಗಳಿಗೆ ವರದಿಗಳನ್ನು ಕಳಿಸಿಕೊಡಬೇಕಾಗುವದು ಈ ಎಲ್ಲ ದೃಷ್ಟಿಯಿಂದ ಸಂಘಗಳಲ್ಲಿ ಯೋಗ್ಯ ತರಬೇತಿ ಹೊಂದಿದ ನೌಕರರೇ ಇರಬೇಕೆಂಬುದನ್ನು ಒತ್ತಿ ಹೇಳುವ ಅವಶ್ಯಕತೆ ಇಲ್ಲ

ಮೂರನೆಯದಾಗಿ, ಸಾರ್ವಜನಿಕರಿಗೆ ಸಹಕಾರ ಅಂದರೇನು ಮತ್ತು ಅದನ್ನು ಹೇಗೆ ಅನುಸರಿಸಲಾಗುತ್ತದೆ ಎಂಬ ಜ್ಞಾನವು ಇರುವದವಶ್ಯ ಸಹಕಾರಿ ಸಂಸ್ಥೆ ಮತ್ತು ಸಹಕಾರಿ ಖಾತೆಯವರು ಪ್ರಚಾರ, ಭಾಷಣ ಮತ್ತು ಚಲಚಿತ್ರಗಳಿಂದ ಸಾರ್ವಜನಿಕರಿಗೆ ಸಹಕಾರದ ಬಗ್ಗೆ ಯೋಗ್ಯ ಜ್ಞಾನ ಮಾಡಿಕೊಡಬೇಕು.

ಈ ದೃಷ್ಟಿಯಲ್ಲಿ ಯೋಜನಾ ಸಮಿತಿಯು ಸಹಕಾರದ ಬಗ್ಗೆ ಹೇಳಿರುವ ಮಾತುಗಳು ಗಮನಾರ್ಹವಾಗಿವೆ ಯೋಜನಾ ಸಮಿತಿಯು ಹೇಳಿರುವದೇನಂದರೆ, " ಸಹಕಾರಿಗಳು, ಉತ್ಪಾದನೆ, ಹಣಕಾಸು, ಮಾರಾಟ, ವಿತರಣೆ ಮತ್ತು ರಚನೆ ಮೊದಲಾದ ಕಾರ್ಯಗಳನ್ನೆಲ್ಲ ಸಮರ್ಥ ರೀತಿಯಲ್ಲಿ ಮತ್ತು ಸದಸ್ಯರಿಗೂ ಸಮಾಜಕ್ಕೂ ಸಮಾಧಾನಕರವಾಗುವ ರೀತಿಯಲ್ಲಿ ಮಾಡುತ್ತ ಹೋಗುವದರ ಮೇಲೆ ಸಹಕಾರದ ಅಂತಿಮ ಯಶಸ್ಸು ನಿಂತಿದೆ ಕೆಲವೊಂದು ಪ್ರಸಂಗಗಳಲ್ಲಿ ಸಹಕಾರದ ಜ್ಞಾನ ಅಥವಾ ಅನುಭವವಿಲ್ಲದ ಜನರು ಸಂಘಟಿಸಿ ಆಡಳಿತೆ ನಡೆಸುತ್ತಾರೆ. ಈ ಕಾರಣದಿಂದಲೇ ಸಂಘಗಳು ಎಷ್ಟೋ ಕಡೆಗೆ ಅಯಶಸ್ವಿಯಾಗಿವೆಯಲ್ಲದೆ ದೇಶದಲ್ಲಿ ಆಂದೋಲನವು ಒಂದೇ ಸಮನಾಗಿ ಅಥವಾ ಏಕರೂಪವಾಗಿ ಬೆಳೆದುಕೊಂಡಿಲ್ಲ. ಎಷ್ಟೋ ಆಡಳಿತೆಯ ಮತ್ತು ಮೇಲ್ವಿಚಾರಣೆಯ ಕಾರ್ಯಗಳನ್ನು ನಡೆಸುವದಕ್ಕೆ ವಿಶೇಷ ಮತ್ತು ತಾತ್ವಿಕ ಜ್ಞಾನ ಅತ್ಯವಶ್ಯವಿರುತ್ತದೆ. ಆದುದರಿಂದ ಸಹಕಾರಿ ಸಂಘಗಳು ತರಬೇತಿ ಹೊಂದಿದ ಜನರನ್ನೇ ನೌಕರ ವರ್ಗಕ್ಕೆ ಸೇರಿಸಿಕೊಳ್ಳಬೇಕು, ಮತ್ತು ಇದ್ದ ನೌಕರರಿಗೆ ಯೋಗ್ಯ ತರಬೇತು ಕೊಡಿಸಬೇಕು. "

ಈ ರಾಜ್ಯದಲ್ಲಿಯು ಸಹಕಾರಿಗಳು ಆಂದೋಲನೆಯ ಬೆಳವಣಿಗೆಯ ದೃಷ್ಟಿಯಿಂದ ಸಹಕಾರೀ ಶಿಕ್ಷಣದ ಮಹತ್ವವನ್ನರಿತುಕೊಂಡು ಅದಕ್ಕಾಗಿ ಮೇಲಿಂದ ಮೇಲೆ ಹಲವಾರು ಕ್ರಮಗಳನ್ನು ಅನುಸರಿಸುತ್ತಲೇ ನಡೆದಿದ್ದಾರ ಸಹಕಾರಿ ಶಿಕ್ಷಣವು ಈ ರಾಜ್ಯದಲ್ಲಿ ೧೯೧೮ ರಲ್ಲಿ ಪ್ರಾರಂಭವಾಯಿತು. ದಿವಂಗತ ಶ್ರೀ ಜ ಕೆ ಗೋಖಲೆ ಅವರು ತಮ್ಮ ಸಹೋದ್ಯೋಗಿ ಶ್ರೀ ಎಸ್ ಎಮ್ ಜೋಶಿ ಮತ್ತಿತರ ಮಿತ್ರರ ಸಹಾಯ ಪಡೆದು ಮುಂಬೈ ನಗರದಲ್ಲಿ ಸಹಕಾರದ ಧನ ಸಹಾಯದಿಂದ ೧೯೧೮ ರಿಂದ ೧೯೧೭ ರ ವರೆಗೆ ಸಹಕಾರಿ ಸಂಘಗಳ ಕಾರ್ಯದರ್ಶಿಗಳ

ಶಿಕ್ಷಣವನ್ನು ನಡೆಯಿಸಿದರು ಅಲ್ಲದೆ ಅವರು ೧೯೧೪ ರಲ್ಲಿ ಸಹಕಾರಿ ವಾಚನಾಲಯವನ್ನು ತೆರೆದು 'ಸರ್ವಂಟ್ಸ್ ಆಫ್ ಇಂಡಿಯಾ' ಸಂಘದ ಕಚೇರಿಯಲ್ಲಿ ಈ ವಾಚನಾಲಯವನ್ನು ನಡೆಸುತ್ತಿದ್ದರು ವೈಯಕ್ತಿಕ ಒಡೆತನದಲ್ಲಿ ನಡೆಯುತ್ತಿದ್ದ ವಾಣಿಜ್ಯ ಮತ್ತು ಸಹಕಾರ ಎಂಬ ವಾರಪತ್ರಿಕೆಯಲ್ಲಿಯೂ ಅವರು ಸಹಕಾರಿ ಆಂದೋಲನದ ಬಗ್ಗೆ ಲೇಖಗಳನ್ನು ಪ್ರಕಟಿಸುತ್ತಿದ್ದರು ೧೯೧೭ ರಲ್ಲಿ ಪ್ರಾಂತಿಕ ಸಹಕಾರಿ ಪರಿಷತ್ತು ಸಹಕಾರಿ ಕಾರ್ಯದರ್ಶಿಗಳ ಶಿಕ್ಷಣ ಸಮಿತಿಯೊಂದನ್ನು ನಿಯಮಿಸಿತು ಒಂದು ವಾರದ 'ಜ್ಯೂನಿಯರ್' ವರ್ಗ, ೧೦ ದಿನಗಳ 'ಸೀನಿಯರ್' ವರ್ಗ ಹೀಗೆ ಎರಡು ವರ್ಗಗಳನ್ನು ತೆರೆಯಲು ನಿಶ್ಚಯಿಸಿತು ಮೊದಲನೇ ವರ್ಗವನ್ನು ಹಳ್ಳಿಗಳಲ್ಲಿಯೂ ೨ ನೆಯದನ್ನು ಮುಂಬಯಿಯಲ್ಲಿಯೂ ತೆರೆಯಲಾಯಿತು ಈ ಯೋಜನೆಯನ್ನು ೧೯೧೮ ರಲ್ಲಿ ಜಾರಿಗೆ ತರಲಾಯಿತು ೧೯೨೦ ರ ವರೆಗೆ ಇನ್ಸ್ಟಿಟ್ಯೂಟು ಈ ಕಾರ್ಯವನ್ನು ವಹಿಸಿಕೊಂಡಿತ್ತು ೧೯೨೧ ರ ತರುವಾಯ ಈ ಕಾರ್ಯವನ್ನು ಇನ್ಸ್ಟಿಟ್ಯೂಟಿನ ಶಾಖೆಗಳಿಗೆ ಒಪ್ಪಿಸಲಾಯಿತು ಗ್ರಾಮಾಂತರ ಸಂಘಗಳ ಕಾರ್ಯಕಾರಿ ಮಂಡಳದ ಸದಸ್ಯರಿಗೆ ದಿನ ಅಥವಾ ೨ ದಿನಗಳ ಪ್ರಾಥಮಿಕ ಸಹಕಾರಿ ವರ್ಗಗಳನ್ನು ತೆರೆದು ಇನ್‌ಸ್ಟಿಟ್ಯೂಟಿನ ಶಾಖೆಗಳ ಕಾರ್ಯವನ್ನು ಬೆಳಿಯಿಸಲಾಯಿತು ಅತಿ ಮಹತ್ವದ ಬೆಳವಣಿಗೆಯೆಂದರೆ, ೧೯೨೫ ರಿಂದ ಸಂಘಟಿಸಲ್ಪಟ್ಟ ೩ ತಿಂಗಳುಗಳ ಸುಪರವಾಯಝರರ ತರಗತಿ ವರ್ಗಗಳು ೧೯೨೬ ರಲ್ಲಿ ಇನ್‌ಸ್ಟಿಟ್ಯೂಟವು ಮಧ್ಯವರ್ತಿ ಶಿಕ್ಷಣ ಸಮಿತಿಯನ್ನು ( Board ) ನಿಯಮಿಸಿತು ಈ ಸಮಿತಿಯು ಸಹಕಾರಿ ಶಿಕ್ಷಣ ಯೋಜನೆಯನ್ನೆಲ್ಲ ಪರಿಶೀಲಿಸಿ ೧೯೨೭ ರಲ್ಲಿ ಕೆಳಗಿನ ಯೋಜನೆಯನ್ನು ಸಿದ್ಧಪಡಿಸಿತು

(೧) ಕಾರ್ಯಕಾರಿ ಮಂಡಲದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗಾಗಿ ಮೂರುದಿನಗಳ ಪ್ರಾಥಮಿಕ ವರ್ಗಗಳು

(೨) ಗ್ರಾಮಾಂತರ ಕಾರ್ಯದರ್ಶಿಗಳಿಗಾಗಿ ೩ ತಿಂಗಳುಗಳ ವರ್ಗ

(೩) ಪಟ್ಟಣ ಸಂಘಗಳ ಕಾರ್ಯದರ್ಶಿಗಳಿಗಾಗಿ ೬ ತಿಂಗಳುಗಳ ವರ್ಗ

(೪) ಬ್ಯಾಂಕ ಇನಸ್ಪೆಕ್ಟರರ ಸಲುವಾಗಿ ೧ ವರ್ಷದ ವರ್ಗ

(೫) ಒಂದು ವರ್ಷದ ಸುಪರವಾಯಿಝರರ ಡಿಪ್ಲೋಮಾ ವರ್ಗ

(೬) ೧೫ ದಿನಗಳ ಸಹಕಾರಿ ಸರ್ಟಿಫಿಕೇಟ ವರ್ಗ

(೭) ಒಂದು ವರ್ಷದ ಸಹಕಾರಿ ಡಿಪ್ಲೋಮಾ ವರ್ಗ

(೮) ೬ ತಿಂಗಳುಗಳ ಬ್ಯಾಂಕ ಅಧಿಕಾರಿಗಳ ವರ್ಗ

ವಿಶ್ವವಿದ್ಯಾಲಯಗಳಂತೆ ಕೇವಲ ಪರೀಕ್ಷಾ ಮಂಡಳದಂತೆ ವರ್ತಿಸಲು ಈ ಸಮಿತಿಗೆ ಬೇಕಾಗಿರಲಿಲ್ಲ ಆದರೆ ಈ ಸಮಿತಿಯು ಪುಣೆ 'ಸುರತ, ಧಾರವಾಡಗಳಲ್ಲಿ ಪ್ರಾದೇಶಿಕ ಸಹಕಾರಿ ಶಾಲೆಗಳನ್ನೇ ಪ್ರಾರಂಭಿಸಿತು ೧೯೨೮ ರಿಂದ ೩೫ ರ ವರಗೆ ಈ ಶಾಲೆಗಳಲ್ಲಿ ಶಿಕ್ಷಣ ಪಡೆದ ವಿದ್ಯಾರ್ಥಿಗಳ ಸಂಖ್ಯೆಯನ್ನು ಕೆಳಗೆ ಕೊಡಲಾಗಿದೆ

| | | |
|---|---|---|
| (೧) | ಕಾರ್ಯದರ್ಶಿಗಳ ಪ್ರಶಸ್ತಿಪತ್ರಿಕ (ಸರ್ಟಿಫಿಕೇಟ) ಪರೀಕ್ಷೆ | ೧೪೨೭ |
| (೨) | ಸುಪರವಾಯಝರರ ಡಿಪ್ಲೋಮಾ ಪರೀಕ್ಷೆ | ೪೨೮ |
| (೩) | ಬ್ಯಾಂಕ ಇನಸ್ಪೆಕ್ಟರರ ಪ್ರಶಸ್ತಿ ಪತ್ರಿಕೆಯ ಪರೀಕ್ಷೆ | ೧೩೧ |

೧೯೩೬ ರಲ್ಲಿ, ಭಾರತ ಸರಕಾರವು ಸಹಕಾರಿ ಶಿಕ್ಷಣಕ್ಕಾಗಿ ಕೊಟ್ಟ ಗ್ರ್ಯಾಂಟನಿಂದ ಸಹಕಾರಿ ಖಾತೆಯು ತನ್ನ ನೋಕರ ವರ್ಗಕ್ಕೆ, ಸಹಕಾರ, ಅರ್ಥಶಾಸ್ತ್ರ, ಬ್ಯಾಂಕಿಂಗ ಮತ್ತು ಲೆಕ್ಕ ಪರಿಶೋಧನೆ ವಿಷಯಗಳ ೪ ತಿಂಗಳುಗಳ ವರ್ಗಗಳನ್ನು ಪ್ರಾರಂಭಿಸಿತು ಈ ವರ್ಗಗಳಿಗೆ ಮಧ್ಯವರ್ತಿ ಮತ್ತು ಅರ್ಬನ್ ಬ್ಯಾಂಕುಗಳ ನೋಕರರನ್ನು ಸೇರಿಸಿಕೊಳ್ಳಲಾಗುತ್ತಿತ್ತು ಇದೇ ಯೋಜನೆಯ ಮೇರೆಗೆ ಪ್ರತಿಯೊಂದು ಜಿಲ್ಹೆಗೆ ಶಿಕ್ಷಣ ಮೇಲ್ವಿಚಾರಕರನ್ನು ( Education Supervisors ) ನೇಮಿಸಲಾಯಿತು ಈ ಮೇಲ್ವಿಚಾರಕರು ಕಾರ್ಯದರ್ಶಿ, ಕಾರ್ಯಕಾರಿ ಮಂಡಳದ ಸದಸ್ಯರು ಮತ್ತು ಸಂಘದ ಸದಸ್ಯರಿಗಾಗಿ ವರ್ಗಗಳನ್ನು ನಡೆಸುತ್ತಿದ್ದರು

ಆದರೆ ದಿವಂಗತ ಸರ್ ವಿಠ್ಠಲದಾಸ ಥ್ಯಾಕರ್ಸೀ ಅವರು ದಯಪಾಲಿಸಿದ ಹಣದಿಂದ ೧೯೧೮ ರಿಂದ ೨೨ ರ ವರೆಗೆ ಮಹಾರಾಷ್ಟ್ರ ಮತ್ತು ಕರ್ನಾಟಕಗಳಲ್ಲಿ ಸಹಕಾರಿ ಸಂಘಗಳನ್ನು ನಡೆಯಿಸಿದ ಪ್ರೌಢ ಶಿಕ್ಷಣದ ಬಗ್ಗೆ ಹೇಳದೆ ಹೋದರೆ ಮುಂಬೈ ರಾಜ್ಯದ ಸಹಕಾರಿ ಶಿಕ್ಷಣ ಚಿತ್ರವು ಪೂರ್ತಿಯಾಗಲಾರದು ಪ್ರಾರಂಭದ ೨ ವರ್ಷಗಳವರೆಗೆ ಈ ಶಾಲೆಗಳನ್ನು ಸಹಕಾರಿ ಖಾತೆಯು ನಡೆಯಿಸಿ ಆ ತರುವಾಯ ಇನ್‌ಸ್ಟಿಟ್ಯೂಟಗೆ ಒಪ್ಪಿಸಿತು ಒಟ್ಟು ೩೪ ಶಾಲೆಗಳು ತೆರೆಯಲ್ಪಟ್ಟಿದ್ದವು ಮತ್ತು ೪೪೨ ಜನರು ಶಿಕ್ಷಣ ಪಡೆದರು

**ಸಹಕಾರಿ ಪತ್ರಿಕೆಗಳು —**

ಸಾರ್ವಜನಿಕರಲ್ಲಿ ಸಹಕಾರ ತತ್ವಗಳನ್ನು ಪ್ರಸಾರಗೊಳಿಸುವ ಕಾರ್ಯದಲ್ಲಿ ಪತ್ರಿಕೆಗಳು ಮಹತ್ವದ ಕಾರ್ಯವನ್ನು ಮಾಡುತ್ತಿವೆ ೧೯೧೭ ರಲ್ಲಿ ಮುಂಬಯಿಯಲ್ಲಿಯ ಮಧ್ಯವರ್ತಿ ಸಹಕಾರಿ ವಾಚನಾಲಯವು ಶ್ರೀ ವ್ಹಿ ಎಲ್ ಮೆಹತಾ ಅವರ ಸಂಪಾದಕತ್ವದಲ್ಲಿ "ಬಾಂಬೆ ಕೋ-ಆಪರೇಟಿವ್ಹ" ಪತ್ರಿಕೆಯನ್ನು ಪ್ರಕಟಿಸತೊಡಗಿತು ಆ ತರುವಾಯ ಮುಂಬೈ ಪ್ರಾಂತಿಕ ಸಹಕಾರಿ ಸಂಸ್ಥೆಯು

ನೋಂದಾಯಿಸಲ್ಪಟ್ಟಮೇಲೆ ಈ ಪತ್ರಿಕೆಯನ್ನು ಆ ಸಂಸ್ಥೆಗೆ ಒಪ್ಪಿಸಲಾಯಿತು ೧೯೨೪ ರಲ್ಲಿ ದಿವಂಗತ ಪ್ರೊ ಎಚ್ ಎಲ್ ಕಾಜಿ ಅವರ ಸಂಪಾದಕತ್ವದಲ್ಲಿ ಬಾಂಬೇ ಕೋಆಪರೇಟಿವ್ಹ್ ನ್ಯೂಜ್ ಎಂಬ ಪತ್ರಿಕೆ ಪ್ರಾರಂಭವಾಯಿತು ಈ ಪತ್ರಿಕೆಯು ತನ್ನ ಅಸ್ತಿತ್ವದ ೩ ವರ್ಷಗಳಲ್ಲಿ ಹೆಚ್ಚು ಜನಪ್ರಿಯವಾಗಿತ್ತು ೧೯೨೯ ರಲ್ಲಿ ಇನ್‌ಸ್ಟಿಟ್ಯೂಟು, ಕರ್ನಾಟಕ ಸಹಕಾರಿ ಮಿತ್ರ ಎಂಬ ಕನ್ನಡ ಮಾಸಿಕ ಪತ್ರಿಕೆಯನ್ನು ಪ್ರಕಟಿಸತೊಡಗಿತು ಅದೇ ವರ್ಷದಲ್ಲಿ ಸಹಕಾರಿ ಮಿತ್ರ ಎಂಬ ಮರಾಠಿ ಪತ್ರಿಕೆ, ಸಹಕಾರಿ ಪತ್ರಿಕಾ ಎಂಬ ಗುಜರಾಥಿ ಪತ್ರಿಕೆಗಳು ಪ್ರಕಟವಾಗತೊಡಗಿದವು ಈ ಪತ್ರಿಕೆಗಳನ್ನಲ್ಲದೆ, ಇನ್‌ಸ್ಟಿಟ್ಯೂಟು ಸಹಕಾರಿ ವಿಷಯದ ಮೇಲೆ ಇಂಗ್ಲಿಷ ಮತ್ತಿತರ ಪ್ರಾದೇಶಿಕ ಭಾಷೆಗಳಲ್ಲಿ ಪುಸ್ತಕಗಳನ್ನು ಪ್ರಕಟಿಸುವ ವ್ಯವಸ್ಥೆಯನ್ನು ಮಾಡಿದೆ ಆದರೆ ೧೯೩೫ ರಲ್ಲಿ ಇನ್‌ಸ್ಟಿಟ್ಯೂಟದ ಪ್ರಾದೇಶಿಕ ಶಾಖೆಗಳನ್ನು ಮುಚ್ಚಿದ್ದರಿಂದ, ಪ್ರಾದೇಶಿಕ ಶಾಖೆ ಮತ್ತು ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟವಾಗುತ್ತಿದ್ದ ಸಹಕಾರಿ ಪತ್ರಿಕೆಗಳನ್ನು ನಿಲ್ಲಿಸಲಾಯಿತು ೧೯೪೬ ರಲ್ಲಿ ರಾಜ್ಯದಲ್ಲಿಯ ಅಂದಿನ ಸಹಕಾರಿ ಶಿಕ್ಷಣದ ಪರಿಸ್ಥಿತಿಯನ್ನು ಪರಿಶೀಲಿಸುವದಕ್ಕಾಗಿ ಸರಕಾರವು ಸಹಕಾರಿ ಶಿಕ್ಷಣ ಸಮಿತಿಯನ್ನು ನಿಯಮಿಸಿತು ಈ ಸಮಿತಿಯ ಶಿಫಾರಸುಗಳ ಮೇರೆಗೆ ೧೯೪೭ ರಲ್ಲಿ ಮುಂಬಯಿ ರಾಜ್ಯದ ಸಹಕಾರಿ ಶಿಕ್ಷಣ ರಚನೆಯನ್ನು ಸಮಗ್ರವಾಗಿ ಪುನರ್ಘಟಿಸಲಾಯಿತು ರಾಜ್ಯದಲ್ಲಿಯ ಸಹಕಾರಿ ಶಿಕ್ಷಣ ಮತ್ತು ಆಂದೋಲನಕ್ಕೆ ಸಂಬಂಧಿಸಿದ ಅಧಿಕಾರಿಗಳ ಮತ್ತು ಅಧಿಕಾರೇತರ ಜನರಿಗೆ ಶಿಕ್ಷಣ ಕೊಡುವ ಕಾರ್ಯವು ಸಂಪೂರ್ಣವಾಗಿ ಮುಂಬೈ ಪ್ರಾಂತಿಕ ಸಹಕಾರಿ ಇನ್‌ಸ್ಟಿಟ್ಯೂಟಿಗೆ ಒಪ್ಪಿಸಿಬಿಡಬೇಕೆಂಬುದು ಈ ಸಮಿತಿಯ ಮುಖ್ಯ ಸೂಚನೆಯಾಗಿದ್ದಿತು ಈ ಕಾರ್ಯಕ್ಕಾಗಿ ಇನ್‌ಸ್ಟಿಟ್ಯೂಟು ಎಗ್ಸಿಕ್ಯೂಟಿವ್ಹ್ ಆಫೀಸರ್ ಎಂಬ ಅಧಿಕಾರಿಯನ್ನು ನಿಯಮಿಸಿತು ಅದರಂತೆ ಇನ್‌ಸ್ಟಿಟ್ಯೂಟು ಪುಣೆಯಲ್ಲಿ ಸಹಕಾರಿ ಕಾಲೇಜ ಮತ್ತು ಪುಣೆ, ಧಾರವಾಡ ಮತ್ತು ಸುರತಗಳಲ್ಲಿ ಪ್ರಾದೇಶಿಕ ಸಹಕಾರಿ ಶಾಲೆಗಳನ್ನು ತೆರೆಯಿತು ಅದೇ ಮೇರೆಗೆ ಕನ್ನಡ, ಮರಾಠಿ, ಗುಜರಾಥಿಗಳಲ್ಲಿ ಸಹಕಾರಿ ಪತ್ರಿಕೆಗಳನ್ನು ಪ್ರಾರಂಭಿಸಲಾಯಿತು ೧೯೪೭ ರಲ್ಲಿ ಪುಣೆಯಲ್ಲಿ ಪ್ರಾರಂಭವಾಗಿರುವ ಸಹಕಾರಿ ಕಾಲೇಜಿನಲ್ಲಿ ಸಹಕಾರಿ ಖಾತೆಯ ಮತ್ತು ಸಹಕಾರಿ ಸಂಸ್ಥೆಗಳ ಉಚ್ಚ ಅಧಿಕಾರಿಗಳಿಗೆ ಶಿಕ್ಷಣ ಕೊಡಲಾಗುತ್ತಿದೆ ಈ ಕಾಲೇಜಿನಲ್ಲಿ ಪದವೀಧರರಿಗೆ ಶಿಕ್ಷಣ ಕೊಡಲಾಗುತ್ತದೆ ಶಿಕ್ಷಣದ ಅವಧಿಯು ಒಂದು ವರ್ಷವಿದ್ದು ಶಿಕ್ಷಣವು ಪೂರ್ತಿಯಾದ ಮೇಲೆ ಕಾಲೇಜು "Higher Diploma in Co-operation" ಎಂಬ ಪ್ರಶಸ್ತಿ ಪತ್ರಿಕೆಯನ್ನು ಕೊಡುತ್ತದೆ ಪ್ರಾದೇಶಿಕ ಶಾಲೆಗಳಲ್ಲಿ ಸುಪರವಾಯಿಝರ, ಬ್ಯಾಂಕ ಇನಸ್ಪೆಕ್ಟರ್ ಮತ್ತು ದೊಡ್ಡ ವಿವಿಧೋದ್ದೇಶ ಸಂಘಗಳ ಕಾರ್ಯದರ್ಶಿಗಳಿಗೆ ಶಿಕ್ಷಣ ಕೊಡಲಾಗುತ್ತದೆ ಈ ವರ್ಗಗಳ ಅವಧಿಯು ೬ ತಿಂಗಳು ಇದ್ದು ಶಿಕ್ಷಣವನ್ನು ಪ್ರಾದೇಶಿಕ ಭಾಷಗಳಲ್ಲಿ ಕೊಡಲಾಗುತ್ತದೆ ಹೀಗೆ ಈ ಶಾಲೆ ಕಾಲೇಜುಗಳನ್ನು ನಡೆಸುವದಲ್ಲದೆ ಇನ್‌ಸ್ಟಿಟ್ಯೂಟದ ಶಿಕ್ಷಣ ಮೇಲ್ವಿಚಾರಕರ ಮುಖಾಂತರ ಸಂಘದ ಕಾರ್ಯದರ್ಶಿಗಳಿಗೆ ಇತರ ಖಾತೆಯ ಅಧಿಕಾರಿಗಳಿಗೆ ವಿಶೇಷ ಶಿಕ್ಷಣ ವರ್ಗಗಳನ್ನು

ಜಿಲ್ಲೆಗಳಲ್ಲಿ ತೆರೆಯುವ ಪದ್ಧತಿಯನ್ನು ಇನ್‌ಸ್ಟಿಟ್ಯೂಟವು ಮುಂದುವರಿಸಿದ ಈ ಮೂರೂ ಪ್ರಾದೇಶಿಕ ಶಾಲೆಗಳು ಪ್ರಾದೇಶಿಕ ಭಾಷಗಳಲ್ಲಿ ಸಹಕಾರಿ ಪುಸ್ತಕಗಳನ್ನು ಮತ್ತು ಪತ್ರಿಕಗಳನ್ನು ಪ್ರಕಟಿಸುತ್ತವೆ ಇನ್‌ಸ್ಟಿಟ್ಯೂಟು ಕಾಲಕಾಲಕ್ಕೆ ಮುಂಬಯಿ ಆಕಾಶವಾಣಿ ಕೇಂದ್ರದಿಂದ ಸಹಕಾರದ ಬಗ್ಗೆ ಭಾಷಣಗಳನ್ನು ಬಿತ್ತರಿಸುವ ವ್ಯವಸ್ಥೆಯನ್ನು ಮಾಡುತ್ತದೆ

## (ಐ) ಹೆಚ್ಚು ಆಹಾರ ಬೆಳೆಯಿರಿ ಆಂದೋಲನ.

'ಹೆಚ್ಚು ಆಹಾರ ಬೆಳೆಯಿರಿ' ಆಂದೋಲನವನ್ನು ಸರಕಾರವು ಪ್ರಾರಂಭಿಸಿದಂದಿನಿಂದಲೂ ಸಹಕಾರಿ ಸಂಘಗಳು ಈ ಆಂದೋಲನಕ್ಕ ಸಹಾಯ ಮಾಡುತ್ತ ಬಂದಿವೆ ಆದರೆ ೧೯೪೮ ರ ವರೆಗೆ ಈ ಆಂದೋಲನದಲ್ಲಿ ಸಹಕಾರಿ ಸಂಘಗಳ ಉಪಯೋಗವು ಮರ್ಯಾದಿತವಾಗಿತ್ತಲ್ಲದೆ ಯೋಜನಾಬದ್ಧವಾಗಿರಲಿಲ್ಲ ತಾಲೂಕಾ ಅಭಿವೃದ್ಧಿ ಮಂಡಲದ ಪ್ರಚಾರಕ್ಕಾಗಿ ಮಾತ್ರ ಅದು ಸಂಬಂಧಿಸಿದ್ದಿತು ಆದರ ಹಚ್ಚು ಆಹಾರ ಬೆಳೆಯಿರಿ ಆಂದೋಲನಕ್ಕೆ ಸಂಬಂಧಿಸಿದ ಹಲವಾರು ಯೋಜನೆಗಳನ್ನು ಕಾರ್ಯಗತಗೊಳಿಸುವ ಕಾರ್ಯದಲ್ಲಿ ಹೆಚ್ಚು ಪರಿಣಾಮಕಾರಕ ರೀತಿಯಲ್ಲಿ ಈ ಸಂಘಗಳು ಭಾಗವಹಿಸಲಿಲ್ಲ ಕೆಲವೊಂದು ಸಂಘಗಳು ಬೀಜ, ಗೊಬ್ಬರ ಮತ್ತು ಸಲಕರಣೆಗಳನ್ನು ಹಂಚುವ ಕಾರ್ಯವನ್ನು ಮಾತ್ರ ಮಾಡುತ್ತಿದ್ದವು ಮತ್ತೆ ಕೆಲವು ಸಂಘಗಳು ಗೊಬ್ಬರ ಕುಣಿಗಳನ್ನು ತೋಡುವದು ಮೊದಲಾದ ಕಾರ್ಯಗಳಿಂದ ಆಂದೋಲನಕ್ಕೆ ಸಹಾಯ ಮಾಡುತ್ತಿದ್ದವು ರೈತರಿಗೆ ಉಕ್ಕು, ಕಬ್ಬಿಣ ಮತ್ತು ಸಿಮೆಂಟುಗಳನ್ನು ಪೂರೈಸುವಲ್ಲಿ ಜಿಲ್ಲಾ ಮಾರ್ಕೆಟಿಂಗ ಸಂಘ ಮತ್ತು ತಾಲೂಕಾ ಮಾರ್ಕೆಟಿಂಗ ಸಂಘಗಳು ಸಹಾಯ ಮಾಡುತ್ತಿದ್ದವು ಈ ಸಾಮಾನುಗಳನ್ನು ರೈತರು ಬಾವಿಗಳನ್ನು ತೋಡುವದಕ್ಕೂ ರಿಪೇರಿ ಮಾಡಿಕೊಳ್ಳುವದಕ್ಕೂ ಉಪಯೋಗಿಸುತ್ತಿದ್ದರಲ್ಲದೆ ಸುಧಾರಿಸಿದ ಕೃಷಿ ಸಲಕರಣೆಗಳನ್ನು ಉಪಯೋಗಿಸತೊಡಗಿದರ ಆಹಾರ ಧಾನ್ಯಗಳನ್ನು ಬೆಳೆದುಕೊಳ್ಳುವದಕ್ಕ ಸಹಾಯವಾಗುವಂತೆ ರೈತರಿಗೆ ಸಹಕಾರಿ ಸಂಘಗಳು ಸಾಲ ಕೊಡುತ್ತಿದ್ದವು

ಸುಧಾರಿಸಿದ ಬೀಜಗಳನ್ನು ಮತ್ತು ಗೊಬ್ಬರವನ್ನು ಉಪಯೋಗಿಸುವ ವಿಧಾನ ಮತ್ತು ಅವುಗಳನ್ನು ಪ್ರಸಾರ ಮಾಡುವ ಬಗ್ಗೆ ಮತ್ತು ಸರಕಾರದ 'ಹೆಚ್ಚು ಆಹಾರ ಬೆಳೆಯಿರಿ' ಆಂದೋಲನಕ್ಕ ಸಹಾಯವಾಗುವಂತೆ ಸಹಕಾರಿ ಸಂಘಗಳು ಕೈಕೊಳ್ಳಬೇಕಾದ ಕ್ರಮಗಳನ್ನು ಪರಿಶೀಲಿಸಲು ಮುಂಬಯಿಯಲ್ಲಿ ಸೇರಿದ ಪ್ರಾಂತಿಕ ಸಹಕಾರಿ ಕೌನ್ಸಿಲು ಒಂದು ಸಮಿತಿಯನ್ನು ನಿಯಮಿಸಿತು ಆಹಾರ ಉತ್ಪಾದನಾ ಚಟುವಟಿಕೆಗಳಲ್ಲಿ ರೈತರ ಉತ್ಸುಕತೆಯು ಹೆಚ್ಚಾಗುವದಕ್ಕಾಗಿ ಸಹಕಾರಿ ಸಂಘಗಳನ್ನೇ ಉಪಯೋಗಿಸಬೇಕೆಂದು ಈ ಸಮಿತಿಯು ಬಲವಾಗಿ ಶಿಫಾರಸು ಮಾಡಿತು ಈ ಸಮಿತಿಯ ಶಿಫಾರಸುಗಳ ಮೇರೆಗೆ, ಹಳ್ಳಿಯ ಸಹಕಾರಿ ಸಂಘಗಳು, ಪ್ರಸಾರ ಕಾರ್ಯ ಮತ್ತು ರೈತರಿಗೆ ಉತ್ತಮ ಬೀಜ ಮತ್ತು ಗೊಬ್ಬರಗಳು ಸಿಗುವಂತೆ ಸಹಾಯ ಮಾಡುವ ಕಾರ್ಯಗಳನ್ನಲ್ಲದೆ ಇತರ ಕಾರ್ಯಗಳನ್ನೂ

ಮಾಡಬೇಕೆಂದು ನಿರ್ದೇಶಿಸಲಾಯಿತು. ಅಲ್ಲದೆ, ಹಳ್ಳಿಗಳಲ್ಲಿಯ 'ಡ' ವರ್ಗದ ಸಂಘಗಳನ್ನು ಬಿಟ್ಟು ಇತರ ಶೇತ್ಕಿ ಸಹಕಾರಿ ಸಂಘಗಳ ಕಾರ್ಯಕಾರಿ ಮಂಡಲಗಳು ಹಳ್ಳಿಯ ಆಹಾರ ಉತ್ಪಾದನಾ ಸಮಿತಿಗಳಾಗಿ ಕೆಲಸ ಮಾಡಬೇಕೆಂದು ಸರಕಾರವು ಆಜ್ಞೆಗಳನ್ನು ಹೊರಡಿಸಿತು 'ಅ' ಮತ್ತು 'ಬ' ವರ್ಗದ ಸಹಕಾರಿ ಸಂಘಗಳನ್ನು ಅಮೋನಿಯಾ ಸಲ್ಫೇಟ ಹಂಚುವದಕ್ಕಾಗಿ ಎಜಂಟರಂತೆ ನಿಯಮಿಸಬೇಕೆಂದೂ ಸರಕಾರವು ಆಜ್ಞೆ ವಿಧಿಸಿತು ಬಾವಿಗಳನ್ನು ಅಗಿಸುವದಕ್ಕಾಗಿ ಮತ್ತು ಇದ್ದ ಬಾವಿಗಳ ಸುಧಾರಣೆಗಾಗಿ 'ಅ' ಮತ್ತು 'ಬ' ವರ್ಗದ ಸಂಘಗಳ ಸದಸ್ಯರಿಗೆ ಸಾಲ ಮತ್ತು ಸಹಾಯ ಧನಗಳನ್ನು ಕೊಡಬೇಕೆಂದು ನಿರ್ಧರಿಸಲಾಯಿತು ಆಹಾರ ಉತ್ಪಾದನೆಯನ್ನು ಹೆಚ್ಚಿಸುವ ಕಾರ್ಯವನ್ನು ಸಂಘಟಿಸುವದಕ್ಕೆ ತಾಲೂಕಾ ಅಭಿವೃದ್ಧಿ ಮಂಡಲಗಳನ್ನು ಸಾಧನಗಳೆಂದು ಪರಿಗಣಿಸಲಾಯಿತು ಶೇತ್ಕಿ ಮತ್ತು ಗ್ರಾಮಾಭಿವೃದ್ಧಿ ಮತ್ತು ಆಹಾರ ಬೆಳೆಯಿರಿ ಆಂದೋಲನದ ವಿಷಯಗಳಲ್ಲಿ ತಾಲೂಕಾ ಮಂಡಲಗಳು ಜಿಲ್ಹಾ ಗ್ರಾಮಾಭಿವೃದ್ಧಿ ಮಂಡಲಗಳ ಪ್ರತಿನಿಧಿಗಳಾಗಿ ತಾಲೂಕುಗಳಲ್ಲಿ ವರ್ತಿಸಬೇಕೆಂದು ಪರಿಗಣಿಸಲಾಯಿತು ೧೯೫೦-೫೧ ರಲ್ಲಿ ೫೪೫೪ ಸಂಘಗಳ ಕಾರ್ಯಕಾರಿ ಮಂಡಲಗಳು ಆಹಾರ ಉತ್ಪಾದನೆಯ ಪ್ರಸಾರ ಕಾರ್ಯಕ್ಕಾಗಿ ತಾಲೂಕಾ ಆಹಾರ ಉತ್ಪಾದನಾ ಸಮಿತಿಗಳಾಗಿಯೂ ಆಹಾರ ಆಂದೋಲನದ ಯೋಜನೆಗಳಿಗೆ ಕಾರ್ಯರೂಪ ಕೊಡುವದಕ್ಕಾಗಿ ಜಿಲ್ಹಾ ಅಭಿವೃದ್ಧಿ ಮಂಡಲಗಳ ಪ್ರತಿನಿಧಿಗಳಾಗಿಯೂ ಕಾರ್ಯ ಮಾಡಿದವು ಕೆಳಕಂಡ ಉದ್ದೇಶಗಳಿಗಾಗಿ ಸಹಕಾರಿ ಸಂಘಗಳು ರೈತರಿಗೆ ಪತ್ತಿನ ಸೌಕರ್ಯಗಳನ್ನು ಒದಗಿಸಿಕೊಟ್ಟವು

| | | |
|---|---|---|
| ೧) | ಬೆಳೆ ಮತ್ತು ಸುಗ್ಗಿಯ ಸಾಲ | ೨,೭೯,೬೧,೩೭೦ |
| ೨) | ಬಾವಿಗಳನ್ನು ಅಗಿಯುವದಕ್ಕ ಮತ್ತು ರಿಪೇರಿ ಮಾಡುವದಕ್ಕೆ | ೧೬,೬೨,೩೦೧ |
| ೩) | ಎತ್ತುಗಳನ್ನು ಕೊಳ್ಳುವದಕ್ಕೆ | ೧,೧೬,೫೦,೨೫೦ |
| ೪) | ಭೂಸುಧಾರಣೆಗಾಗಿ | ೧,೨೧,೨೧,೮೯೮ |
| ೫) | ಗೊಬ್ಬರ ಕೊಳ್ಳುವದಕ್ಕೆ | ೧,೩೩,೧೨,೩೧೭ |
| ೬) | ಬೀಜ ,, | ೧,೧೫,೭೬,೮೨೪ |
| ೭) | ಇತರ | ೪೬,೬೯,೬೧೬ |
| | ಒಟ್ಟು ರೂ. | ೮,೨೯,೫೪,೫೭೬ |

‘ ಹೆಚ್ಚು ಆಹಾರ ಬೆಳೆಯಿರಿ ’ ಆಂದೋಲನವನ್ನು ಬೆಳೆಯಿಸುವದರಲ್ಲಿಯೂ ಮತ್ತು ಆಹಾರ ಉತ್ಪಾದನೆಯನ್ನು ಹೆಚ್ಚಿಸುವಲ್ಲಿಯೂ ಸಹಕಾರಿ ಸಂಘಗಳು ಮಾಡಿದ ಕಾರ್ಯದ ವರದಿಯನ್ನು ಕಳಗೆ ಕೊಡಲಾಗಿದೆ

(ಅ) ೩೩೪೨೧೪ ಎಕರೆ ಭೂಮಿಯನ್ನು ಆಹಾರ ಉತ್ಪಾದನೆಗಾಗಿ ಉಪಯೋಗವಾಗುವಂತೆ ಮಾಡಿದವು

(ಬ) ೧೦೦೬೭ ಎಕರೆ ಭೂಮಿಯನ್ನು ಸಹಕಾರಿ ಬೇಸಾಯವನು ಕೈಕೊಂಡ ಸಹಕಾರಿ ಸಂಘಗಳ ನೀರಾವರಿಯ ಯೋಜನೆಯಲ್ಲಿ ಬರುವಂತೆ ಮಾಡಿದವು

ರಾಜ್ಯದಲ್ಲಿಯ ಸುಮಾರು ೨೦ ಜಿಲ್ಲೆಗಳಲ್ಲಿ ಜಿಲ್ಲಾ ಖರೀದಿ ಮತ್ತು ವಿಕ್ರಿ ಸಂಘ ಮತ್ತು ಮಧ್ಯವರ್ತಿ ಬ್ಯಾಂಕುಗಳಿಗೆ ಗೊಬ್ಬರ ಮಿಶ್ರಣ ಮತ್ತು ಶೇಂಗಾ ಹಿಂಡಿಗಳ ಮಾರಾಟಕ್ಕಾಗಿ ರೋಕ ಎಜನ್ಸಿಯ ಕಾರ್ಯವನ್ನು ಒಪ್ಪಿಸಲಾಯಿತು ೧೯೫೦–೫೧ ರಲ್ಲಿ ಆಮೋನಿಯಾ ಸಲ್ಫೇಟ ಹಂಚುವ ಕಾರ್ಯವನ್ನು ಮೊದಲಿನಂತೆ ಮುಂಬಯಿ ರಾಜ್ಯದ ಸಹಕಾರಿ ಮಾರಾಟ ಸಂಘವೇ ಕೈಕೊಂಡಿತು

ಆಹಾರ ಉತ್ಪಾದನಾ ಚಳವಳಿಗೆ ಸಹಾಯವಾಗುವಂತೆಯೂ ಮತ್ತು ಎತ್ತುಗಳ ಕೊರತೆಯನ್ನು ನೀಗಿಸುವದಕ್ಕಾಗಿಯೂ ಸರಕಾರವು ವಿವಿಧೋದ್ದೇಶ ಸಂಘ, ಖರೀದಿ ವಿಕ್ರಿ ಸಂಘ, ಬೇಸಾಯ ಸಂಘ ಮತ್ತು ತಾಲೂಕಾ ಅಭಿವೃದ್ಧಿ ಮಂಡಲಗಳಿಗೆ ಟ್ರ್ಯಾಕ್ಟರುಗಳನ್ನು ಕೊಳ್ಳಲು ವೆಚ್ಚದಲ್ಲಿ ನೂರಕ್ಕೆ ೬೦ ರಷ್ಟನ್ನು ಸಾಲವಾಗಿ ಕೊಡುವ ಯೋಜನೆಯನ್ನು ಮಂಜೂರ ಮಾಡಿತು ಹೀಗೆ ಈ ಯೋಜನೆಯು ೧೯೫೦–೫೧ ರಲ್ಲಿ ಜಾರಿಯಲ್ಲಿ ಬಂದು ಒಟ್ಟು ೨೧ ಸಂಘಗಳಿಗೆ ೪ ಲಕ್ಷ ರೂ. ಗಳವರೆಗೆ ಸಾಲವನ್ನು ಕೊಡಲಾಯಿತ

೧೯೫೦—೫೧ ರ ಕೊನೆಗೆ, ಆಲೂಗಡ್ಡೆ ಬೆಳೆಯುವವರಿಗೆ ಪತ್ತನ್ನು ಪೂರೈಸುವ ಯೋಜನೆಯೊಂದನ್ನು ಸಿದ್ಧಪಡಿಸಲಾಯಿತು ಈ ಯೋಜನೆಯ ಮೇರೆಗೆ ಆಲೂಗಡ್ಡೆ ಬೆಳೆಯುವ ಪ್ರದೇಶಗಳಲ್ಲಿಯ ರೈತರಿಗೆ ಸುಧಾರಿಸಿದ ಬೀಜಗಳನ್ನು ಪೂರೈಸಲಾಗುತ್ತಿತ್ತು. ಮಧ್ಯವರ್ತಿ ಬ್ಯಾಂಕುಗಳ ಮತ್ತಿತರ ಸಾಲಗಳನ್ನೆಲ್ಲ ಸಿಮ್ಲಾದಿಂದ ತರಿಸಿದ ಸುಧಾರಿಸಿದ ಆಲೂಗಡ್ಡೆಗಳ ಬೀಜದ ರೂಪದಲ್ಲಿಯೇ ಕೊಡಲಾಗುತ್ತಿತ್ತು

## (ಜ) ಪಾನನಿರೋಧ ಮತ್ತು ಸಹಕಾರ.

೧೯೪೯ ರಲ್ಲಿ ಮುಂಬಯಿ ಪಾನನಿರೋಧ ಕಾಯಿದೆಯು ಪಾಸಾದ ಮೇಲೆ, ಈ ಧೋರಣೆಯನ್ನು ಕಾರ್ಯಗತಗೊಳಿಸಲು ಸಹಕಾರಿ ಸಂಘಗಳಿಗೆ ಆದೇಶ ಕೊಡಲಾಯಿತು ಶೇಂದಿ ವ್ಯವಹಾರವು ಕಟ್ಟಾದುದರಿಂದ ಹೊರಬಿದ್ದ ಜನರಿಗೆ

ಯೋಗ್ಯ ಪುನರ್ನಿವೇಶನ, ಕುಡಿಯುವ ಹವ್ಯಾಸವನ್ನು ಹೋಗಲಾಡಿಸಲೋಸುಗ ಮನರಂಜನೆ ಮತ್ತಿತರ ಸಾಮಾಜಿಕ ಚಟುವಟಿಕೆಗಳನ್ನು ಸಹಕಾರಿ ಸಂಘಗಳು ಕೈಕೊಳ್ಳುತ್ತಲಿದ್ದವು ಭಟ್ಟಿ ನರಿ ತಯಾರಿಸಲು ಉಪಯೋಗಿಸಲಾಗುವ ಮಹುರ ಹೂವುಗಳು ಭಟ್ಟಿ ನೆರೆಗಾಗಿ ದೊರೆಯಬಾರದೆಂಬ ಉದ್ದೇಶದಿಂದ ಸಹಕಾರಿ ಸಂಘಗಳು ಅವುಗಳನ್ನು ಸಂಗ್ರಹಿಸತೊಡಗಿದವು ಸಹಕಾರಿ ಖಾತೆಯ ನಾಲ್ಕು ಅಧಿಕಾರಿಗಳನ್ನು – ಒಬ್ಬ ಅಸಿಸ್ಟಂಟ ರಜಿಸ್ಟ್ರಾರ ಮತ್ತು ೩ ಆಡಿಟರ—ಎಕ್ಸಾಯಿಜ ಖಾತೆಗೆ ವರ್ಗಾಯಿಸಲಾಯಿತು ಮೂರು ಜನ ಆಡಿಟರರು ಗುಜರಾತ, ಮಹಾರಾಷ್ಟ್ರ ಮತ್ತು ಕರ್ನಾಟಕಗಳಲ್ಲಿಯ, ನದಿಯಾದ, ನಾಸಿಕ ಮತ್ತು ಹುಬ್ಬಳ್ಳಿಗಳಲ್ಲಿ ದುಡಿಯ ತೊಡಗಿದರು ಮನರಂಜನ ಕಾರ್ಯಕ್ರಮಗಳನ್ನು ಏರ್ಪಡಿಸುವದು ಈ ಅಧಿಕಾರಿಗಳ ಮುಖ್ಯ ಕರ್ತವ್ಯವಾಗಿದ್ದಿತು ಸಾಮಾನ್ಯವಾಗಿ ಪ್ರತಿಯೊಂದು ಜಿಲ್ಹೆಯಲ್ಲಿ ಉತ್ತಮ ರೀತಿಯಲ್ಲಿ ನಡೆದ ಸಹಕಾರಿ ಸಂಘಗಳು ಮನರಂಜನ ಕೇಂದ್ರಗಳನ್ನು ( ಸಂಸ್ಕಾರ ಕೇಂದ್ರ ) ತೆರೆದಿವೆ ೧೯೫೧ ಜೂನ ೩೦ ಕ್ಕೆ ೬೪ ಸಂಸ್ಕಾರ ಕೇಂದ್ರಗಳಿದ್ದವು ನೀರಾ ಕೇಂದ್ರಗಳನ್ನು ನಡೆಸುವದಕ್ಕಾಗಿ ಈಗ ಸಹಕಾರಿ ಸಂಘಗಳನ್ನು ನೋಂದಾಯಿಸಲಾಗಿದೆ-

## (ಕೆ) ಪಾಕಿಸ್ತಾನದಿಂದ ಬಂದ ನಿರಾಶ್ರಿತರ ಪುನರ್ನಿವೇಶನ.

ನಿರಾಶ್ರಿತ ಜನರ ಪುನರ್ನಿವೇಶನಕ್ಕಾಗಿ ಸಹಕಾರಿ ಸಂಘಗಳೇ ಉತ್ತಮವೆಂದು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಅಭಿಪ್ರಾಯಪಟ್ಟಿವೆ. ನಿರಾಶ್ರಿತ ಜನರಲ್ಲಿ ಸಹಕಾರಿ ಚಟುವಟಿಕೆಗಳನ್ನು ಪ್ರೋತ್ಸಾಹಿಸುವದಕ್ಕಾಗಿ ಹೆಚ್ಚಿನ ನೌಕರ ವರ್ಗವನ್ನು ೧೯೪೮—೪೯ ರಲ್ಲಿ ಸರಕಾರವು ಮಂಜೂರ ಮಾಡಿತು ನಿರಾಶ್ರಿತ ಜನರ ಪುನರ್ನಿವೇಶನ ಕ್ರಮವೆಂದೂ ಮತ್ತು ಅವರಲ್ಲಿ ಸಹಕಾರಿ ಚಟುವಟಿಕೆಗಳನ್ನು ಪ್ರೋತ್ಸಾಹಿಸುವದಕ್ಕಾಗಿಯೂ ನಿರಾಶ್ರಿತ ಜನರ ಸಹಕಾರಿ ಸಂಘಗಳಿಗೆ ಹೆಚ್ಚಿನ ಸವಲತ್ತುಗಳನ್ನು ಕೊಡಲು ಸರಕಾರವು ನಿರ್ಧರಿಸಿತು ನಿರಾಶ್ರಿತ ಜನರ ಪುನರ್ನಿವೇಶನಕ್ಕಾಗಿ ಸಹಕಾರಿ ಸಂಘಗಳ ಸಂಘಟನೆಯ ಕಾರ್ಯದ ವರದಿಯನ್ನು ಕೆಳಗೆ ಕೊಡಲಾಗಿದೆ

| | ೧೯೪೮—೪೯ | ೧೯೪೯—೫೦ | ೧೯೫೦—೫೧ |
|---|---|---|---|
| ಸಂಘಗಳ ಸಂಖ್ಯೆ | ೬೧ | ೧೨೪ | ೧೫೭ |
| ಸದಸ್ಯರ ಸಂಖ್ಯೆ | ೨೧೦೨. | ೪೧೯೫ | ೬೬೫೧. |
| ದುಡಿಯುವ ಭಾಂಡವಲು | ೧೦೫೯೫೯೮ | ೧೪೪೦೫೧೭ | ೨೮೬೮೨೫೯ |

ಸಂಘಗಳ ಸಂಖ್ಯೆ, ಸದಸ್ಯರ ಸಂಖ್ಯೆ ಮತ್ತು ದುಡಿಯುವ ಭಾಂಡವಲು ಒಂದೇ ಸವನೆ ಬೆಳೆಯತೊಡಗಿವೆ ೧೯೪೯—೫೦ ಮತ್ತು ೧೯೫೦— ೫೧ ರಲ್ಲಿ ವಿವಿಧ ಪ್ರಕಾರದ ಸಂಘಗಳ ಪ್ರಗತಿಯನ್ನು ಕೆಳಗೆ ಕೊಡಲಾಗಿದ

| ಸಂಘಗಳ ಪ್ರಕಾರಗಳು | ಸಂಘಗಳ ಸಂಖ್ಯೆ | | ದಸ್ಯರ ಸಂಖ್ಯೆ | | ದುಡಿಯುವ ಭಾಂಡವಲು | |
|---|---|---|---|---|---|---|
| | ೧೯೫೦ | ೧೯೫೧ | ೧೯೫೦ | ೧೯೫೧ | ೧೯೫೦ | ೧೯೫೧. |
| ಗ್ರಾಹಕರ ಸಂಘ | ೭ | ೮೫ | ೨೪೮೬ | ೩೪೮೮ | ೩೨೬೪೯೮ | ೬೪೫೮೨೦. |
| ಉತ್ಪಾದಕರ ,, | ೩೦ | ೩೬ | ೧೦೬೧ | ೧೧೮೪ | ೧೧೦೫೨೫ | ೨೧೨೮೫೧ |
| ಮನಕಟ್ಟುವ ,, | ೧ | ೧೪ | ೪೪೪ | ೧೪೯೪ | ೧೩೬೫೫೨ | ೧೬೬೫೧೫೦ |
| ಸಾಗಾಟ , | ೧ | ೧೧ | ೧೩೬ | ೧೮೬ | ೩೨೬೬೮ | ೬೨೨೯೧. |
| ಬೇಸಾಯ ,, | ೧ | ೫ | ೧೧ | ೨೩೨ | ೧೪೧೩ | ೧೧೯೫೪೨ |
| ವಿವಿಧೋದ್ದೇಶ ,, | ೩ | ೨ | ೧೪ | ೧೪ | ೨೩೬೯೫ | ೨೩೬೧೦ |
| ಸಂಯುಕ್ತ ಸಂಸ್ಥೆ | ೧ | ೧ | ೯ | ೧೦ | ೧೦೦೦ | ೧೬೬೫೬ |
| ಪತ್ತಿನ ಸಂಘ | ೨ | ೨ | ೨೪ | ೪೩ | ೧೬೮ | ೧೨೫೪ |
| ಒಟ್ಟು | ೧೭೪ | ೧೫೬ | ೪೧೮೫ | ೬೬೫೧ | ೧೪೪೦೫೧೬ | ೨೮೮೨೫. |

ಈ ಸಂಘಗಳು ಸಾಧಿಸಿರುವ ಪ್ರಗತಿಯು ತೃಪ್ತಿಕರವಾಗಿದೆ ಎಂದು ಮೇಲಿನ ಅಂಕೆ ಸಂಖ್ಯೆಗಳಿಂದ ತಿಳಿಯುತ್ತದೆ ಆದರೂ ಇನ್ನೂ ಈ ಸಂಘಗಳು ಬಾಲ್ಯಾವಸ್ಥೆಯಲ್ಲಿವೆ. ಈ ಸಂಘಗಳಿಗೆ ನಿರಾಶ್ರಿತ ಜನರಲ್ಲಿಯ ನಿಸ್ವಾರ್ಥ, ಪ್ರಭಾವಿ ಅಧಿಕಾರೇತರ ಕಾರ್ಯಕರ್ತರು ಮತ್ತು ಸಾಕಷ್ಟು ಹಣಕಾಸು ದೊರೆಯುವದು ಕಷ್ಟ ಸಾಧ್ಯವಾಗಿದೆ

## (ಲ) ಸರಕಾರ ಮತ್ತು ಸಹಕಾರ

ಮೂರನೆಯ ಅಧ್ಯಾಯದಲ್ಲಿ ವಿವರಿಸಿರುವ ಕಾರಣಗಳಿಗಾಗಿ ಸರಕಾರವು ಭಾರತದಲ್ಲಿ ಸುಮಾರು ೫೦ ವರ್ಷಗಳ ಹಿಂದೆ ಸಹಕಾರಿ ಆಂದೋಲನವನ್ನು ಜಾರಿಯಲ್ಲಿ ತಂದಿತು ಪ್ರಾರಂಭಕ್ಕೆ ಸರಕಾರಿ ಅಧಿಕಾರಿಗಳೇ ಸಹಕಾರಿ ಸಂಘಗಳನ್ನು ಸಂಘಟಿಸುತ್ತಲಿದ್ದರು ಕಳೆದ ೫೦ ವರ್ಷಗಳಲ್ಲಿ ಆಂದೋಲನವು ಸರಕಾರದ ನಿಯಂತ್ರಣ, ಮಾರ್ಗದರ್ಶನ ಮತ್ತು ಮೇಲ್ವಿಚಾರಣೆಯಲ್ಲಿ ನಾಡಿನ ಎಲ್ಲ ಭಾಗಗಳಲ್ಲಿ ಪಸರಿಸಿದೆ ಅವನ್ನು ಹೆಚ್ಚಾಗಿ ಸರಕಾರಿ ಅಧಿಕಾರಿಗಳೇ ಪ್ರಾರಂಭಿಸಿ, ಪೋಷಿಸಿ, ಬೆಳೆಯಿಸುತ್ತ ಬಂದಿದ್ದಾರೆ ಭಾರತದ ಸದ್ಯದ ವಿಶಿಷ್ಟ ಪರಿಸ್ಥಿತಿಗಳಿಗನುಗುಣವಾಗಿ ಸರಕಾರವು ಆಂದೋಲನವನ್ನು ರಜಿಸ್ಟ್ರಾರನ ಮುಖಾಂತರ ನಿಯಂತ್ರಿಸುತ್ತ ಬಂದಿದೆ ಈ ರಜಿಸ್ಟ್ರಾರನೇ ಸಹಕಾರಿ ಖಾತೆಯ ಮುಖ್ಯ ಅಧಿಕಾರಿಯಾಗಿದ್ದಾನೆ ಈ ರಜಿಸ್ಟ್ರಾರನಿಗೆ ಸಂಘಗಳನ್ನು ನೋಂದಾಯಿಸುವ, ಪೋಟನಿಯಮಗಳನ್ನು ತಿದ್ದುಪಡಿ ಮಾಡುವ, ಲೆಕ್ಕ ತಪಾಸಣೆ ಮತ್ತು ವಿಚಾರಣೆ ಮಾಡುವ, ಲೆಕ್ಕ ಪರಿಶೋಧನೆಯ, ತಂಟೆ ಬಗೆಹರಿಸುವ ಮತ್ತು ಸಂಘಗಳನ್ನು ರದ್ದು ಮಾಡುವ ಈ ಮೊದಲಾದ ಅಧಿಕಾರಗಳಿರುತ್ತವೆ ಸಂಘದ ಸಂಸ್ಥಾಪಕರು ಮತ್ತು ಚಾಲಕರು ಸಂಘದ ಹಣದ ದುರುಪಯೋಗ ಮಾಡುತ್ತಿದ್ದರೆ ಅವರ ವಿರುದ್ಧ ಕ್ರಮ ಕೈಕೊಳ್ಳಲು ರಜಿಸ್ಟ್ರಾರನಿಗೆ ಅಧಿಕಾರವಿದೆ ಮುಂಬಯಿ ಸಹಕಾರಿ ಸಂಘಗಳ ಕಾಯದೆಯನ್ವಯ ತಪ್ಪು ಮಾಡಿದವರ ವಿರುದ್ಧ ಕ್ರಮ ಕೈಕೊಳ್ಳುವ ಅಧಿಕಾರವು ಇವನಿಗಿದೆ. ಸಹಕಾರಿ ಸಂಘಗಳ ಹಣದ ದುರ್ವಿನಿಯೋಗವಾದರೆ ಅದನ್ನು ಪೋಲಿಸ ಅಧಿಕಾರಿಗಳಿಗೆ ಶೋಧಿಸಲಿಕ್ಕೆ ಕೊಡುವ ಮತ್ತು ನ್ಯಾಯಾಲಯದ ಮುಖಾಂತರ ಅಪರಾಧಿಗಳ ಮೇಲೆ ಕ್ರಮವನ್ನು ಕೈಕೊಳ್ಳುವ ಅಧಿಕಾರವು ರಜಿಸ್ಟ್ರಾರನಿಗಿದೆ ಸಹಕಾರಿ ಸಂಘಗಳು ಬೇರೆ ಬೇರೆ ಕಡೆಗಳಲ್ಲಿ ಸಂಘದ ಹಣವನ್ನು ತೊಡಗಿಸುವ ಕಾರ್ಯವನ್ನು ರಜಿಸ್ಟ್ರಾರನು ನಿಯಂತ್ರಿಸುತ್ತಾನೆ

ಆಂದೋಲನವು ಸರಕಾರದ ಸಹಾಯ, ಸಲಹೆ, ರಿಯಾಯತಿ ಮತ್ತು ವಿಶೇಷ ಸವಲತ್ತುಗಳನ್ನು ಪಡೆಯುತ್ತ ಬಂದಿದ್ದು ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಕೊಡಲಾಗಿದೆ

೧. ಆರ್ಥಿಕ ನೆರವು :—

(ಅ) ಸಹಕಾರಿ ಖಾತೆಯನ್ನು ನಿರ್ಮಿಸಿ ಆ ಖಾತೆಯನ್ನು ನಡೆಯಿಸುವದರಲ್ಲಿ ತಗಲುವ ವೆಚ್ಚ.

(ಬ) ಕೆಳಕಂಡ ರೀತಿಯಲ್ಲಿ ಕೊಡುತ್ತಿರುವ ಧನ ಸಹಾಯ (i) ಸಾಲ, ಗ್ರ್ಯಾಂಟು ಮತ್ತು ಸಹಾಯ ಧನ (ಸಬ್‌ಸಿಡಿ) (ii) ಸಹಕಾರಿ ಸಂಘಗಳು ಹೊರಡಿಸಿದ ಡಿಬೆಂಚರುಗಳ ಅಸಲು ಅಥವಾ ಮತ್ತು ಬಡ್ಡಿ ಕೊಡುವ ಹೊಣೆ ಹೊತ್ತುಕೊಳ್ಳುವದು (iii) ಹಣ ಪೂರೈಕೆಯ ಸಂಸ್ಥೆಗಳ, ಪ್ರಾಂತಿಕ ಔದ್ಯೋಗಿಕ ಸಂಘದ, ಸಕ್ಕರೆ

ಕಾರಖಾನೆಯ ಮತ್ತು ಹಿಂದುಳಿದ ವರ್ಗದ ಜನರ, ಬೇಸಾಯ ಸಂಘ ಗಳ ಶೇರು ಭಾಂಡವಲುಗಳ ಕೆಲ ಭಾಗವನ್ನು ಪೂರೈಸುವದು. (iv) ಔದ್ಯೋಗಿಕ ಸಂಘಗಳಿಗೆ, ಅರಣ್ಯ ಕೂಲಿಕಾರರ ಸಹಕಾರಿ ಸಂಘಗಳಿಗೆ, ನೂಲು ಮತ್ತು ಬಟ್ಟೆ ಹಂಚುವ ಕಾರ್ಯ ಕೈಕೊಂಡ ಸಂಸ್ಥೆಗಳಿಗೆ ಹಣದ ಮಾರ್ಜಿನಲ್ ಗ್ಯಾರಂಟಿ ಕೊಡುವದು

(ಕ) ಕೆಲವೊಂದು ಮುಖ್ಯ ಸಂಸ್ಥೆಗಳನ್ನು ನಡೆಸುವದಕ್ಕಾಗಿ ಇಡೀ ನೌಕರ ವರ್ಗವನ್ನೇ ಕೆಲವು ರೀತಿಯಲ್ಲಿ ಪುಕ್ಕಟೆ ಕೊಡುವದು

(ಡ) ಉತ್ಪನ್ನಕರ, ಸ್ಟ್ಯಾಂಪಕರ, ನೋಂದಣಿ ಫೀ ಮೊದಲಾದವುಗಳ ಬಗ್ಗೆ ವಿಶೇಷ ರಿಯಾಯತಿ ಮತ್ತು ಸವಲತ್ತುಗಳು

(ಇ) ಸಹಕಾರಿ ಆಂದೋಲನದ ಪರಿಸ್ಥಿತಿಯನ್ನು ಅಭ್ಯಸಿಸಿ ಯೋಗ್ಯ ಶಿಫಾರಸುಗಳನ್ನು ಮಾಡಲು ಕಾಲಕಾಲಕ್ಕೆ ನಿಯಮಿಸಲಾಗುವ ಸಮಿತಿಗಳ ಸದಸ್ಯರ ವೆಚ್ಚವನ್ನು ಹೊರುವದು.

(ಫ) ಸಹಕಾರಿ ಶಿಕ್ಷಣದ ಬಗ್ಗೆ ತಗಲುವ ವೆಚ್ಚ

**೨. ಕಾಯ್ದೆಯ ಸಹಾಯ —**

(ಅ) ಸಹಕಾರಿ ಸಂಘಗಳ ಸಂಘಟನೆ ಮತ್ತು ಕಾರ್ಯಾಚರಣೆಗಳ ಬಗ್ಗೆ ವಿಶೇಷ ಶಾಸನಗಳನ್ನು ಮಾಡುವದು

(ಬ) ಮುಂಬಯಿ ಶೇತ್ಕೀ ಸಾಲ ಪರಿಹಾರ ಕಾಯ್ದೆ, ಸಾಹುಕಾರೀ ಕಾಯ್ದೆ ಮತ್ತು ಕೂಳ ಕಾಯ್ದೆಗಳಲ್ಲಿಯ ನಿರ್ಬಂಧಿತ ಕಲಮುಗಳಿಂದ ಸಹಕಾರಿ ಸಂಘಗಳ ರಕ್ಷಣ ಕ್ರಮಗಳು

(ಕ) ಸಂಘಗಳ ಮತ್ತು ಸದಸ್ಯರ ನಡುವೆ, ಸದಸ್ಯ ಸದಸ್ಯರ ನಡುವೆ, ಸದಸ್ಯ ಮತ್ತು ವ್ಯವಸ್ಥಾಪಕ ಮಂಡಲದವರ ನಡುವೆ ಉದ್ಭವಿಸ ಬಹುದಾದ ತಂಟೆಗಳ ಬಗ್ಗೆ ಪಂಚಾಯಿತದಾರರ ಮುಖಾಂತರ ತೀರ್ಪು ಕೊಡುವದು ಮತ್ತು ದಿವಾಣಿ ಅಥವಾ ಕಂದಾಯ ಖಾತೆ ಗಳ ಮುಖಾಂತರ ಈ ತೀರ್ಪುಗಳ ಅಮಲಬಜಾವಣಿ ಮಾಡುವದು ಸಹಕಾರಿ ಸಂಘಗಳ ಶೇರುಗಳನ್ನು ಜಪ್ತು ಮಾಡದಂತೆ ವಿಶೇಷ ರಿಯಾಯತಿಗಳನ್ನು ಮತ್ತು ಶಾಸನ ಬದ್ಧ ಅಧಿಕಾರಗಳನ್ನು ಕೊಡುವದು

**೩. ನೈತಿಕ ಬೆಂಬಲ —**

(ಅ) ಪೂರೈಕೆ, ಕಲೆಹಾಕುವಿಕೆ, ಆಹಾರ ಸಾಮುಗ್ರಿ ಮತ್ತಿತರ ನಿತ್ಯಾವಶ್ಯಕ ಸರಕುಗಳ ವಿತರಣ ಮೊದಲಾದ ಚಟುವಟಿಕೆಗಳನ್ನು ಕೈಕೊಳ್ಳಲು ಸಹಕಾರಿ ಆಂದೋಲನವು ಉತ್ತಮವೆಂದು ಪರಿಗಣಿಸುವದು

(ಬ) ಸಹಕಾರಿ ಕೂಲಿಕಾರರ ಕಾಂಟ್ರ್ಯಾಕ್ಟ್ ಸಂಘಗಳಿಗೆ ಕಾಂಟ್ರ್ಯಾಕ್ಟ್ ಕೊಡುವ ಕಾರ್ಯದಲ್ಲಿ ಪ್ರಾಶಸ್ತ್ಯ ಕೊಡುವದು

(ಕ) ಅರಣ್ಯ ಕೂಪುಗಳನ್ನು ಅರಣ್ಯ ಕೂಲಿಕಾರ ಸಂಘಗಳಿಗೆ ಯೋಗ್ಯ ಬೆಲೆಯುಲ್ಲಿ ಕೊಡುವದು

(ಡ) ಸರಕಾರಿ ಖರೀದಿ ಖಾತೆಯು ಗೃಹ ಉದ್ದಿಮೆಯ ಸರಕುಗಳನ್ನು ಕೊಳ್ಳುವದಕ್ಕೆ ಪ್ರಾಶಸ್ತ್ಯ ಕೊಡುವದು.

(ಇ) ಬೇಸಾಯ, ಮನೆಕಟ್ಟುವ, ಗೋಸಂಗೋಪನ ಸಂಘಗಳಿಗೆ ಭೂಮಿ ಮತ್ತು ಜಾಗೆಗಳನ್ನು ಕೊಡುವದು

(ಫ) ನಿರಾಶ್ರಿತರ ಮತ್ತು ನಿವೃತ್ತ ಸೈನಿಕರ ಪುನರ್ನಿವೇಶನಕ್ಕಾಗಿ ಸಹಕಾರಿ ಸಂಘಗಳನ್ನು ಉಪಯೋಗಿಸಿಕೊಳ್ಳುವದು

(ಗ) 'ಹೆಚ್ಚು ಆಹಾರ ಬೆಳೆಯಿರಿ' ಆಂದೋಲನವನ್ನು ಕಾರ್ಯಗತ ಗೊಳಿಸುವ ಕಾರ್ಯದಲ್ಲಿ, ಹಳ್ಳಿಗಳಲ್ಲಿ ಸಹಕಾರಿ ಸಂಘಗಳನ್ನು ಆಹಾರೋತ್ಪಾದನ ಸಮಿತಿಗಳೆಂದು ನಿಯಮಿಸಿ ಸುಧಾರಿಸಿದ ಬೀಜ, ಗೊಬ್ಬರಗಳನ್ನು ಹಂಚುವ ಕಾರ್ಯಗಳನ್ನು ಒಪ್ಪಿಸಿಕೊಟ್ಟು ಆಂದೋಲನಕ್ಕೆ ಪ್ರಾಶಸ್ತ್ಯ ಮತ್ತು ಪ್ರೋತ್ಸಾಹ ಕೊಡುವದು

(ಹ) ಪಾನ ನಿರೋಧ ಧೋರಣೆಯಿಂದ ಪೀಡಿತರಾದ ಜನರಿಗಾಗಿ ಸಹಕಾರಿ ಸಂಘಗಳನ್ನು ರಚಿಸುವದು ಮತ್ತು ಕುಡಿಯುವ ಹವ್ಯಾಸವನ್ನು ಹೋಗಲಾಡಿಸಲೆಂಬ ಉದ್ದೇಶದಿಂದ ಮನರಂಜನ ಕಾರ್ಯಕ್ರಮ ಗಳನ್ನು ಏರ್ಪಡಿಸುವದು ಪಾನನಿರೋಧ ಯೋಜನೆಯ ಮೇರೆಗೆ ಸಂಸ್ಕಾರ ಕೇಂದ್ರಗಳನ್ನು ತೆರೆಯುವ ಕಾರ್ಯವನ್ನು ಸಹಕಾರಿ ಸಂಘಗಳಿಗೆ ಒಪ್ಪಿಸುವದು

ಆಂದೋಲನವು ಅಸ್ತಿತ್ವದಲ್ಲಿದ್ದು ೫೦ ವರ್ಷಗಳಾದರೂ, ಕೆಲವೊಂದು ಕ್ಷೇತ್ರ ದಲ್ಲಿ ಬಿಟ್ಟು ಸರಕಾರದ ಸಹಾಯ ಮತ್ತು ಪ್ರೋತ್ಸಾಹಗಳಿಲ್ಲದೆ ಸಾಗುವ ಸ್ಥಿತಿಯು ಆಂದೋಲನಕ್ಕೆ ಇನ್ನೂ ಬಂದಿಲ್ಲ ಮುಂಬೈ ರಾಜ್ಯದಲ್ಲಿ ಆಂದೋ ಲನವು ಶೀಘ್ರ ಮತ್ತು ತೀವ್ರಗತಿಯಲ್ಲಿ ಪ್ರಗತಿ ಸಾಧಿಸಿದುದಕ್ಕ ಇತ್ತೀಚೆಗೆ ಸರಕಾರವು ನೀಡುತ್ತಿರುವ ಸಹಾಯ ಮತ್ತು ಪ್ರೋತ್ಸಾಹಗಳೇ ಹೆಚ್ಚಾಗಿ ಕಾರಣ ವಾಗಿವೆ ಈ ಪ್ರಗತಿಗೆ ಸರಕಾರದ ಮತ್ತು ಅಧಿಕಾರಿಗಳ ಸಹಾಯವೇ ಮುಖ್ಯ ಕಾರಣವೆಂದು ಹೇಳಲಾಗದು ಈ ರಾಜ್ಯದಲ್ಲಿ ಪ್ರಾರಂಭದಿಂದಲೂ ಅಧಿಕಾರೇತರ ಜನರು ಆಂದೋಲನದ ಬೆಳವಣಿಗೆ ಮತ್ತು ಪ್ರಚಾರಕ್ಕಾಗಿ ದುಡಿಯುತ್ತಲೇ ಬಂದಿ ದ್ದಾರೆ ಹಲಕೆಲವು ನಿಸ್ವಾರ್ಥ ಸಹಕಾರಿಗಳು ತಮ್ಮ ಜೀವನದ ಪರ್ಯಂತರವೂ ಸೇವೆ ಸಲ್ಲಿಸಿ ಆಂದೋಲನಕ್ಕೆ ತಮ್ಮ ಜೀವನವನ್ನೇ ತ್ಯಾಗ ಮಾಡಿದ್ದಾರೆ ಅಧಿಕಾರಿ ಗಳ ಮತ್ತು ಅಧಿಕಾರೇತರ ಜನರ ನಡುವಿನ ಸಖ್ಯದಿಂದಾಗಿ ಈ ರಾಜ್ಯ ಮತ್ತಿತರ ಕೆಲವು ರಾಜ್ಯಗಳಲ್ಲಿಯೂ ಆಂದೋಲನವು ಉತ್ತಮ ರೀತಿಯಲ್ಲಿ ಫಲಿಸಿದ್ದು

ಯಾವದೇ ಆರ್ಥಿಕ ಚಟುವಟಿಕೆಯನ್ನು ಕೈಕೊಳ್ಳಲು ಆಂದೋಲನವು ಸಮರ್ಥ ವಿದೆಯೆಂದು ತೋರಿಸಿಕೊಟ್ಟಿದೆ ಆದರೂ ಭಾರತದಂಥ ಬೆಳವಣಿಗೆ ಹೊಂದದ ನಾಡುಗಳಲ್ಲಿ ಸಹಕಾರಿ ಆಂದೋಲನವು ವಿವಿಧ ಸ್ವರೂಪಗಳಲ್ಲಿ ಬೆಳೆಯಬೇಕಾದರೆ ಸರಕಾರದ ಸಹಾಯವು ಅತ್ಯವಶ್ಯವಾಗಿದೆ ಆದರೆ ಸಹಕಾರಿ ಆಂದೋಲನವು ಪ್ರಜಾ ಪ್ರಭುತ್ವ ತತ್ವಗಳ ಮೇಲೆ ನಿಂತಿರುವದರಿಂದ ಸರಕಾರದ ನಿಯಂತ್ರಣವಿರುವದು ಆ ತತ್ವಕ್ಕೆ ವಿರೋಧವಾದದೆಂದೂ ಕೆಲವರು ವಾದಿಸುತ್ತಾರೆ ಸಹಕಾರೀ ಯೋಜನಾ ಸಮಿತಿಯು ತನ್ನ ವರದಿಯಲ್ಲಿ ಹೀಗೆ ಹೇಳಿದೆ

' ಆಂದೋಲನವು ಜನತೆಯದು ಮತ್ತು ಜನತೆಯ ಸಲುವಾಗಿರುವದ ರಿಂದ ಅದನ್ನು ಹೆಚ್ಚು ಹೆಚ್ಚು ರೀತಿಯಲ್ಲಿ ಜನತೆಯು ಸಾಗಿಸಿಕೊಂಡು ಹೋಗ ಬೇಕು ಸರಕಾರವು ಆಂದೋಲನವನ್ನು ಪ್ರಾರಂಭಿಸಿರುವದಾದರೂ ಜನತೆಗೆ ಸಹಾಯ, ಮಾರ್ಗದರ್ಶನ ಮತ್ತು ಕಾರ್ಯಕರ್ತರಿಗೆ ತರಬೇತಿಕೊಡುವ ದೃಷ್ಟಿ ಯಿಂದಲೇ ಹೊರತು ಆಂದೋಲನದ ಕಾಯಂ ನಿಯಂತ್ರಣಕ್ಕಾಗಿಯಲ್ಲ ''
'' ರಜಿಸ್ಟ್ರಾರರ ಅಧಿಕಾರಗಳನ್ನು ಹೆಚ್ಚು ಸ್ಪಷ್ಟವಾಗಿ ನಮೂದಿಸಿ ಸಾಧ್ಯವಿದ್ದಷ್ಟು ಕಡಿಮೆ ಮಾಡಬೇಕೆಂದು '' ದಿವಂಗತ ಶ್ರೀ ಎಚ್ ಎಲ್ ಕಾಜಿ, ಅವರು ಅಭಿಪ್ರಾಯ ಪಟ್ಟಿದ್ದಾರೆ ಆದರೂ ಆಂದೋಲನವನ್ನು ಪೂರ್ತಿಯಾಗಿ ಸರಕಾರದ ನಿಯಂತ್ರಣದಿಂದ ಹೊರಗುಳಿಸುವದಕ್ಕೆ ಕಾಲವು ಸನ್ನಿಹಿತವಾಗಿಲ್ಲವೆಂದೂ ಮತ್ತೆ ಕೆಲವರು ಅಭಿಪ್ರಾಯ ಪಡುತ್ತಾರೆ ಅದಕ್ಕಾಗಿ ಕೆಳಗಿನ ಕಾರಣಗಳನ್ನು ತೋರಿ ಸಲಾಗಿದೆ

(೧) ಸಹಕಾರಿ ಸಂಘಗಳು ಹೆಚ್ಚಿನ ರೀತಿಯಲ್ಲಿ ಧನಸಹಾಯ, ಶಾಸನಗಳ ರಿಯಾಯತಿ ಮತ್ತು ನೈತಿಕ ಬೆಂಬಲವನ್ನು ಪಡೆಯುತ್ತಲಿವೆ ಆದುದರಿಂದ ಈ ಎಲ್ಲ ವಿಶೇಷ ಸೌಲತ್ತು ಹಾಗೂ ಧನಸಹಾಯಗಳ ದುರುಪಯೋಗವಾಗದಂತೆ ನೋಡಿಕೊಳ್ಳುವದು ಅತ್ಯವಶ್ಯವಾಗಿದ ನೆದರ್ಲಂಡ, ಸ್ಕೆಂಡಿನೇವ್ಹಿಯನ್ ಮೊದ ಲಾದ ಸುಧಾರಿಸಿದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯೂ ಸರಕಾರದ ಸಹಾಯ ಪಡೆದಿ ರುವ ಸಂಘಗಳ ಮೇಲೆ ಸರಕಾರದ ನಿಯಂತ್ರಣವಿದೆ

(೨) ವಿವಿಧ ಪ್ರಕಾರಗಳ ಸಂಘಗಳ ಯೋಗ್ಯ ಫೆಡರೇಶನ್ನುಗಳು ಇಲ್ಲದೆ ಇರುವದರಿಂದ ಅವುಗಳ ಚಟುವಟಿಕೆಗಳನ್ನು ಸರಕಾರವು ಕೈಕೊಂಡಿದೆ

(೩) ಧುರೀಣತ್ವ ಪದ್ಧತಿಯು ವಿಶೇಷತಃ ಹಳ್ಳಿಗಾಡುಗಳಲ್ಲಿ ಚನ್ನಾಗಿ ಬೆಳವಣಿಗೆ ಹೊಂದಿಲ್ಲ

(೪) ಅಕ್ಷರ ಜ್ಞಾನವು ಹೆಚ್ಚಾಗಿಲ್ಲ

(೫) ಹಣದ ದುರುಪಯೋಗ ಮೊದಲಾದ ಚಟುವಟಿಕೆಗಳು ಇತ್ತಿತ್ತಲಾಗಿ ಸಂಘಟಿಸಲ್ಪಟ್ಟ ಹೊಸ ಪ್ರಕಾರದ ಸಂಘಗಳಲ್ಲಿ ಕಡಿಮೆಯಾಗಿಲ್ಲ

ಆದರೂ ಈ ಸಮಸ್ಯೆಯ ಬಗ್ಗೆ ಭಿನ್ನಾಭಿಪ್ರಾಯಗಳು ಕಂಡು ಬರುತ್ತಿವೆ ಭಾರತದ ಸದ್ಯದ ಪರಿಸ್ಥಿತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ,

ಆಂದೋಲನದ ಪ್ರಗತಿ ಮತ್ತು ಹಣ ತೊಡಗಿಸುವ ವರ್ಗದ ಸುರಕ್ಷತೆಯನ್ನು ಅನು ಲಕ್ಷಿಸಿ, ಆಂದೋಲನವನ್ನು ಪ್ರಗತಿ ಪರವಾಗಿ ನಿಯಂತ್ರಣ ಬಾಹಿರ ಮಾಡುವದು ಯೋಗ್ಯವಾದುದು ಈಗ ಕಲ್ಯಾಣ ರಾಜ್ಯ ಮತ್ತು ಸಹಕಾರಿ ಸಂರಾಜ್ಯಗಳನ್ನು ಸ್ಥಾಪಿಸಬೇಕೆಂದು ನಿರ್ಣಯಿಸಿರುವದರಿಂದ ಹೊಸ ಸಮಸ್ಯೆಗಳು ಉದ್ಭೂತವಾಗಿವೆ ನಾಡಿನ ಬೆಳವಣಿಗೆಯ ವಿವಿಧ ಯೋಜನೆಗಳಲ್ಲಿ ಯೋಜನಾ ಸಮಿತಿಯು ಆಂದೋ ಲನಕ್ಕೆ ಯೋಗ್ಯ ಸ್ಥಾನವನ್ನು ಕೊಟ್ಟಿದೆ ಸಹಕಾರವು ವೈಯಕ್ತಿಕ ಖಾಸಗೀ ಜೀವನದ ಅಥವಾ ವರ್ಗದ ಒಂದು ರೂಪವಾಗಿರದೆ ಸುವ್ಯವಸ್ಥಿತ ಆರ್ಥಿಕ ಕೃತಿ ರಚನೆಯ ಒಂದು ಅಜೇಯವಾದ ದೀಪವಾಗಿದೆಯೆಂದು ಸಮಿತಿಯು ಅಭಿಪ್ರಾಯ ಪಡುತ್ತದೆ ಈ ದೃಷ್ಟಿಯಿಂದ ಸುಯೋಜಿತ ಅರ್ಥ ರಚನೆಯಲ್ಲಿ ಸರಕಾರದ ಕೆಲವೊಂದು ಸಲಹೆ ಸೂಚನೆ ಮತ್ತು ನಿಯಂತ್ರಣಗಳು ಅನಿವಾರ್ಯವಾಗಿವೆ ಸಹ ಕಾರಿ ಆಂದೋಲನವು ಹುಟ್ಟಿದಾರಂಭದಿಂದಲೂ ಸಹಕಾರಿ ಖಾತೆ ಮತ್ತು ಸರಕಾ ರೇತರರ ನಡುವಿರುವ ಪರಸ್ಪರ ಪ್ರೀತಿ, ಸೌಹಾರ್ದ ಮತ್ತು ಒಮ್ಮತ ಸಂಬಂಧವು ಈ ರಾಜ್ಯದಲ್ಲಿ ಬೆಳೆದುಕೊಂಡು ಬಂದಿದೆ ಈ ಮೊದಲೇ ಹೇಳಿದಂತೆ, ಸರಕಾರೇತ ರರ ಸಹಕಾರ ಮತ್ತು ನಿಸ್ವಾರ್ಥ ಸೇವೆಗಳನ್ನು ಈ ಆಂದೋ ನದಲ್ಲಿ ಸಲ್ಲಿಸದಿದ್ದರೆ ಇದು ಇಷ್ಟೊಂದು ಉಚ್ಚಮಟ್ಟಕ್ಕೆ ಮುಟಲು ಶಕ್ಯವಾಗುತ್ತಿರಲಿಲ್ಲ ಸಹಕಾರಿ ಆಂದೋಲನದ ವಿಕಾಸಕ್ಕ ತಕ್ಕ ಯೋಜನೆಗಳನ್ನು ತಯಾರಿಸಲು ಮತ್ತು ಅದರ ವಿವಿಧ ಪ್ರಶ್ನೆಗಳ ಬಗ್ಗೆ ಸರಕಾರಕ್ಕೆ ಸಲಹೆ ನೀಡಲು ಪ್ರಾಂತಿಕ ಸಹಕಾರಿ ಸಂಸ್ಥೆಯ ಪ್ರೆಸಿಡೆಂಟ ಇವರು ಚೇರಮನ್ನರಾಗಿರುವ ಸಹಕಾರಿ ಕೌನ್ಸಿಲ್‌ನ್ನು ಸ್ಥಾಪಿಸಿದುದು, ಸಹಕಾರಿ ಕಾಯದೆಯ ೫೬ ನೆಯ ಕಲಮಿನನ್ವಯ ರಜಿಸ್ಟ್ರಾರನ ಪ್ರತಿನಿಧಿಗಳ ತೀರ್ಪುಗಳ ವಿರುದ್ಧ ಮಾಡಿಕೊಂಡ ಅರ್ಜಿಗಳನ್ನು ವಿವೇಚಿಸಲು ಮತ್ತು ಅಪೀಲು ಗಳನ್ನು ಕೇಳಲು ಸಹಕಾರಿ ಶಾಸನ ಸಭೆಯು (Cooperative Tribunal) ರಚಿತವಾದುದು, ಸಹಕಾರಿ ಸಂಸ್ಥೆಗೆ (Co-operative Institute) ಹೆಚ್ಚು ಹೆಚ್ಚಾಗಿ ಅಧಿಕಾರಗಳನ್ನೂ ಮತ್ತು ಸರ್ಟಿಫಾಯಿಡ ಆಡಿಟರರಿಗೆ ಲೆಕ್ಕ ಪರಿಶೋಧನೆಯ ಬಗ್ಗೆ ಕೆಲವು ಪ್ರಕಾರದ ಸಂಘಗಳನ್ನು ವರ್ಗಾಯಿಸಿದುದು ಈ ಮೊದಲಾದ ಕ್ರಮಗಳು ಕೆಲಮಟ್ಟಿಗೆ ಸಹಕಾರದ ನಿಯಂತ್ರಣದ ಪಾತ್ರವನ್ನು ಸರಕಾರೇತರರವನ್ನಾಗಿ ಮಾಡುವ ಕಾರ್ಯಗಳಾಗಿವೆ ಆರ್ಥಿಕ ಮತ್ತು ಬ್ಯಾಂಕಿಗೆ ಸಂಬಂಧಿಸಿದ ಸರ್ವಸಾಮಾನ್ಯ ವಿಷಯಗಳ ಧೋರಣೆಗಳ ಪ್ರಶ್ನೆಗಳ ಬಗ್ಗೆ ಬ್ಯಾಂಕುಗಳ ಸಂಸ್ಥೆಯ ಸಲಹೆಗಳನ್ನು ರಜಿಸ್ಟ್ರಾರನು ಪಡೆಯು ತ್ತಾನೆ ಮೇಲ್ವಿಚಾರಣೆಯ ವಿಷಯದಲ್ಲಿಯೂ ರಜಿಸ್ಟ್ರಾರನು ಚೇರಮನ್ನನಾಗಿರುವ ಪ್ರಾಂತಿಕ ಸಹಕಾರಿ ಮೇಲ್ವಿಚರಣಾ ಬೋರ್ಡ ಇರುತ್ತದೆ ಮೇಲ್ವಿಚಾರಣೆಯ ಬಗ್ಗೆ ಸರ್ವಸಾಮಾನ್ಯ ಧೋರಣೆಗಳನ್ನು ಬೋರ್ಡಿನ ಮೀಟಿಂಗುಗಳಲ್ಲಿ ವಿಚಾರಿಸಿ, ಯೋಗ್ಯ ಅಭಿಪ್ರಾಯಗಳನ್ನು ತಿಳಿಯುತ್ತಾರೆ ರಜಿಸ್ಟ್ರಾರನು ಮತ್ತು ಅವನ ನೌಕರ ವರ್ಗವು ಸ್ವೇಚ್ಛಾಧಿಕಾರವನ್ನು ಕಲವು ಪ್ರಸಂಗಗಳಲ್ಲಿ ಉಪಯೋಗಿಸುವದರ ಲ್ಲಿಯೂ ಸರಕಾರೇತರರಿಂದ ಯಾವದೇ ವಿರುದ್ಧ ದೂರುಗಳು ಬಂದಿರುವದಿಲ್ಲ ಸಹಕಾರದ ಪ್ರಜಾಸತ್ತಾತ್ಮಕ ನಿಯಮಗಳಿಗನುಗುಣವಾಗಿ ಆಂದೋಲನವನ್ನು

ಆವಷ್ಟು ಮಟ್ಟಿಗೆ ಸರಕಾರೇತರರಿಂದ ನಿಯಂತ್ರಿಸಲು ಕೆಲವು ಪ್ರಮುಖ ಅಧಿಕಾರೇತರರ ಬೇಡಿಕೆಯು ಅಭಿಪ್ರಾಯಗಳು ಇತ್ತಿತ್ತಲಾಗಿ ಬಂದಿವೆ. ಈ ಬೇಡಿಕೆಗೆ ಸರಕಾರವು ತಕ್ಕ ಮನ್ನಣೆ ಕೊಟ್ಟಿದೆ ಆದರೆ ಎಷ್ಟರಮಟ್ಟಿಗೆ ಆಂದೋಲನದ ನಿಯಂತ್ರಣವನ್ನು ಸರಕಾರೇತರರಿಗೆ ಒಪ್ಪಿಸಬೇಕೋ ಎಂಬ ಪ್ರಶ್ನೆಯು ಇನ್ನೂ ವಿಚಾರಿಸತಕ್ಕದ್ದಿದೆ ಆರ್ಥಿಕ ವಿಷಯದಲ್ಲಿ ಆಂದೋಲನವು ಎಷ್ಟರಮಟ್ಟಿಗೆ ಸ್ವಾವಲಂಬಿಯಾಗಿದೆ, ಏರಿಳಿತೆಯು ಪ್ರತಿಸ್ಪರ್ಧೆಯಲ್ಲಿ ಆಂದೋಲನಕ್ಕ ಎಷ್ಟೊಂದು ನೆರವು ಬೇಕಾಗಿದೆ, ರಾಷ್ಟ್ರೀಯ ಯೋಜನೆಯಲ್ಲಿ ಹೊಸ ಸಮಾಜ ರಚನೆಯನ್ನು ಕಟ್ಟಲು ಹೆಣಗಬೇಕಾದ ಕಾರ್ಯದಲ್ಲಿ ಆಂದೋಲನದ ವಿವಿಧ ಭಾಗಗಳು ಕೈಕೊಳ್ಳಬಹುದಾದ ಪಾತ್ರ ಮತ್ತು ಅವುಗಳ ಜವಾಬ್ದಾರಿಯ ಅರಿವು ಈ ಮೊದಲಾದ ವಿಷಯಗಳ ಮೇಲಿಂದ ಈ ಪ್ರಶ್ನೆಯನ್ನು ಬಿಡಿಸತಕ್ಕದ್ದಿದ

## ಸಹಕಾರಿ ಖಾತೆಯ ರಚನೆ

ಸಹಕಾರಿ ಖಾತೆಯು ಅನೇಕ ವಿಭಾಗಗಳನ್ನೊಳಗೊಂಡಿವೆ ಅವೆಂದರೆ — ೧ ಆಡಳಿತೆ ( Administrative ) ೨ ಒಕ್ಕಲುತನದ ಹುಟ್ಟುವಳಿಯ ಮಾರಾಟ ( Marketing ) ೩ ಲೆಕ್ಕ ಪರಿಶೋಧನೆ ( Audit ) ೪ ಗೃಹ ಉದ್ದಿಮೆಗಳು ( Cottage Industries ) ಮತ್ತು ೫ ಸಾಹುಕಾರಿ ನಿಯಂತ್ರಣ ( Money Lenders ) ಹೀಗೆ ಅನೇಕ ವಿಭಾಗಗಳಿದ್ದರೂ ರಜಿಸ್ಟ್ರಾರರ ಆಡಳಿತೆಯ ಕೆಳಗೆ ಒಂದಕ್ಕೊಂದು ಹೊಂದಿಕೊಂಡಿವೆ ರಜಿಸ್ಟ್ರಾರನೇ ಈ ಖಾತೆಯ ಮುಖ್ಯ ಅಧಿಕಾರಿಯು ಅವನ ಸಹಾಯಕ್ಕಾಗಿ ಮುಖ್ಯ ಕಚೇರಿಯಲ್ಲಿ ಜಾಯಿಂಟ ರಜಿಸ್ಟ್ರಾರ ಸಿ ಎಸ್ ಜಾಯಿಂಟ ರಜಿಸ್ಟ್ರಾರ ಆಯ್ ಸಿ ವ್ಹಿ ಆಯ್, ಚೀಫ್ ಆಡಿಟರ ಆಂಡ್ ಫೈನಾನ್ಸಿಯಲ್ ಅಡ್ವಾಯಸರ, ಚಿಫ್ ಮಾರ್ಕೆಟಿಂಗ ಆಫೀಸರ ಮತ್ತು ಪರ್ಸನಲ್ ಅಸಿಸ್ಟಂಟ ಹೀಗೆ ಮುಖ್ಯ ಮುಖ್ಯ ಅಧಿಕಾರಿಗಳಿರುತ್ತಾರೆ

ರಜಿಸ್ಟ್ರಾರನ ಸಹಾಯಕ್ಕೆಂದು ಜಿಲ್ಹೆ ಮತ್ತು ತಾಲೂಕುಗಳ ತಳಹದಿಯ ಮೇಲೆ ಇರುವ ನೌಕರ ವರ್ಗದ ವಿವರವನ್ನು ಪರಿಶಿಷ್ಟ ೧ ರಲ್ಲಿ ಕಾಣಿಸಲಾಗಿದೆ

ಸಹಕಾರಿ ಆಂದೋಲನದ ಬೆಳವಣಿಗೆಯ, ಧೋರಣೆಯ ಮುಖ್ಯ ಸಮಸ್ಯೆಗಳ ಬಗ್ಗೆಯೂ ಮತ್ತು ಕೆಳಗಿನ ಕಾಯದೆಯ ಆಡಳಿತೆಯ ಬಗ್ಗೆಯೂ ರಜಿಸ್ಟ್ರಾರನು ಜವಾಬ್ದಾರನಿರುತ್ತಾನೆ

೧ ) ೧೯೨೫ ರ ಮುಂಬಯಿ ಸಹಕಾರಿ ಸಂಘಗಳ ಕಾಯದ

೨ ) ೧೯೩೯ ರ ಮುಂಬಯಿ ಒಕ್ಕಲತನ ಹುಟ್ಟುವಳಿ ಮಾರಾಟದ ಕಾಯಿದೆ

೩ ) ೧೯೪೭ ರ ಮುಂಬಯಿ ಶೇತ್ಕಿ ಸಾಲಗಾರರ ಪರಿಹಾರ ಕಾಯಿದೆ ( ಸಹಕಾರಿ ಸಂಘಗಳ ಮುಖಾಂತರ ಬೆಳೆ ಸಾಲ, ಪ್ರಚಾರ ಮತ್ತಿತರ ವಿಷಯಗಳ ಬಗ್ಗೆ )

೪) ೧೯೪೭ ರ ಮುಂಬಯಿ ಸಾಹುಕಾರೀ ಕಾಯಿದ

೫) ೧೯೪೭ ರ ಮುಂಬಯಿ ವೇಅರಹೌಸ ಕಾಯಿದೆ

## ಜಾಯಿಂಟ ರಜಿಷ್ಟ್ರಾರ, ಸಹಕಾರಿ ಸಂಘಗಳು, ಪುಣೆ

ಜಾಯಿಂಟ ರಜಿಷ್ಟ್ರಾರನು ಸಹಕಾರಿ ವಿಷಯದ ನಿತ್ಯದ ಕೆಲಸದಲ್ಲಿ ರಜಿಷ್ಟ್ರಾರನಿಗೆ ಸಹಾಯ ಮಾಡುತ್ತಾನೆ. ಮುಂಬಯಿ ಸಹಕಾರಿ ಸಂಘಗಳ ಕಾಯಿದೆಯ ಮೇರೆಗೆ ಇವನಿಗೆ ರಜಿಷ್ಟ್ರಾರನ ಎಲ್ಲ ಅಧಿಕಾರಗಳನ್ನು ಕೊಡಲಾಗಿದೆ ಆದರೆ ಕಲಮು ೬೪ ಎ. ದರಲ್ಲಿಯ ಅಧಿಕಾರಗಳಲ್ಲಿ ಶೇತ್ಕಿಪತ್ತಿನ, ಬಿನ್‌ಪತ್ತಿನ ನಗರ ಪತ್ತಿನ ಮತ್ತು ಸಂಬಳ ಪಡೆಯುವವರ ಸಂಘಗಳ (ಪರಿಪೂರ್ಣತಗೆ ಸಂದಿದ ನಟ್ಟಣ ಬ್ಯಾಂಕುಗಳನ್ನು ಬಿಟ್ಟು) ಮಟ್ಟಿಗೆ ಮಾತ್ರ ಜಾಯಿಂಟ ರಜಿಷ್ಟ್ರಾರನ ಅಧಿಕಾರವಿರುತ್ತದೆ

## ಜಾಯಿಂಟ ರಜಿಷ್ಟ್ರಾರ, ಔದ್ಯೋಗಿಕ ಸಹಕಾರಿ ಸಂಘಗಳು ಮತ್ತು ಹಳ್ಳಿಯ ಉದ್ದಿಮೆಗಳು

ಕಸಬುದಾರರನ್ನು ಸಹಕಾರಿ ತತ್ವಗಳ ಮೇರೆಗೆ ಸಂಘಟಿಸುವದು, ಅವರಿಗೆ ಹಣ ಮತ್ತು ಕಚ್ಚಾ ಸರಕುಗಳನ್ನು ಪೂರೈಸುವದು, ಅವರ ಸರಕುಗಳ ಮಾರಾಟದ ವ್ಯವಸ್ಥೆ ಮಾಡುವದು, ಮೊದಲಾದ ಕಾರ್ಯಗಳನ್ನು ಈ ಹಿಂದೆ ಸಹಕಾರಿ ಖಾತೆಯೇ ಮಾಡುತ್ತ ಬಂದಿದೆ ತಾಂತ್ರಿಕ ಸುಧಾರಣೆ, ವಿಷಯ ಸಂಗ್ರಹ ಮೊದಲಾದ ಗೃಹ ಉದ್ದಿಮೆಗೆ ಸಂಬಂಧಿಸಿದ ವಿಷಯಗಳನ್ನೆಲ್ಲ ಔದ್ಯೋಗಿಕ ಖಾತೆಗೆ (Department of Industries) ಒಪ್ಪಿಸಲಾಗಿತ್ತು ಆದರೆ ೧೯೪೬ ರಲ್ಲಿ, ಗೃಹ ಉದ್ದಿಮೆಯ ಅನೇಕ ಯೋಜನಗಳನ್ನು ಔದ್ಯೋಗಿಕ ಖಾತೆಯಿಂದ ಸಹಕಾರಿ ಖಾತೆಗೆ ವರ್ಗಾಯಿಸಿ ಜಾಯಿಂಟ ರಜಿಷ್ಟ್ರಾರ, ಔದ್ಯೋಗಿಕ ಸಹಕಾರಿ ಸಂಘ ಮತ್ತು ಹಳ್ಳಿಯ ಉದ್ದಿಮೆಗಳು, ಎಂಬ ಹೊಸ ಅಧಿಕಾರಿಗೆ ಈ ವಿಭಾಗವನ್ನು ಒಪ್ಪಿಸಲಾಯಿತು ಮುಂಬಯಿ ಸಹಕಾರಿ ಸಂಘಗಳ ಕಾಯಿದೆಯನ್ವಯ ಅವರಿಗೆ ಕಲಮು ೬೪ ಎ ದರಲ್ಲಿಯ ಅಧಿಕಾರಗಳನ್ನು ಬಿಟ್ಟು ರಜಿಷ್ಟ್ರಾರನ ಎಲ್ಲ ಅಧಿಕಾರಿಗಳನ್ನು ಕೊಡಲಾಗಿದೆ

ಇವನಿಗೆ ತನ್ನ ಕಾರ್ಯದಲ್ಲಿ ಡೆಪ್ಯುಟಿ ಜಾಯಿಂಟ ರಜಿಷ್ಟ್ರಾರ, ಆಯ್ ಸಿ ಆ್ಯಂಡ ಪ್ಹಿ. ಆಯ್. ಮತ್ತಿತರ ತಾಂತ್ರಿಕ ತಜ್ಞರು ಅಂದರೆ (೧) ಟೆಕ್ಸಟಾಯಿಲ್ ಆಫೀಸರ (೨) ಚರ್ಮ ಹದ ಮಾಡುವ ಮತ್ತು ಚರ್ಮದ ತಜ್ಞ. (೩) ಉಣ್ಣೆ ವಿಷಯಗಳ ತಜ್ಞ (೪) ಕಾತೆಯ ಮೇಲ್ವಿಚಾರಕ (೫) ಗ್ಲಾಸ್ ಕಮಿಸ್ಟ (೬) ಸಿರಿಕಲ್ಚರಿಸ್ಟ (೭) ಸಿರಾಮಿಕ್ ಕೆಮಿಸ್ಟ ಮತ್ತು (೮) ಸುಪರಿಂಟೆಂಡೆಂಟ ಪ್ಹಿ ಆಯ್. ಇ. ಡಬ್ಲ್ಯು. ಮೊದಲಾದ ತಜ್ಞರು ಸಹಾಯಕರಾಗಿರುತ್ತಾರೆ ಜಿಲ್ಹೆಗಳಲ್ಲಿ ಜಿಲ್ಹಾ ಅಧಿಕಾರಿ ಆಯ್ ಸಿ ಆ್ಯಂಡ ಪ್ಹಿ ಆಯ್ ಇವನು ಸಹಾಯಕನಾಗಿದ್ದು ಜಿಲ್ಹೆಗಳಲ್ಲಿಯ ಗೃಹ ಉದ್ದಿಮೆ ಮತ್ತು ಔದ್ಯೋಗಿಕ ಸಹಕಾರಿ ಸಂಘಗಳ ಕಾರ್ಯಗಳನ್ನು ನೋಡುತ್ತಾನೆ

## ಚೀಫ್ ಆಡಿಟರ ಮತ್ತು ಆರ್ಥಿಕ ಸಲಹಾಗಾರ.

ಲೆಕ್ಕ ಪರಿಶೋಧನೆಯ ಶಾಸನಬದ್ಧ ಕಾರ್ಯಗಳಲ್ಲಿ ಇವನು ರಜಿಷ್ಟ್ರಾರನಿಗೆ ಸಹಾಯ ಮಾಡುತ್ತಾನೆ ಅಲ್ಲದೆ ಸಹಕಾರಿ ಹಣ ಕಾಸಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲಿ ರಜಿಸ್ಟ್ರಾರನಿಗೆ ಇವನು ಸಲಹೆ ಕೊಡುತ್ತಾನೆ. ಲೆಕ್ಕ ಪರಿಶೋಧನೆಯ ಎಲ್ಲ ನೌಕರ ವರ್ಗದ ಮೇಲ್ವಿಚಾರಣೆಯನ್ನು ಚೀಫ್ ಆಡಿಟರನಿಗೆ ಒಪ್ಪಿಸಲಾಗಿದೆ. ಕಲಮು ೬೪-ಎ ದರಲ್ಲಿಯ ಅಧಿಕಾರಗಳನ್ನು ಬಿಟ್ಟು ಇವನಿಗೆ ರಜಿಷ್ಟ್ರರನ ಎಲ್ಲ ಅಧಿಕಾರಗಳು ಇವೆ

## ಡಿವ್ಹಿಜನಲ್ ಡೆಪ್ಯುಟಿ ರಜಿಷ್ಟ್ರಾರ.

ರಾಜ್ಯದಲ್ಲಿ ಪುಣೆ, ಅಹಮ್ಮದಾಬಾದ, ಬಡೋದೆ, ನಾಸಿಕ ಮತ್ತು ಬೆಳಗಾಂವ ಹೀಗೆ ೫ ಡೆಪ್ಯುಟಿ ರಜಿಷ್ಟ್ರಾರರಿದ್ದಾರೆ ಮುಂಬಯಿ ಸಹಕಾರಿ ಸಂಘಗಳ ಕಾಯಿದೆಯನ್ವಯ ಕಲಮು ೬೪-ಎ ದರಲ್ಲಿ ಬರುವ ಅಧಿಕಾರಗಳನ್ನು ಬಿಟ್ಟು ಡೆಪ್ಯುಟಿ ರಜಿಷ್ಟ್ರಾರನಿಗೆ ರಜಿಷ್ಟ್ರಾರನ ಎಲ್ಲ ಅಧಿಕಾರಿಗಳೂ ಇವೆ ತಮ್ಮ ಕೈಕೆಳಗಿನ ನೌಕರ ವರ್ಗಕ್ಕೆ ಸಂಬಂಧಿಸಿದ ಆಡಳಿತೆಯ ಮತ್ತು ಆರ್ಥಿಕ ವಿಷಯದ ಅಧಿಕಾರಗಳೂ ಇವರಿಗಿರುತ್ತವೆ

ಪುನರ್ಘಟಿತ ಆಡಳಿತೆಯ ರಚನಯ ಮೇರೆಗೆ ವೈಯಕ್ತಿಕ ಕಸಬುದಾರರಿಗೆ ಸಾಲ ಕೊಡುವ ಮತ್ತಿತರ ಗೃಹ ಉದ್ದಿಮೆಗೆ ಸಂಬಂಧಿಸಿದ ಎಲ್ಲ ವಿಷಯಗಳ ಕಾರ್ಯವನ್ನೂ ಡೆಪ್ಯುಟಿ ರಜಿಷ್ಟ್ರಾರರಿಗೆ ಒಪ್ಪಿಸಲಾಗಿವ

## ಅಸಿಸ್ಟಂಟ ರಜಿಷ್ಟ್ರಾರ

ಪುನರ್ಘಟಿತ ಯೋಜನೆಯ ಮೇರೆಗೆ ಡಾಂಗ ಜಿಲ್ಹೆಯೊಂದನ್ನು ಬಿಟ್ಟು ಉಳಿದ ಎಲ್ಲ ಜಿಲ್ಹೆಗಳಿಗೂ ಅಸಿಸ್ಟಂಟ ರಜಿಷ್ಟ್ರಾರರಿದ್ದಾರೆ ಅಸಿಸ್ಟಂಟ ರಜಿಷ್ಟ್ರಾರರ ಕರ್ತವ್ಯ ಮತ್ತು ಅಧಿಕಾರಗಳನ್ನು ಸ್ಥೂಲವಾಗಿ ಕೆಳಗಿನಂತೆ ಎರಡು ಭಾಗಗಳಲ್ಲಿ ವಿಂಗಡಿಸಬಹುದು.

( ೧ ) ಶಾಸನಬದ್ಧ ಕಾರ್ಯಗಳು ಮತ್ತು ( ೨ ) ಆಡಳಿತೆಯ ಕಾರ್ಯಗಳು

೧ ) **ಶಾಸನಬದ್ಧ ಕಾರ್ಯಗಳು**:—ಅಸಿಸ್ಟಂಟ ರಜಿಷ್ಟ್ರಾರನಿಗೆ ಮುಂಬೈ ಸಹಕಾರಿ ಸಂಘಗಳ ಕಾಯ್ದೆಯ ಮೇರೆಗೆ, ೪೭, ೪೮, ೪೯, ೫೩, ಮತ್ತು ೬೪ ಎ, ಈ ಕಲಮುಗಳ ಕೆಳಗೆ ಬರುವ ಅಧಿಕಾರಗಳನ್ನು ಬಿಟ್ಟು ಸಹಕಾರಿ ಸಂಘಗಳ ರಜಿಷ್ಟ್ರಾರನಿಗೆ ಇರುವ ಎಲ್ಲ ಅಧಿಕಾರಗಳನ್ನು ಕೊಡಲಾಗಿದೆ ೧೦, ೧೫, ೧೫ ಎ, ೧೬, ೧೬ ಎ, ೪೬ ಎ, ೫೦, ೫೦ ಎ, ೫೧, ೫೨, ೫೪ ಎ, ಮತ್ತು ೬೩ (೩) ಈ ಕಲಮುಗಳಲ್ಲಿಯ ಅಧಿಕಾರಗಳು ಸಹಿತ ಮರ್ಯಾದಿತವಾಗಿವೆ ಅದೇ ಮೇರೆಗೆ ೫೦ ( ಸಿ ), ೫೦ ( ಇ ), ೫೦ ( ಎಫ್ ) ಮತ್ತು ೫೦ ( ಜಿ ) ಈ ಕಲಮುಗಳನ್ವಯ ಅಸಿಸ್ಟಂಟ

ರಜಿಷ್ಟ್ರಾರನಿಗೆ ಮರ್ಯಾದಿತ ಅಧಿಕಾರಗಳಿವೆ ಮುಂಬಯಿ ಸಹಕಾರಿ ಸಂಘಗಳ ಕಾಯ್ದೆಯ ಮೇರೆಗೆ ಅವನಿಗೆ ಕೊಡಲಾಗಿರುವ ಅಧಿಕಾರಗಳ ಜೊತೆಗೆ ೧೯೨೭ ಮುಂಬಯಿ ಸಹಕಾರಿ ಸಂಘಗಳ ನಿಯಮಗಳ ಮೇರೆಗೆ ಕೆಲವೊಂದು ಅಧಿಕಾರಗಳನ್ನು ಕೊಡಲಾಗಿವೆ ೩೨ ಮತ್ತು ೩೫ ಈ ನಿಯಮಗಳಲ್ಲಿ ಅಸಿಸ್ಟಂಟ ರಜಿಷ್ಟ್ರಾರನಿಗೆ ಸಂಪೂರ್ಣ ಅಧಿಕಾರಗಳಿವೆ ಆದರೆ ೩, ೫, ೬, ೭ ಎ, ೭, ೮, ೧೧, ೧೨ ಎ, ೧೭, ೨೫, ೨೮, ೩೭, ೩೮ (೩), ೩೮ (೫) ಈ ಕಾನೂನಗಳ ಪ್ರಕಾರ ಮುಂಬಯಿ ಸಹಕಾರಿ ಕಾಯದೆಯ ೧೦ ನಯ ಕಲಮಿನನ್ವಯ ಅವನು ನೋಂದಾಯಿಸಬಹುದಾದ ಬೇರ ಬೇರೆ ಪ್ರಕಾರದ ಸಂಘಗಳ ಮಟ್ಟಿಗೇನೇ ಅವನಿಗೆ ಮರ್ಯಾದಿತ ಅಧಿಕಾರಗಳು ಇರುತ್ತವೆ

೨) **ಆಡಳಿತೆಯ ಕಾರ್ಯಗಳು** ·—ಅಸಿಸ್ಟಂಟ ರಜಿಷ್ಟ್ರಾರನು ಜಿಲ್ಹೆಯ ಆಡಳಿತೆಯ ಅಧಿಪತಿಯಾಗಿದ್ದು ಎಲ್ಲ ತರದ ಸಹಕಾರಿ ಸಂಘಗಳ ಮೇಲ್ವಿಚಾರಣೆ, ಮಾರ್ಗದರ್ಶನ ಮತ್ತು ನಿಯಂತ್ರಣಗಳು ಇವನಿಗೆ ಸೇರಿವೆ ಪುನರ್ಘಟಿತ ಯೋಜನಯನ್ವಯ ಗೃಹ ಮತ್ತು ಚಿಕ್ಕಪುಟ್ಟ ಉದ್ದಿಮೆ ಮತ್ತು ಔದ್ಯೋಗಿಕ ಸಹಕಾರಿ ಸಂಘಗಳಿಗೆ ಸಂಬಂಧಿಸಿದ ಜಿಲ್ಹೆಯ ಕಾರ್ಯವನ್ನು ಅಸಿಸ್ಟಂಟ ರಜಿಷ್ಟ್ರಾರನಿಗೆ ಒಪ್ಪಿಸಲಾಗಿದೆ ಈ ಕಾರ್ಯಗಳಲ್ಲಿ ಡಿಸ್ಟ್ರಿಕ್ಟ್ ಆಫಿಸರ್, ಆಯ್ ಸಿ ವ್ಹಿ ಆಯ್ ಮತ್ತು ಔದ್ಯೋಗಿಕ ಸುಪರವಾಯಝರರು ಅಸಿಸ್ಟಂಟ ರಜಿಷ್ಟ್ರಾರನಿಗೆ ಸಹಾಯ ಮಾಡುತ್ತಾರೆ

## ಡಿಸ್ಟ್ರಿಕ್ಟ ಕೋ—ಆಪರೇಟಿವ್ಹ ಆಫೀಸರ.

ಅಸಿಸ್ಟಂಟ್ ರಜಿಷ್ಟ್ರಾರನಿಗೆ ಆಡಳಿತೆಯ ಕಾರ್ಯಗಳಲ್ಲಿ ಕೆಳದರ್ಜೆಯ ಸಹಕಾರಿ ನೋಕರ ವರ್ಗಕ್ಕೆ ಸೇರಿದ ಡಿಸ್ಟ್ರಿಕ್ಟ ಕೋ—ಆಪರೇಟಿವ್ಹ ಆಫೀಸರ ದರ್ಜೆಯ ಅಧಿಕಾರಿಯು ಸಹಾಯ ಮಾಡುತ್ತಾನ ಆಡಳಿತೆಯ ಕ್ಷೇತ್ರದಲ್ಲಿ ಸಂಘಗಳ ಸಂಘಟನೆ, ಆಂದೋಲನದ ಬೆಳವಣಿಗೆ, ಹಳ್ಳಿಗಳ ಮತ್ತು ಸಣ್ಣ ಪಟ್ಟಣಗಳಲ್ಲಿಯ ಸಹಕಾರಿ ಸಂಘಗಳ ಮೇಲ್ವಿಚಾರಣೆ, ವಿತರಣಾ ಕಾರ್ಯದ ಮೇಲ್ವಿಚಾರಣೆ, ಬೆಳೆ ಬೆಳೆದುಕೊಳ್ಳುವದಕ್ಕಾಗಿ ಕೊಡುವ ಸಾಲಗಳ ವ್ಯವಸ್ಥೆ ಮತ್ತು ವಸೂಲಿ ಮತ್ತಿತರ ಇಂಥ ಕಾರ್ಯಗಳ ಬಗ್ಗೆ ದಿಸ್ಟ್ರಿಕ್ಟ ಕೋ—ಆಪರೇಟಿವ್ಹ ಆಫೀಸರನು ಜವಾಬ್ದಾರನಾಗಿರುತ್ತಾನೆ ಇವನಿಗೆ ಒಪ್ಪಿಸಲ್ಪಟ್ಟ ಇತರ ಕೆಲಸಗಳಲ್ಲಿ ಸಹಕಾರಿ ಕಾಯ್ದೆಯ ೪೩ ನೆಯ ಕಲಮಿನನ್ವಯ ಅಸಿಸ್ಟಂಟ ರಜಿಷ್ಟ್ರಾರರ ಹುಕುಮಿನ ಪ್ರಕಾರ ಸಂಘಗಳ ಘಟನ, ಆಡಳಿತೆ ಮತ್ತು ಆರ್ಥಿಕ ಪರಿಸ್ಥಿತಿಯ ವಿಷಯದಲ್ಲಿ ಮಾಡಬೇಕಾದ ಚೌಕಸಿ, ಸಂಘಗಳ ಲಿಕ್ವಿಡೇಶನ ( ರದ್ದು ಮಾಡುವ ) ಕಾರ್ಯ, ವಿಶೇಷ ಲಕ್ಷಕೊಡಬೇಕಾಗಿರುವ ಮಹತ್ವದ ಸಂಘಗಳ ತಪಾಸಣೆ,

ಸಂಘಗಳ ಸಂಘಟನೆಯು ಮತ್ತು ನೋಂದಣಿಯು ವಿಷಯದಲ್ಲಿ ಅಗತ್ಯವಿರುವ ಕಾಗದಪತ್ರಗಳನ್ನು ಸಿದ್ಧಪಡಿಸುವದು, ಸಂಘಗಳ ವ್ಯವಹಾರದ ವಿಷಯದಲ್ಲಿ ಸಾರ್ವಜನಿಕರಿಂದ ಬಂದ ಅರ್ಜಿಗಳ ವಿಚಾರಣೆ ಮೊದಲಾದ ಕೆಲಸಗಳು ಇರುತ್ತವೆ. ಕೆಲವೊಂದು ಮುಖ್ಯ ಸಹಕಾರಿ ಸಂಸ್ಥೆಗಳಲ್ಲಿಯೂ ಸಹಿತ ಡಿಸ್ಟ್ರಿಕ್ಟ ಕೋ-ಆಪರೇಟಿವ್ಹ ಆಫೀಸರನು ಸಹಕಾರಿ ಖಾತೆಯು ಪ್ರತಿನಿಧಿಯಾಗಿ ಕೆಲಸ ಮಾಡುತ್ತಾನೆ

## ಸುಪರವಾಯಝರರು.

ಜಿಲ್ಹೆಯು ಆಡಳಿತೆಯು ಯಂತ್ರದ ಸರಪಳಿಯಲ್ಲಿ ಮೇಲ್ವಿಚಾರಣೆಯು ನೌಕರ ವರ್ಗವು (Supervision staff) ಕಡೆಯು ಕೊಂಡಿಯಾಗಿದೆ ೧೯೪೬ ಎಪ್ರೀಲ ೧ನೆಯು ತಾರೀಖಿನಿಂದ ಈ ನೌಕರ ವರ್ಗಕ್ಕೆ ತಾತ್ಪೂರ್ತಿಕ ಸರಕಾರಿ ನೌಕರರ ದರ್ಜೆಯನ್ನು ಕೊಡಲಾಗಿದೆ ಇತ್ತೀಚಿಗೆ ೨೦೦ ಸುಪರವಾಯಝರರ ಜಾಗೆಗಳನ್ನು ಕಾಯಂ ಮಾಡಿರುವರು ಕರ್ನಾಟಕದಲ್ಲಿ ಒಟ್ಟು ೭೨ ಸುಪರವಾಯಝರರು ಇದ್ದಾರೆ ಎಲ್ಲ ಸಹಕಾರಿ ಸಂಘಗಳ ಕಾರ್ಯಾಚರಣೆಯು ವಿವರ ಪೂರ್ಣ ಮೇಲ್ವಿಚಾರಣೆಯೇ ಅವರ ಮುಖ್ಯ ಕರ್ತವ್ಯವಾಗಿದ ತಮಗೆ ಒಪ್ಪಿಸಿಕೊಟ್ಟಿರುವ ಪ್ರತಿಯೊಂದು ಸಂಘಗಳ ಮೇಲ್ವಿಚಾರಣೆಯನ್ನು ೩ ತಿಂಗಳಿಗೊಮ್ಮೆ ಅವರು ಮಾಡಬೇಕು ಮೇಲ್ವಿಚಾರಣೆಯು ಅವರ ಮುಖ್ಯ ಕರ್ತವ್ಯವಾಗಿದ್ದರೂ ಸುಪರವಾಯಝರರು ಸಂಘಗಳ ಕ್ರಮದ ಪತ್ತಿನ ಪತ್ರಿಕೆಗಳನ್ನು (Normal credit Statement) ಮತ್ತು ಆಸ್ತಿ (Asset) ಪತ್ರಿಕೆಗಳನ್ನು, ಬೆಳೆ ವಸೂಲಿ ಪತ್ರಿಕೆ ಮುಂತಾದವುಗಳನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಸಹಾಯ ಮಾಡುವರು ಮತ್ತು ಬೆಳೆ ಬೆಳೆದುಕೊಳ್ಳಲಿಕ್ಕೆ ಬೇಕಾದ ಹಣ ಪೂರೈಕೆಯು ವ್ಯವಸ್ಥೆಯಲ್ಲಿ ಸಂಘಗಳಿಗೆ ಸಹಾಯ ಮಾಡುವರು ತಪಾಸಣೆ ಯಾದಿಯಲ್ಲಿ ತೋರಿಸಿದ ದೋಷಗಳನ್ನು ಸರಿಪಡಿಸಿಕೊಳ್ಳುವದು ಅವರ ಮುಖ್ಯ ಕರ್ತವ್ಯವಾಗಿದೆ

## ಲೆಕ್ಕ ಪರಿಶೋಧನೆ.

ಮುಂಬೈ ಸಹಕಾರಿ ಸಂಘಗಳ ಕಾಯ್ದೆಯು ೨೨ ನೆಯು ಕಲಮಿನ ಮೇರೆಗೆ ಸಂಘಗಳ ಶಾಸನಬದ್ಧ ಲೆಕ್ಕ ಪರಿಶೋಧನೆಯು ನೌಕರ ವರ್ಗವನ್ನು ಕೆಳಕಂಡ ರೀತಿಯಲ್ಲಿ ವಿಭಾಗಿಸಬಹುದು

(೧) ಸ್ಪೇಶಲ್ ಆಡಿಟರರು (೨) ಆಡಿಟರರು (೩) ಸಬ್-ಆಡಿಟರರು ಮತ್ತು (೪) ಸರ್ಟಿಫಾಯಿಡ್ ಆಡಿಟರರು

ದೊಡ್ಡ ಸಂಘಗಳ ಲೆಕ್ಕ ಪರಿಶೋಧನೆಯು ಕಾರ್ಯವನ್ನು ಸ್ಪೇಶಲ್ ಆಡಿಟರರಿಗೆ ಒಪ್ಪಿಸಲಾಗಿದೆ ಇವರು ಸಹಕಾರಿ ಖಾತೆಯು ೨ನೆಯು ವರ್ಗದ ನೌಕರರಿರುತ್ತಾರೆ ಇವರು ಕೆಳಗಿನ ಪ್ರಕಾರದ ಸಂಘಗಳ ಲೆಕ್ಕ ಪರಿಶೋಧನೆಯನ್ನು ಪ್ರತಿವರ್ಷದಲ್ಲಿ ಒಮ್ಮೆ ಮಾಡುತ್ತಾರ

(೧) ಮಧ್ಯವರ್ತಿ ಬ್ಯಾಂಕು ಮತ್ತು ಬ್ಯಾಂಕಿಂಗ್ ಯೂನಿಯನ್ನು (ಮಧ್ಯವರ್ತಿ ಬ್ಯಾಂಕುಗಳ ಕಾರ್ಯ ಮಾಡುವ ಸಂಸ್ಥೆ, ಅವುಗಳ ಶಾಖೆ, ಸೇ ಆಫೀಸ್ ಮತ್ತು ಸೇಲ್ ಡಿಪೋಗಳನ್ನೊಳಗೊಂಡು)

(೨) ಖರೀದಿ–ವಿಕ್ರಿ ಸಂಸ್ಥೆಗಳು (Union) ಮತ್ತು ಸೂರಾಟ ಸಂಘ ಗಳು, ಅವುಗಳ ಶಾಖೆಗಳು, ಸೇಲ್ ಡಿಪೋ ಮೊದಲಾದವುಗಳು

(೩) ಜಿಲ್ಹಾ ಔದ್ಯೋಗಿಕ ಸಂಘಗಳು ಮತ್ತು ಅವುಗಳ ಶಾಖಾ ಕಚೇರಿಗಳು

(೪) ೫೦೦೦೦ ರೂಪಾಯಿಗೆ ವಿಕ್ರಿ ದುಡಿಯುವ ಭಾಂಡವಲು ಇರುವ 'ಕ' ಮತ್ತು 'ಡ' ವರ್ಗದ ನಗರ–ಬ್ಯಾಂಕುಗಳು

(೫) ಸರ್ಟಿಫೈಡ್ ಆಡಿಟರ ಮತ್ತು ಜಿಲ್ಹಾ ಆಡಿಟರರು ಪರಿಶೋಧನೆ ಮಾಡಿದ ಸಂಘಗಳಲ್ಲಿ ೧೦೦ಕ್ಕೆ ೩ರಷ್ಟು ಸಂಘಗಳ ಪುನರ್ಲೆಕ್ಕ ಪರಿಶೋಧನೆ

(೬) ಸರಕಾರದಿಂದ ಸಾಲಪಡೆದ ಮನೆಕಟ್ಟುವ ಸಂಘಗಳು ಮತ್ತು ರಜಿಸ್ಟ್ರಾರನಿಂದ ವಿಶೇಷವಾಗಿ ಒಪ್ಪಿಸಲ್ಪಟ್ಟ ಇತರ ಸಂಘಗಳು

(೭) ಸ್ಪೇಶಲ್ ಆಡಿಟರನಿಗೆ ಒಪ್ಪಿಸಲ್ಪಟ್ಟ ಸಂಘಗಳಲ್ಲಿಯ ರದ್ದಾದ ಸಂಘಗಳು (Liquidation Societies)

ಕರ್ನಾಟಕದಲ್ಲಿ ಬೆಳಗಾಂವ ಮತ್ತು ಧಾರವಾಡಗಳಲ್ಲಿ ಹೀಗೆ ಇಬ್ಬರು ಸ್ಪೇಶಲ್ ಆಡಿಟರರು ಇದ್ದಾರೆ.

**ಆಡಿಟರರು:**—ಕರ್ನಾಟಕದಲ್ಲಿ ಸ್ವತಂತ್ರವಾಗಿ ಕಾರ್ಯ ಮಾಡುತ್ತಿರುವ ೧೮ ಆಡಿಟರರು ಇರುತ್ತಾರೆ ಆಡಿಟರನು ಪ್ರತಿವರ್ಷ ೭೨ ಸಂಘಗಳ ಲೆಕ್ಕ ಪರಿಶೋಧನೆ ಮಾಡಬೇಕಾಗುವದು ಸಂಘಗಳು ಸಾಗಿಸುತ್ತಿರುವ ಪ್ರತಿ ಒಂದು ಆರಿವೆ ಅಂಗಡಿ, ಗ್ರಾಮಾಂತರ ವಿತರಣಾ ಕೇಂದ್ರ, ಸೇಲ ಡಿಪೋ, ಮೊದಲಾದವು ಗಳನ್ನೆಲ್ಲ ಪ್ರತ್ಯೇಕ ಲೆಕ್ಕ ತಪಾಸಣೆಯ ಒಂದೊಂದು ಯುನಿಟ್ ಎಂದು ಪರಿಗ ಣಿಸಲಾಗುವದು ಕೆಳಗಿನ ಪ್ರಕಾರದ ಸಂಘಗಳ ತಪಾಸಣೆಯನ್ನು ಆಡಿಟರರಿಗೆ ಒಪ್ಪಿಸಲಾಗಿದೆ

೧ ವಿವಿಧೋದ್ದೇಶ ಸಂಘಗಳು ಮತ್ತು ಅವುಗಳ ಅಂಗಡಿಗಳು

೨ ತಾಲೂಕಾ ಅಭಿವೃದ್ಧಿ ಮಂಡಲಗಳು

೩ ನೇಕಾರ ಸಂಘಗಳು

೪ ಔದ್ಯೋಗಿಕ ಸಂಘಗಳು

೫ ಜಿಲ್ಹಾ ಯೂನಿಯನ್ ಬೋರ್ಡ

೬ ಸುಪರವಾಯಝಿಂಗ ಯೂನಿಯನ್

